# ಇದರದೇನು ಹೆಚ್ಚುಗಾರಿಕೆ?

೧. ಶ್ರೀಶಂಕರಭಗವತ್ಪಾದರವರ **ಗೀತಾಭಾಷ್ಯವನ್ನು** ಮೂಲದೊಡನೆ ಇದ್ದದ್ದು ಇದ್ದಂತೆ **ಪೂರ್ಣರೂಪದಲ್ಲಿ ಕನ್ನಡಿಸಿರುವದು** ಇದೇ ಮೊದಲು.

೨. **ಗೀತೆಯ ಸಂಸ್ಕೃತಮೂಲ, ಶ್ಲೋಕದ ಭಾವಾರ್ಥ, ಭಾಷ್ಯದ ಅನುವಾದ**- ಇವು ಥಟ್ಟನೆ ಹೊಳೆಯುವ ಹಾಗೆ **ಬೇರೆ ಬೇರೆ** ಗಾತ್ರದ **ಅಕ್ಷರಗಳಿಂದ ಅಚ್ಚುಮಾಡಿರುವದು** ಈ ಗ್ರಂಥವೊಂದರಲ್ಲಿಯೇ.

೩. **ವಿಷಯದ ವಿಭಾಗಗಳನ್ನು** ಎಂಗಡಿಸಿ ಒಂದೊಂದು ವಿಷಯದ ತಲೆಯ ಮೇಲೂ **ದಪ್ಪಕ್ಷರದಲ್ಲಿ** ಅವುಗಳು ಎದ್ದುಕಾಣುವಂತೆ **ಬರೆದಿರುವದು,** ಮತ್ತು ಪ್ರತಿಯೊಂದು **ಅಧ್ಯಾಯದ ಸಾರವನ್ನು** ಹಿಂದಿ **ಒಕ್ಕಡೆಗೆ ಇಟ್ಟಿರುವದು**- ಇಲ್ಲಿಯೇ.

೪. ಗೀತೆಯ ಶ್ಲೋಕಗಳಲ್ಲಿ **ಆಚಾರ್ಯರು ಒಪ್ಪಿರುವ ಶುದ್ಧಪಾಠ**ವನ್ನೇ ಇಟ್ಟುಕೊಂಡು, ಮಿಕ್ಕ ಪಾಠವನ್ನು ಕೊನೆಯ ಒಂದು ಮೂಲೆಗೆ ಸಾಗಿಸಿಟ್ಟಿರುವ ಅನುಕೂಲವು **ದೊರಕುವದು** ಇದೊಂದೆಡೆಯಲ್ಲಿಯೇ.

೫. **ಭಾಷ್ಯದ ಯುಕ್ತವಾದ ಪಾಠ**ವನ್ನು ಅಂಗೀಕರಿಸಿ, ಪಾಠಭೇದಗಳನ್ನು ಅಲ್ಲಲ್ಲಿ ತಿಳಿಸಿರುವ ಸೌಕರ್ಯವು **ಸಿಕ್ಕುವದು** ಇದೊಂದರಲ್ಲಿಯೇ. [ಆಪ್ಟೇಕರ್ ಕಂಪೆನಿಯ ಮುದ್ರಣ (ಅ॥)ದ ಜಾಡನ್ನೇ ಮುಖ್ಯವಾಗಿ ಹಿಡಿದು ಭಾಷಾಂತರಿಸಿದ್ದರೂ, ನಿರ್ಣಯಸಾಗರದ ಮುದ್ರಣ (ನಿ॥), ಗುಜರಾತಿ ಪ್ರೆಸ್ಸಿನ ಮುದ್ರಣ (ಗು॥), ಮದ್ರಾಸು ತೆಲುಗುಮುದ್ರಣ, (ಮ॥) ಮಹದೇವ ಶಾಸ್ತ್ರಿಗಳ ಮೈಸೂರು ಮುದ್ರಣ (ಮೈ॥), ಎಂದು ಬೇರೆ ನಾಲ್ಕು ಪಾಠಗಳಿಗೂ ಹೋಲಿಸಿ ಭಾಷ್ಯಪಾಠವನ್ನು ನಿರ್ಣಯಿಸಿದೆ.]

೬. ಭಾಷ್ಯದ ಅರ್ಥವು ಮನಸ್ಸಿನಲ್ಲಿ ಒಡೆದುಮೂಡುವಂತೆ ಹಿತವೂ ಮಿತವೂ ಆದ **ಟಿಪ್ಪಣಿಯನ್ನು ಬರೆದಿರುವದು,** ಭಾಷ್ಯಕಾರರ **ಬೇರೆ ಗ್ರಂಥಭಾಗಗಳ ಹೋಲಿಕೆಯನ್ನೂ** ವ್ಯಾಖ್ಯಾನಕಾರರ ಅಭಿಪ್ರಾಯವನ್ನೂ ಸಮಯ ಬಿದ್ದಹಾಗೆ **ಸೂಚಿಸಿರುವದು**- ಈ ಪುಸ್ತಕವೊಂದರಲ್ಲಿಯೇ.

೭. **ವ್ಯಾಖ್ಯಾನಕಾರರ ಭಿನ್ನಾಭಿಪ್ರಾಯಗಳನ್ನೂ ಮಿಕ್ಕ ಭಾಷ್ಯಕಾರರ** ಬೇರೆ ಬೇರೆ **ಹೋಲಿಕೆಗಳನ್ನೂ** ನಿಷ್ಪಕ್ಷಪಾತವಾಗಿ ತೂಕಮಾಡಿ ನೋಡಿ ಅವನ್ನು **ಪರಿಶಿಷ್ಟವಾಗಿ ಕೊಟ್ಟಿರುವದು** ಇದೊಂದು ಕಡೆಯಲ್ಲಿಯೇ.

೮. ಗೀತೆಯಲ್ಲಿ ಸೂಚಿಸಿರುವ ಉಪನಿಷದ್ವಾಕ್ಯಗಳ ಪಟ್ಟಿ, ಭಾಷ್ಯದಲ್ಲಿ ಸೂಚಿಸಿರುವ ಪ್ರಮಾಣವಾಕ್ಯಗಳ ಪಟ್ಟಿ, ಮುಖ್ಯಶಬ್ದಗಳ ಅರ್ಥದಿಂದೊಡಗೂಡಿದ ಅಕ್ಷರಾನುಕ್ರಮಣಿಕೆ- ಮುಂತಾದ **ಎಷ್ಟೋ ಸಲಕರಣೆಗಳನ್ನು ಅಣಿಮಾಡಿಕೊಟ್ಟಿರುವದು** ಇಲ್ಲಿಯೇ.

——:——



ಶಿಷ್ಯಸಮೇತ ಶ್ರೀಶಂಕರಭಗವತ್ಪಾದಾಚಾರ್ಯರವರು

ಅಧ್ಯಾತ್ಮಗ್ರಂಥಾವಳಿ

ಶ್ರೀಶಾಂಕರಭಾಷ್ಯಸಮೇತವಾದ

# ಶ್ರೀಮದ್ಭಗವದ್ಗೀತೆಯು



## ಸಂಪುಟ ೧

ಅಧ್ಯಾಯಗಳು ೧–೧೨

ಒಂದನೆಯ ಮುದ್ರಣ- ೫೦೦ ಪ್ರತಿಗಳು

1934

ದಪ್ಪರಟ್ಟು: ೩–೧೨–೦] [ಕ್ಯಾಲಿಕೋ: ೪–೪–೦

# ವಿಷಯಾನುಕ್ರಮ



---

ಅಧ್ಯಾತ್ಮಗ್ರಂಥಾವಳಿ

ಶ್ರೀ ಶಾಂಕರಭಾಷ್ಯಸಮೇತವಾದ

# ಶ್ರೀಮದ್ಭಗವದ್ಗೀತೆಯು

## ಅಧ್ಯಾಯಗಳು ೧—೩

ಅನುವಾದಕ:

ವೈ. ಸುಬ್ಬರಾವ್.

ಅಧ್ಯಾತ್ಮಪ್ರಕಾಶಕಾರ್ಯಾಲಯ



ಬೆಂಗಳೂರು ಸಿಟಿ, ಚಾಮರಾಜಪೇಟೆ, ೨ನೆಯ ಬೀದಿಯಲ್ಲಿರುವ
ಅಧ್ಯಾತ್ಮಪ್ರಕಾಶ ಮುದ್ರಣಾಲಯದಲ್ಲಿ
ಅಚ್ಚಾದದ್ದು.
1930

ಈ ಗೀತಾನುವಾದದಲ್ಲಿ

(೧) ದಪ್ಪಕ್ಷರದಲ್ಲಿ ಬರೆದಿರುವ ತಲೆಬರಹ ("ಹೆಡಿಂಗ್") ಗಳು ಅನುವಾದಕರು ಹೊಸದಾಗಿ ಸೇರಿಸಿದವುಗಳಾಗಿವೆ.

(೨) ಭಾಷ್ಯದಲ್ಲಿ ಮುಖ್ಯವಾದ ಅಥವಾ ವಾದಾಸ್ಪದವಾದ ವಿಷಯಗಳನ್ನು ತಿಳಿಸುವ ವಾಕ್ಯಗಳನ್ನೂ ಸಂಕೇತನಾಮಗಳನ್ನೂ ಕಪ್ಪಕ್ಷರದಲ್ಲಿ(antique) ದಲ್ಲಿ ಅಚ್ಚುಮಾಡಿಸಿದೆ,

(೩) ಮೂಲದಲ್ಲಿಲ್ಲದೆ ಇದ್ದರೂ ಅರ್ಥಕ್ಕೆ ಬೇಕಾಗುವಂತೆ ಸೇರಿಸಿದ ಮಾತುಗಳನ್ನ ದುಂಡುಕಂಸದಲ್ಲಿ ( ) ಹೀಗೆ ತೋರಿಸಿರುತ್ತದೆ.

(೪) ಭಾಷ್ಯದ ಯಾವ ಮಾತಿನ ಪರಿವರ್ತನೆಯಿರಬಹುದೆಂಬ ಸಂಶಯವು ಬರಬಹುದಾದ ಕಡೆಗಳಲ್ಲಿ ಚೌಕಕಂಸಗಳಲ್ಲಿ [ ] ಹೀಗೆ ಆ ಸಂಸ್ಕೃತಮಾತುಗಳನ್ನು ಮುಂದುಗಡೆಯಲ್ಲಿ ತೋರಿಸಿರುತ್ತದೆ. ಭಾಷ್ಯಪಾಠದಲ್ಲಿ ಸಂದೇಹವಿರುವ ಭಾಗಗಳನ್ನೂ ಹೀಗೆಯೇ ಚೌಕಕಂಸದಲ್ಲಿಟ್ಟಿರುತ್ತದೆ.

# ಪೀಠಿಕೆ

## ೧

ಪ್ರಸ್ಥಾನತ್ರಯವನ್ನು ಭಾಷ್ಯಸಮೇತವಾಗಿ ಕನ್ನಡಕ್ಕೆ ತರುವದೇ ಅಧ್ಯಾತ್ಮಪ್ರಕಾಶಗ್ರಂಥಾವಳಿಯ ಮುಖ್ಯೋದ್ದೇಶವೆಂಬುದು ನಮ್ಮ ವಾಚಕರಲ್ಲಿ ಅನೇಕರಿಗೆ ಇದುವರೆಗೆ ಗೊತ್ತೇ ಇದೆ. ಉಪನಿಷತ್ತು, ಭಗವದ್ಗೀತೆ, ಬ್ರಹ್ಮಸೂತ್ರ– ಇವುಗಳೆ ಪ್ರಸ್ಥಾನತ್ರಯವೆನಿಸುವವು. ಪ್ರಸ್ಥಾನವೆಂದರೆ ತತ್ತ್ವವನ್ನು ತಿಳಿಸುವದಕ್ಕೆ ಹೊರಟಿರುವ ಮಾರ್ಗವು. ಪರಮಾರ್ಥವನ್ನು ನಿರ್ಣಯಮಾಡುವದಕ್ಕೆ ಹೊರಟಿರುವ ರೀತಿಯು ಈ ಮೂರರಲ್ಲಿಯೂ ಒಂದೊಂದು ಬಗೆಯಾಗಿರುವದರಿಂದ ಇವಕ್ಕೆ **ಪ್ರಸ್ಥಾನತ್ರಯ**ವೆಂಬ ಹೆಸರು ಬಂದಿರುತ್ತದೆ. ವೇದದ ಆರಣ್ಯಕವೆಂಬ ಭಾಗದಲ್ಲಿರುವ ಉಪನಿಷತ್ತುಗಳು ಉತ್ತಮಾಧಿಕಾರಿಗಳಿಗಾಗಿ ಆತ್ಮಜ್ಞಾನವನ್ನು ಕೊಡುವ ಬ್ರಹ್ಮವಿದ್ಯೆಯನ್ನೂ ಮಧ್ಯಮಾಧಿಕಾರಿಗಳಿಗಾಗಿ ಉಪಾಸನೆಯನ್ನೂ ತಿಳಿಸಿಕೊಡುತ್ತವೆ. ಭಗವದ್ಗೀತೆಯು ಉಪನಿಷತ್ತುಗಳ ಆಧಾರವನ್ನೆ ಇಟ್ಟುಕೊಂಡು ಕರ್ಮ, ಭಕ್ತಿ, ಯೋಗ– ಎಂಬ ಸಾಧನಗಳಿಗೂ ಜ್ಞಾನವೆಂಬ ಸಾಧ್ಯಕ್ಕೂ ಇರುವ ಸಂಬಂಧವನ್ನು ಸ್ಪಷ್ಟಗೊಳಿಸುವದು. ಬ್ರಹ್ಮಸೂತ್ರದಲ್ಲಿ ಉಪನಿಷತ್ತುಗಳು, ಭಗವದ್ಗೀತೆ– ಇವುಗಳೆರಡನ್ನೂ ಆಧಾರವಾಗಿಟ್ಟುಕೊಂಡು ನ್ಯಾಯಪೂರ್ವಕವಾಗಿ ತತ್ತ್ವವನ್ನು ಗೊತ್ತುಪಡಿಸುವದಕ್ಕೆ ಹೊರಟಿರುತ್ತದೆ. ಹೀಗೆ ಉಪನಿಷತ್ತುಗಳಲ್ಲಿ ಸಾಮಾನ್ಯವಾಗಿ ಪ್ರತಿಪಾದಿಸಿರುವ ವಿಷಯವನ್ನು ಭಗವದ್ಗೀತೆ, ಬ್ರಹ್ಮಸೂತ್ರ– ಇವುಗಳಲ್ಲಿ ವಿಶೇಷರೀತಿಯಿಂದ ನಿರ್ಧರಿಸಿರುವದರಿಂದ ವೇದಾಂತಸಿದ್ಧಾಂತವನ್ನು ಸಂಪೂರ್ಣವಾಗಿ ತಿಳಿಯಬೇಕೆಂಬವರು ಈ ಮೂರನ್ನೂ ಕ್ರಮಕ್ರಮವಾಗಿ ಶ್ರವಣಮಾಡಬೇಕಾದದ್ದು ಅವಶ್ಯವಾಗಿರುತ್ತದೆ. ಅಧ್ಯಾತ್ಮಪ್ರಕಾಶದಲ್ಲಿ ಈವರೆಗೆ ಕೆಲವು ಮುಖ್ಯವಾದ ಉಪನಿಷತ್ತುಗಳನ್ನು ಭಾಷ್ಯಸಮೇತವಾಗಿ ಪ್ರಕಟಿಸಲಾಗಿದೆ; ಇನ್ನು ಕೆಲವನ್ನು ಅಚ್ಚಿಗೆ ಸಿದ್ಧಪಡಿಸಿರುತ್ತದೆ. ಈಗ ಎರಡನೆಯ ಪ್ರಸ್ಥಾನವಾದ ಭಗವದ್ಗೀತೆಯ ಒಂದು ಭಾಗವನ್ನು ಭಾಷ್ಯಸಮೇತವಾಗಿ ಹೊರಕ್ಕೆ ತರಲಾಗಿದೆ.

## ೨

ಅಧ್ಯಾತ್ಮಗ್ರಂಥಾವಳಿಯ ಪದ್ಧತಿಯಂತೆ ಗೀತೆಯ ವಿಷಯವಿಚಾರವನ್ನೂ ಭಾಷ್ಯದ ವಿಷಯವಿಚಾರವನ್ನೂ ಕುರಿತು ವಿವಾದಾಸ್ಪದವಾದ ಭಾಗಗಳನ್ನು ವಿವೇಚನೆಮಾಡುವ ಪೀಠಿಕೆಯನ್ನು ಸೇರಿಸಬೇಕೆಂಬ ಯೋಚನೆಯು ಮೊದಲು ಬಂದಿತ್ತು. ಆದರೆ ಅಂಥ ವಿಚಾರಗಳನ್ನು ಸ್ವಲ್ಪದರಲ್ಲಿ ತಿಳಿಸುವದು ಕಷ್ಟ

ವಾಗಿ ತೋರಿದ್ದರಿಂದ ಗೀತಾವಿಷಯಕವಾದ ಚರ್ಚೆಯನ್ನೆಲ್ಲ ಒಳಕೊಂಡಿರುವ ಒಂದು ಸ್ವತಂತ್ರಗ್ರಂಥವನ್ನೆ ಬರೆಯಬೇಕೆಂದು ಕೆಲವರು ಅಪೇಕ್ಷಿಸಿದಂತೆ **"ಭಗವದ್ಗೀತಾರ್ಥಸರ್ವಸ್ವ"** ಎಂಬ ಹೆಸರಿನಿಂದ ಒಂದು ದೊಡ್ಡ ಗ್ರಂಥವನ್ನು ಸದ್ಯದಲ್ಲಿಯೇ ಪ್ರಕಟಿಸಲಾಗುತ್ತದೆ. ಅದರಲ್ಲಿ ವಿಸ್ತಾರವಾಗಿ ತಿಳಿಯಬಹುದಾದ ವಿಷಯಗಳ ಬಗ್ಗೆ ಟಿಪ್ಪಣಿಯಲ್ಲಿ ಅಲ್ಲಲ್ಲಿ ಸೂಚನೆಯನ್ನು ಕೊಟ್ಟಿರುತ್ತದೆ.

ಮುಖ್ಯವಾಗಿ ಗೀತೆಯು ಸಾಧನಪ್ರಧಾನವಾದ ಗ್ರಂಥವಾದ್ದರಿಂದ ಕರ್ಮ, ಯೋಗ, ಭಕ್ತಿ- ಇವುಗಳನ್ನೆ ಒತ್ತಿ ಹೇಳುತ್ತದೆ. ಇದನ್ನರಿಯದೆ ಅನೇಕರು ಕರ್ಮಾದಿಸಾಧನಗಳೂ ಜ್ಞಾನವೂ ಸೇರಿ ಮುಕ್ತಿಗೆ ಕಾರಣವಾಗುವವು-ಎಂದು ಭ್ರಮಿಸಿರುತ್ತಾರೆ. ಶ್ರೀಶಂಕರಾಚಾರ್ಯರವರ ಹಿಂದೆಯೇ ಅನೇಕ ಜನರು ಗೀತೆಗೆ ಈ ಅರ್ಥವನ್ನು ಕಲ್ಪಿಸಿ ವ್ಯಾಖ್ಯಾನವನ್ನು ಬರೆದಿದ್ದರು. ಈಚೆಗೂ ಅನೇಕರು ಇದೇ ವಾದವನ್ನು ಬೇರೆ ಬೇರೆ ರೂಪಗಳಲ್ಲಿ ತೆಗೆದಿರುತ್ತಾರೆ. ಈ ವಾದಕ್ಕೆ **ಸಮುಚ್ಚಯವಾದ**ವೆಂದು ಹೆಸರು. ಆಚಾರ್ಯರವರ ಹಿಂದೆ ಬರೆದಿದ್ದ ಅದ್ವೈತಿಗಳಾದ ವೃತ್ತಿಕಾರರು* ಮಾತ್ರವೆ ಅಲ್ಲದೆ ಈಚೆಗೆ ಅವರ ಸಿದ್ಧಾಂತವನ್ನೊಪ್ಪಿದವರೆಂದು ಹೇಳಿಕೊಳ್ಳುತ್ತಿರುವ ವೇದಾಂತಿಗಳೂ ಸಮುಚ್ಚಯವಾದಿಗಳೇ ಆಗಿರುತ್ತಾರೆ; ಆಚಾರ್ಯರನ್ನು ಬಿಟ್ಟರೆ ಮಿಕ್ಕ ವೇದಾಂತಿಗಳೆಲ್ಲರೂ ಒಂದಲ್ಲದಿದ್ದರೆ ಒಂದು ಬಗೆಯಿಂದ ಸಮುಚ್ಚಯಪಕ್ಷವನ್ನೆ ಹಿಡಿದಿರುತ್ತಾರೆ; ಈಚೆಗೆ ಸ್ವತಂತ್ರವಾಗಿ ಗೀತೆಗೆ ವ್ಯಾಖ್ಯಾನವನ್ನು ಕಲ್ಪಿಸಿರುವ ಬಾಲಗಂಗಾಧರ ತಿಲಕರು, ರಂಗನಾಥದಿವಾಕರರು- ಮೊದಲಾದವರು ಸಹ ಸಮುಚ್ಚಯವಾದಿಗಳೆ. ಈ ಎಲ್ಲಾ ಬಗೆಯ ಸಮುಚ್ಚಯವಾದಕ್ಕೂ ಭಾಷ್ಯದಲ್ಲಿ ಸಮರ್ಪಕವಾದ ಉತ್ತರವೂ ಇರುತ್ತದೆ ಎಂಬುದನ್ನು "ಗೀತಾರ್ಥಸರ್ವಸ್ವ" ದಲ್ಲಿ ಮನಗಾಣುವಂತೆ ತೋರಿಸಿಕೊಟ್ಟಿರುತ್ತದೆ. ಭಾಷ್ಯದಲ್ಲಿ ಕಂಡುಬರುವ ಸಮುಚ್ಚಯವಾದದ ಖಂಡನೆಯು ಈಗಿನ ಕಾಲಕ್ಕೆ ಬೇಕಿಲ್ಲದ ಬೂಚಗಳವೆಂದು ಎಣಿಸುವವರ ಭ್ರಾಂತಿಯು ಆ ಗ್ರಂಥವನ್ನು ಓದುವದರಿಂದ ಸಂಪೂರ್ಣವಾಗಿ ತೊಲಗಿ ಹೋಗುವದು.

೩

ಭಗವದ್ಗೀತೆಯು ಸಾಧನಸಿದ್ಧಾಂತಗಳ ಸಾಮರಸ್ಯವನ್ನು ತೋರಿಸುವ ಉತ್ತಮವಾದ ಅಮೃತಪುಷ್ಕರಿಣಿಯಂತಿರುವದರಿಂದ ಮುಮುಕ್ಷುಗಳಿಗೆ ತುಂಬ ಬೆಲೆಯುಳ್ಳದ್ದಾಗಿರುವದು. ಶ್ರೀಶಂಕರಭಗವತ್ಪಾದರವರ ಭಾಷ್ಯವು ಇದಕ್ಕೆ

---

* ಈ ವೃತ್ತಿಕಾರರು ವಿಶಿಷ್ಟಾದ್ವೈತಸಂಪ್ರದಾಯದವರಾದ ಬೋಧಾಯನರೆಂದು ಕೆಲವರು ಭಾವಿಸುತ್ತಾರೆ. ಇದು ತಪ್ಪೆಂಬುದನ್ನು ಗೀತಾರ್ಥಸರ್ವಸ್ವದಲ್ಲಿ ತೋರಿಸಿಕೊಟ್ಟಿರುತ್ತದೆ.

ಕಟ್ಟಿದ ಸ್ಫಟಿಕದ ಸೋಪಾನವಾಗಿರುವದು. ಈ ಕಾರಣದಿಂದ ಸಭಾಷ್ಯವಾಗಿ ಕನ್ನಡಿಸಿರುವ ಈ ಗ್ರಂಥಭಾಗವನ್ನು ಮ॥ರಾ॥ ಶ್ರೀನಿವಾಸಯ್ಯನವರು, ಪ್ಲೀಡರ್, ಹೊಳೆನರಸೀಪುರ, ಮ॥ ರಾ॥ ಆರ್. ರಾಮಸ್ವಾಮಯ್ಯನವರು, ಪ್ಲೀಡರ್, ಹೊಳೆನರಸೀಪುರ, ಮ॥ ರಾ॥ ಸೂರ್ಯನಾರಣಪ್ಪನವರು, ಸಬ್ ಓವರ್ಸಿಯರ್, ಮೈಸೂರು– ಈ ಮೂವರು ಮಹನೀಯರುಗಳ ಸಹಾಯದಿಂದ ಹೊರಕ್ಕೆ ತಂದಿ ರುತ್ತೇನೆ. ಬೇರೆ ಬೇರೆ ವ್ಯವಹಾರಗಳಲ್ಲಿ ನಿರತರಾಗಿರುವ ಸಮ್ಮಗಳ ಸೇವೆ ಯನ್ನು ಕೈಕೊಳ್ಳುವದಕ್ಕೆ ಶ್ರೀಕೃಷ್ಣಭಗವಂತನೇ ಈ ಮಹನೀಯರನ್ನು ಪ್ರೇರಿಸಿ ಗ್ರಂಥಪ್ರಚಾರಕ್ಕೆ ಉತ್ಸಾಹವನ್ನು ಕೊಟ್ಟಿರುತ್ತಾನೆನ್ನಬೇಕೇ ಹೊರತು ಮತ್ತೆ ಬೇರೆ ಇಲ್ಲ.

**ಮ॥ ರಾ॥ ಶ್ರೀನಿವಾಸಯ್ಯನವರು** ಉದಾರಬುದ್ಧಿಯುಳ್ಳವರು. ತಮ್ಮ ಮಗನ ಉಪನಯನಮಹೋತ್ಸವಕಾಲದಲ್ಲಿ ಇವರು ಮಾಡಿದ ಅನಂತದಾನಗಳಲ್ಲಿ ಗೀತೆಗಾಗಿ ಕೊಟ್ಟ ನೂರು ರೂಪಾಯಿ ಒಂದು ಮುಖ್ಯವಾಗಿರುವದು. ಏಕೆಂ ದರೆ ಉಪನಯನವೆಂಬ ಶಬ್ದಕ್ಕೆ 'ಸಮೀಪಕ್ಕೆ ಕರೆದುಕೊಂಡು ಹೋಗುವದು' ಎಂದು ಅರ್ಥವಾಗುವದು. ಬ್ರಹ್ಮೋಪದೇಶವನ್ನು ಮಾಡುವ ಗುರುವಿನ ಬಳಿಗೆ ಕರೆದುಕೊಂಡು ಹೋಗಿ ಬ್ರಹ್ಮಕ್ಕೂ ವಟುವಿಗೂ ಸಾಮೀಪ್ಯವನ್ನು ಕಲ್ಪಿಸುವ ಕಾರ್ಯವೇ ಉಪನಯನವು; ಅಲ್ಲಿಂದ ಮುಂದೆ ಆ ವಟು 'ಬ್ರಹ್ಮಚಾರಿ' ಎನಿಸು ವನು. ಮ॥ ರಾ॥ ಶ್ರೀನಿವಾಸಯ್ಯನವರು ಸಾಕ್ಷಾತ್ಪರಬ್ರಹ್ಮಮೂರ್ತಿಯಾದ ಶ್ರೀಕೃಷ್ಣಭಗವಂತನ ಗೀತೋಪದೇಶವನ್ನು ಕರ್ನಾಟಕದ ವಾಚಕರೆಲ್ಲರ ಬಳಿಗೂ ಬಂದು ಸೇರುವಂತೆ ಸಾಮೀಪ್ಯವನ್ನು ಕಲ್ಪಿಸಿರುತ್ತಾರೆ. ಈ ಮಹಾಕಾರ್ಯ ದಿಂದ ಇವರು ಮಾಡಿರುವ ಉಪನಯನಕರ್ಮಕ್ಕೆ ಹೆಚ್ಚಿನ ವೀರ್ಯವು ಬಂದಿರು ತ್ತದೆಯೆಂದು ನಾವು ನಂಬಬಹುದಾಗಿದೆ. **ಮ ॥ರಾ॥ ಪಿ. ಎಸ್. ಸೂರ್ಯ ನಾರಣಪ್ಪನವರು** ಮಹಾಭಕ್ತಶಿರೋಮಣಿಗಳು. ಇವರು ಹೊಳೆನರಸೀ ಪುರದ ಲಕ್ಷ್ಮೀನರಸಿಂಹಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗಿ ಇಷ್ಟಾರ್ಥವನ್ನು ಪಡೆಯಲೋಸುಗ ಈ ಮೂಲಕ ಪರಮಾತ್ಮಸೇವೆಯನ್ನು ಮಾಡಿ ಇದನ್ನು ಅವಲೋಕಿಸುವವರೂ ಇಂಥ ಪರಮಾತ್ಮನ ಸೇವೆಯನ್ನು ಮಾಡಬೇಕೆಂದು ಪ್ರಾರ್ಥಿಸುತ್ತಾರೆ. ದೇವರಿಗೆ ಹರಕೆಮಾಡಿಕೊಂಡು ತೆಂಗಿನಕಾಯಿ, ಕರ್ಪೂರ– ಮುಂತಾದವುಗಳನ್ನು ಅರ್ಪಿಸುವ ಸ್ಥೂಲಭಕ್ತಿಗಿಂತಲೂ ಗೀತಾರ್ಥಪ್ರಕಾಶವನ್ನು ಜನರಿಗೆ ಕೊಡುವ ಸೂಕ್ಷ್ಮಭಕ್ತಿಯ ಶ್ರೇಷ್ಠತೆಯನ್ನು ಕಂಡುಕೊಂಡು ಇವರು ಇತರರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವದು ತುಂಬ ಸ್ತೋತ್ರಾರ್ಹ ವಾಗಿದೆ. ನರಸಿಂಹಾವತಾರದಲ್ಲಿ ಜ್ಞಾನಭಕ್ತಿಗಳ ಸ್ವಾರಸ್ಯವನ್ನು ಭಕ್ತಾಗ್ರೇ ಸರನಾದ ಪ್ರಹ್ಲಾದನಿಂದ ಗಾನಮಾಡಿಸಿದ ಭಗವಂತನು ಕೃಷ್ಣಾವತಾರದಲ್ಲಿ

ಭಕ್ತನಾದ ಅರ್ಜುನನ ನಿಮಿತ್ತದಿಂದ ನಮ್ಮೆಲ್ಲರಿಗೂ ಕೇಳುವಂತೆ ಸಕಲೋಪನಿಷತ್ಸಿದ್ಧಾಂತದ ರಹಸ್ಯವನ್ನು ತಾನೇ ಗಾನಮಾಡಿರುತ್ತಾನೆ. ಆ ಗಾನಕ್ಕೆ ಕಿವಿಗೊಡುವ ಸುಯೋಗವು ಕನ್ನಡಿಗರೆಲ್ಲರಿಗೂ ಸಿಕ್ಕುವಂತೆ ಮಾಡಿಕೊಟ್ಟಿರುವ ಪುಣ್ಯದ ಬಹುಭಾಗವು ಮ॥ ರಾ॥ ಸೂರ್ಯನಾರಣಪ್ಪನವರಿಗೆ ಸಲ್ಲತಕ್ಕದ್ದಾಗಿರುವದು. **ಮ॥ ರಾ॥ ಆರ್. ರಾಮಸ್ವಾಮಯ್ಯನವರು** ಯಾವದಾದರೊಂದು ಉಪನಿಷತ್ತಿಗೆಂದು ಮುಂಗಡವಾಗಿ ಕೊಟ್ಟಿದ್ದ ಹಣವನ್ನೂ ಈ ಪ್ರಕಟನೆಗೆ ಅವರ ಅನುಮತಿಯಿಂದ ಉಪಯೋಗಿಸಿಕೊಂಡಿರುತ್ತೇನೆ. ಗೀತೆಯು ಸರ್ವೋಪನಿಷತ್ತುಗಳ ಸಾರವಾಗಿರುವದರಿಂದ ಮ॥ ರಾ॥ ರಾಮಸ್ವಾಮಯ್ಯನವರು ಮಾಡಿರುವ ಈ ಪ್ರಥಮಸೇವೆಯು ಉಪನಿಷದ್ವೇದ್ಯನಾದ ಪರಮಾತ್ಮನಿಗೆ ಉತ್ತಮರೀತಿಯಲ್ಲಿ ಮುಟ್ಟಿರುವದೆಂಬುದರಲ್ಲಿ ಸಂದೇಹವಿಲ್ಲ.

ಸಭಾಷ್ಯವಾದ ಗೀತೆಯ ಈ ಪ್ರಥಮಭಾಗವು ಈಗಿನ ರೂಪದಲ್ಲಿ ಪ್ರಕಟವಾಗುವದಕ್ಕೆ ಹೀಗೆ ಉದಾರಾಶ್ರಯವನ್ನಿತ್ತಿರುವ ಈ ಮೂವರು ಮಹನೀಯರೂ ಇಂಥ ಜನೋಪಕಾರವನ್ನು ಮಾಡುತ್ತಾ ಚಿರಕಾಲ ಕೀರ್ತಿಯಿಂದ ಬಾಳುವಂತೆ ಇವರಿಗೂ ಇವರ ಕುಟುಂಬದವರಿಗೂ ಆಯುರಾರೋಗ್ಯೈಶ್ವರ್ಯಗಳನ್ನು ಅನುಗ್ರಹಮಾಡಲೆಂದು ಭಗವಂತನನ್ನು ಪ್ರಾರ್ಥಿಸಿ ಈ ಪೀಠಿಕೆಯನ್ನು ಮುಗಿಸುತ್ತೇನೆ.

ಚಾಮರಾಜಪೇಟೆ
ಮಾರ್ಗಶೀರ್ಷ,
ಶಾ. ೧೮೫೧

———

# ವಿಷಯಗಳ ಪಟ್ಟಿ

ದಾದ್ದರಿಂದಲೂ ವೃತ್ತಿಕಾರರ ಮತವು ಸರಿಯಲ್ಲ— ವೃತ್ತಿಕಾರರ ಪಕ್ಷವು ಅರ್ಜುನನ ಪ್ರಶ್ನೆಗೂ ಭಗವಂತನ ಉತ್ತರಕ್ಕೂ ಅನುಗುಣವಾಗಿಲ್ಲ] ಅರ್ಜುನನ ಪ್ರಶ್ನೆ: ಜ್ಞಾನವು ಹೆಚ್ಚಾದರೆ ನನ್ನನ್ನು ಕರ್ಮದಲ್ಲಿ ಏತಕ್ಕೆ ಕೆಡವುತ್ತೀಯೆ ? (೧—೨) ಭಗವಂತನ ಉತ್ತರ: ಜ್ಞಾನಕರ್ಮಗಳು ಬೇರೆ ಬೇರೆ ಜನರಿಗೆ (೩) ಕರ್ಮಯೋಗದಿಂದಲೇ ಆತ್ಮಜ್ಞಾನಲಾಭ (೪—೫) ಆತ್ಮಜ್ಞಾನಿಯಲ್ಲದವನು ಕರ್ಮವನ್ನು ಬಿಡುವದಕ್ಕಾಗಲಾರದು (೬—೮) ಕರ್ಮವು ಯಾವಾಗಲೂ ಬಂಧಕವೆನ್ನುವದು ಸರಿಯಲ್ಲ (೯) ದೇವತೆಗಳಿಗೂ ಮನುಷ್ಯರಿಗೂ ಕರ್ಮದಿಂದಾಗುವ ಪರಸ್ಪರಸಂಬಂಧ (೧೦—೧೩) ಜಗಚ್ಚಕ್ರವು ನಡೆಯುವದಕ್ಕೂ ಕರ್ಮವನ್ನು ಮಾಡಬೇಕು (೧೪—೧೬) ಕರ್ಮಯೋಗವು ಅನಾತ್ಮಜ್ಞನಿಗೇ ಹೊರತು ಜ್ಞಾನಿಗಲ್ಲ (೧೭—೧೯) ಜ್ಞಾನಿಯು ಲೋಕಸಂಗ್ರಹಕ್ಕಾಗಿ ಮಾಡುವ ಕರ್ಮ (೨೦—೨೯) ಮುಮುಕ್ಷುವಾದವನು ಹೇಗೆ ಕರ್ಮವನ್ನು ಮಾಡಬೇಕು ? (೩೦—೩೨) ಜಾಣನಾದವನು ಪ್ರಕೃತಿಯ ವಶನಾಗದೆ ಸ್ವಧರ್ಮವನ್ನು ಮಾಡಬೇಕು (೩೩—೩೫) ಕಾಮವೆ ಅಧರ್ಮಕ್ಕೆ ಮೂಲ (೩೬—೩೯) ಕಾಮವನ್ನು ಜಯಿಸುವ ಬಗೆ (೪೦—೪೩).





|| ಓಂ ||

ಶ್ರೀ ಶಾಂಕರ ಭಾಷ್ಯ ಸಮೇತವಾದ

# ಶ್ರೀಮದ್ಭಗವದ್ಗೀತೆಯು

## ಭಾಷ್ಯಕಾರರ ಅವತರಣಿಕೆ

ನಾರಾಯಣಃ ಪರೋಽವ್ಯಕ್ತಾ ದಣ್ಡಮವ್ಯಕ್ತಸಮ್ಭವಮ್ ।

ಅಣ್ಡಸ್ಯಾನ್ತಸ್ತ್ವಿಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ॥

[ಭಾವಾರ್ಥ: — ಶ್ರೀಮನ್ನಾರಾಯಣನು ಜಗದ್ಬೀಜವಾದ ಅವ್ಯಕ್ತಕ್ಕಿಂತಲೂ* ಮಿಗಿಲಾದವನು. ಬ್ರಹ್ಮಾಂಡವು† ಈ ಅವ್ಯಕ್ತದಿಂದ ಹುಟ್ಟುವದು. ಅಂಡದಲ್ಲಿ ಈ ಭೂರಾದಿಯಾದ ಹದಿನಾಲ್ಕು ಲೋಕಗಳಿರುವವು; ಏಳು‡ ದ್ವೀಪಗಳಿಂದ ಕೂಡಿದ ಈ ಭೂಮಿಯೂ ಇದರಲ್ಲಿಯೇ ಇರುವದು. ]

## ಗೀತೆಯಲ್ಲಿ ಉಪದಿಷ್ಟವಾಗಿರುವ ಧರ್ಮದ್ವಯ

ಆ§ ಭಗವಂತನು ಈ ಜಗತ್ತನ್ನು ಸೃಷ್ಟಿಮಾಡಿ ಇದರ ರಕ್ಷಣೆಯನ್ನು

* ಈಗ ಬಗೆಬಗೆಯಾಗಿ ತೋರುತ್ತಿರುವ ಜಗತ್ತು ಸೃಷ್ಟಿಗೆ ಪೂರ್ವದಲ್ಲಿ ಬಹುಸೂಕ್ಷ್ಮಸ್ಥಿತಿಯಲ್ಲಿರುವದು. ಆ ಸ್ಥಿತಿಗೆ 'ಬೀಜ', 'ಅವ್ಯಕ್ತ', 'ಅವ್ಯಾಕೃತ', 'ಮಾಯೆ'— ಎಂದು ಬೇರೆ ಬೇರೆ ಹೆಸರುಗಳಿರುವವು.

† ಸೃಷ್ಟಿಗೆ ಮೊದಲು ಜಗತ್ತು ಗರ್ಭದಲ್ಲಿರುವ ಮೊಟ್ಟೆಯ ಹಾಗೆ ಅವ್ಯಕ್ತವಾಗಿರುವದು, ಎಂದರೆ ಚೆನ್ನಾಗಿ ತೋರಿಕೊಳ್ಳದೆ ಇರುವದು; ಸೃಷ್ಟಿಯಾದ ಮೇಲೆ ಈಚೆಗೆ ಹೊರಕ್ಕೆ ಬಂದಂತೆ ವ್ಯಕ್ತವಾಗಿ ತೋರುವದು. ಹೀಗೆ ಬ್ರಹ್ಮನ ಸಾನ್ನಿಧ್ಯದ ಬಲದಿಂದ ಅವ್ಯಕ್ತದಿಂದುಂಟಾಗಿ ವ್ಯಕ್ತವಾಗುವದರಿಂದ ಈ ಪ್ರಪಂಚಕ್ಕೆ ಬ್ರಹ್ಮಾಂಡವೆಂದು ಹೆಸರು ಬಂದಿದೆ.

‡ ಜಂಬೂ, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲ, ಪುಷ್ಕರ— ಇವು ಭೂಮಿಯ ಭಾಗಗಳಾದ ಸಪ್ತದ್ವೀಪಗಳು. ಮನುಷ್ಯನ ಸಲುವಾಗಿಯೇ ಶಾಸ್ತ್ರಪ್ರವೃತ್ತಿಯಾಗಿರುವದು ಎಂಬುದನ್ನು ತೋರಿಸುವದಕ್ಕಾಗಿ ಹದಿನಾಲ್ಕು ಲೋಕಗಳಲ್ಲಿ ಅಡಕವಾಗಿಯೇ ಇರುವ ಭೂಮಿಯನ್ನು ಮತ್ತೆ ಬೇರ್ಪಡಿಸಿ ಹೇಳಿರುತ್ತದೆ.

§ ಆಚಾರ್ಯರು ಇಲ್ಲಿ ಉದಾಹರಿಸಿರುವ ಶ್ಲೋಕವು ವಿಷ್ಣುಪುರಾಣದ್ದು. ಪರಮಾತ್ಮನು ಸೃಷ್ಟಿಸ್ಥಿತಿಲಯಗಳನ್ನು ಮಾಡುವಂತೆ ತೋರುತ್ತಿದ್ದರೂ ವ್ಯಕ್ತಾವ್ಯಕ್ತರೂಪವಾದ ಪ್ರಪಂಚದ ಸೋಂಕಿಲ್ಲದೆ

ಮಾಡಬೇಕೆಂದು ಮರೀಚಿ ಮೊದಲಾದ* ಪ್ರಜಾಪತಿಗಳನ್ನು ಮೊದಲು ಸೃಷ್ಟಿಸಿ (ಅವರಿಗೆ) ವೇದದಲ್ಲಿ ಹೇಳಿರುವ **ಪ್ರವೃತ್ತಿ** ಎಂಬ ಧರ್ಮವನ್ನು ತಿಳಿಸಿಕೊಟ್ಟನು. ಆಮೇಲೆ ಸನಕ, ಸನಂದನ– ಮೊದಲಾದ* ಬೇರೆ ಕೆಲವರನ್ನು ಉಂಟುಮಾಡಿ ಜ್ಞಾನವೈರಾಗ್ಯಸ್ವರೂಪವಾದ **ನಿವೃತ್ತಿಧರ್ಮ**ವನ್ನು ತಿಳಿಸಿಕೊಟ್ಟನು.

ವೇದದಲ್ಲಿ ಹೇಳಿರುವ ಪ್ರವೃತ್ತಿ, ನಿವೃತ್ತಿ- ಎಂಬ (ಈ) ಎರಡು ಬಗೆಯಾದ ಧರ್ಮವೇ ಜಗತ್ತಿನ ಸ್ಥಿತಿಗೆ ಕಾರಣವಾಗಿರುವದು. ಪ್ರಾಣಿಗಳ ಅಭ್ಯುದಯಕ್ಕೂ ನಿಃಶ್ರೇಯಸಕ್ಕೂ ನೇರಾಗಿ‡ ಕಾರಣವಾಗಿರುವ ಅಂಥ ಈ ಧರ್ಮವು ತಮಗೆ ಒಳ್ಳೆಯದಾಗಲೆಂದು ಬಯಸುವ ಬ್ರಾಹ್ಮಣರೇ ಮೊದಲಾದ ವರ್ಣದವರಿಂದಲೂ (ಬ್ರಹ್ಮಚಾರಿಗಳೇ ಮೊದಲಾದ) ಆಶ್ರಮಿಗಳಿಂದಲೂ ಅನುಷ್ಠಾನಮಾಡಲ್ಪಡುತ್ತಿತ್ತು. ಬಹುಕಾಲವಾದ ಮೇಲೆ ಇದನ್ನು ನಡೆಸುವವರಿಗೆ ಕಾಮವುಂಟಾಗಿ ವಿವೇಕವಿಜ್ಞಾನಗಳು ಹೋದದ್ದರಿಂದ ಹುಟ್ಟಿದ ಅಧರ್ಮದಿಂದ ಧರ್ಮವು ಮುಚ್ಚಿಹೋಗುತ್ತಲೂ ಅಧರ್ಮವು ಹೆಚ್ಚುತ್ತಲೂ ಬರಲಾಗಿ ಜಗತ್ತಿನ ವ್ಯವಸ್ಥೆಯನ್ನು ಕಾಪಾಡಬೇಕೆಂಬ ಇಚ್ಛೆಯಿಂದ ಆದಿಕರ್ತನಾದ **ನಾರಾಯಣ**ನೆಂಬ ಹೆಸರುಳ್ಳ ಆ ವಿಷ್ಣುವು, ಭೂಮಿಯ ಬ್ರಹ್ಮವಾದ§ ಬ್ರಾಹ್ಮಣತ್ವವನ್ನು ರಕ್ಷಣೆಮಾಡುವದಕ್ಕಾಗಿ, ದೇವಕಿಯಲ್ಲಿ ವಸುದೇವನಿಂದ ಕೃಷ್ಣ

---

ಪರಿಶುದ್ಧನಾಗಿರುವನೆಂದು ಇದರ ತಾತ್ಪರ್ಯವು. (ಗೀ. ಅ. ೧೫–೧೮, ೧೭ ನೋಡಿ) ಅದೇ ಭಗವಂತನೇ ಪ್ರಕೃತ ಭಗವದ್ಗೀತೋಪದೇಶಕನಾದ ಶ್ರೀಕೃಷ್ಣನೆಂಬುದನ್ನು ತೋರಿಸುವದಕ್ಕೆ 'ಆ ಭಗವಂತನು' ಎಂದು ಭಾಷ್ಯವನ್ನು ಪ್ರಾರಂಭಿಸಿದೆ.

* ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ- ಇವರಿಗೆ ಪ್ರವೃತ್ತಿಧರ್ಮವನ್ನೂ ಸನಕ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ– ಇವರಿಗೆ ನಿವೃತ್ತಿಧರ್ಮವನ್ನೂ ಬೋಧಿಸಿದನು. (ಮೋ. ಧ. ೩೪೦–೬೯, ೭೨)

‡ ಪ್ರವೃತ್ತಿಧರ್ಮವು ಅಭ್ಯುದಯಕ್ಕೂ ನಿವೃತ್ತಿಧರ್ಮವು ನಿಃಶ್ರೇಯಸಕ್ಕೂ ನೇರಾಗಿ ಕಾರಣವಾಗಿರುವವು. ಇವುಗಳ ವಿವರವನ್ನು ಭಾಷ್ಯಕಾರರೇ ಮುಂದೆ ಕೊಡುತ್ತಾರೆ.

§ ಬ್ರಹ್ಮವೆಂದರೆ ಎಲ್ಲಕ್ಕೂ ಹೆಚ್ಚಾದದ್ದು. ಭೂಮಿಯಲ್ಲಿ ಬ್ರಾಹ್ಮಣತ್ವವೇ ಎಲ್ಲಕ್ಕೂ ಹೆಚ್ಚಾದದ್ದು ; ಆದ್ದರಿಂದ ಇದು ಭೂಮಿಯ ಬ್ರಹ್ಮವು. ಯಂ ದೇವಂ ದೇವಕೀದೇವೀ ವಸುದೇವಾದಜೀಜನತ್ । ಭೌಮಸ್ಯ ಬ್ರಹ್ಮಣೋ ಗುಪ್ತ್ಯೈ ದೀಪ್ತಮಗ್ನಿಮಿವಾರಣಿಃ ॥ (ಅರಣಿಯ ಕಟ್ಟಿಗೆಯು ಪ್ರಜ್ವಲಿಸುವ ಅಗ್ನಿಯನ್ನು ಹಡೆಯುವಂತೆ, ಭೂಮಿಯ ಬ್ರಹ್ಮದ ರಕ್ಷಣೆಗಾಗಿ, ಯಾವ ದೇವನನ್ನು ದೇವಕೀದೇವಿಯು ವಸುದೇವನಿಂದ ಪಡೆದಳೋ) ಎಂಬ ಶಾಂತಿಪರ್ವದ ಶ್ಲೋಕದ ಅರ್ಥವು ಈ ಭಾಷ್ಯದಲ್ಲಿ ಸೂಚಿತವಾಗಿದೆ.

ನಾಗಿ ತನ್ನ ಒಂದಂಶದಿಂದ* ಸಂಭವಿಸಿದನೆಂಬುದು ಪ್ರಸಿದ್ಧವಾಗಿದೆ. ಬ್ರಾಹ್ಮಣತ್ವವನ್ನು ಕಾಪಾಡಿದರೇ ವೈದಿಕಧರ್ಮವನ್ನು ಕಾಪಾಡಿದಂತಾಗುವದು; ಏಕೆಂದರೆ ವರ್ಣಾಶ್ರಮಭೇದಗಳೆಲ್ಲ ಅದರ† ಅಧೀನವಾಗಿವೆ.

ಆ ಭಗವಂತನು ಜ್ಞಾನ‡, ಐಶ್ವರ್ಯ, ಶಕ್ತಿ, ಬಲ, ವೀರ್ಯ, ತೇಜಸ್ಸು- ಇವುಗಳಿಂದ ಯಾವಾಗಲೂ ಕೂಡಿಕೊಂಡಿದ್ದು ತ್ರಿಗುಣಸ್ವರೂಪವಾದ§ ತನ್ನ **ವೈಷ್ಣವ ಮಾಯೆ**ಯಾದ ಮೂಲಪ್ರಕೃತಿಯನ್ನು|| ತನ್ನ ವಶದಲ್ಲಿಟ್ಟುಕೊಂಡು-(ನಿಜವಾಗಿ

---

* 'ತನ್ನ ಇಚ್ಛೆಯಿಂದ ನಿರ್ಮಿತವಾದ ಮಾಯಾಮಯವಾದ ಸ್ವರೂಪದಿಂದ' ಎಂದು ಆನಂದಗಿರಿಗಳು ವ್ಯಾಖ್ಯಾನಮಾಡಿದ್ದಾರೆ. ಅಂಶವೆಂಬುದಕ್ಕೆ ಈ ಅರ್ಥವನ್ನು ತೆಗೆಯುವದಕ್ಕೇನು ಆಧಾರವೋ ತಿಳಿಯದು. ಲೋಕದೃಷ್ಟಿಯಲ್ಲಿ ಕೃಷ್ಣನಾಗಿ ಅವತರಿಸಿದರೂ ತನ್ನ ಪೂರ್ಣರೂಪವನ್ನು ಬಿಡಲಿಲ್ಲವೆಂಬರ್ಥವು ಹೆಚ್ಚು ಒಪ್ಪುವಂತೆ ತೋರುವದು. ಮೋ|| ಧ|| ೨೮೦-೬೧ ನೋಡಿ.

† ಮಿಕ್ಕ ವರ್ಣದವರು ಮಾಡುವ ಯಜನಾದಿಗಳು ಬ್ರಾಹ್ಮಣನ ಅಧೀನವು; ಏಕೆಂದರೆ ಬ್ರಾಹ್ಮಣನಿಗೆ ಮಾತ್ರವೇ ಯಾಗಮಾಡಿಸುವದು, ಅಧ್ಯಯನಮಾಡಿಸುವದು, ಪ್ರತಿಗ್ರಹ- ಇವುಗಳಲ್ಲಿ ಅಧಿಕಾರವಿದೆ. ಆದ್ದರಿಂದ ಬ್ರಾಹ್ಮಣ್ಯವನ್ನು ಕಾಪಾಡಿದರೆ ಎಲ್ಲಾ ವರ್ಣದವರ ಕರ್ಮವನ್ನೂ ಕಾಪಾಡಿದಂತೆ, ಎಲ್ಲಾ ಆಶ್ರಮದವರನ್ನೂ ಕಾಪಾಡಿದಂತೆ.

‡ ಜ್ಞಾನ ಮುಂತಾದ ಆರು ಗುಣಗಳನ್ನು ಯಾವಾಗಲೂ ಉಳ್ಳವನು ಭಗವಂತನೆನಿಸುವನು. ಐಶ್ವರ್ಯ— ಸ್ವಾತಂತ್ರ್ಯ, ಶಕ್ತಿ—ಬೇಕಾದ್ದನ್ನು ಮಾಡುವ ಸಾಮರ್ಥ್ಯ, ಬಲ—ಸಹಾಯಸಂಪತ್ತು, ವೀರ್ಯ—ಪರಾಕ್ರಮ, ತೇಜಸ್ಸು—ಯಾವದಕ್ಕೂ ಜಗ್ಗದಿರುವದು. ಹೀಗೆಂದು ಗುಣಗಳನ್ನು ಆನಂದಗಿರಿಗಳು ವಿವರಿಸಿರುತ್ತಾರೆ. ಅಪ್ಪಯ್ಯದೀಕ್ಷಿತರು ಬರೆದಿರುವ ಕಲ್ಪತರುಪರಿಮಳದಲ್ಲಿ (೧) ಎಲ್ಲಾ ವಸ್ತುಗಳನ್ನೂ ಒಂದೊಂದಾಗಿಯೂ ಒಟ್ಟಾಗಿಯೂ ತಿಳಿಯುವದೇ ಜ್ಞಾನವು, (೨) ತನ್ನ ಇಚ್ಛೆಗೆ ಅಡ್ಡಿ ಇಲ್ಲದಿರುವದೇ ಐಶ್ವರ್ಯವು, (೩) ಜಗತ್ತಿಗೆಲ್ಲ ತಾನೇ ಉಪಾದಾನಕಾರಣನಾಗಿರುವದೇ ಶಕ್ತಿಯು, (೪) ಜಗತ್ತನ್ನು ಆಯಾಸವಿಲ್ಲದೆ ಸೃಷ್ಟಿಸುವದೂ ಕಾಪಾಡುವದೂ ಬಲವು, (೫) ಜಗತ್ತಿಗೆ ತಾನು ಉಪಾದಾನಕಾರಣನಾಗಿದ್ದರೂ ಹಾಲು ಮೊಸರಾಗುವಂತೆ ಮಾರ್ಪಡದೆ ಇರುವದು ವೀರ್ಯವು, (೬) ಸೃಷ್ಟಿಮಾಡುವದರಲ್ಲಿ ಸಹಕಾರಿಸಾಮಗ್ರಿಯನ್ನು ಬಯಸದೆ ಇರುವದೂ ತನಗಿಂತ ಬೇರೆಯಾದದ್ದೆಲ್ಲವನ್ನೂ ಜಯಿಸುವ ಸಾಮರ್ಥ್ಯವೂ ತೇಜಸ್ಸು— ಎಂದು ವರ್ಣಿಸಲ್ಪಟ್ಟಿರುವದು.

§ ಸತ್ತ್ವ, ರಜ, ತಮ- ಎಂಬ ಮೂರು ಗುಣಗಳಿಂದಾಗಿರುವ.

|| ಮೂಲಪ್ರಕೃತಿ ಎಂದರೆ ಹಿಂದೆ ಹೇಳಿದ ಅವ್ಯಕ್ತ. ಇದನ್ನು 'ಅವ್ಯಾಕೃತ', 'ಶಕ್ತಿ' 'ಮಾಯೆ'- ಮುಂತಾದ ಹೆಸರುಗಳಿಂದ ಶ್ರುತಿಸ್ಮೃತಿಗಳಲ್ಲಿ ಕರೆದಿರುತ್ತದೆ. ಮೂಲಪ್ರಕೃತಿಯೆಂಬ ಮಾತು ಸಾಂಖ್ಯಶಾಸ್ತ್ರದಿಂದ ತೆಗೆದುಕೊಂಡದ್ದಾದರೂ ಆ ಶಾಸ್ತ್ರದಲ್ಲಿ ಹೇಳಿರುವಂತೆ ಅದು ಸ್ವತಂತ್ರವಾದ ಜಗತ್ಕಾರಣವೆಂಬ ಅರ್ಥದಲ್ಲಿ ಇಲ್ಲಿ ಉಪಯೋಗಿಸಿಲ್ಲ. ಇದನ್ನು ಸೂಚಿಸುವದಕ್ಕಾಗಿಯೇ "ತನ್ನ ವಶದಲ್ಲಿಟ್ಟುಕೊಂಡು" ಎಂಬ ಮಾತನ್ನು ಭಾಷ್ಯದಲ್ಲಿ ಉಪಯೋಗಿಸಿದೆ.

ತಾನು) ಜನ್ಮರಹಿತನೂ* ನಾಶವಿಲ್ಲದವನೂ ಪ್ರಾಣಿಗಳಿಗೆ ಒಡೆಯನೂ ನಿತ್ಯಶುದ್ಧ ಬುದ್ಧಮುಕ್ತಸ್ವಭಾವನೂ† ಆಗಿದ್ದಾಗ್ಯೂ– ತನ್ನ ಮಾಯೆಯಿಂದ ದೇಹವುಳ್ಳವನಂತೆಯೂ ಹುಟ್ಟಿದವನಂತೆಯೂ‡ ಲೋಕಾನುಗ್ರಹವನ್ನು ಮಾಡುವವನಾಗಿ ಕಂಡುಬಂದಿರುವನು. ತನಗೆ (ಏನೂ) ಪ್ರಯೋಜನವಿಲ್ಲದಿದ್ದರೂ ಪ್ರಾಣಿಗಳಿಗೆ ಅನುಗ್ರಹಮಾಡಬೇಕೆಂಬ ಇಚ್ಛೆಯಿಂದ, ಶೋಕಮೋಹಗಳೆಂಬ ಮಹಾಸಮುದ್ರದಲ್ಲಿ ಮುಳುಗಿದ್ದ ಅರ್ಜುನನಿಗೆ–ಸದ್ಗುಣಗಳಿಂದ ದೊಡ್ಡವರೆಂದೆನಿಸಿಕೊಂಡಿರುವವರು ಗ್ರಹಿಸಿ ಅನುಷ್ಠಾನಮಾಡಿದ ಧರ್ಮವೇ (ಲೋಕದಲ್ಲಿ) ಪ್ರಚಾರವಾಗುವದೆಂಬ ಕಾರಣದಿಂದ– ವೈದಿಕಧರ್ಮಗಳೆರಡನ್ನೂ ಉಪದೇಶಮಾಡಿದನು. ಆ ಧರ್ಮವನ್ನು ಭಗವಂತನು ಉಪದೇಶಮಾಡಿದಂತೆಯೇ ಸರ್ವಜ್ಞರೂ§ ಭಗವದ್ರೂಪರೂ ಆದ **ವೇದವ್ಯಾಸರು 'ಗೀತೆಗಳು'** ಎಂಬ ಹೆಸರಿನ ಏಳು ನೂರು ಶ್ಲೋಕಗಳಲ್ಲಿ ಇಟ್ಟಿರುವರು.

## ಗೀತಾಭಾಷ್ಯದ ಉದ್ದೇಶ

ಅಂಥ ಈ ಗೀತಾಶಾಸ್ತ್ರವು ಸಮಸ್ತವೇದಾರ್ಥಸಾರದ ಸಂಗ್ರಹವಾಗಿರುತ್ತದೆ. ಇದರ ಅರ್ಥವನ್ನು ತಿಳಿಯುವದು ಕಷ್ಟವಾಗಿರುವದು. ಇದರ ಅರ್ಥವನ್ನು ಹೊರಪಡಿಸುವದಕ್ಕಾಗಿ ಅನೇಕರು|| ಪದ, ಪದಾರ್ಥ, ವಾಕ್ಯಾರ್ಥ, (ವಾಕ್ಯಾರ್ಥವನ್ನು ಸರಿಯಾಗಿ ತಿಳಿದುಕೊಳ್ಳುವದಕ್ಕೆ ಬೇಕಾದ) ಯುಕ್ತಿ– ಇವುಗಳನ್ನು ವಿವರವಾಗಿ ತಿಳಿಸಿರುತ್ತಾರಾದರೂ ಲೋಕದಲ್ಲಿ ಜನರು ಅತ್ಯಂತವಿರುದ್ಧವಾದ ಅನೇಕಾರ್ಥಗಳನ್ನು ( ಇದರ ಅರ್ಥವೆಂದು ) ತಿಳಿಯುತ್ತಿರುವದನ್ನು

* ಮುಂದೆ ಗೀತೆಯಲ್ಲಿರುವ "ಅಜೋಽಪಿ ಸನ್ನವ್ಯಯಾತ್ಮಾ" (ಅ. ೪–೬) ಎಂಬ ಶ್ಲೋಕದ ಅರ್ಥವನ್ನು ಸೂಚಿಸಿದೆ.

† ಮಾಯೆಯಿಂದ ಜನ್ಮಾದಿಗಳೂ ಸ್ವಭಾವದಿಂದ ನಿತ್ಯಶುದ್ಧಬುದ್ಧಮುಕ್ತತ್ವವೂ ಇವೆ ಎಂದು ಭಾವ. ಶುದ್ಧ-ಅನಾತ್ಮಸಂಬಂಧವಿಲ್ಲದ, ಬುದ್ಧ-ಜ್ಞಾನಸ್ವರೂಪವಾದ, ಮುಕ್ತ-ಯಾವ ಬಂಧವೂ ಇಲ್ಲದ.

‡ 'ಅಂತೆ' ಎಂದದ್ದರಿಂದ ನಿಜವಾಗಿ ದೇಹವೂ ಇಲ್ಲ, ಜನ್ಮವೂ ಇಲ್ಲ ಎಂದಂತಾಯಿತು.

§ ವ್ಯಾಸರೂ ಸಾಕ್ಷಾನ್ನಾರಾಯಣಾವತಾರವೆ. ಆದ್ದರಿಂದ ಅವರ ವಾಕ್ಯವೇ ಶ್ರೀಕೃಷ್ಣವಾಕ್ಯವು– ಎಂದು ಸೂಚಿಸುವದಕ್ಕಾಗಿ 'ಸರ್ವಜ್ಞರಾದ' ಮತ್ತು 'ಭಗವದ್ರೂಪರಾದ' ಎಂಬ ವಿಶೇಷಣಗಳನ್ನು ಕೊಟ್ಟಿರುತ್ತದೆ.

|| ಭಾಷ್ಯಕಾರರಿಗಿಂತ ಮೊದಲು ಅನೇಕರು ಗೀತೆಗೆ ಅರ್ಥವನ್ನು ಬರೆದಿದ್ದರು. ಇವರಲ್ಲಿ ಕೆಲವರು ಜ್ಞಾನಕರ್ಮಸಮುಚ್ಚಯವಾದಿಗಳು, ಇನ್ನು ಕೆಲವರು ಜ್ಞಾನವಾದಿಗಳು. ಇವರಿಬ್ಬರ ಗೀತಾವ್ಯಾಖ್ಯಾನಗಳು ಪರಸ್ಪರವಿರುದ್ಧವಾಗಿರುವದರಿಂದ ಜನರಿಗೆ ನಿರ್ಣಯವಾದ ಅರ್ಥವು ಗೊತ್ತಾಗಿರಲಿಲ್ಲ.

ಕಂಡು ನಾನು (ಇದರ ಸರಿಯಾದ) ಅರ್ಥವನ್ನು ವಿಂಗಡಿಸಿ ಗೊತ್ತುಮಾಡುವದಕ್ಕಾಗಿ (ಇದಕ್ಕೆ) ಸಂಕ್ಷೇಪವಾಗಿ **ವಿವರಣ**ವನ್ನು ಮಾಡುವೆನು.

## ಗೀತಾಶಾಸ್ತ್ರದ ಅನುಬಂಧಗಳು

ಸ್ವಲ್ಪದರಲ್ಲಿ ಹೇಳಬೇಕಾದರೆ ಆ ಈ ಗೀತಾಶಾಸ್ತ್ರಕ್ಕೆ ಹೆಚ್ಚಿನ ನಿಃಶ್ರೇಯಸವೇ ಪ್ರಯೋಜನವು. (ನಿಃಶ್ರೇಯಸವೆಂದರೆ) ಕಾರಣಸಹಿತವಾಗಿ* ಸಂಸಾರವು ಅತ್ಯಂತವಾಗಿ ಇಲ್ಲವಾಗಿ ಬಿಡುವದು. ಇದು ಸರ್ವಕರ್ಮಗಳನ್ನೂ ಸಂನ್ಯಾಸ† ಮಾಡಿ ಆತ್ಮಜ್ಞಾನದಲ್ಲಿಯೇ ನಿಂತುಬಿಡುವದೆಂಬ ಧರ್ಮದಿಂದ ಆಗುತ್ತದೆ. ಗೀತೆಯ ಅರ್ಥವಾದ ಈ ಧರ್ಮವನ್ನೇ ಕುರಿತು ಭಗವಂತನೇ **ಅನುಗೀತೆ**ಯಲ್ಲಿ "ಸ ಹಿ ಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನೇ (ಭಾ॥ ಅಶ್ವ॥ ೧೬–೧೨)" ಬ್ರಹ್ಮದ ಸ್ಥಾನವನ್ನು ಅರಿಯುವದಕ್ಕೆ ಆ ಧರ್ಮವೇ ಪೂರ್ಣಸಾಮರ್ಥ್ಯವುಳ್ಳದ್ದು–ಎಂದು ಹೇಳಿರುತ್ತಾನೆ. "ನೈವ ಧರ್ಮೀ ನ ಚಾಧರ್ಮೀ ನ ಚೈವ ಹಿ ಶುಭಾಶುಭೀ‡ (ಭಾ॥ ಅಶ್ವ॥ ೧೯–೭)" ಧರ್ಮವನ್ನೂ ಅನುಸರಿಸದೆ ಅಧರ್ಮವನ್ನೂ ಅನುಸರಿಸದೆ ಪುಣ್ಯಾಪುಣ್ಯಗಳೆರಡನ್ನೂ ಅನುಸರಿಸದವನಾಗಿ (ಇರುವವನು ಮುಕ್ತನಾಗುತ್ತಾನೆ), "ಯಃ ಸ್ಯಾದೇಕಾಸನೇ ಲೀನಸ್ತೂಷ್ಣೀಂ ಕಿಂಚಿದಚಿನ್ತಯನ್ (ಭಾ॥ ಅಶ್ವ॥ ೧೯–೧)" ಯಾವಾತನು ಒಂದೇ ಆಸನದಲ್ಲಿ ಕುಳಿತು ಮನೋಲಯವನ್ನು ಹೊಂದಿ ಏನನ್ನೂ ಚಿಂತಿಸದೆ ಸುಮ್ಮನೆ ಇರುವನೋ (ಅವನು ಮುಕ್ತನಾಗುವನು), ಎಂದೂ "ಜ್ಞಾನಂ ಸಂನ್ಯಾಸಲಕ್ಷಣಮ್ (ಭಾ॥ ಅಶ್ವ॥ ೪೩-೨೬)" ಜ್ಞಾನವು ಸಂನ್ಯಾಸರೂಪವಾದದ್ದು-ಎಂದೂ ಅದೇ (ಅನುಗೀತೆಯಲ್ಲಿಯೇ) ಹೇಳಿರುತ್ತದೆ. ಇಲ್ಲಿಯೂ ಕೊನೆಯಲ್ಲಿ ಅರ್ಜುನನಿಗೆ "ಎಲ್ಲಾ ಧರ್ಮಗಳನ್ನೂ ಬಿಟ್ಟು ನನ್ನನ್ನೊಬ್ಬನನ್ನೇ ಶರಣು ಹೊಂದು (ಅ. ೧೮–೬೬)" ಎಂದು ಹೇಳಿರುತ್ತದೆ.

ವರ್ಣಾಶ್ರಮಗಳನ್ನು ಉದ್ದೇಶಿಸಿ ಅಭ್ಯುದಯಕ್ಕಾಗಿ ಪ್ರವೃತ್ತಿ§ ಎಂಬ ಯಾವ ಧರ್ಮವನ್ನು ವಿಧಿಸಿರುತ್ತದೆಯೋ ಅದು ದೇವತೆಗಳೇ ಮೊದಲಾದವರ

---

* ಅವಿದ್ಯೆಯೇ ಸಂಸಾರಕ್ಕೆ ಕಾರಣವು. † ಗೀತೆಯು ಕರ್ಮವನ್ನೇ ಹೊಗಳುವದೆಂಬರ್ಥವನ್ನು ಬಾಲಗಂಗಾಧರತಿಲಕರು ಈಚೆಗೆ ತೆಗೆದಿರುತ್ತಾರೆ. ಈ ವಿಚಾರಕ್ಕೆ ಪೀಠಿಕೆಯನ್ನು ನೋಡಿ. ‡ ಭಾರತಪಾಠದಲ್ಲಿ 'ನ ಚೈವ ಹಿ ಶುಭಾಶುಭೀ' ಎಂಬದಕ್ಕೆ ಬದಲ 'ಪೂರ್ವೋಪಚಿತಹಾಯಕಃ' ಎಂದೂ 'ಯಃ ಸ್ಯಾದೇಕಾಸನೇ' ಎಂಬದಕ್ಕೆ ಬದಲು 'ಯಃ ಸ್ಯಾದೇಕಾಯನೇ ಲೀನಃ' ಎಂದೂ ಇದೆ. ಇದರಂತೆಯೇ ನೀಲಕಂಠೀಯವ್ಯಾಖ್ಯಾನವೂ ಇದೆ. 'ಏಕಾಯನೇ ಲೀನಃ' ಎಂದರೆ ಬ್ರಹ್ಮದಲ್ಲಿ ಮನಸ್ಸನ್ನು ಅಡಗಿಸಿ ಎಂದರ್ಥವಾಗುತ್ತದೆ.

§ ನಿಃಶ್ರೇಯಸವೇ ಶಾಸ್ತ್ರಕ್ಕೆ ಪ್ರಯೋಜನವಾದರೆ ಪ್ರವೃತ್ತಿಧರ್ಮವನ್ನು ಹೇಳಿರುವದು ಏಕೆ? ಎಂದರೆ ಅದೂ ಪರಂಪರೆಯಿಂದ ನಿಃಶ್ರೇಯಸಕ್ಕೆ ಕಾರಣವಾಗಿರುವದರಿಂದ ಹೇಳಿರುತ್ತದೆ-ಎಂದು ಭಾವ.

ಸ್ಥಾನವನ್ನು ಪಡೆಯುವದಕ್ಕೆ ಕಾರಣವಾಗಿರುವದಾದಾಗ್ಯೂ ಈಶ್ವರಾರ್ಪಣ ಬುದ್ಧಿಯಿಂದ ಫಲದ ಆಶೆಯಿಲ್ಲದೆ ಅನುಷ್ಠಾನಮಾಡಿದರೆ ಸತ್ತ್ವಶುದ್ಧಿಯನ್ನು* ಉಂಟುಮಾಡುವದು; ಮತ್ತು ಸತ್ತ್ವಶುದ್ಧಿಯಾದವನಿಗೆ ಜ್ಞಾನನಿಷ್ಠೆಗೆ ತಕ್ಕ ಯೋಗ್ಯತೆಯನ್ನು ಹೊಂದಿಸುವದರ ಮೂಲಕವೂ ಜ್ಞಾನವನ್ನುಂಟುಮಾಡುವದರ ಮೂಲಕವೂ ನಿಃಶ್ರೇಯಸದ† ಕಾರಣವೂ ಆಗುವದು. ಆದ್ದರಿಂದಲೆ ಈ ಅಭಿಪ್ರಾಯವನ್ನೇ‡ ಮನಸ್ಸಿನಲ್ಲಿಟ್ಟುಕೊಂಡು "ಬ್ರಹ್ಮನಲ್ಲಿ ಕರ್ಮಗಳನ್ನು ಇಟ್ಟು (ಯಾವಾತನು ಕೆಲಸಮಾಡುತ್ತಾನೋ) (೫-೧೦)", "ಆಸಕ್ತಿಯನ್ನು ಬಿಟ್ಟು ಆತ್ಮಶುದ್ಧಿಗಾಗಿ ಯೋಗಿಗಳು ಕರ್ಮವನ್ನು ಮಾಡುವರು. (೫-೧೧)"- ಎಂದು ಮುಂದೆ ಭಗವಂತನು ಹೇಳಿರುತ್ತಾನೆ.

ನಿಃಶ್ರೇಯಸವೆಂಬ ಪ್ರಯೋಜನವುಳ್ಳ ಈ ಎರಡು ಪ್ರಕಾರವಾದ ಧರ್ಮವೂ ಪರಬ್ರಹ್ಮವಾದ **ವಾಸುದೇವ**ನೆಂಬ ಪರಮಾರ್ಥತತ್ತ್ವವೂ ತನಗೆ ಅಭಿಧೇಯವೆಂದು ಗೀತಾಶಾಸ್ತ್ರವು ವಿಶೇಷರೀತಿಯಿಂದ ತೋರಿಸಿಕೊಡುತ್ತಿರುವದರಿಂದ, ಇದಕ್ಕೆ ಅಸಾಧಾರಣವಾದ ಪ್ರಯೋಜನವೂ ಸಂಬಂಧವೂ ಅಭಿಧೇಯವೂ ಇದ್ದಂತಾಯಿತು.§ ಇದರ ಅರ್ಥವನ್ನು ತಿಳಿದರೆ ಸಮಸ್ತಪುರುಷಾರ್ಥವೂ ಸಿದ್ಧಿಯಾಗುವದರಿಂದ ಇದರ **ವಿವರಣ**ವನ್ನು ಮಾಡುವದಕ್ಕೆ ನಾನು ಪ್ರಯತ್ನಮಾಡುವೆನು.

---

* ಕರ್ಮದಿಂದ ಪಿತೃಲೋಕವೂ ಉಪಾಸನೆಯಿಂದ ದೇವಲೋಕವೂ ಇವೆರಡರ ಸಮುಚ್ಚಯದಿಂದ ಬ್ರಹ್ಮಲೋಕವೂ ದೊರಕುವದೆಂದು ಶಾಸ್ತ್ರದಲ್ಲಿದೆ. ಈ ಫಲದ ಆಶೆಯಿಲ್ಲದೆ ಈಶ್ವರಾರ್ಪಣಕ್ಕಾಗಿ ಇವುಗಳನ್ನು ಮಾಡಿದರೆ ಸತ್ತ್ವಶುದ್ಧಿಯಾಗುವದು, ಎಂದರೆ ಅಂತಃಕರಣದಲ್ಲಿರುವ ರಾಗದ್ವೇಷಾದಿಗಳು ಹೋಗಿಬಿಡುವವು.

† ಅಭ್ಯುದಯವೆಂಬ ಮಾತಿಗೆ ಏಳಿಗೆ ಎಂದರ್ಥ; ನಿಃಶ್ರೇಯಸವೆಂದರೆ ಅತ್ಯಂತ ಉತ್ತಮಫಲವೆಂದರ್ಥ. ಪ್ರವೃತ್ತಿಧರ್ಮವು ಅಭ್ಯುದಯಕ್ಕೆ ಕಾರಣ; ನಿವೃತ್ತಿಧರ್ಮವು ನಿಃಶ್ರೇಯಸಕ್ಕೆ ಎಂದರೆ ಮುಕ್ತಿಗೆ ಕಾರಣ.

‡ ಸತ್ತ್ವಶುದ್ಧಿಯ ಮೂಲಕ ಪ್ರವೃತ್ತಿಧರ್ಮವು ಜ್ಞಾನದ ಉತ್ಪತ್ತಿಗೆ ಕಾರಣವಾಗಿರುವದೆಂಬ ಅಭಿಪ್ರಾಯವನ್ನೇ.

§ ಪ್ರವೃತ್ತಿನಿವೃತ್ತಿಧರ್ಮಗಳು, ಪರಮಾರ್ಥತತ್ತ್ವ- ಇವೇ ಗೀತೆಯ ಅಭಿಧೇಯ ಅಥವಾ ವಿಷಯ; ಈ ಧರ್ಮಗಳ ಅನುಷ್ಠಾನದಿಂದ ಚಿತ್ತಶುದ್ಧಿವಿಚಾರಗಳ ಮೂಲಕ ಪರಮಾರ್ಥವನ್ನು ಪಡೆಯುವ ಮೋಕ್ಷವೇ ಪ್ರಯೋಜನ; ಇವುಗಳನ್ನು ತಿಳಿಸುವದೇ ಈ ಗ್ರಂಥದ ಸಂಬಂಧವು. ಪ್ರಯೋಜನವನ್ನು ಬಯಸುವವನೇ ಅಧಿಕಾರಿಯಾದ್ದರಿಂದ ಅದನ್ನು ಹೇಳಲಿಲ್ಲ. ಗೀತೆಯ ಅನುಬಂಧದ ವಿಚಾರದಲ್ಲಿ ಪೀಠಿಕೆಯನ್ನು ನೋಡಿ.

# ಒಂದನೆಯ ಅಧ್ಯಾಯ

(ಅರ್ಜುನನ ವಿಷಾದ)

## ಕಥೆಯ ಸಂಬಂಧ

**ಧೃತರಾಷ್ಟ್ರ ಉವಾಚ :—**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಣ್ಡವಾಶ್ಚೈವ ಕಿಮಕುರ್ವತ ಸಞ್ಜಯ ॥ ೧ ॥**

ಧೃತರಾಷ್ಟ್ರನು ಹೇಳಿದ್ದೇನೆಂದರೆ :—

೧. ಎಲೈ ಸಂಜಯನೆ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬೇಕೆಂದೇ ಸೇರಿದ್ದ ನಮ್ಮವರೂ ಪಾಂಡವರೂ ಏನು ಮಾಡಿದರು?

**ಸಞ್ಜಯ ಉವಾಚ :—**

**ದೃಷ್ಟ್ವಾ ತು ಪಾಣ್ಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಙ್ಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

ಸಂಜಯನು ಹೇಳಿದ್ದೇನೆಂದರೆ :—

೨. ಆಗ ವ್ಯೂಹವಾಗಿ ಒಡ್ಡಿದ್ದ ಪಾಂಡವರ ಸೈನ್ಯವನ್ನು ನೋಡಿ ರಾಜನಾದ ದುರ್ಯೋಧನನು ಆಚಾರ್ಯನಾದ ದ್ರೋಣನ ಹತ್ತಿರಕ್ಕೆ ಬಂದು ಈ ಮಾತನ್ನು ಹೇಳಿದನು.

## ದುರ್ಯೋಧನನು ದ್ರೋಣನಿಗೆ ಹೇಳಿದ ಮಾತು

**ಪಶ್ಯೈತಾಂ ಪಾಣ್ಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

೩. "ಎಲೈ ಆಚಾರ್ಯನೆ, ನಿನ್ನ ಶಿಷ್ಯನಾಗಿಯೂ ಬುದ್ಧಿವಂತನಾಗಿಯೂ ಇರುವ ದ್ರುಪದಪುತ್ರನಾದ ಧೃಷ್ಟದ್ಯುಮ್ನನಿಂದ ವ್ಯೂಹವಾಗಿ ರಚಿಸಲ್ಪಟ್ಟಿರುವ ಈ ದೊಡ್ಡದಾದ ಪಾಂಡುಪುತ್ರರ ಸೈನ್ಯವನ್ನು ನೋಡು.

---

* 'ಧರ್ಮಕ್ಷೇತ್ರೇ ಕುರುಕ್ಷೇತ್ರೇ'— ಎಂಬ ಶ್ಲೋಕದಿಂದ 'ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ'-ಎಂಬವರೆಗೆ ಆಚಾರ್ಯರು ಭಾಷ್ಯವನ್ನು ಬರೆದಿಲ್ಲ, ತಾತ್ಪರ್ಯವನ್ನು ಒಟ್ಟಾಗಿ ಬರೆದಿರುತ್ತಾರೆ. ವಾಚಕರ ಸೌಕರ್ಯಕ್ಕಾಗಿ ಇವುಗಳ ಕನ್ನಡದ ಭಾವಾರ್ಥವನ್ನು ಕೊಟ್ಟಿರುತ್ತದೆ.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**
**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುನ್ತಿಭೋಜಶ್ಚ ಶೈಬ್ಯಶ್ಚ ನರಪುಙ್ಗವಃ ॥ ೫ ॥**
**ಯುಧಾಮನ್ಯುಶ್ಚ ವಿಕ್ರಾನ್ತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

೪–೬. ಇಲ್ಲಿ ದೊಡ್ಡದೊಡ್ಡ ಧನುರ್ವಿದ್ಯಾಪ್ರವೀಣರಾಗಿಯೂ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರಾಗಿಯೂ ಇರುವ ಶೂರರಿರುವರು ; ಯುಯುಧಾನನು,*ವಿರಾಟನು, ಮಹಾರಥನಾದ† ದ್ರುಪದನು, ಧೃಷ್ಟಕೇತುವು‡, ಚೇಕಿತಾನನು, ವೀರ್ಯವಂತನಾದ ಕಾಶೀರಾಜನು, ಪುರುಜಿತ್ತು, ಕುಂತೀಭೋಜನು§, ಮತ್ತು ನರಶ್ರೇಷ್ಠನಾದ ಶೈಬ್ಯನು, ವಿಕ್ರಮಿಯಾದ ಯುಧಾಮನ್ಯು, ವೀರ್ಯವಂತನಾದ ಉತ್ತಮೌಜಸ್ಸು— ಈ ರಾಜರೂ ಸುಭದ್ರೆಯ ಮಗನೂ|| ದ್ರೌಪದಿಯ ಮಕ್ಕಳೂ** ಇರುವರು. ಈ ಎಲ್ಲರೂ ಮಹಾರಥರು.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ॥ ೭ ॥**

೭. ಎಲೈ ದ್ವಿಜೋತ್ತಮನಾದ ದ್ರೋಣನೆ, ಇನ್ನು ನಮ್ಮ ಸೈನ್ಯದಲ್ಲಿರುವ ಶ್ರೇಷ್ಠರಾದ ನಾಯಕರನ್ನು ನಿನಗೆ ನೆನಪುಕೊಡುವದಕ್ಕಾಗಿ ಹೇಳುತ್ತೇನೆ, ಅವರನ್ನು ಗೊತ್ತುಮಾಡಿಕೊ.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಞ್ಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**

೮. ಪೂಜ್ಯನಾದ ನೀನು, ಭೀಷ್ಮನು, ಕರ್ಣನು, ಯುದ್ಧದಲ್ಲಿ ಜಯಶೀಲನಾದ ಕೃಪನು, ಅಶ್ವತ್ಥಾಮನು, ವಿಕರ್ಣನು††, ಮತ್ತು ಸೋಮದತ್ತನ ಮಗನು.‡‡

---

* ಸಾತ್ಯಕಿ. † ತಾನೊಬ್ಬನೇ ಹತ್ತು ಸಾವಿರ ಧನುರ್ಧಾರಿಗಳೊಡನೆ ಯುದ್ಧಮಾಡಬಲ್ಲ ಶಸ್ತ್ರಶಾಸ್ತ್ರಪ್ರವೀಣನಿಗೆ ಮಹಾರಥನು ಎಂದು ಹೆಸರು. ‡ ಶಿಶುಪಾಲನ ಮಗನು. § ಕುಂತಿಯ ತಂದೆ. || ಅಭಿಮನ್ಯು ** ಪ್ರತಿವಿಂಧ್ಯ, ಶ್ರುತಸೇನ, ಶ್ರುತಕೀರ್ತಿ, ಶತಾನೀಕ, ಶ್ರುತಕರ್ಮ- ಎಂಬವರು. †† ದುರ್ಯೋಧನನ ತಮ್ಮನು. ‡‡ ಭೂರಿಶ್ರವಸ್ಸು.
'ತಥೈವ ಚ'—ಎಂಬದಕ್ಕೆ ಬದಲು ಕೆಲವು ಕೋಶಗಳಲ್ಲಿ 'ಜಯದ್ರಥಃ'—ಎಂದು ಪಾಠವಿದೆ.

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

೯. "ನನಗೋಸ್ಕರ ಪ್ರಾಣವನ್ನು ಬಿಡುವದಕ್ಕೆ ಸಿದ್ಧರಾಗಿರುವ ಇನ್ನೂ ಬಹುಜನ* ಶೂರರಿರುವರು; ಅವರೆಲ್ಲರೂ ನಾನಾವಿಧವಾದ† ಶಸ್ತ್ರಗಳನ್ನೂ ಯುದ್ಧಸಾಧನಗಳನ್ನೂ ಧರಿಸಿರುವರು; ಯುದ್ಧದಲ್ಲಿ ಗಟ್ಟಿಗರಾಗಿಯೂ ಇರುವರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ ೧೦ ॥**

೧೦. ಭೀಷ್ಮನಿಂದ ರಕ್ಷಿತವಾಗಿರುವ ನಮ್ಮ ಬಲವು ಕಡಿಮೆಯಾಗಿಲ್ಲ‡;

---

* ಶಲ್ಯ, ಕೃತವರ್ಮ- ಮುಂತಾದವರು	† ಮೂವತ್ತೆರಡು ಬಗೆಯ ಆಯುಧಗಳು. ಶಸ್ತ್ರಗಳೆಂದರೆ ಕೊಯ್ಯುವ ಕತ್ತಿ ಮುಂತಾದವುಗಳೆಂತಲೂ ಪ್ರಹರಣಗಳೆಂದರೆ ಹೊಡೆಯುವ ಗದೆ ಮುಂತಾದವುಗಳೆಂತಲೂ ನೀಲಕಂಠೀಯ ವ್ಯಾಖ್ಯಾನದಲ್ಲಿದೆ.

‡ ಈ ಶ್ಲೋಕದಲ್ಲಿರುವ 'ಪರ್ಯಾಪ್ತಂ', 'ಅಪರ್ಯಾಪ್ತಂ'- ಎಂಬ ಮಾತುಗಳಿಗೆ ಬೇರೆಬೇರೆ ಅರ್ಥವನ್ನು ಕೊಟ್ಟು ಬೇರೆ ಬೇರೆ ತಾತ್ಪರ್ಯವನ್ನು ವ್ಯಾಖ್ಯಾನಕಾರರು ತೆಗೆದಿರುವರು. ಇಲ್ಲಿ ಕೊಟ್ಟಿರುವ ತಾತ್ಪರ್ಯವು ಬ್ರಹ್ಮಾನಂದಗಿರಿ ಎಂಬ ವ್ಯಾಖ್ಯಾನದಲ್ಲಿದೆ. ಇನ್ನೂ ಕೆಲವು ಅರ್ಥಗಳು ಯಾವವೆಂದರೆ:— (೧) ಭೀಷ್ಮರಕ್ಷಿತವಾಗಿರುವ ನಮ್ಮ ಸೈನ್ಯವು ಶತ್ರುಗಳನ್ನು ಜಯಿಸಲು ಸಮರ್ಥವಾಗಿದೆ, ಅಥವಾ ಅಪರಿಮಿತವಾಗಿದೆ; ಪಾಂಡವರ ಸೈನ್ಯವು ಅಸಮರ್ಥ ಅಥವಾ ಪರಿಮಿತ. ಪಾಂಡವರ ಸೈನ್ಯವು ನಮ್ಮನ್ನು ಸೋಲಿಸುವದಕ್ಕೆ ಸಾಲದು, ನಮ್ಮದು ಅವರನ್ನು ಸೋಲಿಸುವದಕ್ಕೆ ಸಾಕು. [ಆನಂದಗಿರಿ] (೨) ನಮ್ಮ ಸೈನ್ಯವು ಯುದ್ಧಕ್ಕೆ ತಕ್ಕಷ್ಟಿಲ್ಲವಾದರೂ ಭೀಷ್ಮರಿಂದ ಕಾಪಾಡಲ್ಪಟ್ಟಿದೆ; ಇವರ ಸೈನ್ಯವು ತಕ್ಕಷ್ಟಿದ್ದರೂ ಭೀಮರಕ್ಷಿತವಾಗಿದೆ. ಆದ್ದರಿಂದ ನಮ್ಮದು ಜಯಕ್ಕೆ ಸಾಕು. [ಶಂಕರಾನಂದ] (೩) ನಮ್ಮ ಸೈನ್ಯವನ್ನು ಪಾಂಡವರು ಸುತ್ತುಗಟ್ಟುವದಕ್ಕೆ ಆಗುವಂತಿಲ್ಲ; ನಾವು ಅವರ ಸೈನ್ಯವನ್ನು ಮುತ್ತಬಹುದು. [ನೀಲಕಂಠ] (೪) ಭೀಷ್ಮರು ಉಭಯ ಪಕ್ಷಪಾತಿಗಳಾದ್ದರಿಂದ ನಮ್ಮ ಸೈನ್ಯವು ಹೋರಾಟಕ್ಕೆ ಸಮರ್ಥವಲ್ಲ. [ಶ್ರೀಧರ] ಈ ಎಲ್ಲಾ ವ್ಯಾಖ್ಯಾನಗಳಲ್ಲಿಯೂ 'ಪರ್ಯಾಪ್ತಂ', 'ಅಪರ್ಯಾಪ್ತಂ'— ಎಂಬ ಮಾತುಗಳಿಗೆ ರೂಢಿಯಲ್ಲಿಲ್ಲದ ಅರ್ಥವನ್ನೆ ಕಲ್ಪಿಸಬೇಕಾಗಿರುವದು 'ನನ್ನ ಕಡೆಯಲ್ಲಿ ಅನೇಕರು ಶೂರರು ಇದ್ದಾರೆ ಸೈನ್ಯವೂ ಕಡಿಮೆ ಇಲ್ಲ, ದಕ್ಷರಾದ ಭೀಷ್ಮರು ಸೇನೆಯನ್ನು ನೋಡಿಕೊಳ್ಳುತ್ತಲೂ ಇದ್ದಾರೆ. ಆದರೂ ನೀವೆಲ್ಲರೂ ಎಚ್ಚರದಿಂದ ಇರುವದು ಒಳ್ಳೆಯದು' ಎಂಬುದು ದುರ್ಯೋಧನನ ಅಭಿಪ್ರಾಯವಾಗಿರಬೇಕೆಂದು ತೋರುವುದು.

ಆದರೆ ಭೀಮನಿಂದ* ರಕ್ಷಿತವಾಗಿರುವ ಈ ಪಾಂಡವರ ಸೈನ್ಯವಾದರೋ ಪರಿಮಿತವಾಗಿಯೇ ಇರುವದು.

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷನ್ತು ಭವನ್ತಃ ಸರ್ವ ಏವ ಹಿ ॥ ೧೧ ॥**

೧೧. "ವ್ಯೂಹವನ್ನು ಹೊಗುವ ಮಾರ್ಗಗಳಲ್ಲೆಲ್ಲ ನೀವೆಲ್ಲರೂ ನಿಮ್ಮ ನಿಮ್ಮ ಭಾಗದ ಕಡೆಗಳಲ್ಲಿದ್ದುಕೊಂಡು ಭೀಷ್ಮನನ್ನೇ ರಕ್ಷಿಸಿಕೊಡಿರಿ."

**ತಸ್ಯ ಸಂಜನಯನ್ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಙ್ಖಂ ದಧ್ಮೌ ಪ್ರತಾಪವಾನ್ ॥ ೧೨ ॥**

೧೨. ಕುರುಕುಲಕ್ಕೆ ಹಿರಿಯನಾಗಿಯೂ ಪ್ರತಾಪವಂತನಾಗಿಯೂ ಇರುವ ಆತನ ಅಜ್ಜನಾದ ಭೀಷ್ಮನು ದುರ್ಯೋಧನನಿಗೆ ಹರ್ಷವನ್ನುಂಟು ಮಾಡಲೋಸುಗ ಗಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದನು.

**ತತಃ ಶಙ್ಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**

೧೩. ಆಮೇಲೆ ಶಂಖಗಳೂ ಭೇರಿಗಳೂ ತಮಟೆ, ನಗಾರಿ, ದುಮು ದುಮಿ– ಇವುಗಳೂ ಕೂಡಲೇ ಬಾರಿಸಲ್ಪಟ್ಟವು. ಆ ಶಬ್ದದಿಂದ ಬಹು ದೊಡ್ಡ ಗದ್ದಲವಾಯಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಃ ಪಾಣ್ಡವಶ್ಚೈವ ದಿವ್ಯೌ ಶಙ್ಖೌ ಪ್ರದಧ್ಮತುಃ ॥ ೧೪ ॥**

೧೪. ಆಮೇಲೆ ಬಿಳಿಯ ಕುದುರೆಗಳನ್ನು ಕಟ್ಟಿದ ಮಹಾರಥದಲ್ಲಿ ಕುಳಿತಿದ್ದ ಶ್ರೀಕೃಷ್ಣನೂ ಅರ್ಜುನನೂ ತಮ್ಮ ತಮ್ಮ ದಿವ್ಯಶಂಖಗಳನ್ನು ಧ್ವನಿಮಾಡಿದರು.

**ಪಾಞ್ಚಜನ್ಯಂ ಹೃಷೀಕೇಶೋ ದೇವದತ್ತಂ ಧನಞ್ಜಯಃ ।**
**ಪೌಣ್ಡ್ರಂ ದಧ್ಮೌ ಮಹಾಶಙ್ಖಂ ಭೀಮಕರ್ಮಾ ವೃಕೋದರಃ ॥ ೧೫ ॥**
**ಅನನ್ತವಿಜಯಂ ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥**

---

* ಪಾಂಡವರ ಸೇನೆಯು ವಜ್ರವ್ಯೂಹದ ಆಕಾರದಲ್ಲಿತ್ತು; ಭೀಮನು ಎಲ್ಲರಿಗಿಂತಲೂ ಮುಂದಾಳಾಗಿ ಅದನ್ನು ರಕ್ಷಿಸುತ್ತಿದ್ದನು. (ಉದ್ಯೋ. ೧೯)

**ಕಾಶ್ಯಶ್ಚ ಪರಮೇಷ್ವಾಸಃ ಶಿಖಣ್ಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಙ್ಖಾನ್ ದಧ್ಮುಃ ಪೃಥಕ್ಪೃಥಕ್ ॥ ೧೮ ॥**

೧೫–೧೮. ಹೃಷೀಕೇಶನಾದ ಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವನ್ನೂ ಶತ್ರುಭಯಂಕರವಾದ ಯುದ್ಧಕಾರ್ಯವನ್ನು ಬಲ್ಲ ವೃಕೋದರನು ಪೌಂಡ್ರವೆಂಬ ಮಹಾಶಂಖವನ್ನೂ ಕುಂತೀಪುತ್ರನಾದ ಯುಧಿಷ್ಠಿರ ರಾಜನು ಅನಂತವಿಜಯವನ್ನೂ ಮತ್ತು ನಕುಲನೂ ಸಹದೇವನೂ ಸುಘೋಷ, ಮಣಿಪುಷ್ಪಕ– ಎಂಬ ಶಂಖಗಳನ್ನೂ ಮಹಾಧನುರ್ಧರನಾದ ಕಾಶೀರಾಜನೂ ಮಹಾರಥನಾದ ಶಿಖಂಡಿಯೂ ಧೃಷ್ಟದ್ಯುಮ್ನನೂ ವಿರಾಟನೂ ಯಾರಿಗೂ ಸೋಲದ ಸಾತ್ಯಕಿಯೂ ದ್ರುಪದನೂ ದ್ರೌಪದಿಯ ಮಕ್ಕಳೂ, ಎಲೈ ಪೃಥಿವೀಪತಿಯೇ, ಮಹಾಬಾಹುಬಲವುಳ್ಳ ಅಭಿಮನ್ಯುವೂ ಎಲ್ಲರೂ ಬೇರೆಬೇರೆಯಾಗಿ ತಮ್ಮ ತಮ್ಮ ಶಂಖಗಳನ್ನೂ ಧ್ವನಿಗೈಯುವವರಾದರು.

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥**

೧೯. ಆ ಗದ್ದಲವು ಬಹುದೊಡ್ಡದಾಗಿ ಆಕಾಶವನ್ನೂ ಭೂಮಿಯನ್ನೂ ತುಂಬಿಕೊಂಡು ಪ್ರತಿಧ್ವನಿಕೊಡುತ್ತಾ ಧೃತರಾಷ್ಟ್ರನ ಕಡೆಯವರ ಹೃದಯವನ್ನು ಸೀಳುತ್ತಿತ್ತು.

## ಅರ್ಜುನನು ಶತ್ರುಗಳನ್ನು ನೋಡಿದ್ದು

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಣ್ಡವಃ ॥ ೨೦ ॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

೨೦–೨೧. ಎಲೈ ರಾಜನೆ, ಆಮೇಲೆ ಕಪಿಧ್ವಜನಾದ ಅರ್ಜುನನು ಯುದ್ಧಕ್ಕಾಗಿ ಅಲ್ಲಿ ನಿಂತಿರುವ ಧೃತರಾಷ್ಟ್ರನ ಕಡೆಯವರನ್ನು ನೋಡಿ ಶಸ್ತ್ರ ಪ್ರಯೋಗಕ್ಕೆ ಕಾಲವು ಒದಗಿದ್ದರಿಂದ ಗಾಂಡೀವಧನುಸ್ಸನ್ನು ಎತ್ತಿ ಹಿಡಿದುಕೊಂಡು ಹೃಷೀಕೇಶನಾದ ಶ್ರೀಕೃಷ್ಣನನ್ನು ಕುರಿತು ಈ ಮಾತನ್ನು ಹೇಳಿದನು.

**ಅರ್ಜುನ ಉವಾಚ :—**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧ ॥**
**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨ ॥**
**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩ ॥**

ಅರ್ಜುನನು ಹೇಳಿದ್ದೇನೆಂದರೆ: –

೨೧–೨೩. ಎಲೈ ಅಚ್ಯುತನೆ, ಈ ರಣೋದ್ಯೋಗದಲ್ಲಿ ನಾನು ಯಾರೊಡನೆ ಯುದ್ಧಮಾಡಬೇಕೆಂದು ಗೊತ್ತುಮಾಡುವುದಕ್ಕಾಗಿ ನನ್ನ ರಥವನ್ನು ಎರಡೂ ಸೈನ್ಯಗಳ ನಡುವೆ ನಿಲ್ಲಿಸುವವನಾಗು; ಇಲ್ಲಿ ಯುದ್ಧಮಾಡಬೇಕೆಂದು ಬಂದು ನಿಂತಿರುವ ಇವರನ್ನು ನೋಡೋಣ. ದುರ್ಬುದ್ಧಿಯಾದ ದುರ್ಯೋಧನನಿಗೆ ಯುದ್ಧದಲ್ಲಿ ಪ್ರಿಯವನ್ನುಂಟುಮಾಡಬೇಕೆಂದು ಯಾರುಯಾರು ಕಾದಾಟಕ್ಕೆಂದು ಇಲ್ಲಿ ಬಂದು ಸೇರಿರುವರೊ ಅವರನ್ನು ನಾನು ನೋಡಬೇಕು.

**ಸಞ್ಜಯ ಉವಾಚ:—**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್॥ ೨೪ ॥**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೫ ॥**

ಸಂಜಯನು ಹೇಳಿದ್ದೇನೆಂದರೆ:—

೨೪–೨೫. ಎಲೈ ಧೃತರಾಷ್ಟ್ರನೆ, ಹೀಗೆ ಅರ್ಜುನನು ಹೇಳಲು ಶ್ರೀಕೃಷ್ಣನು ಎರಡು ಸೇನೆಗಳಿಗೂ ನಡುವೆ ಭೀಷ್ಮದ್ರೋಣರ ಮತ್ತು ಎಲ್ಲಾ ರಾಜರುಗಳ ಮುಂದೆ ಆ ಉತ್ತಮವಾದ ರಥವನ್ನು ನಿಲ್ಲಿಸಿ 'ಎಲೈ ಪಾರ್ಥನೆ, ಇಗೋ ಇಲ್ಲಿ ನೆರೆದಿರುವ ಕೌರವರನ್ನು ನೋಡು' ಎಂದು ಹೇಳಿದನು.

**ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ॥**
**ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ॥ ೨೬ ॥**

೨೬. ಆಮೇಲೆ ಅರ್ಜುನನು ಅಲ್ಲಿ ಎರಡು ಸೈನ್ಯದಲ್ಲಿಯೂ ಇದ್ದ ಚಿಕ್ಕಪ್ಪದೊಡ್ಡಪ್ಪಂದಿರನ್ನೂ ಅಜ್ಜಂದಿರನ್ನೂ ಆಚಾರ್ಯರುಗಳನ್ನೂ ಸೋದರ

ಮಾವಂದಿರನ್ನೂ ಅಣ್ಣತಮ್ಮಂದಿರನ್ನೂ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸ್ನೇಹಿತರನ್ನೂ ಮಾವಂದಿರನ್ನೂ ತಮ್ಮ ಮೇಲೆ ಪ್ರೀತಿಯುಳ್ಳ ಇತರರನ್ನೂ ನೋಡಿದನು.

**ತಾನ್ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ಬನ್ಧೂನವಸ್ಥಿತಾನ್ ।**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ॥ ೨೭ ॥**

೨೭. ಆ ಕುಂತೀಪುತ್ರನಾದ ಅರ್ಜುನನು ಅಲ್ಲಿದ್ದ ಆ ಬಂಧುಗಳನ್ನೆಲ್ಲ ಚೆನ್ನಾಗಿ ನೋಡಿ ಹೆಚ್ಚಿನ ಕನಿಕರದಿಂದ ಕೂಡಿದವನಾಗಿ ವಿಷಾದದಿಂದ ಈ ಮಾತನ್ನು ಹೇಳಿದನು.

## ಅರ್ಜುನನ ವಿಷಾದೋಕ್ತಿ

**ಅರ್ಜುನ ಉವಾಚ :—**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ।**
**ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ॥ ೨೮ ॥**

ಅರ್ಜುನನು ಹೇಳಿದ್ದೇನೆಂದರೆ:—

೨೮. "ಎಲೈ ಕೃಷ್ಣನೆ, ಯುದ್ಧಮಾಡಬೇಕೆಂಬ ಅಭಿಲಾಷೆಯಿಂದ ಎದುರಿಗೆ ನಿಂತಿರುವ ಈ ಸ್ವಜನರನ್ನು ನೋಡಿ ನನ್ನ ಅವಯವಗಳು ಸೊರಗುತ್ತಿರುವವು, ಬಾಯಿಯೂ ಒಣಗುತ್ತಿದೆ.

**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ।**
**ಗಾಣ್ಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ॥ ೨೯ ॥**

೨೯. "ನನ್ನ ಮೈಯಲ್ಲಿ ನಡುಕವೂ ರೋಮಾಂಚವೂ ಉಂಟಾಗುತ್ತಿದೆ. ಕೈಯಿಂದ ಗಾಂಡೀವಧನುಸ್ಸು ಜಗುಳಿ ಬೀಳುತ್ತಿದೆ; ಮತ್ತು ಮೈಚರ್ಮವೆಲ್ಲ ಸುಡುತ್ತಿದೆ.

**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ।**
**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ॥ ೩೦ ॥**

೩೦. "ನನಗೆ ನಿಂತುಕೊಳ್ಳುವದಕ್ಕೆ ಕೂಡ ಆಗುವ ಹಾಗಿಲ್ಲ; ಮತ್ತು ನನ್ನ ಮನಸ್ಸು ಗಿರ್ರನೆ ಸುತ್ತುವಂತೆ ಇರುವದು. ಎಲೈ ಕೇಶವನೆ, ನಮಗೆ ವಿರುದ್ಧವಾದ ಶಕುನಗಳೂ ಕಾಣುತ್ತಿವೆ.

**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ।**
**ನ ಕಾಙ್ಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ॥ ೩೧ ॥**

**ಕಿಂ ನೋ ರಾಜ್ಯೇನ ಗೋವಿನ್ದ ಕಿಂ ಭೋಗೈರ್ಜೀವಿತೇನ ವಾ ॥ ೩೨ ॥**

೩೧–೩೨. "ಯುದ್ಧದಲ್ಲಿ ಸ್ವಜನರನ್ನು ಕೊಂದರೆ ಒಳ್ಳೆಯದೇನೂ ಆಗುವಂತೆ ನನಗೆ ಕಾಣುವದಿಲ್ಲ. ಎಲೈ ಕೃಷ್ಣನೆ, ನನಗೆ ಜಯವೂ ಬೇಕಿಲ್ಲ, ರಾಜ್ಯವಾಗಲಿ ಭೋಗಗಳಾಗಲಿ ಯಾವದೂ ಬೇಕಿಲ್ಲ. ಎಲೈ ಗೋವಿಂದನೆ, ನಮಗೆ ರಾಜ್ಯದಿಂದೇನು, ಭೋಗಗಳಿಂದೇನು, ಅಥವಾ ಬದುಕಿರುವದರಿಂದ ಲಾಭವೂ ಏನು ?

**ಯೇಷಾಮರ್ಥೇ ಕಾಙ್ಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬನ್ಧಿನಸ್ತಥಾ ॥ ೩೪ ॥**
**ಏತಾನ್ನ ಹನ್ತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥**

೩೩–೩೫. "ಯಾರಿಗೋಸ್ಕರ ನಮಗೆ ರಾಜ್ಯವೂ ಭೋಗಗಳೂ ಸುಖಗಳೂ ಬೇಕೆನಿಸಬಹುದೊ ಅಂಥ ಇವರೇ ಪ್ರಾಣವನ್ನೂ ಧನವನ್ನೂ ಕೈಬಿಟ್ಟು ಯುದ್ಧಕ್ಕೆ ನಿಂತಿರುವರು: ಆಚಾರ್ಯರು, ತಂದೆಯು ವಾವೆಯುವರು, ಮಕ್ಕಳು, ಮತ್ತು ಅಜ್ಜಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು, ನೆಂಟರು (ಇವರೆಲ್ಲ ನಿಂತಿದ್ದಾರೆ.) ಇವರು ನನ್ನನ್ನು ಕೊಂಡೆದರೂ ಇವರನ್ನು ಮೂರು ಲೋಕದ ರಾಜ್ಯಭಾರಕ್ಕೋಸ್ಕರವಾಗಿ ಕೂಡ ನಾನು ಕೊಲ್ಲುವದಕ್ಕೆ ಮನಸ್ಸುಮಾಡಲಾರೆನು. ಇನ್ನು ಈ ಭೂಮಿಗಾಗಿ ಕೊಲ್ಲಲಾರೆನೆಂದು ಹೇಳಬೇಕೆ ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ಹತ್ವೈತಾನಾತತಾಯಿನಃ ॥ ೩೬ ॥**

೩೬. "ಎಲೈ ಜನಾರ್ದನನೆ, ಈ ಧೃತರಾಷ್ಟ್ರಸಂಬಂಧಿಗಳನ್ನು ಕೊಂದರೆ ನಮಗೆ ಯಾವ ಸಂತೋಷವಾದೀತು ? ಈ ಆತತಾಯಿಗಳನ್ನು * ಕೊಂದರೆ ನಮಗೆ ಪಾಪವೇ ಹತ್ತಿಕೊಂಡೀತು.

* ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ । ಕ್ಷೇತ್ರದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ ॥ (ಮನು ೮-೩೫೦) (ಮನೆಗೆ ಬೆಂಕಿ ಹಾಕಿದವನು, ವಿಷವೆರೆದವನು, ಶಸ್ತ್ರದಿಂದ ಹೊಡೆಯುವದಕ್ಕೆ ಬಂದವನು, ಹಣವನ್ನು ಅಪಹರಿಸಿದವನು, ಭೂಮಿಯನ್ನೂ ಹೆಂಡತಿಯನ್ನೂ ಅಪ

**ತಸ್ಮಾನ್ನಾರ್ಹಾ ವಯಂ ಹನ್ತುಂ ಧಾರ್ತರಾಷ್ಟ್ರಾನ್ಸ್ವಬಾನ್ಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**

೩೭. "ಆದ್ದರಿಂದ, ಎಲೈ ಮಾಧವನೆ, ನಮ್ಮ ಬಾಂಧವರಾದ ಈ ಧಾರ್ತರಾಷ್ಟ್ರರನ್ನು ನಾವು ಕೊಲ್ಲುವದು ಯುಕ್ತವಲ್ಲ; ಏಕೆಂದರೆ ಸ್ವಜನವನ್ನು ಕೊಂದು ಹೇಗೆ ತಾನೇ ಸುಖಿಗಳಾಗಿದ್ದೇವು ?

**ಯದ್ಯಪ್ಯೇತೇ ನ ಪಶ್ಯನ್ತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥ ೩೮ ॥**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

೩೮–೩೯. "ಎಲೈ ಜನಾರ್ದನನೆ, ಹಿಡಿಯದಾಸೆಯಿಂದ ವಿವೇಕವನ್ನು ಕಳೆದುಕೊಂಡಿರುವ ಇವರು ಕುಲಕ್ಷಯದಿಂದ ಆಗುವ ದೋಷವನ್ನೂ ಮಿತ್ರದ್ರೋಹದಲ್ಲಿರುವ ಪಾಪವನ್ನೂ ಕಾಣದೆ ಇರುವರಾದರೂ ಕುಲದ ನಾಶದಿಂದ ಆಗುವ ಕೇಡನ್ನು ಬಲ್ಲ ನಾವು ಈ ಪಾಪದಿಂದ ಹಿಂಜರಿಯಬೇಕೆಂದು ಏತಕ್ಕೆ ತಿಳಿದುಕೊಳ್ಳಬಾರದು ?

**ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**

೪೦. ಕುಲವು ನಾಶವಾದರೆ ಬಹುಕಾಲದಿಂದ ಬಂದಿರುವ ಕುಲಧರ್ಮಗಳು ನಾಶವಾಗುವವು. ಧರ್ಮವು ಇಲ್ಲವಾದರೆ ಕುಲವೆಲ್ಲವನ್ನೂ ಅಧರ್ಮವು ಮುಸುಕಿಕೊಳ್ಳುವದು.

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಙ್ಕರಃ ॥ ೪೧ ॥**

---

ಹರಿಸಿದವನು- ಇವರು ಆರು ಜನವೂ ಆತತಾಯಿಗಳೆನಿಸುವರು.) ಎಂಬ ಶಾಸ್ತ್ರದಂತೆ ಕೌರವರು ಆತತಾಯಿಗಳು. ಅವರನ್ನು ಕೊಂದರೆ ದೋಷವೇನು ? - ಎನ್ನಕೂಡದು. ಸ್ವಜನವನ್ನು ಕೊಲ್ಲುವದರಿಂದ ಅಧರ್ಮವೇ ಉಂಟಾಗುವದರಿಂದ ಆತತಾಯಿಗಳಾದರೂ ಇವರನ್ನು ಕೊಲ್ಲಬಾರದು ಎಂಬುದು ಅರ್ಜುನನ ಭಾವ. ಇವರನ್ನು ಕೊಂದರೆ ನಾವೇ ಆತತಾಯಿಗಳಾಗುವೆವು [ಆನಂದಗಿರಿ] ಎಂಬುದೂ ನಮ್ಮನ್ನು ಇವರು ಕೊಂದರೂ ಕೊಲ್ಲಲಿ, ಆಗ ಇವರು ತಾವೇ ಆತತಾಯಿಗಳಾಗುವರು [ನೀಲಕಂಠ]- ಎಂಬುದೂ ಈ ಶ್ಲೋಕಕ್ಕೆ ಕ್ಲೇಶದಿಂದ ತೆಗೆದಿರುವ ಅರ್ಥಗಳು,

೪೧. "ಎಲೈ ಕೃಷ್ಣನೆ, ಅಧರ್ಮವು ಮುಸುಕಿಕೊಳ್ಳುವದರಿಂದ ಕುಲಸ್ತ್ರೀಯರೆಲ್ಲರೂ ಕೆಟ್ಟುಹೋಗುವರು. ಎಲೈ ವೃಷ್ಣಿಕುಲೋದ್ಭವನೆ, ಸ್ತ್ರೀಯರು ಕೆಟ್ಟರೆ ಜಾತಿಗಳು ಕಲಬೆರಕೆಯಾಗುವವು.

**ಸಙ್ಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತನ್ತಿ ಪಿತರೋ ಹ್ಯೇಷಾಂ ಲುಪ್ತಪಿಣ್ಡೋದಕಕ್ರಿಯಾಃ ॥ ೪೨ ॥**

೪೨. ಜಾತಿಗಳ ಬೆರಕೆಯಾದರೆ ಕುಲವನ್ನು ನಾಶಮಾಡಿದವರಿಗೂ ಕುಲಕ್ಕೂ ನರಕವೇ ಉಂಟಾಗುತ್ತದೆ. ಇವರ ಪಿತೃಗಳೂ ಶ್ರಾದ್ಧತರ್ಪಣಗಳಿಲ್ಲದೆ ಪಿತೃಲೋಕದಿಂದ ಕೆಳಕ್ಕೆ ಬೀಳುವರು.

**ದೋಷೈರೇತೈಃ ಕುಲಘ್ನಾನಾಂ ವರ್ಣಸಙ್ಕರಕಾರಕೈಃ ।**
**ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**

೪೩. "ವರ್ಣಸಂಕರವನ್ನುಂಟುಮಾಡುವ ಈ ಕುಲನಾಶಕರ ದೋಷಗಳಿಂದ ಶಾಶ್ವತವಾಗಿ ನಡೆದು ಬಂದಿರುವ ಜಾತಿಧರ್ಮಗಳೂ ಕುಲಧರ್ಮಗಳೂ ಹಾಳಾಗಿ ಹೋಗುವವು.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

೪೪. "ಎಲೈ ಜನಾರ್ದನನೆ, ಕುಲಧರ್ಮಗಳನ್ನು ಹಾಳುಮಾಡಿಕೊಂಡಿರುವ ಮನುಷ್ಯರಿಗೆ ತಪ್ಪದೆ ನರಕದಲ್ಲಿಯೇ ವಾಸವಾಗುವದು— ಎಂದು ಶಾಸ್ತ್ರದಲ್ಲಿ ಹೇಳಿರುವದನ್ನು ಕೇಳಿದೇವೆಯಷ್ಟೆ.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹನ್ತುಂ ಸ್ವಜನಮುದ್ಯತಾಃ ॥ ೪೫ ॥**

೪೫. "ಅಯ್ಯೋ! ರಾಜ್ಯದ ಸುಖವನ್ನು ಬಯಸಿ ಸ್ವಜನವನ್ನೇ ಕೊಲ್ಲುವದಕ್ಕೆ ಪ್ರಯತ್ನಪಡುತ್ತಿರುವದರಿಂದ ನಾವು ದೊಡ್ಡ ಪಾಪವನ್ನು ಮಾಡುವದಕ್ಕೆ ನಿಶ್ಚಯಿಸಿದಂತಾಗಿರುವದು.

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

೪೬. "ನಾನು ಶಸ್ತ್ರವನ್ನು ಕೈಬಿಟ್ಟು ಯಾವ ಪ್ರತೀಕಾರವನ್ನೂ ಮಾಡದೆ ಕೈಯಲ್ಲಿರುವ ಆಯುಧವನ್ನೇ ಬಿಟ್ಟು ಬಿಡುವೆನು; ಆಗ ಕೌರವರು ಆಯುಧಪಾಣಿಗಳಾಗಿ ಕೊಂದರೆ ಅದೇ ನನಗೆ ಹೆಚ್ಚಿನ ಕ್ಷೇಮವಾದೀತು."

**ಸಂಜಯ ಉವಾಚ—**

**ಏವಮುಕ್ತ್ವಾರ್ಜುನಃ ಸಙ್ಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥**

ಸಂಜಯನು ಹೇಳಿದ್ದೇನೆಂದರೆ :—

೪೭. "ಹೀಗೆಂದು ಹೇಳಿ ಅರ್ಜುನನು ಆ ಯುದ್ಧರಂಗದಲ್ಲಿ ದುಃಖದಿಂದ ಮನಸ್ಸಿನಲ್ಲಿ ಕಳವಳಪಡುತ್ತಾ ಬಾಣವನ್ನೂ ಬಿಲ್ಲನ್ನೂ ಕೈಬಿಟ್ಟು ರಥದಲ್ಲಿ ಕೂತುಕೊಂಡನು.

* ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ
ಸಂವಾದೇ **ಅರ್ಜುನವಿಷಾದಯೋಗೋ** ನಾಮ

ಪ್ರಥಮೋಽಧ್ಯಾಯಃ

---

* ಇದರ ಅರ್ಥವೇನೆಂದರೆ :—

[ಇಲ್ಲಿಗೆ ವ್ಯಾಸಮಹರ್ಷಿಗಳಿಂದ ರಚಿತವಾದ ಲಕ್ಷಶ್ಲೋಕಗಳುಳ್ಳ ಸಂಹಿತೆಯಾದ ಶ್ರೀಮನ್ಮಹಾಭಾರತದ ಭೀಷ್ಮಪರ್ವದಲ್ಲಿ ಶ್ರೀಭಗವಂತನಿಂದ ಗಾನಮಾಡಲ್ಪಟ್ಟ ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ ಆಗಿರುವ ಈ ಶ್ರೀಕೃಷ್ಣಾರ್ಜುನರ ಸಂವಾದರೂಪವಾದ ಉಪನಿಷತ್ತುಗಳಲ್ಲಿ] ಅರ್ಜುನವಿಷಾದಯೋಗವೆಂಬ ಒಂದನೆಯ ಅಧ್ಯಾಯವು ಮುಗಿಯಿತು.

ಇಲ್ಲಿ ಚೌಕನೆಯ ಕಂಸದಲ್ಲಿ ಅಡಕವಾಗಿರುವ ಭಾಗವು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ ಬರುತ್ತದೆ. ಆಯಾ ಅಧ್ಯಾಯದ ಹೆಸರನ್ನು ಸೇರಿಸಿಕೊಂಡು ಉಪಸಂಹಾರವಾಕ್ಯಕ್ಕೆ ಅರ್ಥಮಾಡಿಕೊಳ್ಳಬೇಕು. ಈ ಉಪಸಂಹಾರವಾಕ್ಯವು ಭಗವದ್ಗೀತೆಗೆ ಸೇರಿದ್ದಲ್ಲವೆಂದು ಕೆಲವರ ಭಾವನೆಯಿರುವದು. ಈ ಅಭಿಪ್ರಾಯವನ್ನು ಗೀತಾರ್ಥಸರ್ವಸ್ವದಲ್ಲಿ ವಿಮರ್ಶೆಮಾಡಿದೆ.

# ಎರಡನೆಯ ಅಧ್ಯಾಯ

(ಸಾಂಖ್ಯಯೋಗ)

## ಶ್ರೀಕೃಷ್ಣನು ಅರ್ಜುನನ ದೌರ್ಬಲ್ಯವನ್ನು ನಿಂದಿಸಿದ್ದು

**ಸಞ್ಜಯ ಉವಾಚ :—**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

ಸಂಜಯನು ಹೇಳಿದ್ದೇನೆಂದರೆ :—

೧. ಹಾಗೆ ಮರುಕಕ್ಕೆ ವಶನಾಗಿಯೂ ಕಣ್ಣೀರು ತುಂಬಿ ಮುಂದುಗಾಣದ ಕಣ್ಣುಗಳುಳ್ಳವನಾಗಿಯೂ ದುಃಖಪಡುತ್ತಿದ್ದ ಅರ್ಜುನನನ್ನು ಕುರಿತು ಮಧುಸೂದನನಾದ ಕೃಷ್ಣನು ಈ ವಾಕ್ಯವನ್ನು ಹೇಳಿದನು.

**ಶ್ರೀಭಗವಾನುವಾಚ :—**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**

ಶ್ರೀಭಗವಂತನು ಹೇಳಿದ್ದೇನೆಂದರೆ:—

೨. "ಎಲೈ ಅರ್ಜುನನೆ, ಇಂಥ ವಿಷಮಸಂದರ್ಭದಲ್ಲಿ ನಿನಗೆ ಈ ಬುದ್ಧಿಮಾಲಿನ್ಯವು ಏಕೆ ಬಂದಿತು? ಇದು ಅನಾರ್ಯರು ಮಾತ್ರ ಹೊಂದತಕ್ಕದ್ದು, ನರಕಸಾಧನವಾದದ್ದು, ಅಪಯಶಸ್ಸನ್ನು ತರುವಂಥದ್ದು.

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥**

೩. ಪಾರ್ಥನೆ, ಹೇಡಿತನವನ್ನು ಹೊಂದದಿರು; ಇದು ನಿನಗೆ ತಕ್ಕದ್ದಲ್ಲ. ಎಲೈ ಶತ್ರುತಾಪಕನೆ, ಅತಿತುಚ್ಛವಾದ ಈ ಹೃದಯದ ದೌರ್ಬಲ್ಯವನ್ನು ಬಿಟ್ಟು ಏಳು.

## ಅರ್ಜುನನ ಉತ್ತರ

**ಕಥಂ ಭೀಷ್ಮಮಹಂ ಸಙ್ಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

೪. ಎಲೈ ಶತ್ರುನಾಶಕನೆ, ಮಧುಸೂದನನೆ, ಪೂಜೆಗೆ ಯೋಗ್ಯರಾಗ ಭೀಷ್ಮನೊಡನೆಯೂ ದ್ರೋಣನೊಡನೆಯೂ ನಾನು ಬಾಣಗಳಿಂದ ಯುದ್ಧದಲ್ಲಿ ಹೇಗೆ ಕಾದಾಡಲಿ?

**ಗುರೂನಹತ್ವಾ ಹಿ ಮಹಾನುಭಾವಾ**
**ಞ್ಛ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಞ್ಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥ ೫ ॥**

೫. ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಭಿಕ್ಷಾನ್ನವನ್ನು ಉಣ್ಣುವದು ಕೂಡ ಈ ಲೋಕದಲ್ಲಿ ಒಳ್ಳೆಯದು. ಆದರೆ ಪ್ರಯೋಜನಾಪೇಕ್ಷಿಗಳಾದ* ಈ ಗುರುಗಳನ್ನು ಕೊಂದರಾದರೋ ರಕ್ತಬಳಿದಿರುವ ಭೋಗಗಳನ್ನು ಈ ಲೋಕದಲ್ಲಿ ಮಟ್ಟಿಗೆ- ಅನುಭವಿಸಿಯೇನು.

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥**

೬. ಇವೆರಡರಲ್ಲಿ ಯಾವದು† ಹೆಚ್ಚಿನದೋ ಇದನ್ನೂ ನಾವರಿಯೆವು; ನಾವು ಜಯಿಸುವೆವೋ ಅಥವಾ ನಮ್ಮನ್ನೇ ಇವರು ಜಯಿಸಿಯಾರೊ; ಯಾರನ್ನು ಕೊಂದು ಬಾಳಬೇಕೆಂದು ನಾವು ಇಚ್ಛಿಸುವದಿಲ್ಲವೋ ಆ ಧೃತರಾಷ್ಟ್ರನ ಕಡೆಯ ದುರ್ಯೋಧನಾದಿಗಳೇ ನಮ್ಮೆದುರಿಗೆ ನಿಂತಿರುವರು.

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ ।**

---

* "ಗುರುಗಳನ್ನು ಕೊಂದರಾದರೋ ರಕ್ತಬಳಿದಿರುವ ಅರ್ಥಕಾಮಗಳೆಂಬ ಭೋಗಗಳನ್ನು ಈ ಲೋಕದಲ್ಲಿ ಮಟ್ಟಿಗೆ ಅನುಭವಿಸಿಯೇನು" ಎಂದು (ಆನಂದಗಿರಿ, ಬ್ರಹ್ಮಾನಂದಗಿರಿ, ಮಧುಸೂದನ- ಈ ವ್ಯಾಖ್ಯಾನಕಾರರು) ಬೇರೊಂದು ಅರ್ಥವನ್ನೂ ಕಲ್ಪಿಸಿರುತ್ತಾರೆ.

† ಭಿಕ್ಷಾಚರ್ಯೆ, ಯುದ್ಧ- ಇವುಗಳಲ್ಲಿ ಯಾವುದು ಹೆಚ್ಚೋ ಗೊತ್ತಿಲ್ಲ- ಎಂದು (ಆ) ವ್ಯಾಖ್ಯಾನದಲ್ಲಿ ಅರ್ಥಮಾಡಿದೆ. ಗುರುಗಳನ್ನು ಕೊಲ್ಲುವ ಜಯಕ್ಕಿಂತ ನಮಗೆ ಪರಾಜಯವಾದರೂ ಹೆಚ್ಚೆಂದು ಏತಕ್ಕೆ ಎಣಿಸಬಾರದು? ಎಂಬ ಭಾವವನ್ನೂ ತೆಗೆಯಬಹುದಾಗಿದೆ.

**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭ ॥**

೭. ದೈನ್ಯವೆಂಬ ದೋಷದಿಂದ ನನ್ನ ಸ್ವಭಾವವು ಕುಗ್ಗಿಹೋಗಿದೆಯಾಗಿ ಧರ್ಮವು* ಯಾವದೆಂದು ನನ್ನ ಮನಸ್ಸಿಗೆ ತಿಳಿಯದೆ ನಿನ್ನನ್ನು ಕೇಳುತ್ತಲಿದೇನೆ. ಯಾವದು ನನಗೆ ಒಳ್ಳೆಯದೋ ಅದನ್ನು ನಿಶ್ಚಯವಾಗಿ ಹೇಳು; ನಾನು ನಿನ್ನ ಶಿಷ್ಯನು, ನಿನ್ನನ್ನು ಶರಣುಹೊಕ್ಕಿರುವ ನನಗೆ ತಿಳಿವಳಿಕೆಯನ್ನು ಹೇಳು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ**
**ದ್ಯಚ್ಛೋಕಮುಚ್ಛೋಷಣಮಿನ್ದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮ ॥**

೮. ಭೂಲೋಕದಲ್ಲಿ ಯಾವ ಶತ್ರುಗಳೂ ಇಲ್ಲದೆ ಸಂಪತ್ಸಮೃದ್ಧವಾಗಿರುವ ರಾಜ್ಯವನ್ನು ಪಡೆದರೂ† ಅಥವಾ ದೇವತೆಗಳ ಮೇಲೆ ಕೂಡ ಒಡೆತನವನ್ನು ಪಡೆದರೂ ಇಂದ್ರಿಯಗಳನ್ನು ಸೊರಗಿಸುತ್ತಿರುವ ನನ್ನ ಈ ಶೋಕವನ್ನು ಹೋಗಲಾಡಿಸುವದು ಯಾವದೋ ಕಾಣೆನು.

**ಸಞ್ಜಯ ಉವಾಚ :—**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥**

ಸಂಜಯನು ಹೇಳಿದ್ದೇನೆಂದರೆ:—

೯. ಶತ್ರುಸಂತಾಪಕರನಾದ ಗುಡಾಕೇಶನು ಹೀಗೆಂದು ಹೃಷೀಕೇಶನಾದ ಕೃಷ್ಣನಿಗೆ ಹೇಳಿ, ಯುದ್ಧಮಾಡುವದಿಲ್ಲವೆಂದು ಆ ಗೋವಿಂದನಿಗೆ ಹೇಳಿ ಸುಮ್ಮನಾದನು.

---

* ಧರ್ಮವೆಂದರೆ ಬ್ರಹ್ಮವೆಂದು (ಆ) ವ್ಯಾಖ್ಯಾನಕಾರರು ಹೇಳುತ್ತಾರೆ. ಈ ಅರ್ಥವು ಕ್ಲಿಷ್ಟವಾಗಿದೆ.

† ಇಲ್ಲಿಯವರೆಗಿನ ಸಂದರ್ಭವು ಬ್ರಹ್ಮವಿದ್ಯಾಧಿಕಾರಿಗೆ ಇರುವ ವೈರಾಗ್ಯಾದಿಸಾಧನಗಳನ್ನು ತಿಳಿಸುವದು ಎಂದು (ನೀ॥ಮ॥) ವ್ಯಾಖ್ಯಾನಕಾರರು ಹೇಳುತ್ತಾರೆ. ಆದರೆ ಶೋಕಮೋಹಗಳೇ ಸಂಸಾರಕ್ಕೆ ಕಾರಣವೆಂದೂ ವಿವೇಕಜ್ಞಾನವಿಲ್ಲದಿರುವದೇ ಶೋಕಮೋಹಗಳಿಗೆ ಕಾರಣವೆಂದೂ ತೋರಿಸುವದೇ ಇಲ್ಲಿಯವರೆಗಿನ ಗ್ರಂಥದ ಮುಖ್ಯತಾತ್ಪರ್ಯವೆಂತಲೂ ಇಲ್ಲಿರುವ ವೈರಾಗ್ಯಾದಿಗಳು ನಿರ್ದಿಷ್ಟವಾದವುಗಳಲ್ಲವೆಂತಲೂ ಬೇರೆ ಕೆಲವರು (ಬ್ರ) ಅಭಿಪ್ರಾಯಪಟ್ಟಿರುವರು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದನ್ತಮಿದಂ ವಚಃ ॥ ೧೦ ॥**

೧೦. ಎಲೈ ಧೃತರಾಷ್ಟ್ರನೆ, ಎರಡು ಸೇನೆಗಳ ನಡುವೆ ಹೀಗೆ ದುಃಖಪಡುತ್ತಿದ್ದ ಆ ಅರ್ಜುನನನ್ನು ಕುರಿತು ಹೃಷೀಕೇಶನು ನಗುವವನಂತೆ ಈ ಮಾತನ್ನು ಆಡಿದನು.

---

[ ಭಾಷ್ಯ ]

## ಇಲ್ಲಿಯವರೆಗಿನ ಗ್ರಂಥದ ತಾತ್ಪರ್ಯ

ಇಲ್ಲಿ* "ಪಾಂಡವರ ಸೈನ್ಯವನ್ನು ನೋಡಿ" (೧–೨) ಎಂಬ ಶ್ಲೋಕದಿಂದ "ನಾನು ಯುದ್ಧಮಾಡುವದಿಲ್ಲವೆಂದು ಗೋವಿಂದನಿಗೆ ಹೇಳಿ ಸುಮ್ಮನಾದನು" (೨–೯) ಎಂಬವರೆಗಿನ ಗ್ರಂಥವು ಪ್ರಾಣಿಗಳ ಸಂಸಾರಕ್ಕೆ ಬೀಜವಾಗಿರುವ ಶೋಕ, ಮೋಹ– ಮುಂತಾದ ದೋಷಗಳುಂಟಾಗುವದಕ್ಕೆ ಕಾರಣವನ್ನು ತೋರಿಸುವದಕ್ಕಾಗಿ ಬಂದಿರುತ್ತದೆಯೆಂತ ವಿವರಿಸಬೇಕು. ಹೇಗೆಂದರೆ: ಅರ್ಜುನನು ರಾಜ್ಯ, ಗುರುಗಳು, ಪುತ್ರರು, ಗೆಳೆಯರು, ಸ್ನೇಹಿತರು, ತಮ್ಮವರು, ಸಂಬಂಧಿಗಳು, ಬಾಂಧವರು– ಇವರಲ್ಲಿ 'ನಾನು ಇವರವನು, ಇವರು ನನ್ನವರು' ಎಂಬ ಭ್ರಾಂತಿಬುದ್ಧಿಯಿಂದಾದ ಸ್ನೇಹದಿಂದಲೂ ಆ ಸ್ನೇಹವು ನಿಂತುಹೋಗುವದಲ್ಲ– ಎಂಬುದೇ ಮುಂತಾದ‡ ನಿಮಿತ್ತದಿಂದಲೂ "ಭೀಷ್ಮನನ್ನು ನಾನು ಯುದ್ಧದಲ್ಲಿ ಹೇಗೆ (ಕೊಲ್ಲಲಿ?)" (೨–೪) ಎಂದು ಮುಂತಾಗಿ ತನ್ನ ಶೋಕಮೋಹಗಳನ್ನು ತೋರ್ಪಡಿಸಿಕೊಂಡನು. ಕ್ಷತ್ರಿಯರ ಧರ್ಮವಾದ ಯುದ್ಧದಲ್ಲಿ ತಾನೇ ತೊಡಗಿದ್ದನಾದರೂ ಶೋಕಮೋಹಗಳೆರಡರಿಂದಲೂ ವಿವೇಕದ ತಿಳಿವನ್ನು ಕಳೆದುಕೊಂಡು ಆ ಯುದ್ಧವನ್ನು ಕೈಬಿಟ್ಟನು; ಪರಧರ್ಮವಾದ ಭಿಕ್ಷಾಜೀವನವೇ§ ಮುಂತಾದ್ದನ್ನು ಮಾಡುವದಕ್ಕೂ ತೊಡಗಿದನು.

---

* 'ಅತ್ರ ಚ' ಎಂಬುದಾದ ಮೇಲೆ ಕೆಲವು ಮುದ್ರಣಗಳಲ್ಲಿ "ಧೃತರಾಷ್ಟ್ರ ಉವಾಚ ಧರ್ಮಕ್ಷೇತ್ರ ಇತ್ಯಾದಿ" ಎಂಬ ಮಾತುಗಳಿವೆ. ಆನಂದಗಿರಿಯ ಟೀಕೆಯಂತೆ "ಅತ್ರ ಚ ದೃಷ್ಟ್ವಾ ತು ಪಾಣ್ಡವಾನೀಕಮಿತ್ಯಾರಭ್ಯ" ಎಂಬ ಪಾಠವೇ ಸರಿಯೆಂದು ತೋರುತ್ತದೆ.

† ಅಹಂಕಾರ, ಅವಿದ್ಯೆ– ಇವೇ ಕಾರಣ. [ಆ.] ‡ ಮುಂತಾದ ಎಂದರೆ ಅವರನ್ನು ಕೊಂದರೆ ಪಾಪ ಬರುವದಿಲ್ಲ, ಜನರು ನನ್ನನ್ನು ನಿಂದಿಸುವರಲ್ಲ, ನನಗೆ ನರಕಾದಿಗಳೇ ಗತಿಯಾಗುವವಲ್ಲ–ಮುಂತಾದವುಗಳು. § ಇದು ಬ್ರಾಹ್ಮಣನ ಧರ್ಮ, ಕ್ಷತ್ರಿಯನದಲ್ಲ.

ಟನು. ಆದ್ದರಿಂದ ಶೋಕ, ಮೋಹ- ಮುಂತಾದ* ದೋಷಗಳು ಮನಸ್ಸಿನಲ್ಲಿ ಹೊಕ್ಕಿರುವಾಗ ತಮ್ಮ ಧರ್ಮವನ್ನು ಬಿಟ್ಟು ಮಾಡಬಾರದ್ದನ್ನು ಅನುಸರಿಸುವದೆಂಬುದು ಎಲ್ಲಾ ಪ್ರಾಣಿಗಳಲ್ಲಿಯೂ ಸ್ವಭಾವವಾಗಿಯೇ ಉಂಟಾಗುವದು. (ಒಂದು ವೇಳೆ) ತಮ್ಮ ಧರ್ಮದಲ್ಲಿ ಪ್ರವರ್ತಿಸಿದರೂ ಅವರಿಗೆ ವಾಕ್ಕು, ಮನಸ್ಸು, ಶರೀರ- ಮುಂತಾದವುಗಳ† ಪ್ರವೃತ್ತಿಯು ಫಲಾಶೆಯುಳ್ಳದ್ದಾಗಿಯೇ ಮತ್ತು ಅಹಂಕಾರದಿಂದ ಕೂಡಿಕೊಂಡೇ ಇರುವದು. ಆಗ ಹೀಗಾಗಿ ಧರ್ಮಾಧರ್ಮಗಳು ಹೆಚ್ಚಾಗುವದರಿಂದ ಬೇಕಾದ ಅಥವಾ ಬೇಡವಾದ ಜನ್ಮಗಳನ್ನೂ ಸುಖದುಃಖಾದಿಗಳನ್ನೂ ಪಡೆಯುವದೆಂಬ ಸಂಸಾರವು ‡ ಕೊನೆಮುಟ್ಟುವದೇ ಇಲ್ಲ. ಆದ್ದರಿಂದ ಶೋಕ ಮೋಹ- ಇವೆರಡೂ ಸಂಸಾರಕ್ಕೆ ಬೀಜವಾಗಿರುತ್ತವೆ ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡಿ ಆತ್ಮಜ್ಞಾನವನ್ನು ಪಡೆಯುವದರಿಂದಲೇ ಹೊರತು ಮತ್ತೊಂದರಿಂದ ಅವು ಹೋಗುವದಿಲ್ಲ.§ ಆದುದರಿಂದಲೇ ಆ ಜ್ಞಾನವನ್ನು ಉಪದೇಶಮಾಡಬೇಕೆಂದು ಎಲ್ಲ ಜನರನ್ನೂ ಅನುಗ್ರಹಿಸುವದಕ್ಕಾಗಿ ಅರ್ಜುನನನ್ನು ನೆಪವಾಗಿಟ್ಟುಕೊಂಡು ಭಗವಂತನಾದ ವಾಸುದೇವನು 'ಶೋಕಕ್ಕೆ ತಕ್ಕವರಲ್ಲದವರನ್ನು' (೨-೨) ಎಂದು ಮುಂತಾಗಿ ಹೇಳುವದಕ್ಕೆ ಪ್ರಾರಂಭಿಸಿರುತ್ತಾನೆ.

## ಕರ್ಮಜ್ಞಾನಸಮುಚ್ಚಯದಿಂದ ಮೋಕ್ಷವೆಂಬ ವಾದ

ಈ ವಿಷಯದಲ್ಲಿ ಕೆಲವರು|| ಹೇಳುವದೇನೆಂದರೆ- ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡಿ ಬರಿಯ ಆತ್ಮಜ್ಞಾನದಲ್ಲಿಯೇ ನಿಂತ ಮಾತ್ರದಿಂದ ಕೈವಲ್ಯವು

---

* ಕ್ರೋಧ, ಲೋಭ, ಮದ, ಮಾತ್ಸರ್ಯ- ಮುಂತಾದವು.

† ಇಂದ್ರಿಯಗಳ. ‡ ಧರ್ಮವು ಹೆಚ್ಚಾದ ಹಾಗೆಲ್ಲ ಬ್ರಹ್ಮನವರೆಗಿನ ಇಷ್ಟವಾದ ಜನ್ಮವೂ ಅದರಿಂದ ಸುಖವೂ ಆಗುವವು; ಅಧರ್ಮವು ಹೆಚ್ಚಾದರೆ ಅನಿಷ್ಟವಾದ ಸ್ಥಾವರದವರೆಗಿನ ಜನ್ಮವೂ ಅದರಿಂದ ದುಃಖವೂ ಆಗುವವು; ಎರಡೂ ಒಂದೇ ಸಮವಾದ ಪ್ರಮಾಣದಲ್ಲಿ ಉಂಟಾದರೆ ಮಿಶ್ರರೂಪವಾದ ಮನುಷ್ಯಜನ್ಮವೂ ಅದರಿಂದ ಸುಖದುಃಖಗಳೆರಡೂ ಆಗುವವು. ಹೀಗೆ ಮತ್ತೆ ಮತ್ತೆ ಆಗುವದೇ ಸಂಸಾರವು.

§ ಕರ್ಮದಿಂದ ಸಂಸಾರವುಂಟಾಗಿರುವದಾದ್ದರಿಂದ ಸಂಸಾರವು ಬೆಳೆಯದೆ ಇರುವದಕ್ಕಾಗಿ ಕರ್ಮಗಳನ್ನು ಬಿಟ್ಟುಬಿಡಬೇಕು; ಅಜ್ಞಾನದಿಂದಲೇ ಕಾಮಕರ್ಮಗಳುಂಟಾಗಿ ಸಂಸಾರ ಉಂಟಾಗಿರುವದರಿಂದ ಜ್ಞಾನದಿಂದಲೇ ಅಜ್ಞಾನವು ನಾಶವಾಗಿ ಸಂಸಾರವನ್ನು ನೀಗಿಕೊಳ್ಳಬೇಕಾಗಿದೆ.

|| ವೃತ್ತಿಕಾರರು ಹೇಳುವ ಮತವೆಂದು (ಆ) ವ್ಯಾಖ್ಯಾನದಲ್ಲಿದೆ. ಬೋಧಾಯನರೆಂಬುವರೇ ಈ ವೃತ್ತಿಕಾರರೆಂದು ಮಹದೇವಶಾಸ್ತ್ರಿಗಳೇ ಮುಂತಾದವರು ಹೇಳಿರುತ್ತಾರೆ. ಇದು ಸರಿಯಲ್ಲ. ಪೀಠಿಕೆಯನ್ನು ನೋಡಿ.

ದೊರೆಯುವದೇ ಇಲ್ಲ; ಮತ್ತೇತರಿಂದ ದೊರೆಯುವದು ಎಂದರೆ, ಅಗ್ನಿಹೋತ್ರವೇ ಮುಂತಾದ ಶ್ರೌತಸ್ಮಾರ್ತಕರ್ಮಗಳೊಡಗೂಡಿರುವ ಜ್ಞಾನದಿಂದ* ಕೈವಲ್ಯವು ಪ್ರಾಪ್ತಿಯಾಗುವದು. ಇದು ಎಲ್ಲಾ ಗೀತೆಗಳಲ್ಲಿಯೂ †ನಿಶ್ಚಿತವಾದ ವಿಷಯವು. ಈ ವಿಷಯವನ್ನು ತಿಳಿಸುವ ಪ್ರಮಾಣವು ಯಾವದು ಎಂದರೆ– ಅವರು ಹೇಳುವದೇನೆಂದರೆ– "ಹಾಗಲ್ಲದೆ ನೀನು ಈ ಧರ್ಮವಾದ ಯುದ್ಧವನ್ನು ಮಾಡದೆ ಹೋಗುವದಾದರೆ (ಪಾಪವನ್ನು ಹೊಂದುತ್ತೀಯೆ)" (೨–೩೩) "ನಿನಗೆ ಕರ್ಮದಲ್ಲಿಯೇ ಅಧಿಕಾರವು" (೨–೪೭) "ಆದ್ದರಿಂದ ನೀನು ಕರ್ಮವನ್ನೇ ಮಾಡು"(೪–೧೫) ಮುಂತಾದವು. ಹಿಂಸೆ ಮುಂತಾದವುಗಳಿಂದ‡ ಕೂಡಿರುವದರಿಂದ ವೈದಿಕಕರ್ಮವು ಅಧರ್ಮವನ್ನೇ ಉಂಟುಮಾಡುವದು ಎಂಬೀ ಶಂಕೆಯನ್ನೂ ಮಾಡಬಾರದು. ಹೇಗೆಂದರೆ, ಯುದ್ಧವೆಂಬ ಕ್ಷತ್ರಿಯರ ಕರ್ಮವು ಗುರುಗಳು, ಸಹೋದರರು, ಮಕ್ಕಳು– ಮುಂತಾದವರನ್ನು ಕೊಲ್ಲುವದಾಗಿದ್ದು ಅತ್ಯಂತಕ್ರೂರವಾಗಿದ್ದರೂ ತನ್ನ ಧರ್ಮವೆಂಬುದರ ಮೇಲೆ ಅಧರ್ಮವಾಗುವದಿಲ್ಲವೆಂದೂ ಅದನ್ನು ಮಾಡದೆ ಇದ್ದರೆ "ಆದರಿಂದ ನಿನ್ನ ಧರ್ಮವನ್ನೂ ಕೀರ್ತಿಯನ್ನೂ ಕಳೆದುಕೊಂಡು ಪಾಪವನ್ನು ಹೊಂದುತ್ತೀಯೆ" (೨–೩೩) ಎಂದೂ ಭಗವಂತನು) ಹೇಳಿರುವದರಿಂದ ಜೀವವಿರುವವರೆಗೂ ಮಾಡಬೇಕೆಂದು ಶ್ರುತಿಯಲ್ಲಿ ಹೇಳಿರುವ ಪಶುಗಳೇ ಮುಂತಾದವುಗಳನ್ನು ಕೊಲ್ಲುವ ರೂಪವಾಗಿರುವ ಕರ್ಮಗಳೂ§ ಮೊದಲೇ‖ ಅಧರ್ಮವಲ್ಲವೆಂದು ನಿಶ್ಚಿತವಾಗಿ ಹೇಳಿದಂತೆಯೇ ಆಗಿರುವದು— ಎಂದು (ಈ ವಾದಿಗಳ ಮತವು)

---

* ಸಮುಚ್ಚಯವಾದಿಗಳ ಮತದಲ್ಲಿ ಜ್ಞಾನವೆಂದರೆ ಬಹುಮಟ್ಟಿಗೆ ಉಪಾಸನೆಯೆ. ಪೀಠಿಕೆಯನ್ನು ನೋಡಿ.

† ಈ ಗ್ರಂಥದಲ್ಲಿ ಗೀತೆಗಳೆಂಬ ಏಳು ನೂರು ಶ್ಲೋಕಗಳಲ್ಲಿ ಹೊರಡುವ ಒಟ್ಟುತಾತ್ಪರ್ಯವು ಇದೇ– ಎಂದರ್ಥ.

‡ ಉಚ್ಛಿಷ್ಟಭಕ್ಷಣವೇ-ಮುಂತಾದದ್ದು. ಯಜ್ಞಾದಿಗಳಲ್ಲಿ ಈ ದೋಷವಿರುವದರಿಂದ ಇವು ಅಶುದ್ಧವೆಂದು ಸಾಂಖ್ಯರು ಹೇಳುವರು.

§ 'ಸ್ವಕರ್ಮಣಾಂ'– ಎಂಬುದಕ್ಕೆ ಬದಲು 'ಚ ಕರ್ಮಣಾಂ'– ಎಂಬ ಗು॥ ಪಾಠವನ್ನೇ ಇಟ್ಟುಕೊಂಡಿದೆ.

‖ ಸ್ಮೃತಿಯಲ್ಲಿ ಹೇಳಿರುವ ಯುದ್ಧವೇ ಅಶುದ್ಧವಲ್ಲ; ಅದಕ್ಕಿಂತ ಪ್ರಬಲಪ್ರಮಾಣವಾದ ಶ್ರುತಿಯು ಹೇಳಿರುವ ಯಜ್ಞಾದಿಗಳು ಅಶುದ್ಧವಲ್ಲವೆಂದು ಹೇಳುವದೇನಿದೆ? ಶಾಸ್ತ್ರವೇ ಧರ್ಮಾಧರ್ಮಕ್ಕೆ ಕಾರಣವಾಗಿರುವದರಿಂದ ಶಾಸ್ತ್ರದಲ್ಲಿ ಹೇಳಿರುವ ಯಜ್ಞಾದಿಗಳು ಧರ್ಮವೆ ಎಂದು ಭಾವ

## ಸಮುಚ್ಚಯವಾದದಲ್ಲಿ ದೋಷಗಳು

ಇದು ಸರಿಯಲ್ಲ. ಏಕೆಂದರೆ ಬೇರೆಬೇರೆ ಎರಡು ಬುದ್ಧಿಗಳ(ದೃಷ್ಟಿಯ)ನ್ನು ಆಶ್ರಯಿಸಿಕೊಂಡು ಜ್ಞಾನಕರ್ಮನಿಷ್ಠೆಗಳೆರಡನ್ನೂ (ಇಲ್ಲಿ) ವಿಂಗಡಿಸಿ ಹೇಳಿರುತ್ತದೆ. (ಅದು ಹೇಗೆಂದರೆ-) 'ಶೋಕಕ್ಕೆ ತಕ್ಕವರಲ್ಲದವರನ್ನು' (೨-೧೧) ಎಂಬುದರಿಂದ ಹಿಡಿದು 'ನಿನ್ನ ಧರ್ಮವೆಂಬುದನ್ನು ನೋಡಿದರೂ' (೨-೩೧) ಎಂಬವರೆಗಿನ ಗ್ರಂಥದಿಂದ ನಿಜವಾಗಿರುವ ಆತ್ಮತತ್ತ್ವದ ನಿರೂಪಣೆಯನ್ನು ಮಾಡಿದೆಯಷ್ಟೆ, ಅದು **ಸಾಂಖ್ಯವು.** ಅದರ ವಿಷಯವಾದ ಬುದ್ಧಿಯು ಎಂದರೆ 'ಆತ್ಮನಿಗೆ ಹುಟ್ಟುವದೇ ಮುಂತಾದ ಆರು* ವಿಕಾರಗಳೂ ಇಲ್ಲದ್ದರಿಂದ ಆತ್ಮನು ಅಕರ್ತನು' ಎಂದು ಪ್ರಕರಣದ ಅರ್ಥವನ್ನು ಚೆನ್ನಾಗಿ ಪರೀಕ್ಷಿಸಿದರೆ ಉಂಟಾಗುವದು ಯಾವದೋ ಅದು ಸಾಂಖ್ಯಬುದ್ಧಿಯು. ಅದು ಯಾರಿಗೆ ಉಚಿತವಾಗಿರುವದೋ ಅಂಥ ಜ್ಞಾನಿಗಳೇ ಸಾಂಖ್ಯರು. ಈ ಬುದ್ಧಿಯು ಹುಟ್ಟುವ ಮೊದಲು ಆತ್ಮನು ದೇಹಾದಿಗಳಿಗಿಂತ ಬೇರೆ, ಕರ್ತೃ, ಭೋಕ್ತೃ† – ಎಂಬುದನ್ನಿಟ್ಟುಕೊಂಡು ಧರ್ಮಾಧರ್ಮಗಳನ್ನು ವಿಂಗಡಿಸಿ ತಿಳಿದುಕೊಂಡು ಮೋಕ್ಷಸಾಧನಗಳನ್ನು ಮಾಡುವದೇ ಯೋಗವು.‡ ಅದರ ವಿಷಯವಾದ ಬುದ್ಧಿಯೇ ಯೋಗಬುದ್ಧಿಯು. ಅದು ಯಾರಿಗೆ ಉಚಿತವಾಗಿರುವದೋ ಆ ಕರ್ಮಿಗಳೇ ಯೋಗಿಗಳು. ಆದ್ದರಿಂದಲೇ ಭಗವಂತನು 'ಈವರೆಗೆ ನಿನಗೆ ಹೇಳಿದ್ದು ಸಾಂಖ್ಯಬುದ್ಧಿಯು; ಈಗ ಯೋಗಬುದ್ಧಿಯ ವಿಷಯವನ್ನು ಕೇಳು' (೨-೩೯) ಎಂದು ಎರಡು ಬುದ್ಧಿಗಳನ್ನು ವಿಂಗಡಿಸಿ ತೋರಿಸಿರುತ್ತಾನೆ. ಈ ಎರಡರಲ್ಲಿ ಸಾಂಖ್ಯಬುದ್ಧಿಯನ್ನಾಶ್ರಯಿಸಿರುವ ಜ್ಞಾನಯೋಗದ§ ನಿಷ್ಠೆಯನ್ನು ಮುಂದೆ 'ಪೂರ್ವದಲ್ಲಿ ವೇದರೂಪನಾದ|| ನಾನು ಹೇಳಿದೆನು' (೩-೩) ಎಂದು ಸಾಂಖ್ಯರಿಗಾಗಿ ಬೇರೆಯೇ ಹೇಳಿರುತ್ತಾನೆ. ಮತ್ತು ಯೋಗಬುದ್ಧಿಯನ್ನು ಆಶ್ರಯಿಸಿರುವ ಕರ್ಮಯೋಗದ ನಿಷ್ಠೆ

---

* ಹುಟ್ಟುವದು, ಇರವು, ಬೆಳೆವಣಿಗೆ, ಮಾರ್ಪಾಡು, ಸೊರಗುವದು, ಸಾವು– ಈ ಆರು ವಿಕಾರಗಳೂ ವಸ್ತುಮಾತ್ರಕ್ಕೆ ಇರುವವು. ಕರ್ತೃವೆಂದರೆ ಕ್ರಿಯೆಯಿಂದ ಆಗುವ ವಿಕಾರವಿರುವವನು. ವಿಕಾರವು ಆತ್ಮನಲ್ಲಿಲ್ಲದ್ದರಿಂದ ಅವನು ಕರ್ತೃವಾಗಲಾರನು ಎಂದು ಭಾವ.

† ಕರ್ತೃವೂ ಭೋಕ್ತೃವೂ ಆಗಿರುವವನು ಆತ್ಮನೆಂಬುದು ಮೀಮಾಂಸಕರ ಮತ. ಈ ಜ್ಞಾನವು ಕರ್ಮಕ್ಕೆ ಅವಶ್ಯ.

‡ ಯೋಗವೆಂದರೆ ಉಪಾಯ, ಸಾಧನ. § ಜ್ಞಾನವು ಮೋಕ್ಷಕ್ಕೆ ಸಾಧನವೆಂಬುದರ ಮೇಲೆ ಇದನ್ನು ಜ್ಞಾನಯೋಗ ಎಂದು ಉಪಚಾರಕ್ಕೆ ಯೋಗಶಬ್ದದಿಂದ ಕರೆದಿರುತ್ತದೆ. ಜ್ಞಾನ, ಸಾಂಖ್ಯ–ಎರಡೂ ಒಂದೆ.

|| ಇದು ೩–೩ರ ತಾತ್ಪರ್ಯವಾಗಿದೆ, ಅಕ್ಷರಾರ್ಥವಲ್ಲ.

ಯನ್ನು 'ಕರ್ಮಯೋಗದಿಂದ ಯೋಗಿಗಳಿಗೂ' (೩-೩) ಎಂದು ಬೇರೆ ಬೇರೆ ವಿಂಗಡಿಸಿಯೇ ಹೇಳಿರುತ್ತಾನೆ. ಈ ರೀತಿಯಲ್ಲಿ ಸಾಂಖ್ಯಬುದ್ಧಿಯನ್ನೂ ಯೋಗಬುದ್ಧಿಯನ್ನೂ ಆಶ್ರಯಿಸಿ, ಕರ್ತೃತ್ವ, ಅಕರ್ತೃತ್ವ, ಏಕತ್ವ, ಅನೇಕತ್ವ- ಎಂಬ (ವಿರುದ್ಧವಾದ) ಬುದ್ಧಿಗಳನ್ನು ಆಶ್ರಯಿಸಿರುವ ಜ್ಞಾನಕರ್ಮಗಳೆರಡೂ ಒಬ್ಬ ಪುರುಷನಲ್ಲಿಯೇ ಏಕಕಾಲದಲ್ಲಿ* ಇರುವವಾಗಲಾರದೆಂಬದನ್ನು ಕಂಡು ಭಗವಂತನು (ಈ) ಎರಡು ನಿಷ್ಠೆಗಳನ್ನೂ ವಿಂಗಡಿಸಿಯೇ ಹೇಳಿರುತ್ತಾನೆ.

ಇಲ್ಲಿ ವಿಂಗಡಿಸಿ ಹೇಳಿರುವಂತೆಯೇ **ಶತಪಥಬ್ರಾಹ್ಮಣ**ದಲ್ಲಿಯೂ "ಸಂನ್ಯಾಸಿಗಳಾದ ಬ್ರಾಹ್ಮಣರು ಈ ಲೋಕವನ್ನೇ ಬಯಸಿ ಸಂನ್ಯಾಸಮಾಡುತ್ತಾರೆ" (ಬೃ) ಎಂದು ಸರ್ವಕರ್ಮಸಂನ್ಯಾಸವನ್ನು ವಿಧಾನಮಾಡಿ† ಅದಕ್ಕೆ ಅಂಗವಾಗಿ ‡ "ಪ್ರಜೆಯಿಂದ ನಮಗೆ ಆಗಬೇಕಾದದ್ದೇನು ? ಆ ನಮಗೆ ಈತನೆ ಆತ್ಮವು, ಈತನೆ ಲೋಕವು"(ಬೃ) ಎಂದು ಹೇಳಿರುತ್ತದೆ. ಮತ್ತು ಅದರಲ್ಲಿಯೇ § "ಹೆಂಡತಿಯನ್ನು ಮದುವೆಮಾಡಿಕೊಳ್ಳುವದಕ್ಕಿಂತ ಮುಂಚೆ ಪ್ರಾಕೃತನಾದ || ಆತ್ಮನು ಎಂದರೆ ಪುರುಷನು ಧರ್ಮವಿಚಾರವನ್ನು ಮಾಡಿದ ಮೇಲೆ ಮೂರು** ಲೋಕಕ್ಕೆ ಸಾಧಕನಾದ ಮಗನನ್ನೂ ಮಾನುಷ, ದೈವ- ಎಂಬ ಎರಡು ಬಗೆಯ ವಿತ್ತವನ್ನೂ ಬಯಸಿದನು. ಇವೆರಡರಲ್ಲಿ ಮಾನುಷವಿತ್ತವು ಕರ್ಮರೂಪವಾದದ್ದು, ಪಿತೃಲೋಕಪ್ರಾಪ್ತಿಗೆ ಸಾಧನವಾದದ್ದು ; ದೈವವಿತ್ತವು ವಿದ್ಯಾರೂಪವಾದದ್ದು, ದೇವಲೋಕಪ್ರಾಪ್ತಿಗೆ ಸಾಧನವಾದದ್ದು" (ಬೃ) ಎಂದು ಅವಿದ್ಯೆ, ಕಾಮ††-ಇವುಗಳಿರುವಾತನಿಗೇ ಶ್ರೌತಾದಿಕರ್ಮಗಳೆಲ್ಲ ಸಾಧನವಾಗಿರುವವೆಂತ

---

* ಒಂದೇ ಕಾಲದಲ್ಲಿ ನಾನು ಕರ್ತೃವೆಂದೂ ಅಕರ್ತೃವೆಂದೂ ಒಬ್ಬನೇ ಪುರುಷನು ತಿಳಿದುಕೊಳ್ಳುವದು ಆಗದ ಮಾತು.

† ಪ್ರವ್ರಜನ್ತಿ ಎಂಬುದು ವರ್ತಮಾನರೂಪದಲ್ಲಿರುವದಾದರೂ ವಿಧಿಯೆಂದು ಭಾವ.

‡ ಪ್ರವ್ರಜನ್ತಿ ಎಂಬುದು ವಿಧಿಯೆಂಬುದಕ್ಕೆ ಅದಕ್ಕೆ ಸೇರಿದ ಈ ಅರ್ಥವಾದವೇ- ಎಂದರೆ ಹೊಗಳುವ ವಾಕ್ಯವೇ- ಗುರುತು ಎಂದು ಅಭಿಪ್ರಾಯ.

§ ಆ ಬ್ರಾಹ್ಮಣದಲ್ಲಿಯೇ. || ಪ್ರಪಂಚಾಸಕ್ತನಾದ ಮನುಷ್ಯನು.

** ಮನುಷ್ಯಲೋಕ, ಪಿತೃಲೋಕ, ದೇವಲೋಕ. ಇಲ್ಲಿ ಕೊಟ್ಟಿರುವ ವಾಕ್ಯಗಳು ಅಕ್ಷರಶಃ ಹೀಗೆಯೇ ಬೃಹದಾರಣ್ಯಕದಲ್ಲಿರುವದಿಲ್ಲ. ಇಲ್ಲಿ ಅವುಗಳ ತಾತ್ಪರ್ಯವನ್ನು ಮಾತ್ರ ಕೊಟ್ಟಿರುತ್ತದೆ.

†† ಅವಿದ್ಯಾಕಾಮಗಳಿರುವಾತನಿಗೇ ವಿದ್ಯೆ (ಉಪಾಸನೆ) ಮತ್ತು ಕರ್ಮ- ಎಂದು ಹೇಳಿದ್ದರಿಂದ ಇಲ್ಲಿ ಪ್ರಕೃತವಾಗಿರುವ ಜ್ಞಾನವು ಉಪಾಸನೆಗಿಂತ ಭಿನ್ನವೆಂದು ಸೂಚಿಸಿದ ಹಾಗಾಯಿತು.

ತೋರಿಸಿರುತ್ತದೆ. "ಅವುಗಳನ್ನು ಬಿಟ್ಟು ಎದ್ದು ಸಂನ್ಯಾಸಮಾಡುವರು" (ಬೃ) ಎಂದು ಆತ್ಮಲೋಕವನ್ನೇ ಬಯಸುವ ಅಕಾಮನಿಗೆ ಎಲ್ಲವನ್ನೂ ಬಿಟ್ಟು ಬಿಡುವದೇ ವಿಹಿತವಾಗಿರುವದು. ಶ್ರೌತಕರ್ಮ, ಜ್ಞಾನ– ಇವೆರಡನ್ನೂ ಸೇರಿಸಿ ಅನುಷ್ಠಾನಮಾಡಬೇಕೆಂಬುದೇ ಭಗವಂತನ ಅಭಿಪ್ರಾಯವಾದರೆ ಹೀಗೆ ವಿಂಗಡಿಸಿ* ಹೇಳಿರುವದೆಂಬುದು ಹೊಂದುಗಡೆಯಾಗಲಾರದು.

'ಕರ್ಮಕ್ಕಿಂತ ಜ್ಞಾನವೇ ಹೆಚ್ಚಿನದೆಂದು ನಿನ್ನ ಮತವಾದರೆ' (೩-೧) ಎಂದು ಮುಂತಾಗಿರುವ ಶ್ಲೋಕದಲ್ಲಿ ಅರ್ಜುನನು ಮಾಡಿರುವ ಪ್ರಶ್ನೆಯೂ (ಸಮುಚ್ಚಯವಾದಿಗಳ ಪಕ್ಷದಲ್ಲಿ) ಹೊಂದುವ ಹಾಗಿಲ್ಲ. ಜ್ಞಾನಕರ್ಮಗಳೆರಡನ್ನೂ ಒಬ್ಬ ಪುರುಷನೇ ಅನುಷ್ಠಾನಮಾಡುವದೆಂಬುದು ಆಗದ ಮಾತೆಂದೂ ಜ್ಞಾನವು ಕರ್ಮಕ್ಕಿಂತ ಹೆಚ್ಚಿನದೆಂದೂ ಭಗವಂತನು ಪೂರ್ವದಲ್ಲಿ ತನಗೆ ಹೇಳದೆ ಇದ್ದರೂ ತಾನು ಕೇಳದೆ ಇದ್ದರೂ ಅರ್ಜುನನು "ಕರ್ಮಕ್ಕಿಂತ ಜ್ಞಾನವೇ ಹೆಚ್ಚಿನದೆಂದು ನಿನ್ನ ಮತವಾದರೆ" (೩–೧) ಎಂದು ಭಗವಂತನು ಹೇಳಿದಂತೆ ಸುಳ್ಳುಸುಳ್ಳಾಗಿ ಹೇಗೆ ಆರೋಪಣೆ† ಮಾಡಿಯಾನು? ಇದಲ್ಲದೆ ಬುದ್ಧಿಕರ್ಮಗಳೆರಡನ್ನೂ ಸೇರಿಸಿಕೊಂಡು ಅನುಷ್ಠಾನಮಾಡಬೇಕೆಂಬುದು ಎಲ್ಲರಿಗೂ ಹೇಳಿದ್ದಾದರೆ ಅರ್ಜುನನಿಗೂ ಅದು ಹೇಳಿದ್ದೇ ಆಗಿರುತ್ತದೆ. (ಹೀಗೆ ಎರಡನ್ನೂ ತನಗೆ ಉಪದೇಶಮಾಡಿದ್ದಾಗ್ಯೂ) 'ಇವೆರಡರಲ್ಲಿ ಯಾವದು ಹೆಚ್ಚು ಒಳ್ಳೆಯದು? ಅದನ್ನು ನನಗೆ ಸುನಿಶ್ಚಿತವಾಗಿ ಹೇಳು' (೫–೧) ಎಂದು ಇವೆರಡರಲ್ಲಿ ಒಂದರ ವಿಷಯವಾಗಿ ಹೇಗೆ ಪ್ರಶ್ನೆ ಬಂದೀತು? ಪಿತ್ತವು ಶಾಂತಿಯಾಗಬೇಕೆಂದು ಬಯಸುತ್ತಿರುವವನಿಗೆ ಸಿಹಿಯಾಗಿಯೂ ತಂಪಾಗಿಯೂ ಇರುವದನ್ನು ತಿನ್ನಬೇಕು ಎಂದು ವೈದ್ಯನು ಹೇಳಿದ್ದರೆ 'ಇವೆರಡರಲ್ಲಿ ಯಾವದರಿಂದ ಪಿತ್ತವು ಶಮನವಾಗುವದೋ ಅಂಥ ಒಂದು ಕಾರಣವನ್ನು ಹೇಳು' ಎಂಬ ಪ್ರಶ್ನೆಯು ಹುಟ್ಟಲಾರದಷ್ಟೆ. ಒಂದು ವೇಳೆ ಭಗವಂತನು ಹೇಳಿದ್ದರ ಅರ್ಥವನ್ನು ವಿಂಗಡಿಸಿ

---

* ಗೀತೆಯಲ್ಲಿಯೂ ಶ್ರುತಿಯಲ್ಲಿಯೂ ಬೇರೆ ಬೇರೆ ಅಧಿಕಾರಿಗಳಿಗೆ ಕರ್ಮವನ್ನೂ ಜ್ಞಾನವನ್ನೂ ವಿಂಗಡಿಸಿ ಹೇಳಿರುವದು ಸಮುಚ್ಚಯವಾದಕ್ಕೆ ಹೊಂದುವದಿಲ್ಲ.

† ಸಮುಚ್ಚಯವಾದಿಯ ವ್ಯಾಖ್ಯಾನದಲ್ಲಿ ಕರ್ಮಜ್ಞಾನಗಳನ್ನು ಸೇರಿಸಿ ಮಾಡಬೇಕೆಂದು ಭಗವಂತನು ಹೇಳಿರುತ್ತಾನೆಯೇ ಹೊರತು ಒಬ್ಬೊಬ್ಬನು ಒಂದೊಂದನ್ನು ಮಾಡಬೇಕೆಂದಾಗಲಿ ಜ್ಞಾನವು ಹೆಚ್ಚಿನದೆಂದಾಗಲಿ ಹೇಳಿರುವದಿಲ್ಲ. ಹೀಗಿದ್ದರೂ ಅರ್ಜುನನು 'ಕರ್ಮಕ್ಕಿಂತ ಜ್ಞಾನವು ಹೆಚ್ಚೆಂದು ಹೇಳಿದೆಯಲ್ಲ' ಎಂದು ಹೇಳಿರುವದಕ್ಕೆ ಕಾರಣವೇನು? ಇದಕ್ಕೆ ಉತ್ತರವಿಲ್ಲ. ಆದ್ದರಿಂದ ಪ್ರಶ್ನಾನುಸಾರವಾಗಿ ಭಗವಂತನ ಅಭಿಪ್ರಾಯವನ್ನು ನಿಶ್ಚಯಿಸಬೇಕೆಂದು ಭಾವ.

ತಿಳಿದುಕೊಳ್ಳದೆ ಇದ್ದಕಾರಣ ಅರ್ಜುನನು (ಹೀಗೆ) ಕೇಳಿರುವನೆಂದು ಕಲ್ಪಿಸು ವದಾದರೆ ಆಗಲೂ ಭಗವಂತನು 'ನಾನು ಬುದ್ಧಿಕರ್ಮಗಳೆರಡನ್ನೂ ಸೇರಿಸಿ ಕೊಳ್ಳಬೇಕೆಂದು ಹೇಳಿದೆನು, ಹೀಗೇಕೆ ನೀನು ಭ್ರಾಂತನಾಗಿರುವೆ?'' ಎಂದು ಪ್ರಶ್ನೆಗೆ ತಕ್ಕ ಉತ್ತರವನ್ನು ಕೊಡಬೇಕೇ ಹೊರತು ಅದಕ್ಕೆ ಹೊಂದದಂತೆ ಕೇಳಿ ದ್ದಕ್ಕೆ ಬೇರೆಯೇ ಆಗಿ 'ಪೂರ್ವದಲ್ಲಿ ನಾನು ಎರಡು ನಿಷ್ಠೆಗಳನ್ನು (ಬೇರೆ ಬೇರೆ) ಹೇಳಿದೆನು' (೩-೩)- ಎಂದು ಹೇಳಿರುವದು ಯುಕ್ತವಾಗುವದಿಲ್ಲ.

ಬರಿಯ ಸ್ಮಾರ್ತಕರ್ಮದೊಡನೆ* ಜ್ಞಾನವನ್ನು ಸೇರಿಸಿ ನಡೆಸಬೇಕೆಂಬುದು (ಭಗವಂತನ) ಅಭಿಪ್ರಾಯವೆಂದರೂ (ಮೇಲೆ ವರ್ಣಿಸಿದಂತೆ ಕರ್ಮ, ಸಂನ್ಯಾಸ-ಇವುಗಳನ್ನು) ವಿಂಗಡಿಸಿ ಹೇಳಿರುವದೇ ಮುಂತಾದದ್ದು† ಯಾವದೂ ಯುಕ್ತ ವಾಗುವದಿಲ್ಲ. ಮತ್ತು ಕ್ಷತ್ರಿಯನಾದ ತನಗೆ ಯುದ್ಧವು ಸ್ಮೃತಿಯಲ್ಲಿ ವಿಧಿಸಿರುವ ಸ್ವಧರ್ಮವು ಎಂದು ತಿಳಿದಿರುವ (ಅರ್ಜುನನು) ''ಕ್ರೂರವಾದ‡ ಕರ್ಮದಲ್ಲಿ ನನ್ನನ್ನು ಏತಕ್ಕೆ ಕಟ್ಟುವಮಾಡುತ್ತಿದ್ದೀಯೆ?'' (೩-೧) ಎಂದು (ಭಗವಂತನ ಮೇಲೆ) ತಪ್ಪುಹೊರಿಸಿರುವದೂ ಯುಕ್ತವಾಗುವದಿಲ್ಲ.

ಆದ್ದರಿಂದ ಗೀತಾಶಾಸ್ತ್ರದಲ್ಲಿ ಶ್ರೌತಕರ್ಮದೊಡನೆಯಾಗಲಿ ಸ್ಮಾರ್ತ ಕರ್ಮದೊಡನೆಯಾಗಲಿ ಯಾವದೊಂದಿಷ್ಟುಕರ್ಮದೊಡನೆಯಾದರೂ ಆತ್ಮಜ್ಞಾನ ವನ್ನು ಸೇರಿಸಿಕೊಳ್ಳಬೇಕೆಂದು (ಹೇಳಿದೆ ಎಂದು) ಯಾರಿಂದಲೂ ತೋರಿಸಿಕೊಡು ವದಕ್ಕೆ ಆಗುವಹಾಗಿಲ್ಲ.

* ಕರ್ಮಜ್ಞಾನಗಳನ್ನು ಶ್ರುತಿಯಲ್ಲಿ ವಿಂಗಡಿಸಿರುವಂತೆ ಇಲ್ಲಿಯೂ ವಿಂಗಡಿಸಿರುವದರಿಂದ ಸ್ಮಾರ್ತಕರ್ಮಕ್ಕೂ ಜ್ಞಾನಕ್ಕೂ ಸಮುಚ್ಚಯವಾಗಲಾರದು.

† ಜ್ಞಾನವು ಹೆಚ್ಚೆಂದು ಭಗವಂತನು ಹೇಳಿದಂತೆ ಅರ್ಜುನನು ಭಾವಿಸಿರುವದು, ಇವೆರಡ ರಲ್ಲಿ ಯಾವದು ಉತ್ತಮವಾದದ್ದು ನಿಶ್ಚಯಿಸಿ ಹೇಳು ಎಂದು ಐದನೆಯ ಅಧ್ಯಾಯದ ಆದಿಯಲ್ಲಿ ಕೇಳಿರುವದು, ಭಗವಂತನ ಉತ್ತರ- ಇವು.

‡ ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವದು ಧರ್ಮವು; ಮಾಡಬೇಡವೆಂದು ಹೇಳಿರುವದು ಅಧರ್ಮವು. ಯುದ್ಧವು ಕ್ಷತ್ರಿಯನಾದ ತನಗೆ ಶಾಸ್ತ್ರದಲ್ಲಿ ವಿಹಿತವಾಗಿದೆ— ಎಂದು ಅರ್ಜುನನಿಗೆ ಗೊತ್ತೇ ಇದೆಯಷ್ಟೆ; ಹೀಗಿರುವಲ್ಲಿ 'ಕರ್ಮದಲ್ಲಿ ನನ್ನನ್ನೇಕೆ ಕೆಡವು ತ್ತೀಯೆ?' ಎಂದು ಅರ್ಜುನನು ಕೇಳುವದು ಸಮುಚ್ಚಯವಾದಿಯ ಪಕ್ಷದಲ್ಲಿ ಹೇಗೆ ಸರಿ ಹೋದೀತು? ಬೇರೆಬೇರೆಯವರಿಗೆ ಕರ್ಮಜ್ಞಾನಗಳು ವಿಹಿತವಾಗಿದೆ ಎಂಬವರ ಪಕ್ಷದಲ್ಲಿ 'ನಾನು ಜ್ಞಾನವನ್ನೇ ಅನುಸರಿಸಕೂಡದೆ?' ಎಂದು ಕೇಳುವದು ಯುಕ್ತವಾಗುತ್ತದೆ.

## ಸಮುಚ್ಚಯವೆಂದು ಭ್ರಾಂತಿಯಿಂದ ತೋರುವ ಕೆಲವು ಉದಾಹರಣೆಗಳು

ಅಜ್ಞಾನದಿಂದಲೋ ರಾಗವೇ ಮುಂತಾದ ದೋಷಗಳಿಂದಲೋ ಕರ್ಮದಲ್ಲಿ ಪ್ರವರ್ತಿಸಿದ್ದು, ಯಜ್ಞದಿಂದಲಾಗಲಿ ದಾನದಿಂದಲಾಗಲಿ ತಪಸ್ಸಿನಿಂದಲಾಗಲಿ ಸತ್ತ್ವವು ಚೆನ್ನಾಗಿ ಶುದ್ಧಿಯಾಗಲಾಗಿ ಯಾವಾತನಿಗಾದರೆ 'ಇದೆಲ್ಲವೂ ಕರ್ತೃವಲ್ಲದ ಬ್ರಹ್ಮವೊಂದೇ' ಎಂಬ ಪರಮಾರ್ಥತತ್ತ್ವದ ವಿಷಯವಾದ ಜ್ಞಾನವು ಉಂಟಾಯಿತೋ ಆತನಿಗೆ ಕರ್ಮವೂ ಕರ್ಮದಿಂದಾಗಬೇಕಾದ ಪ್ರಯೋಜನವೂ ಹೋಗಿಬಿಟ್ಟಿರುವದಾದರೂ, ಯಾವ ಕರ್ಮದಲ್ಲಿ ಮೊದಲು ಹೇಗೆ ಪ್ರವರ್ತಿಸಿ ಇದ್ದನೋ ಹಾಗೆಯೇ ಆ ಕರ್ಮದಲ್ಲಿ ಲೋಕಸಂಗ್ರಹಾರ್ಥವಾಗಿ ಪ್ರವರ್ತಿಸುತ್ತಿರುವಾಗ ಪ್ರವೃತ್ತಿಯಂತೆ * ಯಾವದು ಕಾಣಿಸುತ್ತಿರುವದೋ, ಅದು (ನಿಜವಾಗಿ) ಕರ್ಮವಲ್ಲ; ಹಾಗೆ (ಕರ್ಮವಾಗಿ) ಇದ್ದರೆ ಅದಕ್ಕೆ ಜ್ಞಾನವನ್ನು ಸೇರಿಸಿ ಅನುಷ್ಠಾನಮಾಡಿದ ಹಾಗಾಗುತ್ತಿತ್ತು. ಹೇಗೆ ಭಗವಂತನಾದ ವಾಸುದೇವನಿಗೆ ಕ್ಷತ್ರಿಯಧರ್ಮವ್ಯಾಪಾರವು ಜ್ಞಾನದೊಡನೆ ಸೇರಿ ಪುರುಷಾರ್ಥಸಿದ್ಧಿಯಾಗುವದಕ್ಕೆ ಕಾರಣವಾಗಿರುವದಿಲ್ಲವೋ,† ಅದರಂತೆಯೇ (ಇಲ್ಲಿಯೂ ತಿಳಿಯಬೇಕು); ಏಕೆಂದರೆ ಜ್ಞಾನಿಗೂ (ಭಗವಂತನಂತೆ) ಫಲಾಶೆಯಿಲ್ಲವೆಂಬುದೂ ಅಹಂಕಾರವಿಲ್ಲವೆಂಬುದೂ ಸಮಾನವಾಗಿದೆ. "ಆದರೆ ತತ್ತ್ವವನ್ನು ತಿಳಿದವನು ನಾನು ಮಾಡುತ್ತೇನೆಂದು ತಿಳಿಯುವದೂ ಇಲ್ಲ, ಅದರ ಫಲದಲ್ಲಿ ಆಸಕ್ತನಾಗಿಯೂ ಇರುವದಿಲ್ಲ" ‡ (೩-೨೮) ಮತ್ತು (ಒಂದು ಉದಾಹರಣೆ:) ಸ್ವರ್ಗವೇ ಮುಂತಾದ ವಿಷಯಗಳನ್ನು ಬಯಸಿ ತನ್ನ ಬಯಕೆಗೆ ಸಾಧನವಾದ§ ಅಗ್ನಿಹೋತ್ರವೇ ಮುಂತಾದ ಕರ್ಮಗಳನ್ನು ಮಾಡುವದಕ್ಕಾಗಿ ಅಗ್ನಿ

---

* ನಿಜವಾಗಿ ಅದು ಪ್ರವೃತ್ತಿಯಲ್ಲ ; ಏಕೆಂದರೆ ಅದರ ಸ್ವಭಾವವು ಬೇರೆಯಾಗಿರುತ್ತದೆ.

† ಜ್ಞಾನವೂ ಯುದ್ಧಾದಿಕರ್ಮಗಳೂ ಎರಡೂ ಸೇರಿ ಭಗವಂತನಿಗೆ ಮುಕ್ತಿಯನ್ನು ಕೊಡುತ್ತವೆ ಎಂದು ಸಮುಚ್ಚಯವಾದಿಯೂ ಒಪ್ಪುವದಿಲ್ಲ ; ಏಕೆಂದರೆ ಭಗವಂತನು ನಿತ್ಯಮುಕ್ತನೆಂಬುದು ಸರ್ವಸಮ್ಮತವಾಗಿದೆ. ಜ್ಞಾನಿಯೂ ಹಾಗೆಯೆ. ಆದ್ದರಿಂದ ಅವನಿಗೆ ಜ್ಞಾನಕರ್ಮಸಮುಚ್ಚಯದಿಂದ ಮುಕ್ತಿಯಾಗಬೇಕಾದ್ದಿಲ್ಲ. ಇಲ್ಲಿ ಸಮುಚ್ಚಯವಾದವನ್ನು ಆಚಾರ್ಯರು ಒಪ್ಪಿದಂತೆ ಆಗಿರುತ್ತದೆಯೆಂದು ಕೆಲವರು ತಪ್ಪಾಗಿ ತಿಳಿದಿರುತ್ತಾರೆ. ಗೀತಾರ್ಥಸರ್ವಸ್ವವನ್ನು ನೋಡಿ.

‡ ಇದು ಗೀತೆಯ ಶ್ಲೋಕದ ತಾತ್ಪರ್ಯಮಾತ್ರವಾಗಿದೆ.

§ 'ಕರ್ಮಲಕ್ಷಣಧರ್ಮಾನುಷ್ಠಾನಾಯ' ಎಂಬ (ಅ) ಪಾಠವನ್ನು ಕೈಬಿಟ್ಟು 'ಅಗ್ನಿಹೋತ್ರಾದಿಕಾಮಸಾಧನಾನುಷ್ಠಾನಾಯ' ಎಂಬ (ಆ|| ಗು) ಪಾಠವನ್ನೇ ಇಲ್ಲಿ ಅಂಗೀಕರಿಸಿದೆ.

ಯನ್ನು ಇಟ್ಟು ಕಾಮ್ಯವಾಗಿರುವ* ಅಗ್ನಿಹೋತ್ರಾದಿಗಳಲ್ಲಿಯೇ ಪ್ರವರ್ತಿಸಿರುವಾತನು (ಆ ಕರ್ಮಗಳನ್ನು) ಅರ್ಧಮಾಡಿರುವಷ್ಟರಲ್ಲಿಯೇ ಕಾಮವು ಹೋಗಿಬಿಟ್ಟರೆ ಅದೇ ಅಗ್ನಿಹೋತ್ರಾದಿಗಳನ್ನು ಮಾಡುತ್ತಿದ್ದರೂ ಆ ಅಗ್ನಿಹೋತ್ರವೇ ಮುಂತಾದದ್ದು ಹೇಗೆ ಕಾಮ್ಯಕರ್ಮವಾಗುವದಿಲ್ಲವೋ (ಅದರಂತೆಯೇ† ಇಲ್ಲಿಯೂ ಅರಿಯಬೇಕು.) ಆದ್ದರಿಂದಲೇ "ಮಾಡಿದರೂ (ಆತನಿಗೆ) ಲೇಪವಾಗುವದಿಲ್ಲ" (೫-೭) "(ಆತ್ಮನು) ಮಾಡುವದೂ ಇಲ್ಲ, (ಅವನಿಗೆ ಅದರ) ಲೇಪವಾಗುವದೂ ಇಲ್ಲ" (೧೩-೩೧) ಎಂದು ಅಲ್ಲಲ್ಲಿ ಭಗವಂತನು ತಿಳಿಸಿರುತ್ತಾನೆ.

ಮತ್ತು "ಹಿಂದಿನವರು ಬಲು ಹಿಂದೆ ಮಾಡಿದ (ಕರ್ಮವನ್ನೇ ನೀನೂ ಮಾಡು)" (೪-೧೫), "ಜನಕನೇ ಮೊದಲಾದವರು ಕರ್ಮದಿಂದಲೇ ಸಿದ್ಧಿಯನ್ನು ಹೊಂದುವದಕ್ಕೆ ಹೊರಟಿದ್ದರು (೩-೨೦) ಎಂದು (ಗೀತೆಯಲ್ಲಿ) ಇರುವದು (ನಿಜ); ಆದರೆ ಅದನ್ನು ಎರಡು ಬಗೆಯಾಗಿ ವಿಂಗಡಿಸಿ (ಅರ್ಥವನ್ನು) ತಿಳಿದುಕೊಳ್ಳಬೇಕು. ಅದು ಹೇಗೆ? (ಎಂದರೆ)– ಒಂದನೆಯದಾಗಿ, ಹಿಂದಿನವರಾದ(ಆ) **ಜನಕಾದಿಗಳು** ತತ್ತ್ವವನ್ನು ಅರಿತವರಾದರೂ ಕರ್ಮದಲ್ಲಿ ಪ್ರವರ್ತಿಸಿದ್ದರೆಂದು ಇಟ್ಟುಕೊಂಡರೆ, ಅವರು ಲೋಕಸಂಗ್ರಹಾರ್ಥವಾಗಿ 'ಗುಣ(ಗಳಿಂದಾಗಿರುವ ಇಂದ್ರಿಯ)ಗಳು ಗುಣ(ಗಳಿಂದಾಗಿರುವ ವಿಷಯ)ಗಳಲ್ಲಿ ವರ್ತಿಸುತ್ತವೆ' (೩-೨೮) ಎಂಬ ಜ್ಞಾನದಿಂದಲೇ ಸಂಸಿದ್ಧಿಯನ್ನು ಹೊಂದುವದಕ್ಕೆ ಹೊರಟಿದ್ದರು. ಆದರೆ ಕರ್ಮಸಂನ್ಯಾಸವೇ (ಅವರಿಗೆ) ಯುಕ್ತವಾಗಿದ್ದರೂ ಕರ್ಮದ‡ ಜೊತೆಯಲ್ಲಿಯೇ ಇದ್ದುಕೊಂಡು ಸಂಸಿದ್ಧಿಯನ್ನು ಹೊಂದುವದಕ್ಕೆ ಹೊರಟಿದ್ದರೇ ಹೊರತು ಕರ್ಮಸಂನ್ಯಾಸವನ್ನು ಮಾಡಲಿಲ್ಲ–ಎಂದು ಹೀಗೆ ಅರ್ಥಮಾಡಬೇಕು. ಹಾಗಲ್ಲದೆ, ಅವರು ತತ್ತ್ವವನ್ನು ಅರಿತವರಲ್ಲ ಎಂದು ಇಟ್ಟುಕೊಂಡರೆ, ಈಶ್ವರನಲ್ಲಿ ಕರ್ಮವನ್ನು ಸಮರ್ಪಿಸಿ ಆ ಸಾಧನದಿಂದ ಸತ್ತ್ವಶುದ್ಧಿ ಎಂಬ ಸಂಸಿದ್ಧಿಯನ್ನೊ ಜ್ಞಾನವು ಹುಟ್ಟುವದೆಂಬ ಸಂಸಿದ್ಧಿಯನ್ನೊ ಜನಕಾದಿಗಳು ಹೊಂದುವದಕ್ಕೆ ಹೊರಟಿದ್ದರು– ಎಂದು ವ್ಯಾಖ್ಯಾನಮಾಡಬೇಕು. ಈ ವಿಷಯವನ್ನೇ "ಸತ್ತ್ವಶುದ್ಧಿಗಾಗಿ ಕರ್ಮವನ್ನು ಮಾಡುತ್ತಾರೆ" (೫-೧೧) ಎಂದು ಭಗವಂತನು ಮುಂದೆ

* ಕಾಮ್ಯಾಗ್ನಿಹೋತ್ರಕ್ಕೂ ನಿತ್ಯಾಗ್ನಿಹೋತ್ರಕ್ಕೂ ಸ್ವರೂಪದಲ್ಲಿ ಭೇದವಿಲ್ಲ; ಕಾಮವಿದ್ದರೆ ಮಾತ್ರ ಕಾಮ್ಯಾಗ್ನಿಹೋತ್ರವಾಗುವದು.

† ಅಜ್ಞರ ಪ್ರವೃತ್ತಿಯು ಅವಿದ್ಯೆಯಿಂದಾದ ಕರ್ಮವಾಗಿರುವದು, ಜ್ಞಾನಿಯ ಕರ್ಮಕ್ಕೆ ಮೂಲವಾಗಿ ಅಜ್ಞಾನವಿಲ್ಲ; ಆದ್ದರಿಂದ ಅದು ನಿಜವಾಗಿ ಕರ್ಮವಲ್ಲ, ಕರ್ಮಾಭಾಸವು. ಅಜ್ಞರು ಮುಕ್ತಿಗಾಗಿ ಕರ್ಮವನ್ನು ಮಾಡಬೇಕು, ಜ್ಞಾನಿಯು ಮುಕ್ತನೇ ಆಗಿರುವನು.

‡ 'ಕರ್ಮದ ಜೊತೆಯಲ್ಲಿ' ಎಂದರೆ ಕರ್ಮದಂತೆ ತೋರುವ ಪ್ರವೃತ್ತಿಯೊಡನೆ

ಹೇಳಿರುತ್ತಾನೆ. ಮತ್ತು "ತನ್ನ ಕರ್ಮದಿಂದ ಆತನನ್ನು ಅರ್ಚನೆಮಾಡಿ ಮನುಷ್ಯನಾದವನು ಸಿದ್ಧಿಯನ್ನು ಹೊಂದುತ್ತಾನೆ" (೧೮–೪೬) ಎಂದು ಹೇಳಿ "ಸಿದ್ಧಿಯನ್ನು ಹೊಂದಿದವನು ಹೇಗೆ ಬ್ರಹ್ಮವನ್ನು ಹೊಂದುವನೋ ಹೇಳುತ್ತೇನೆ" (೧೮–೫೦) ಎಂದು ಮುಂತಾಗಿರುವ ಮಾತುಗಳಿಂದ ಸಿದ್ಧಿಯನ್ನು ಹೊಂದಿದವನಿಗೆ ಮತ್ತೆ ಜ್ಞಾನನಿಷ್ಠೆಯನ್ನೂ ಹೇಳಿರುತ್ತಾನೆ.

ಆದ್ದರಿಂದ ಬರಿಯ ತತ್ತ್ವಜ್ಞಾನವೊಂದರಿಂದಲೇ ಮೋಕ್ಷಪ್ರಾಪ್ತಿಯೇ ಹೊರತು ಕರ್ಮದೊಡನೆ ಕೂಡಿಕೊಂಡ ಜ್ಞಾನದಿಂದಲ್ಲ- ಎಂಬುದೇ ಗೀತಾ ಶಾಸ್ತ್ರದಲ್ಲಿ ನಿಶ್ಚಿತವಾದ ಅರ್ಥವು. ಇದೇ (ನಿಶ್ಚಿತವಾದ) ವಿಷಯವು ಹೇಗೆಂಬುದನ್ನು ಮುಂದೆ ಆಯಾ ಪ್ರಕರಣಕ್ಕೆ ತಕ್ಕಂತೆ ವಿಂಗಡಿಸಿಕೊಂಡು ಅಲ್ಲಲ್ಲಿ ನಾವು ತೋರಿಸಿಕೊಡುವೆವು.

---

## ಆತ್ಮನು ನಿತ್ಯನು ಮತ್ತು ಅವಿಕಾರಿ

**ಶ್ರೀಭಗವಾನುವಾಚ :—**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಣ್ಡಿತಾಃ ॥ ೧೧ ॥**

ಶ್ರೀಭಗವಂತನು ಹೇಳಿದ್ದೇನೆಂದರೆ:—

೧೧. ಶೋಕಕ್ಕೆ ತಕ್ಕವರಲ್ಲದವರನ್ನು ಕುರಿತು ನೀನು ಶೋಕಪಡುತ್ತಿದ್ದೀಯೆ, ತಿಳಿದವರ ಮಾತುಗಳನ್ನೂ ಆಡುತ್ತಿರುವೆ. ಪಂಡಿತರಾದವರು ಪ್ರಾಣ ಹೋದವರನ್ನಾಗಲಿ ಪ್ರಾಣವು ಹೋಗದವರನ್ನಾಗಲಿ ಕುರಿತು ಶೋಕಿಸುವದಿಲ್ಲ.

[ ಭಾಷ್ಯ ]

ಈ ರೀತಿಯಲ್ಲಿ ಧರ್ಮವನ್ನರಿಯದೆ ಮಂಕುಬುದ್ಧಿಯಿಂದ ಕೂಡಿರುವನಾಗಿಯೂ ತಪ್ಪುತಿಳಿವಳಿಕೆಯುಳ್ಳವನಾಗಿಯೂ ದೊಡ್ಡ ದುಃಖದ ಕಡಲಿನಲ್ಲಿ ಮುಳುಗಿದವನಾಗಿಯೂ ಇರುವ ಅರ್ಜುನನಿಗೆ ಆತ್ಮಜ್ಞಾನವನ್ನು*

---

* ಅಜ್ಞಾನವೇ ಶೋಕಮೋಹಗಳಿಗೆ ಕಾರಣವಾದ್ದರಿಂದ ಜ್ಞಾನವೇ ಇವುಗಳಿಗೆ ಪರಿಹಾರವು. ಆದ್ದರಿಂದ ಜ್ಞಾನವನ್ನು ಉಪದೇಶಿಸಿರುತ್ತಾನೆಂದು ಭಾವ. "ಇಲ್ಲಿ ಅವ್ಯಕ್ತೋಽಯಮಚಿನ್ತ್ಯೋಽಯಂ" (೨–೨೫) ಎಂಬವರೆಗೂ ಜ್ಞಾನವನ್ನೂ ಮುಂದಕ್ಕೆ ಕರ್ಮಯೋಗವನ್ನೂ

ಬಿಟ್ಟರೆ ಬೇರೆ ಏತರಿಂದಲೂ ಉದ್ಧಾರವಾಗಲಾರದೆಂದು ಕಂಡು ಭಗವಂತನಾದ ವಾಸುದೇವನು ದಯೆಯಿಂದ ಆ (ಸಮುದ್ರದಿಂದ) ಅರ್ಜುನನನ್ನು ಎತ್ತಬೇಕೆಂದು ಆತ್ಮಜ್ಞಾನಕ್ಕೆ ತಂದು ಬಿಡುವದಕ್ಕಾಗಿ (ಹೀಗೆ) ಹೇಳುತ್ತಾನೆ.

ಭೀಷ್ಮ, ದ್ರೋಣ- ಮೊದಲಾದವರು ಒಳ್ಳೆಯ ನಡತೆಯುಳ್ಳವರಾದ್ದರಿಂದಲೂ (ತಮ್ಮ) ನಿಜವಾದ ರೂಪದಲ್ಲಿ ನಿತ್ಯರಾಗಿಯೇ ಇರುವದರಿಂದಲೂ ಅಶೋಚ್ಯರು ಎಂದರೆ ಶೋಕಕ್ಕೆ ತಕ್ಕವರಲ್ಲ. (ಹೀಗೆ) ಅವರು ಅಶೋಚ್ಯರಾಗಿದ್ದಾಗ್ಯೂ ನೀನು ಅವರನ್ನು ಕುರಿತು "ಅವರು ನನ್ನ ನಿಮಿತ್ತವಾಗಿ ಸಾಯುವರು; ಅವರಿಲ್ಲದೆ ನಾನು ರಾಜ್ಯಸುಖಾದಿಗಳನ್ನು ಕಟ್ಟಿಕೊಂಡು ಏನು ಮಾಡಲಿ?" ಎಂದು ದುಃಖಿಸುತ್ತಿರುವೆ, ಪ್ರಜ್ಞೆಯುಳ್ಳವರ ವಾದಗಳನ್ನೂ ಎಂದರೆ ಬುದ್ಧಿವಂತರ ಮಾತುಗಳನ್ನೂ ಆಡುತ್ತಿರುವೆ. ಹೀಗೆ ಹುಚ್ಚನ ಹಾಗೆ ಒಂದಕ್ಕೊಂದು ವಿರುದ್ಧವಾಗಿ ಮೌಢ್ಯವನ್ನೂ ಪಾಂಡಿತ್ಯವನ್ನೂ ನಿನ್ನಲ್ಲಿ ತೋರಿಸಿಕೊಳ್ಳುತ್ತಿದ್ದೀಯೆ. ಏಕೆಂದರೆ ಪ್ರಾಣವನ್ನು ಕಳೆದುಕೊಂಡ ಸತ್ತವರನ್ನೂ ಪ್ರಾಣವನ್ನು ಕಳೆದುಕೊಳ್ಳದೆ ಬದುಕಿರುವವರನ್ನೂ ಕುರಿತು ಪಂಡಿತರು ಎಂದರೆ ಆತ್ಮಜ್ಞರು ದುಃಖಿಸುವದಿಲ್ಲ. ಪಂಡಾ ಎಂದರೆ ಆತ್ಮವಿಷಯವಾದ ಬುದ್ಧಿ; ಅದು ಯಾರಿಗಿರುವದೋ ಅವರೇ ಪಂಡಿತರು. "ಪಾಂಡಿತ್ಯವನ್ನು ಚೆನ್ನಾಗಿ ಪಡೆದು" (ಬೃ) ಎಂಬ ಶ್ರುತಿ ಇದಕ್ಕೆ ಪ್ರಮಾಣವು. (ಹೀಗೆ ನೀನು ಪಂಡಿತರ ಮಾತುಗಳನ್ನು ಆಡುತ್ತಿದ್ದೀಯೆ. ಆದರೆ) ನಿಜವಾಗಿ ನೋಡಿದರೆ ನಿತ್ಯರಾಗಿಯೂ ಅಶೋಚ್ಯರಾಗಿಯೂ ಇರುವವರನ್ನು ಕುರಿತು ಶೋಕಿಸುತ್ತಿರುವೆಯಾದ್ದರಿಂದ ಮೂಢನೇ ಆಗಿರುವೆ ಎಂದು ಅಭಿಪ್ರಾಯ.

ಇವರು ದುಃಖಮಾಡುವದಕ್ಕೆ ಹೇಗೆ ಅರ್ಹರಲ್ಲ? ಎಂದರೆ ನಿತ್ಯರಾಗಿರುವದರಿಂದ. ಅದು ಹೇಗೆ ಎಂದರೆ:—

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**

೧೨. ಯಾವಾಗಲೂ ನಾನು ಇರಲಿಲ್ಲವೆಂಬುದಿಲ್ಲ, ನೀನಾಗಲಿ, ಈ ರಾಜರಾಗಲಿ ಇರಲಿಲ್ಲವೆಂಬುದಿಲ್ಲ. ನಾವು ಯಾರೂ ಇನ್ನು ಮೇಲೆ ಇರುವದಿಲ್ಲವೆಂಬುದಿಲ್ಲ.

---

ಹೇಳಿದೆ. ಮತ್ತೆ "ಯದಾ ತೇ" (೨-೫೨) ಎಂಬ ಶ್ಲೋಕದಿಂದ ಮುಂದಕ್ಕೆ ಜ್ಞಾನವನ್ನೇ ತಿಳಿಸಿದೆ. ಗೀತಾಧ್ಯಾಯಗಳ ವಿಷಯವಿಭಾಗಗವನ್ನು ಕುರಿತು ಗೀತಾರ್ಥ ಸ್ವರ್ವಸ್ವದಲ್ಲಿ ಚರ್ಚಿಸಿದೆ.

[ ಭಾಷ್ಯ ]

ಯಾವಾಗಲೂ ನಾನು ಇರಲಿಲ್ಲವೆಂಬುದಿಲ್ಲ, ಇದ್ದೇ ಇದ್ದೆನು. ಹಿಂದೆ ಅನೇಕ ದೇಹಗಳು ಹುಟ್ಟಿ ಸತ್ತರೂ– ಗಡಿಗೆ ಮುಂತಾದವುಗಳು (ಹುಟ್ಟಿ ನಾಶವಾದರೂ ನಿತ್ಯವಾಗಿರುವ ಆಕಾಶದಂತೆ*--ನಿತ್ಯವಾಗಿಯೇ ಇರುತ್ತಿದ್ದೇನೆ ಎಂದು ಅಭಿಪ್ರಾಯ. ಹಾಗೆಯೇ ನೀನೂ ಇರಲಿಲ್ಲವೆಂಬುದಿಲ್ಲ, ಇದ್ದುಕೊಂಡೇ ಇದ್ದೆ. ಮತ್ತು ಈ ರಾಜರುಗಳೂ ಇರಲಿಲ್ಲವೆಂಬುದಿಲ್ಲ, ಇದ್ದೇ ಇದ್ದರು. ಇದರಂತೆ ಇನ್ನುಮೇಲೆಯೂ ಎಂದರೆ ಈ ದೇಹವು ನಾಶವಾದ ಮೇಲಿನ ಕಾಲದಲ್ಲಿಯೂ ನಾವೆಲ್ಲರೂ ಇರುವದಿಲ್ಲವೆಂಬುದಿಲ್ಲವೇ ಇಲ್ಲ, ಇದ್ದೇ ಇರುವೆವು. ಮೂರು ಕಾಲಗಳಲ್ಲಿಯೂ† ಆತ್ಮಸ್ವರೂಪದಿಂದ ನಿತ್ಯರೇ ಆಗಿರುವೆವು ಎಂದರ್ಥ. ಬೇರೆ ಬೇರೆ ದೇಹವನ್ನು ಅನುಸರಿಸಿ ಬಹುವಚನವೇ‡ ಹೊರತು ಆತ್ಮನಲ್ಲಿ ಭೇದವುಂಟೆಂಬ ಅಭಿಪ್ರಾಯದಿಂದಲ್ಲ.

ಆತ್ಮನು ಹೇಗೆ ನಿತ್ಯನು ಎಂಬುದಕ್ಕೆ ದೃಷ್ಟಾಂತವನ್ನು ಹೇಳುತ್ತಾನೆ:—

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾನ್ತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

---

* "ಘಟಾದಿಷು ವಿಯದಿವ" ಎಂಬ (ಅ||) ಪಾಠವನ್ನನುಸರಿಸಿ ಪರಿವರ್ತನೆಮಾಡಿದೆ ಸಿದ್ಧಾಂತದಲ್ಲಿ ಆಕಾಶವು ನಿತ್ಯವಲ್ಲವಾದರೂ ಆಕಾಶವು ನಿತ್ಯವು ಎಂದು ತಿಳಿಯುವ ಸಾಮಾನ್ಯರ ಮತ್ತು ತಾರ್ಕಿಕರ ಪ್ರಸಿದ್ಧಿಯನ್ನು ಇಟ್ಟುಕೊಂಡು ದೃಷ್ಟಾಂತವನ್ನು ಕೊಟ್ಟಿದೆ ಎಂದು ತಿಳಿಯಬೇಕು. ಆತ್ಮನ ನಿತ್ಯತ್ವನಿರ್ವಿಕಾರತ್ವವನ್ನು ತಿಳಿಸುವದಕ್ಕೆ ಗೌಡಪಾದರು (೩–೩ರಿಂದ ೯ರವರೆಗಿನ) ಕಾರಿಕೆಯಲ್ಲಿ ಇದೇ ದೃಷ್ಟಾಂತವನ್ನು ಉಪಯೋಗಿಸಿರುತ್ತಾರೆ.

† ಕಾಲದ ಕಟ್ಟು ಆತ್ಮನಿಗೆ ಇಲ್ಲವೆಂದು ಭಾವ.

‡ ಯಾವದು ಭಿನ್ನಭಿನ್ನವಾಗಿರುವದೋ ಅದು ವಿಕಾರವುಳ್ಳದ್ದಾಗಿರುವದೆಂಬುದು ನ್ಯಾಯವು (ಬ್ರ|| ಸೂ||); ಆತ್ಮನಲ್ಲಿ ಭೇದವುಂಟಾದರೆ ಆತ್ಮನೂ ವಿಕಾರಿಯಾಗಬೇಕಲ್ಲ? ನಾನು, ನೀನು, ಈ ರಾಜರು– ಎಂಬ ಬಹುವಚನವೇ ಇಲ್ಲಿ ಆತ್ಮಭೇದಕ್ಕೆ ಪ್ರಮಾಣವಾಗಿರುವದಿಲ್ಲವೆ? ಎಂಬ ಆಕ್ಷೇಪಕ್ಕೆ ಇದು ಸಮಾಧಾನ. ಆತ್ಮನಲ್ಲಿ ಬಹುತ್ವವನ್ನು ಹೇಳುವ ತಾತ್ಪರ್ಯದಿಂದ ಬಹುವಚನವನ್ನು ಪ್ರಯೋಗಮಾಡಿಲ್ಲ, ಮುಂದಿನ ಶ್ಲೋಕದಲ್ಲಿ ಏಕವಚನವನ್ನೂ ಉಪಯೋಗಿಸಿದೆ. ಆತ್ಮನು ನಿರ್ವಿಕಾರಿ, ನಿತ್ಯ– ಎಂಬುದೇ ಪ್ರಕರಣದ ಅರ್ಥವಾಗಿದೆ. ಈ ವಿಷಯದಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

೧೩. ಶರೀರಯುಕ್ತನಾದ ಆತ್ಮನಿಗೆ ಈ ದೇಹದಲ್ಲಿ ಹೇಗೆ ಬಾಲ್ಯವೂ ಯೌವನವೂ ಮುಪ್ಪೂ ಬರುತ್ತಿರುವವೋ ಹಾಗೆಯೇ ಬೇರೊಂದು ದೇಹವೂ ಬರುವದು. ಹೀಗಿರುವದರಿಂದ ತಿಳಿದಾತನು ಮೋಹವನ್ನು ಪಡೆಯಲಾರನು.

[ ಭಾಷ್ಯ ]

ದೇಹವುಳ್ಳವನು ದೇಹಿ. ಇಂಥ ದೇಹಿಗೆ ಎಂದರೆ ಆತ್ಮನಿಗೆ ಈಗ ಇರುವ ದೇಹದಲ್ಲಿ ಹೇಗೆ ಕೌಮಾರವು ಎಂದರೆ ಚಿಕ್ಕವನಾಗಿರುವ ಬಾಲ್ಯಾವಸ್ಥೆ, ಯೌವನವು ಎಂದರೆ ಹರೆಯದವನ ಸ್ಥಿತಿಯಾದ ನಡುವಣ ಅವಸ್ಥೆ, ಮುಪ್ಪು ಎಂದರೆ ವಯಸ್ಸು ಮಾಗಿದು ಜೀರ್ಣವಾಗುವ ಅವಸ್ಥೆ– ಹೀಗೆ ಒಂದಕ್ಕೊಂದು ವಿಲಕ್ಷಣವಾದ * ಈ ಮೂರು ಅವಸ್ಥೆಗಳೂ ಯಾವ ಪ್ರಕಾರದಿಂದ (ಬರುವವೋ,) ಇವುಗಳಲ್ಲಿ ಮೊದಲನೆಯ ಅವಸ್ಥೆಯು ನಾಶವಾದರೆ ಆತ್ಮನಿಗೆ ( ಹೇಗೆ ) ನಾಶವಿಲ್ಲವೋ, ಎರಡನೆಯ ಅವಸ್ಥೆಯು ಹುಟ್ಟಿದರೆ ( ಆತ್ಮನಿಗೆ ಹೇಗೆ ) ಹುಟ್ಟುವದೆಂಬುವದಿಲ್ಲವೋ, ಮತ್ತೇನೆಂದರೆ ಯಾವ ವಿಕಾರವೂ† ಇಲ್ಲದೆ ಒಂದೇ ರೂಪವಾಗಿರುವ (ಆತ್ಮನಿಗೇ) ಎರಡನೆಯ ಮೂರನೆಯ ಅವಸ್ಥೆಗಳು ಬರುತ್ತಿರುವದು ಹೇಗೆ ಕಾಣುತ್ತಿರುವದೋ ಹಾಗೆಯೇ ವಿಕಾರವಿಲ್ಲದೆ ‡ ಇರುವ ಆತ್ಮನಿಗೇ ಈ ದೇಹಕ್ಕಿಂತ ಬೇರೆಯಾದ ದೇಹದ ಪ್ರಾಪ್ತಿಯೂ (ಆಗುವದು) ಎಂದರ್ಥ. ಹೀಗಿರುವದರಿಂದ ಧೀರನು ಎಂದರೆ ತಿಳಿದವನು ಈ ವಿಷಯದಲ್ಲಿ ಮೋಹವನ್ನು ಹೊಂದುವದಿಲ್ಲ.

ಆತ್ಮನು ನಿತ್ಯನೆಂದು ತಿಳಿದಾತನಿಗೆ ಆತ್ಮನು ನಾಶವಾದಾನೆಂಬ ನಿಮಿತ್ತದಿಂದ ಮೋಹವುಂಟಾಗಲಾರದಾದರೂ ಶೀತ ಉಷ್ಣ, ಸುಖ ದುಃಖ– ಇವುಗಳು ಬರುವದರಿಂದ ಮೋಹವುಂಟಾಗುವದು ಲೋಕದಲ್ಲಿ ಕಂಡುಬರುತ್ತಿದೆ ; ಮತ್ತು ಸುಖ ಹೋದದ್ದರಿಂದಲೂ§ ದುಃಖವು ಬರುವದರಿಂದಲೂ ಶೋಕವೂ

---

*. ಅವಸ್ಥೆಗಳು ಬೇರೆ ಬೇರೆ ಸ್ವರೂಪವಾಗಿರುವದರಿಂದ ಒಂದು ಹೋಗಿಯೇ ಇನ್ನೊಂದು ಬರುವದು, ಆತ್ಮನು ಒಬ್ಬನೇ ಎಲ್ಲಾ ಅವಸ್ಥೆಗಳಲ್ಲಿಯೂ ಇರುವನು.

†. ಅವಸ್ಥೆಯ ಸಂಬಂಧವು ಆತ್ಮನಿಗಿಲ್ಲವಾದ್ದರಿಂದ ಆತ್ಮನಲ್ಲಿ ವಿಕಾರವಿಲ್ಲ.

‡. ಆತ್ಮನಿಗೆ ಈ ದೇಹದ ಸಂಬಂಧವಾಗಲಿ ಇದರ ಅವಸ್ಥೆಗಳ ಸಂಬಂಧವಾಗಲಿ ಇಲ್ಲದಿರುವಂತೆ ದೇಹಾಂತರದ ಸಂಬಂಧವೂ ಇಲ್ಲ– ಎಂಬುದೇ ಈ ಶ್ಲೋಕದ ಪರಮತಾತ್ಪರ್ಯವು. ೧೮ನೆಯ ಶ್ಲೋಕದ ಭಾಷ್ಯವನ್ನು ನೋಡಿ.

§. “ ಸುಖವಿಯೋಗನಿಮಿತ್ತೋ ದುಃಖಸಂಯೋಗನಿಮಿತ್ತಶ್ಚ ಶೋಕಃ ” ಎಂಬ (ಗು||) ಪಾಠವನ್ನು ಸ್ವೀಕರಿಸಿದೆ.

(ಆಗುವದು ಕಂಡುಬರುತ್ತಿದೆ) ಎಂದು ಅರ್ಜುನನು ಹೇಳಿಯಾನೆಂದು ತಿಳಿದು ಭಗವಂತನು (ಹೀಗೆ) ಹೇಳುತ್ತಾನೆ.

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣಸುಖದುಃಖದಾಃ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥**

೧೪. ಎಲೈ ಕೌಂತೇಯನೆ, ಇಂದ್ರಿಯಗಳಿಗೂ ವಿಷಯಗಳಿಗೂ ಆಗುವ ಸೋಂಕುಗಳು ಶೀತ ಉಷ್ಣ, ಸುಖ ದುಃಖ–ಇವುಗಳನ್ನು ಕೊಡುತ್ತಿರುವವು ಇವು ಒಂದು ಹೋಗುತ್ತಿರುವವು, ಅನಿತ್ಯವಾಗಿರುವವು. ಎಲೈ ಭರತವಂಶೋತ್ಪನ್ನನಾದ ಅರ್ಜುನನೆ, ಇವುಗಳನ್ನು ಸಹಿಸಿಕೊ.

[ ಭಾಷ್ಯ ]

ಶಬ್ದಾದಿಗಳು ಕಿವಿ ಮುಂತಾದ ಇಂದ್ರಿಯಗಳಿಂದ ಅಳೆಯಲ್ಪಡುತ್ತವೆ. ಆದ್ದರಿಂದ ಆ (ಇಂದ್ರಿಯಗಳಿಗೆ) ಮಾತ್ರೆಗಳು* ಎಂದು ಹೆಸರು. ಮಾತ್ರೆಗಳ ಸ್ಪರ್ಶಗಳು ಎಂದರೆ ಶಬ್ದವೇ ಮುಂತಾದವುಗಳೊಡನೆ ಆಗುವ ಸಂಬಂಧಗಳು. ಇವು ಶೀತವನ್ನೂ ಉಷ್ಣವನ್ನು, ಸುಖವನ್ನೂ ದುಃಖವನ್ನೂ ಕೊಡುತ್ತವೆ. ಅಥವಾ ಶಬ್ದವೇ ಮುಂತಾದ ವಿಷಯಗಳು (ಇಂದ್ರಿಯಗಳಿಂದ) ಮುಟ್ಟಲ್ಪಡುತ್ತವೆಯಾದ್ದರಿಂದ ಇವು 'ಸ್ಪರ್ಶಗಳು'† ಎನಿಸಿಕೊಳ್ಳುವವು. ಮಾತ್ರೆಗಳೂ ಸ್ಪರ್ಶಗಳೂ ಶೀತ ಉಷ್ಣ, ಸುಖ ದುಃಖ–ಇವುಗಳನ್ನು ಕೊಡುವವು. ಶೀತವು‡ ಕೆಲವು ವೇಳೆ ಸುಖವೂ ಕೆಲವು ವೇಳೆ ದುಃಖವೂ ಆಗಿರುವದು. ಉಷ್ಣವೂ ಹಾಗೆಯೇ (ಇರುವದು,) ಒಂದು ಗೊತ್ತಾದ ರೂಪದಲ್ಲಿರುವದಿಲ್ಲ. ಆದರೆ ಸುಖದುಃಖಗಳು ಗೊತ್ತಾದ ಒಂದೇ ರೂಪದಲ್ಲಿ ಇರುತ್ತವೆ. ಏಕೆಂದರೆ ಇವೆರಡೂ ಬದಲಾಯಿಸುವದಿಲ್ಲ. ಆದ್ದರಿಂದ ಅವೆರಡಕ್ಕಿಂತ ಬೇರೆಯಾಗಿ ಶೀತೋಷ್ಣಗಳನ್ನು ಹೇಳಿರುತ್ತದೆ. ಹೀಗೆ ಮಾತ್ರಾ

* 'ಮಾ' ಎಂಬ ಧಾತುವಿಗೆ ಅಳೆಯುವದು ಎಂದರ್ಥ. ವಿಷಯವು ಇಂಥದ್ದೆಂದು ಅದರ ಯೋಗ್ಯತೆಯನ್ನು ಇಂದ್ರಿಯವು ಅಳೆಯುತ್ತದೆ.

† ಸ್ಪರ್ಶ ಎಂಬುದಕ್ಕೆ ಮುಟ್ಟುವಿಕೆ ಎಂಬ ಭಾವಾರ್ಥವನ್ನು ಮೊದಲು ಮಾಡಿತ್ತು; ಈಗ 'ಮುಟ್ಟಲ್ಪಡುವ ವಸ್ತು' ಎಂದು ಕರ್ಮಾರ್ಥವನ್ನು ಮಾಡಿ ವ್ಯಾಖ್ಯಾನಮಾಡಿರುತ್ತದೆ.

‡. ಒಂದೇ ಪ್ರಮಾಣದಲ್ಲಿರುವ ಶೀತವು ಅಥವಾ ಉಷ್ಣವು ಕೆಲವರಿಗೆ ಸುಖಕರವಾಗಿಯೂ ಕೆಲವರಿಗೆ ದುಃಖಕರವಾಗಿಯೂ ಇರುವದು; ಒಬ್ಬನಿಗೇ ಬೇರೆ ಬೇರೆ ಕಾಲದಲ್ಲಿ ಸುಖವನ್ನೂ ದುಃಖವನ್ನೂ ಉಂಟುಮಾಡಬಹುದು. ಆದ್ದರಿಂದ ಶೀತೋಷ್ಣಗಳು ಸುಖವೆಂದಾಗಲಿ ದುಃಖವೆಂದಾಗಲಿ ನಿಯತವಾಗಿ ಹೇಳುವದಕ್ಕಿಲ್ಲ ಎಂದು ಭಾವ. ಮಾತ್ರಾಸ್ಪರ್ಶದಿಂ

ಸ್ಪರ್ಶಗಳು ಬಂದು ಹೋಗುವಂಥ ಸ್ವಭಾವವುಳ್ಳವುಗಳಾಗಿರುವವರಿಂದ ಅನಿತ್ಯ ವಾಗಿರುತ್ತವೆ. ಆದ್ದರಿಂದ ಆ ಶೀತ ಉಷ್ಣ ಮುಂತಾದವುಗಳನ್ನು ತಡೆದುಕೊ, ಅವುಗಳಲ್ಲಿ ಸಂತೋಷವನ್ನಾಗಲಿ * ದುಃಖವನ್ನಾಗಲಿ ಹೊಂದಬೇಡ— ಎಂಬರ್ಥ.

ಶೀತೋಷ್ಣಾದಿಗಳನ್ನು ತಡೆದುಕೊಂಡವನಿಗೆ ಏನಾಗುವದೆಂದರೆ ಕೇಳು:—

**ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

೧೫. ಎಲೈ ಪುರುಷಶ್ರೇಷ್ಠನೆ, ಸಮದುಃಖಸುಖನಾಗಿರುವ ಯಾವ ಧೀರನಾದ ಪುರುಷನನ್ನು ಈ ಶೀತೋಷ್ಣಾದಿಗಳು ವ್ಯಥೆಗೊಳಿಸುವದಿಲ್ಲವೋ ಆತನು ಮೋಕ್ಷಕ್ಕೆ ಯೋಗ್ಯನಾಗುವನು.

[ ಭಾಷ್ಯ ]

ಸಮದುಃಖಸುಖನಾಗಿರುವವನು ಎಂದರೆ ದುಃಖಸುಖಗಳು ಸಮ ವಾಗಿರುವಾತನು. ಹಾಗೆ ಸುಖ ಬಂದರೆ ಸಂತೋಷವನ್ನಾಗಲಿ ದುಃಖ ಬಂದರೆ ವ್ಯಸನವನ್ನಾಗಲಿ ಹೊಂದದೆ ಇರುವಂಥವನೂ ಧೀರನೂ ಎಂದರೆ ಬುದ್ಧಿವಂತನೂ–ಆಗಿರುವ ಯಾವ ಪುರುಷನನ್ನು ಆತನು, ಆತ್ಮನು ನಿತ್ಯನೆಂದು ತಿಳಿದುಕೊಂಡಿರುವದರಿಂದ† ಮೇಲೆ ಹೇಳಿದ ಶೀತೋಷ್ಣಾದಿಗಳು ವ್ಯಥೆಗೊಳಿ ಸದೆ ಇರುವವೋ ಎಂದರೆ ಅಲುಗಾಡಿಸಲಾರದೆ ಇರುವವೋ ನಿತ್ಯನಾಗಿರುವ ಆತ್ಮದರ್ಶನದಲ್ಲಿ ನಿಷ್ಠೆಯುಳ್ಳವನಾಗಿ ದ್ವಂದ್ವಗಳನ್ನು ಸಹಿಸಿಕೊಂಡಿರುವ

---

ದಾಗುವ ಶೀತೋಷ್ಣಾದಿಗಳು ನಮ್ಮ ನಮ್ಮ ರಾಗದ್ವೇಷಗಳಿಗೆ ಅನುಸಾರವಾಗಿ ಸುಖದುಃಖ ವನ್ನುಂಟುಮಾಡುವವು.. ಆದ್ದರಿಂದ ಮಾತ್ರಾಸ್ಪರ್ಶಗಳಲ್ಲಿಯೇ ಸುಖವಾಗಲಿ ದುಃಖವಾಗಲಿ ನಿಯತವಾಗಿರುವದೆಂದು ಮೋಹವನ್ನಾಗಲಿ, ಅವುಗಳು ಬಂದಾಗ ಅಥವಾ ಹೋದಾಗ 'ಸುಖವು ಹೋಗುವದಲ್ಲ ದುಃಖವು ಬರುವದಲ್ಲ' ಎಂಬ ಶೋಕವನ್ನಾಗಲಿ ಮಾಡಬೇಡ— ಎಂದು ತಾತ್ಪರ್ಯ. ಈ ಶ್ಲೋಕವನ್ನು ಭೀಷ್ಮಾದಿಗಳ ವಿಯೋಗದಿಂದ ನಿನಗೆ ಆಗುವ ದುಃಖವನ್ನೂ ಅವರಿಗೆ ನಿನ್ನಿಂದ ಆಗಬಹುದೆಂಬ ದುಃಖದಿಂದ ಆಗಬಹುದಾದ ಮೋಹವನ್ನೂ ತಡೆದುಕೊ— ಎಂದು ಅಭಿಪ್ರಾಯ ಬರುವಂತೆ ಅರ್ಥಮಾಡಿಕೊಳ್ಳಬಹುದಾಗಿದೆ.

*. ಇಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

†. 'ಆತ್ಮನು ನಿತ್ಯನು, ಸುಖದುಃಖಾದಿಗಳು ಅನಿತ್ಯಗಳು; ಆದ್ದರಿಂದ ಸುಖದುಃಖ ಗಳು ಆತ್ಮನ ಧರ್ಮವಲ್ಲ' ಎಂದು ತಿಳಿದಿರುವದರಿಂದ

ಆತನು ಅಮೃತತ್ವಕ್ಕೆ ಯೋಗ್ಯನಾಗುವನು, ಎಂದರೆ ಪುನರ್ಜನ್ಮವಿಲ್ಲದೆ ಇರುವ ದೆಂಬ ಮೋಕ್ಷಕ್ಕೆ ತಕ್ಕವನಾಗುವನು.

ಈ ಮುಂದಿನ ಕಾರಣದಿಂದಲೂ ಶೋಕಮೋಹಗಳನ್ನು ಮಾಡದೆ ಶೀತೋಷ್ಣವೇ ಮುಂತಾದವುಗಳನ್ನು ಸಹಿಸಿಕೊಳ್ಳುವದು ಯುಕ್ತವಾಗಿದೆ. ಏಕೆಂದರೆ:—

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

೧೬. ಇಲ್ಲದೆ ಇರುವದಕ್ಕೆ ಇರುವಿಕೆಯಿಲ್ಲ; ಇರುವದಕ್ಕೆ ಇಲ್ಲದಿರುವಿಕೆಯಿಲ್ಲವು. ಇವೆರಡರ ನೆಲೆಯೂ ತತ್ತ್ವದರ್ಶಿಗಳಿಗೆ ಗೊತ್ತಿರುವದು.

[ ಭಾಷ್ಯ ]

ಅಸತ್ತಾಗಿಯೂ ಎಂದರೆ ನಿಜವಾಗಿ ಇಲ್ಲದೆ ಇರುವವುಗಳಾಗಿಯೂ ಕಾರಣವುಳ್ಳವುಗಳಾಗಿಯೂ* ಇರುವ ಶೀತೋಷ್ಣಾದಿಗಳಿಗೆ ಭಾವವು— ಎಂದರೆ ಅಸ್ತಿತ್ವವು, ಇರುವಿಕೆಯು— ಇರುವದಿಲ್ಲ. ಕಾರಣವುಳ್ಳ ಶೀತೋಷ್ಣಾದಿಗಳನ್ನು ಪ್ರಮಾಣಗಳಿಂದ† ಚೆನ್ನಾಗಿ ಪರೀಕ್ಷೆಮಾಡಿದರೆ ಅವು ನಿಜವಾಗಿಯೂ ಇರುವ ಪದಾರ್ಥಗಳಾಗಿರುವದೇ ಇಲ್ಲ; ಏಕೆಂದರೆ ಅವು ಕಾರ್ಯವಾಗಿರುತ್ತವೆ. ಯಾವದು ಕಾರ್ಯವೋ ಅದು ಬೇರ್ಪಡುವ ಸ್ವರೂಪವುಳ್ಳದ್ದಾಗಿರುತ್ತದೆ. ಹೇಗೆ ಗಡಿಗೆಯೇ ಮುಂತಾದ ರೂಪನ್ನು ಕಣ್ಣಿನಿಂದ‡ ಪರೀಕ್ಷೆಮಾಡಿದರೆ ಅದು ಮಣ್ಣಿಗಿಂತ ಬೇರೆಯಾಗಿ ಕಾಣಬರದೆ ಇರುವದರಿಂದ ಅಸತ್ತಾಗಿರುವದೋ ಅದರಂತೆ§ ಕಾರ್ಯಗಳೆಲ್ಲ ತಮ್ಮ ಕಾರಣಕ್ಕಿಂತ

---

*. ಆತ್ಮವೊಂದನ್ನು ಬಿಟ್ಟರೆ ಮಿಕ್ಕದ್ದೆಲ್ಲ ಕಾರಣವುಳ್ಳದ್ದೇ ಆಗಿರುವದು.

†. ಶೀತೋಷ್ಣಾದಿದ್ವಂದ್ವಗಳೂ ದೇಹಾದಿಗಳೂ ಕಾರ್ಯವು; ಕಾರ್ಯವು ಕಾರಣಕ್ಕಿಂತ ಬೇರೆಯಾಗಿ ಇರುವದಿಲ್ಲವೆಂಬುದು ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ— ಈ ಪ್ರಮಾಣಗಳಿಂದ ಗೊತ್ತಾಗುತ್ತದೆ ಎಂದು ಭಾವ. ಇದೇ ಸತ್ಕಾರ್ಯವಾದ. ಈ ವಿಷಯದಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

‡. ಇದು ಪ್ರತ್ಯಕ್ಷಪ್ರಮಾಣವು. §. ಕಾರ್ಯವಾದದ್ದು ಕಾರಣಕ್ಕಿಂತ ಭಿನ್ನವಾಗಿಲ್ಲವೆಂಬುದು ಎಲ್ಲಾ ಕಡೆಯಲ್ಲಿಯೂ ಸಮವಾದ್ದರಿಂದ ಕಾರ್ಯವು ಮಿಥ್ಯಾವಸ್ತುವಾಯಿತು. ಇದು ಅನುಮಾನ. 'ಕಾರ್ಯ' ಎಂಬದಕ್ಕೆ ಭಾಷ್ಯದಲ್ಲಿ 'ವಿಕಾರ' ಎಂಬ ಶಬ್ದವನ್ನು ಉಪಯೋಗಿಸಿರುವನು. ವಿಕಾರವು ಹೆಸರು ಮಾತ್ರವೇ ಹೊರತು ನಿಜವಾಗಿರುವದಿಲ್ಲ, ಎಂಬರ್ಥದ ಛಾಂದೋಗ್ಯಶ್ರುತಿಯನ್ನು ಸೂಚಿಸುತ್ತದೆ. ಇದು ಆಗಮಪ್ರಮಾಣವೂ ಆಯಿತು.

ಬೇರೆಯಾಗಿ ತೋರಿಬರುವದಿಲ್ಲವಾದ್ದರಿಂದ ಅವೂ ನಿಜವಾಗಿಲ್ಲದ ವಸ್ತುಗಳೇ. ಹುಟ್ಟುವದಕ್ಕೆ ಮೊದಲೂ ನಾಶವಾದ ಮೇಲೆಯೂ ಕಾಣದೆ ಇರುವದರಿಂದಲೂ* (ಅವು ನಿಜವಾದ ವಸ್ತುಗಳಲ್ಲ.) ಮತ್ತು ಮಣ್ಣು ಮುಂತಾದ ಕಾರಣವು ಕೂಡ ತನ್ನ ಕಾರಣಕ್ಕಿಂತ† ಬೇರೆಯಾಗಿ ಕಾಣಬರದೆ ಇರುವದರಿಂದ (ಅದೂ) ನಿಜವಾದ ವಸ್ತುವಲ್ಲ.

(ಆಕ್ಷೇಪ) ಅದೂ ಸುಳ್ಳಾದರೆ ನಿಜವಾಗಿ ಯಾವದೂ ಇರುವದಿಲ್ಲವೆಂದೇ‡ ಆಗುವದಲ್ಲ?

(ಸಮಾಧಾನ) ಹಾಗಲ್ಲ. ಏಕೆಂದರೆ ಇದೆ ಎಂಬ ಬುದ್ಧಿ, ಇಲ್ಲ ಎಂಬ ಬುದ್ಧಿ– ಎಂಬದಾಗಿ ಎಲ್ಲಾ ಕಡೆಯಲ್ಲಿಯೂ ಎರಡು ಬುದ್ಧಿಗಳು ಕಂಡು ಬರುತ್ತವೆ. ಯಾವದರ ವಿಷಯವಾದ ಬುದ್ಧಿಯು ಬೇರ್ಪಡುವದಿಲ್ಲವೋ ಅದು ನಿಜವಾಗಿರತಕ್ಕದ್ದು (ಸತ್); ಯಾವದರ ವಿಷಯವಾದ ಬುದ್ಧಿಯು ಬೇರ್ಪಡುವದೋ ಅದು ನಿಜವಾಗಿರತಕ್ಕದ್ದಲ್ಲ (ಅಸತ್). ಹೀಗೆ ನಿಜವಾಗಿರತಕ್ಕದ್ದು, ಇಲ್ಲದ್ದು– ಎಂಬದರ ವಿಂಗಡವು (ಆಯಾ) ಬುದ್ಧಿಗೆ§ ಅಧೀನವಾಗಿರುವದಷ್ಟೆ. (ಅನುಭವದಲ್ಲಿ) ಎಲ್ಲಾ ಕಡೆಯಲ್ಲಿಯೂ 'ಕರಿಯ ನೈದಿಲೆ' ಎಂಬಂತೆ|| ಸಮಾನಾಧಿಕರಣವಾಗಿ ಎರಡೆರಡು ಬುದ್ಧಿಗಳು ಎಲ್ಲರಿಗೂ ತೋರಿ

---

* ಮೊದಲೂ ಕೊನೆಗೂ ಇಲ್ಲದ್ದು ನಡುವೆ ತೋರಿದರೂ ನಿಜವಾಗಿ ಇರುವದಿಲ್ಲ– ಎಂಬ ನ್ಯಾಯದಿಂದ. ಗೌಡಪಾದರ ವೈ|| ಕಾ|| (೬) ನೋಡಿ. ಇಲ್ಲಿ 'ಕಾರ್ಯಸ್ಯ ಘಟಾದೇಃ' ಎಂಬ ಭಾಷ್ಯಭಾಗವು ಗು|| ಪಾಠದಲ್ಲಿಲ್ಲ. ಇದು ಬೇಕಿಲ್ಲವೆಂದೂ ತೋರುತ್ತದೆ.

† ಮಣ್ಣು ಗಡಿಗೆಯ ದೃಷ್ಟಿಯಿಂದ ಕಾರಣವಾಗಿದ್ದರೂ ತನ್ನ ಕಾರಣಕ್ಕೆ ಕಾರ್ಯವೇ ಆಗಿರುವದು; ಆದ್ದರಿಂದ ಮಿಥ್ಯೆಯೇ.

‡ ಕಾರಣವೂ ಇಲ್ಲ, ಕಾರ್ಯವೂ ಇಲ್ಲ— ಎಂಬುದು ಶೂನ್ಯವಾದಿಗಳ ಮತವು. ಅದಕ್ಕೂ ಸಿದ್ಧಾಂತಕ್ಕೂ ಭೇದವಿಲ್ಲದೆ ಹೋಯಿತಲ್ಲ? ಎಂದು ಆಕ್ಷೇಪಣೆ.

§ ಇದೊಂದು ತೋರಿ ಆಮೇಲೆ ಇಲ್ಲವೆಂಬ ಬುದ್ಧಿಗೆ ವಿಷಯವಾದರೆ ಸುಳ್ಳು, ಇದೆಯೆಂಬ ಬುದ್ಧಿಗೇ ವಿಷಯವಾದರೆ ನಿಜ— ಹೀಗೆ ಆಯಾ ಬುದ್ಧಿಯಿಂದ ನಿಜ, ಸುಳ್ಳು ಎಂಬುದನ್ನು ಗೊತ್ತುಮಾಡಬೇಕಾಗಿದೆ

|| "ಸಮಾನಾಧಿಕರಣೇ, ನ ನೀಲೋತ್ಪಲವತ್" ಎಂಬ ಪಾಠವನ್ನು ಅಂಗೀಕರಿಸಿ ಗುಣಗುಣಿಗಳಿಗೆ ಸಾಮಾನಾಧಿಕರಣ್ಯವು ಗೌಣವೆಂದೂ ಸಾಮಾನ್ಯವಿಶೇಷಗಳಲ್ಲಿ ಕಲ್ಪಿತವೆಂದೂ ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. 'ಸಾಮಾನಾಧಿಕರಣ್ಯೇನ ನೀಲೋತ್ಪಲವತ್' ಎಂಬ ಪಾಠವನ್ನು ಅಂಗೀಕರಿಸಿದರೆ ಯಾವ ಕ್ಲೇಶವೂ ಇಲ್ಲದೆ ಸರಳವಾದ ಅರ್ಥವೂ ಆಚಾರ್ಯರ ಆಶಯವೂ ಹೊರಪಡುವದು. (ಪರಿಶಿಷ್ಟವನ್ನು ನೋಡಿ.) 'ಕನ್ನೈದಿಲೆ' ಎಂಬಲ್ಲಿ ಒಂದೇ

ಬರುವವು. ಹೇಗೆಂದರೆ 'ಇರುವ ಗಡಿಗೆ' 'ಇರುವ ಬಟ್ಟೆ' 'ಇರುವ ಆನೆ'– ಹೀಗೆಯೇ ಎಲ್ಲಾ ಕಡೆಗಳಲ್ಲಿಯೂ ತೋರುತ್ತದೆ. ಈ ಎರಡು ಬುದ್ಧಿಗಳಲ್ಲಿ ಗಡಿಗೆ ಮುಂತಾದ ಬುದ್ಧಿಯು ಬೇರ್ಪಡುತ್ತಿರುವದು; ಇದನ್ನು (ಮೇಲೆ) ತೋರಿಸಿ ಕೊಟ್ಟಿರುತ್ತೇವೆ.* ಆದರೆ 'ಇರುವ' ಎಂಬ ಬುದ್ಧಿಯು ಬೇರ್ಪಡುವದಿಲ್ಲ. ಆದ್ದರಿಂದ ಗಡಿಗೆ ಮುಂತಾದ ಬುದ್ಧಿಗೆ ವಿಷಯವಾದ (ಅನಾತ್ಮವು) ಬೇರ್ಪಡು ತ್ತಿರುವದರಿಂದ ನಿಜವಾಗಿರತಕ್ಕದ್ದಲ್ಲ; ಆದರೆ 'ಇರುವ' ಎಂಬ ಬುದ್ಧಿಗೆ ವಿಷಯ ವಾದ (ಆತ್ಮವು) ಸುಳ್ಳಾದದ್ದಲ್ಲ, ಏಕೆಂದರೆ ಅದು (ಅನಾತ್ಮದಂತೆ) ಬೇರ್ಪಡು ವದಿಲ್ಲ.

(ಆಕ್ಷೇಪ) ಗಡಿಗೆಯು ನಾಶವಾಗಿ 'ಗಡಿಗೆ' ಎಂಬ ಬುದ್ಧಿಯೂ ಬದಲಾ ಯಿಸಲಾಗಿ, 'ಇರುವ' ಎಂಬ ಬುದ್ಧಿಯೂ ಬೇರ್ಪಡುವದಲ್ಲ?

(ಪರಿಹಾರ) ಬೇರ್ಪಡುವದಿಲ್ಲ. ಏಕೆಂದರೆ ಬಟ್ಟೆ† ಮುಂತಾದವುಗಳ ಲ್ಲಿಯೂ 'ಇರುವ' ಎಂಬ ಬುದ್ಧಿಯು ಕಂಡುಬರುತ್ತದೆ. ಆ 'ಇರುವ' ಎಂಬ ಬುದ್ಧಿಯು ವಿಶೇಷಣದ‡ ವಿಷಯದಲ್ಲಿಯೇ ಆಗತಕ್ಕದ್ದಾಗಿರುವದು.

---

ವಸ್ತುವಿನಲ್ಲಿ 'ಕರಿದು', 'ನೈದಿಲೆ' – ಎಂಬ ಎರಡು ಬುದ್ಧಿಗಳು ತೋರುವಂತೆ ಗಡಿಗೆ ಮುಂತಾದವುಗಳ ವಿಷಯದಲ್ಲಿಯೂ 'ಇರುವ', 'ಗಡಿಗೆ'– ಎಂಬ ಎರಡೆರಡು ಬುದ್ಧಿಗಳು ತೋರುತ್ತಿರುವವು. ಇವುಗಳಲ್ಲಿ 'ಗಡಿಗೆ' ಎಂಬ ಬುದ್ಧಿಯು ಮಿಥ್ಯಾಬುದ್ಧಿ, 'ಇರುವ' ಎಂಬ ಬುದ್ಧಿ ಸತ್ಯ— ಎಂಬುದೇ ಇಲ್ಲಿ ಪ್ರಕೃತ.

*. ಕಾರ್ಯವನ್ನು ಚೆನ್ನಾಗಿ ಪರೀಕ್ಷಿಸಿದರೆ ಕಾರಣವೇ ಆಗಿರುವದೆಂಬ ಪ್ರತ್ಯಕ್ಷ; ತೋರಿ ಹಾರುವದರಿಂದ, ತೋರುವಾಗಲೂ ಮಿಥ್ಯೆ ಎಂಬ ಅನುಮಾನ; ನಿಜವಾಗಿಯೂ ಇದ್ದರೆ ಬೇರ್ಪಡಬಾರದಾಗಿತ್ತೆಂಬ ಅರ್ಥಾಪತ್ತಿ; ಕಾರ್ಯವು ಮಾತಿನಿಂದಾದ ಹೆಸರು ಮಾತ್ರ ಎಂಬ ಶ್ರುತಿ– ಈ ಪ್ರಮಾಣಗಳಿಂದ 'ಗಡಿಗೆ' ಮುಂತಾದ ಕಾರ್ಯವು ಅಸತ್ಯವೆಂದು ತೋರಿಸಿಕೊಟ್ಟಿ ರುತ್ತದೆ.

†. 'ಇರುವ' ಎಂಬ ಬುದ್ಧಿಯು ಯಾವದಾದರೊಂದು ತೋರುವ ವಸ್ತುವಿನಲ್ಲಿ ಇದ್ದೇ ಇರುವದು. ಇದೆ ಎಂಬ ಬುದ್ಧಿಗೆ ಗೋಚರವಾಗದೆ ಯಾವದೂ ತೋರುವದಕ್ಕಿಲ್ಲ. ವಿಚಾರದೃಷ್ಟಿ ಯಲ್ಲಿ ಎಲ್ಲವೂ ಮಿಥ್ಯವಾದರೆ ಅದನ್ನು ನೋಡುವ ಆತ್ಮನಾದರೂ ಸತ್ಯವಾಗಿ ಉಳಿಯುವನು.

‡. 'ಇರುವ' ಎಂಬ ಬುದ್ಧಿಯು ವಿಶೇಷಣದ ವಿಷಯವೆಂದು ಇಲ್ಲಿ ಹೇಳಿದ್ದರಿಂದ ನಿಜವಾಗಿಯೂ ಇರುವಿಕೆಯು ವಿಶೇಷಣವೆಂದೂ ಗಡಿಗೆ ಮುಂತಾದವು ಅದಕ್ಕೆ ವಿಶೇಷ್ಯಗಳೆಂದೂ ಭಾವಿಸಬಾರದು. ವ್ಯವಹಾರದಲ್ಲಿ ಏನೇನು ತೋರುವದೋ ಅದರ ಜತೆಗೆಲ್ಲ ಇರುವಿಕೆಯೆಂಬ ಪರ ಮಾರ್ಥಸ್ವರೂಪವೂ ತೋರುವದು ಎಂದು ಅರ್ಥಮಾಡಿಕೊಳ್ಳಬೇಕು. (ಇಲ್ಲಿ ವ್ಯಾಖ್ಯಾನಕಾರರ ಅಭಿಪ್ರಾಯಕ್ಕೆ ಪರಿಶಿಷ್ಟವನ್ನು ನೋಡಿ.)

(ಆಕ್ಷೇಪ) 'ಇರುವ' ಎಂಬ ಬುದ್ಧಿಯು ಹಾಗೆಯೇ 'ಗಡಿಗೆ' ಎಂಬ ಬುದ್ಧಿಯೂ ಬೇರೊಂದು ಗಡಿಗೆಯಲ್ಲಿ ಕಾಣುತ್ತಲೇ ಇರುವದಲ್ಲ?

(ಪರಿಹಾರ) ಹಾಗಲ್ಲ. ಏಕೆಂದರೆ (ಅದು) ಬಟ್ಟೆ* ಮುಂತಾದ್ದರಲ್ಲಿ ಕಾಣುವದಿಲ್ಲ.

(ಆಕ್ಷೇಪ) 'ಇರುವ' ಎಂಬ ಬುದ್ಧಿಯೂ ನಾಶವಾದ ಗಡಿಗೆಯಲ್ಲಿ ಕಾಣುವದಿಲ್ಲವಲ್ಲ?

(ಪರಿಹಾರ) ಹಾಗಲ್ಲ, ಏಕೆಂದರೆ (ಅಲ್ಲಿ) ವಿಶೇಷ್ಯವು ಇರುವದಿಲ್ಲ (ವಾದ್ದರಿಂದ 'ಇರುವ' ಎಂಬ ಬುದ್ಧಿಯೂ ಕಾಣುವದಿಲ್ಲ). 'ಇರುವ' ಎಂಬ ಬುದ್ಧಿಗೆ ವಿಶೇಷಣವೇ ವಿಷಯವಾಗಿರುವದು. ವಿಶೇಷ್ಯವು ಇಲ್ಲದಿದ್ದರೆ ವಿಶೇಷಣವಿರುವದೆಂಬುದೇ ಹೊಂದುವದಿಲ್ಲವಾಗಿ (ಇಲ್ಲಿ) ಯಾವ ವಿಷಯದಲ್ಲಿ ('ಇರುವ' ಎಂಬ ಬುದ್ಧಿ)ಯಾಗಬೇಕು? (ಆದ್ದರಿಂದ ಗಡಿಗೆಯು ನಾಶವಾದರೆ ವಿಶೇಷ್ಯವು ಇಲ್ಲದ್ದರಿಂದ 'ಇರುವ' ಎಂಬ ಬುದ್ಧಿ ಅಲ್ಲಿ ಇರುವದಿಲ್ಲವೇ) ಹೊರತು 'ಇರುವ' ಎಂಬ ಬುದ್ಧಿಗೆ ವಿಷಯವೇ † (ಎಲ್ಲಿಯೂ) ಇಲ್ಲದ್ದರಿಂದಲ್ಲ.

(ಆಕ್ಷೇಪ) ಗಡಿಗೆ ಮುಂತಾದ ವಿಶೇಷ್ಯವು ನಿಜವಾಗಿ ಇಲ್ಲವಾದರೆ ('ಇರುವ ಗಡಿಗೆ' ಎಂಬ ಎರಡು ಬುದ್ಧಿಗಳು) ಒಂದು ವಸ್ತುವಿನ ವಿಷಯದಲ್ಲಿ ತೋರುವದು ಯುಕ್ತವಾಗುವದಿಲ್ಲವಲ್ಲ?‡

---

*. ಗಡಿಗೆ ಎಂಬ ಬುದ್ಧಿಯು ನಿಜವಾಗಿ ಇರುವ ವಸ್ತುವಿನ ವಿಷಯವಾಗಿದ್ದರೆ ಅದಕ್ಕೆ ದೇಶ, ಕಾಲ, ವಸ್ತುಗಳ ಪರಿಚ್ಛೇದವಿರಬಾರದು. 'ಗಡಿಗೆ' ಎಂಬ ಬುದ್ಧಿಯು ಗಡಿಗೆಯಲ್ಲಿರುವಂತೆ ತೋರುವದೇ ಹೊರತು ಬೇರೆ ವಸ್ತುಗಳಲ್ಲಿ ತೋರುವದಿಲ್ಲ; ಆದ್ದರಿಂದ ಅದಕ್ಕೆ ದೇಶದಿಂದಲೂ ವಸ್ತುವಿನಿಂದಲೂ ಪರಿಚ್ಛೇದವಿದೆ. ಗಡಿಗೆ ನಷ್ಟವಾದರೆ ಅದು ತೋರದೆ ಹೋಗುತ್ತದೆ; ಆದ್ದರಿಂದ ಕಾಲದಿಂದ ಪರಿಚ್ಛೇದವಿದೆ. ಚೆನ್ನಾಗಿ ನೋಡಿದರೆ 'ಗಡಿಗೆ' ಎಂಬ ಬುದ್ಧಿಗೆ ವಿಷಯವಾಗಿರುವ ವಸ್ತು ಕೇವಲ ಮಣ್ಣೇ, ಮಣ್ಣಿಗಿಂತ ಬೇರೆಯಾದ ಗಡಿಗೆಯೂ ಇಲ್ಲವೆಂದು ತೋರುವದು. ಹೀಗೆ ಗಡಿಗೆಯು ಅಸತ್ತು, ನಿಜವಾಗಿರುವದಲ್ಲ– ಎಂದು ಸಿದ್ಧವಾಗುತ್ತದೆ.

†. 'ಇರುವ' ಎಂಬ ಬುದ್ಧಿಗೆ ವಿಷಯವೇ ಇಲ್ಲವೆಂದು ಯಾರಿಂದಲೂ ತೋರಿಸುವದಕ್ಕಾಗುವದಿಲ್ಲ. ಆದರೆ ತೋರುವದಕ್ಕೆ ಅದಕ್ಕೆ ವಿಶೇಷ್ಯವು ಬೇಕು; ವಿಶೇಷ್ಯವು ನಿಜವಾಗಿರಲಿ ಇಲ್ಲದಿರಲಿ ಚಿಂತೆಯಿಲ್ಲ.

‡. 'ಇರುವ ಗಡಿಗೆ' ಎಂಬಲ್ಲಿ 'ಇರುವ' ಎಂಬದು ಒಂದು, 'ಗಡಿಗೆ' ಎಂಬದು ಒಂದು– ಹೀಗೆ ಎರಡು ತೋರುತ್ತವೆ. ಆದ್ದರಿಂದ ಎರಡೂ ನಿಜವಾಗಿರಬೇಕಲ್ಲವೆ? ಇಲ್ಲದಿದ್ದರೆ ಎರಡು ವಿಧವಾಗಿ ಏಕೆ ತೋರುತ್ತಿತ್ತು?– ಎಂದು ಆಕ್ಷೇಪಣೆ.

(ಪರಿಣಾಮ) ಹಾಗಲ್ಲ. ಏಕೆಂದರೆ ಬಿಸಿಲುಕುದುರೆ ಮುಂತಾದ ಕಡೆಯಲ್ಲಿ (ವಿಶೇಷಣ ವಿಶೇಷ್ಯ ಈ) ಎರಡರಲ್ಲಿ ಒಂದು (ನಿಜವಾಗಿ) ಇಲ್ಲದಿದ್ದರೂ 'ಇದು ನೀರು' ಎಂದು (ಎರಡು ಬುದ್ಧಿಗಳಿಗೂ) ಸಾಮಾನಾಧಿಕರಣ್ಯವು* ಕಂಡುಬರುತ್ತದೆ.

ಆದ್ದರಿಂದ ಕಾರಣವುಳ್ಳವುಗಳಾಗಿ(ರುವದರಿಂದ) ನಿಜವಾಗಿಲ್ಲದೆ ಇರುವ [ಅಸತಃ] ದೇಹವೇ ಮುಂತಾದವುಗಳಿಗೂ ದ್ವಂದ್ವಗಳಿಗೂ ಇರುವಿಕೆ ಇಲ್ಲ; ಮತ್ತು (ಪರಮಾರ್ಥವಾಗಿ) ಇರುವ ಆತ್ಮನಿಗೆ ಇಲ್ಲದಿರುವಿಕೆಯೂ ಇಲ್ಲ, ಏಕೆಂದರೆ (ಇರುವಿಕೆಯ ರೂಪನಾಗಿರುವ ಆತ್ಮನು) ಎಲ್ಲಿಯೂ ಬೇರ್ಪಡುವದಿಲ್ಲ ಎಂದು (ಮೇಲೆ) ತಿಳಿಸಿರುತ್ತೇನೆ.

ಹೀಗೆ ಇರುವ ಆತ್ಮ, ಇಲ್ಲದ ಅನಾತ್ಮ– ಇವೆರಡರ ನಿರ್ಣಯವನ್ನು— ಎಂದರೆ 'ಇರುವದು ಇದ್ದೇ ಇರುವದು, ಇಲ್ಲದ್ದು ಇರುವದೇ ಇಲ್ಲ– ಎಂದು ಈ ಮೇಲೆ ಹೇಳಿದ ಎರಡರ ಅಂತವನ್ನು ಎಂದರೆ ನಿಶ್ಚಯವನ್ನು— ತತ್ತ್ವದರ್ಶಿಗಳು ಕಂಡಿರುವರು. ತತ್ ಎಂಬುದು ಸರ್ವನಾಮವು. ಸರ್ವವೂ ಬ್ರಹ್ಮವಾದ್ದರಿಂದ ತತ್ ಎಂಬುದು ಅದರ ಹೆಸರು. (ಅ) ಬ್ರಹ್ಮದ ಸ್ವರೂಪವೇ ತತ್ತ್ವವು ಎಂದರೆ ಬ್ರಹ್ಮದ ನಿಜವಾದ ರೂಪವು. ಅದನ್ನು ತಿಳಿಯುವ ಸ್ವಭಾವವುಳ್ಳವರೇ ತತ್ತ್ವದರ್ಶಿಗಳು ನೀನೂ (ಅಂಥ) ತತ್ತ್ವದರ್ಶಿಗಳ ದೃಷ್ಟಿಯನ್ನು, ಆಶ್ರಯಿಸಿಕೊಂಡು ಶೋಕವನ್ನೂ ಮೋಹವನ್ನೂ ಬಿಟ್ಟು ಶೀತೋಷ್ಣಗಳೇ ಮುಂತಾದ ನಿಯತರೂಪವಾಗಿಯೂ † ಅನಿಯತರೂಪವಾಗಿಯೂ ಇರುವ ದ್ವಂದ್ವಗಳನ್ನು—'ಇದು ಕಾರ್ಯವಾದ್ದರಿಂದ ಬಿಸಿಲುಕುದುರೆಯ ನೀರಿನಂತೆ ಸುಳ್ಳು ಸುಳ್ಳಾಗಿಯೇ ತೋರುತ್ತಿದೆ' ಎಂದು ಮನಸ್ಸಿನಲ್ಲಿ ನಿಶ್ಚಯಿಸಿ– ತಡೆದುಕೊ ಎಂದು ಅಭಿಪ್ರಾಯವು.

ಹಾಗಾದರೆ ನಿಜವಾಗಿಯೂ ಇರುವದಾಗಿ ಯಾವಾಗಲೂ ಇದ್ದುಕೊಂಡಿರುವದೆಂಬುದು ಯಾವದು? ಎಂದರೆ ಹೇಳುತ್ತಾನೆ:—

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥೧೭॥**

* 'ಇದು ನೀರು' ಎಂದು ತೋರುವ ಬಿಸಿಲುಕುದುರೆಯಲ್ಲಿ ವ್ಯವಹಾರದೃಷ್ಟಿಯಿಂದ ನಿಜವಾಗಿರುವ ಮರುಭೂಮಿಯು 'ಇದು' ಎಂಬ ಬುದ್ಧಿಯ ವಿಷಯ; 'ನೀರು' ಎಂಬ ಬುದ್ಧಿಯ ವಿಷಯವಾದ ವಸ್ತುವು ಇಲ್ಲವೇ ಇಲ್ಲ.

†. ಶೀತೋಷ್ಣಾದಿಗಳು ಅನಿಯತವಾದವು; ಸುಖದುಃಖಗಳು ನಿಯತ. ಈ ಅಧ್ಯಾಯದ ೧೪ನೆಯ ಶ್ಲೋಕದ ಭಾಷ್ಯವನ್ನು ನೋಡಿ.

೧೭. ಯಾವದರಿಂದಲಾದರೆ ಇದೆಲ್ಲವೂ ವ್ಯಾಪ್ತವಾಗಿರುವದೋ ಅದನ್ನು ಅವಿನಾಶಿ ಎಂದು ತಿಳಿದುಕೊ; ಅವ್ಯಯವಾಗಿರುವ ಇದರ ವಿನಾಶವನ್ನು ಯಾರೂ ಮಾಡಲಾರರು.

[ ಭಾಷ್ಯ ]

ಅವಿನಾಶಿ ಎಂದರೆ ನಾಶವಾಗುವ ಸ್ವಭಾವವಿಲ್ಲದ್ದು. ಮೂಲದಲ್ಲಿ 'ತು' (ಆದರೆ) ಎಂದು ಹೇಳಿರುವದು (ಇದು) ಅಸತ್ತಿಗಿಂತ ಬೇರೆ ಎಂದು ತಿಳಿಸುವದಕ್ಕೆ. ಅದನ್ನು (ನಾಶವಿಲ್ಲದ್ದೆಂದು) ತಿಳಿದುಕೊ. ಯಾವದನ್ನು? ಗಡಿಗೆ ಮುಂತಾದವುಗಳು ಆಕಾಶದಿಂದ ಹೇಗೆ (ವ್ಯಾಪಿಸಲ್ಪಟ್ಟಿರುವವೋ) ಹಾಗೆ ಆಕಾಶಸಹಿತವಾದ* ಈ ಜಗತ್ತೆಲ್ಲವೂ ಯಾವ ಸತ್ತೆಂಬ† ಹೆಸರಿನ ಬ್ರಹ್ಮದಿಂದ ವ್ಯಾಪ್ತವಾಗಿರುವದೋ ಅದನ್ನು. ಅವ್ಯಯವಾದ– ಯಾವದು ವ್ಯಯವಾಗುವದಿಲ್ಲವೋ, ಎಂದರೆ ಹೆಚ್ಚುವೆಯೂ ಕುಂದದೆಯೂ ಇರುವದೋ ಅದು ಅವ್ಯಯವು. ಈ ಸತ್ತೆಂಬ ಹೆಸರಿನ ಬ್ರಹ್ಮವು ತನ್ನ ರೂಪದಿಂದ ವ್ಯಯವಾಗುವದಿಲ್ಲ, ಎಂದರೆ ಬೇರ್ಪಡುವದಿಲ್ಲ; ಏಕೆಂದರೆ ಇದರಲ್ಲಿ ದೇಹಾದಿಗಳಲ್ಲಿರುವಂತೆ ಅವಯವಗಳಿಲ್ಲ. ಇದು ತನ್ನದಾದ ಯಾವದಾದರೊಂದು ವ್ಯಯವಾಗುವದರ ಮೂಲಕವೂ ವ್ಯಯವಾಗುವದಿಲ್ಲ; ಏಕೆಂದರೆ ಬ್ರಹ್ಮಕ್ಕೆ ತನ್ನದೆಂಬುದೇ ಇಲ್ಲ. ಉದಾಹರಣೆಗೆ, ತನ್ನ ಹಣವು ನಾಶವಾದರೆ ದೇವದತ್ತನು ತಾನೂ ನಾಶವಾಗುತ್ತಾನೆ; ಆದರೆ ಬ್ರಹ್ಮವು ಹಾಗೂ ನಾಶವಾಗುವದಿಲ್ಲ. ಆದ್ದರಿಂದ (ಹೀಗೆ) ಅವ್ಯಯವಾಗಿರುವ– ಈ ಬ್ರಹ್ಮವನ್ನು ನಾಶಮಾಡುವದಕ್ಕೆ ಎಂದರೆ ಕಾಣದ ಹಾಗೆ ಮಾಡುವದಕ್ಕೆ, ಇಲ್ಲದಂತೆ ಮಾಡುವದಕ್ಕೆ ಯಾರಿಂದಲೂ ಆಗುವದಿಲ್ಲ. ಯಾರೂ– ಈಶ್ವರನು ಕೂಡ– ಈ ಆತ್ಮನನ್ನು ನಾಶಮಾಡಲಾರನು. ಏಕೆಂದರೆ ಆತ್ಮವೇ‡

---

*. ಆಕಾಶವು ನಿತ್ಯವೆಂದೂ ವ್ಯಾಪಕವೆಂದೂ ತಾರ್ಕಿಕರು ಭಾವಿಸುತ್ತಾರಷ್ಟೆ; ಆತ್ಮವು ಆಕಾಶಕ್ಕಿಂತಲೂ ನಿತ್ಯ, ಅದನ್ನೂ ವ್ಯಾಪಿಸಿಕೊಂಡಿರುತ್ತದೆ.

†. ಛಾಂದೋಗ್ಯೋಪನಿಷತ್ತಿನಲ್ಲಿ ಬ್ರಹ್ಮಕ್ಕೆ 'ಸತ್ತು' (ಇರುವದು) ಎಂಬ ಹೆಸರನ್ನು ಕೊಟ್ಟಿರುತ್ತದೆ. ಸತ್ತಾ ಎಂಬ ಜಾತಿಯು ಎಲ್ಲಾ ವ್ಯಕ್ತಿಗಳಲ್ಲೂ ಇರುವದೆಂದು ತಾರ್ಕಿಕರು ಹೇಳುತ್ತಾರೆ; ಆದರೆ ಇದಕ್ಕೆ ಯಾವ ಪ್ರಮಾಣವೂ ಇಲ್ಲ. ಸದ್ರೂಪವೇ ಬ್ರಹ್ಮವು ಎಂಬದು ಶ್ರುತಿಸಿದ್ಧಾಂತವು. ಸತ್ಪದಾರ್ಥವು ಒಂದೇ, ಅದಕ್ಕೆ ದೇಶಕಾಲವಸ್ತುಗಳ ಪರಿಚ್ಛೇದವಿಲ್ಲ– ಎಂದು ಆಕಾಶದ ದೃಷ್ಟಾಂತದಿಂದ ಸೂಚಿತವಾಗಿರುತ್ತದೆ

‡. ಬ್ರಹ್ಮವು ಇಲ್ಲಿ ಪ್ರಕೃತವಲ್ಲ. ಆತ್ಮ, ದೇಹ- ಇವೆರಡರಲ್ಲಿ ಯಾವದನ್ನು ಕುರಿತು ಶೋಕಿಸುತ್ತೀಯೆ– ಎಂದು ಭಗವಂತನು ಕೇಳುತ್ತಿದ್ದಾನೆ. ಆದರೆ ಆತ್ಮವೇ ಬ್ರಹ್ಮವಾದ್ದರಿಂದಲೂ ಬ್ರಹ್ಮಕ್ಕೆ ನಾಶವಿಲ್ಲವೆಂದರೂ ಆತ್ಮಕ್ಕೆ ನಾಶವಿಲ್ಲವೆಂದರೂ ಒಂದೇ. ಈ ಶ್ಲೋಕದ ಅಭಿಪ್ರಾಯವನ್ನು ಮತಾಂತರದವರು ಬೇರೆ ವರ್ಣಿಸಿದ್ದಾರೆ. ಪರಿಶಿಷ್ಟವನ್ನು ನೋಡಿ.

ಬ್ರಹ್ಮವು; ತನ್ನ ಮೇಲೆಯೇ ತನ್ನ ಕ್ರಿಯೆ ನಡೆಯುವದೆಂಬುದು* ವಿರುದ್ಧವಾಗಿರುತ್ತದೆ.

ಇನ್ನು ತನ್ನ ಸ್ವರೂಪದ ಇರವನ್ನು ಬೇರ್ಪಡಿಸಿಕೊಳ್ಳುತ್ತಿರುವ ಅಸತ್ತೆಂಬುದು† ಯಾವದು? ಎಂದರೆ ಹೇಳುತ್ತಾನೆ.

**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**

೧೮. ನಿತ್ಯನಾಗಿಯೂ ಅನಾಶಿಯಾಗಿಯೂ ಅಪ್ರಮೇಯನಾಗಿಯೂ ಇರುವ ಶರೀರಿಯ ಈ ದೇಹಗಳು ಅಂತವುಳ್ಳವುಗಳೆನಿಸುತ್ತವೆ. ಆದ್ದರಿಂದ ಎಲೈ ಭರತವಂಶೋತ್ಪನ್ನನೆ, ಯುದ್ಧಮಾಡು.

[ ಭಾಷ್ಯ ]

ಯಾವವುಗಳಿಗೆ ಅಂತವು ಎಂದರೆ ವಿನಾಶವು ಇರುವದೋ ಅವು ಅಂತವುಳ್ಳವುಗಳು. ಹೇಗೆಂದರೆ ಬಿಸಿಲುಕುದುರೆಯ‡ ನೀರೇ ಮುಂತಾದವುಗಳಲ್ಲಿ 'ಇದೆ' ಎಂದು ತೋರಿಕೊಂಡು ಬಂದಿದ್ದ ಬುದ್ಧಿಯು ಪ್ರಮಾಣದಿಂದ (ಪರೀಕ್ಷಿಸಲು ಆ) ಪರೀಕ್ಷೆಯ ಕೊನೆಯಲ್ಲಿ ಕಡಿದು ಹೋಗುವದು. ಅದು ಅದರ ಅಂತವು. ಈ ದೇಹಗಳು ಅವುಗಳಂತೆಯೂ ಕನಸಿನ ಮತ್ತು ಮಾಯೆಯ ದೇಹವೇ ಮುಂ

---

*. ಆತ್ಮನು ತನ್ನನ್ನೇ ತಾನು ವಿಷಯ ಮಾಡಿಕೊಳ್ಳುವ ಹಾಗಿಲ್ಲ: ಆದ್ದರಿಂದ ಆತ್ಮನಿಗೆ ತನ್ನಿಂದಲೇ ತನಗೆ ನಾಶವೆಂಬುದಂತೂ ಇಲ್ಲ. ಆತ್ಮನಿಗಿಂತ ವ್ಯತಿರಿಕ್ತವಾದ ವಸ್ತುವೇ ಇಲ್ಲವೆಂದು ಮುಂದೆ ಹೇಳುತ್ತದೆ ಆದ್ದರಿಂದ ಎರಡನೆಯ ವಸ್ತುವಿನಿಂದಲೂ ಆತ್ಮನಿಗೆ ನಾಶವಿಲ್ಲ.

†. ಹಿಂದಿನ ಶ್ಲೋಕದಲ್ಲಿ ಸತ್ಯವಾಗಿಯೂ ನಾಶವಿಲ್ಲದ್ದಾಗಿಯೂ ಇರುವದು ಆತ್ಮವು ಎಂದು ತಿಳಿಸಿದ್ದಾಯಿತು. ಇದರಿಂದ 'ನಾಭಾವೋ ವಿದ್ಯತೇ ಸತಃ' ಎಂಬದನ್ನು ವಿವರಿಸಿದಂತೆ ಆಯಿತು. ಇನ್ನು ನಾಸತೋ ವಿದ್ಯತೇ ಭಾವಃ– ಎಂಬ ಭಾಗದಲ್ಲಿ ಹೇಳಿದ್ದ ಅಸತ್ಪದಾರ್ಥವು ಯಾವದು?– ಎಂದು ಪ್ರಶ್ನೆ.

‡. 'ಮೃಗತೃಷ್ಣಿಕೋದಕಾದೌ' ಎಂಬ (ಗು॥) ಪಾಠವನ್ನು ಇಟ್ಟುಕೊಂಡಿದೆ. "ದೇಹಗಳು ಕಾಲಾಂತರದಲ್ಲಿ ನಾಶಹೊಂದಿದರೂ ಈಗ ಎದುರಿಗೆ ತೋರುವಾಗ ಸತ್ಯವಷ್ಟೆ. ಅವಕ್ಕೆ ನನ್ನಿಂದ ವ್ಯಥೆಯಾಗುವದಿಲ್ಲವೆ?" ಎಂಬ ಅರ್ಜುನನ ಶಂಕೆಗೆ ಪರಿಹಾರವಾಗಿ ಭಗವಂತನು ಇವುಗಳೆಲ್ಲ ಅಸತ್ಯವೆಂದು ಹೇಳುತ್ತಾನೆಂದು ಭಾವ. ಕನಸು ಮಾಯೆ ಮುಂತಾದವುಗಳಲ್ಲಿ ದೇಹವು ಸತ್ಯವಾಗಿಯೇ ತೋರುವದು; ಆಮೇಲೆ ದೇಹಬುದ್ಧಿಯು ಬಾಧಿತವಾಗಲು ತೋರಿದಾಗಲೂ ಅದು ನಿಜವಾಗಿ ಇರಲೇ ಇಲ್ಲವೆಂದು ಗೊತ್ತಾಗುವದು. ಇದರಂತೆಯೇ ಎಚ್ಚರದ ದೇಹಗಳನ್ನೂ ತಿಳಿಯಬೇಕು. (ಗೌ॥ ಕಾ॥ ೪-೩೭ ನೋಡಿ.)

ತಾದವುಗಳಂತೆಯೂ ಅಂತವುಳ್ಳವುಗಳು. ನಿತ್ಯನಾಗಿಯೂ ಶರೀರವುಳ್ಳವನಾಗಿಯೂ* ನಾಶವಿಲ್ಲದಿರುವವನಾಗಿಯೂ ಅಪ್ರಮೇಯನಾಗಿಯೂ ಇರುವ ಆತ್ಮನ (ಈ ದೇಹಗಳು) ಅಂತವುಳ್ಳವಗಳೆನಿಸಿವೆ, ಎಂದರೆ ವಿವೇಕಿಗಳಿಂದ† (ಅಸತ್ಯವಾದವುಗಳೆನಿಸಿಕೊಂಡಿವೆ) ಎಂದರ್ಥ.

'ನಿತ್ಯನಾಗಿಯೂ ನಾಶವಿಲ್ಲದವನಾಗಿಯೂ' ಎಂದು ಹೇಳಿದ್ದರಲ್ಲಿ ಪುನರುಕ್ತಿ (ಎಂಬ ದೋಷವೇನೂ) ಇಲ್ಲ. ಏಕೆಂದರೆ ನಿತ್ಯವೆಂಬುದೂ ನಾಶವೆಂಬುದೂ ಲೋಕದಲ್ಲಿ ಎರಡು ವಿಧವಾಗಿರುವದು. ಹೇಗೆಂದರೆ:— ದೇಹವು ಬೂದಿಯಾಗಿ ಕಾಣದೆ ಹೋದರೂ 'ನಾಶವಾಯಿತು' ಎನ್ನುತ್ತಾರೆ; ಅದು ಇದ್ದುಕೊಂಡು ರೋಗಾದಿಗಳುಳ್ಳದ್ದಾಗಿ ಬೇರೆ ಮಾರ್ಪಾಡನ್ನು ಹೊಂದಿದರೂ 'ನಾಶವಾಯಿತು' ಎನ್ನುತ್ತಾರೆ. ಹೀಗಿರುವದರಿಂದ 'ನಾಶವಿಲ್ಲದವನಾಗಿಯೂ ನಿತ್ಯನಾಗಿಯೂ' ಎಂದರೆ ಈ (ಆತ್ಮನಿಗೆ) ಎರಡು ಬಗೆಯ ನಾಶವೂ ಇಲ್ಲನೆಂದು ಅರ್ಥ. (ಹೀಗೆ ಎರಡು ವಿಧವಾಗಿ) ಹೇಳದೆ ಹೋಗಿದ್ದರೆ ಆತ್ಮನು ಪೃಥ್ವಿ ಮುಂತಾದವುಗಳ ಹಾಗೆ (ಪರಿಣಾಮಿ) ನಿತ್ಯನೆಂದೂ‡ ಅರ್ಥವಾಗಬಹುದಾಗಿತ್ತು. ಹಾಗಾಗದೆ ಇರಲೆಂದು 'ನಿತ್ಯನಾಗಿಯೂ ನಾಶವಿಲ್ಲದವನಾಗಿಯೂ'— ಎಂದು (ಎರಡು ವಿಶೇಷಣಗಳನ್ನು) ಹೇಳಿರುತ್ತಾನೆ.

ಅಪ್ರಮೇಯನಾದವನು ಎಂದರೆ ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಂದ ಗೊತ್ತುಪಡಿಸುವದಕ್ಕೆ ಬರದವನು— ಎಂದರ್ಥ.

(ಆಕ್ಷೇಪ) ಆಗಮದಿಂದ ಆತ್ಮನನ್ನು ಗೊತ್ತುಪಡಿಸುವದಕ್ಕೆ§ ಆಗುವದಲ್ಲ?

---

*. ಶರೀರವುಳ್ಳವನು- ಎಂದದ್ದರಿಂದ ಶರೀರಕ್ಕಿಂತ ವಿಲಕ್ಷಣವಾದ, ಸ್ವತಂತ್ರವಾಗಿ ಇರುವ ಸ್ವರೂಪವುಳ್ಳವನು ಎಂಬದನ್ನು ಸೂಚಿಸಿದ ಹಾಗಾಯಿತೆಂದು ಭಾವ.

†. ದೇಹಗಳನ್ನು ಅಸತ್ಯನೆಂದು ಯಾರೂ ಭಾವಿಸಿಲ್ಲವಲ್ಲ? ಎಂದರೆ ದೇಹವೇ ತಾವೆಂದು ತಿಳಿದಿರುವ ಅವಿವೇಕಿಗಳು ದೇಹವನ್ನು ಸತ್ಯವೆಂದು ಭಾವಿಸಿರುವರಾದರೂ ವಿವೇಕಿಗಳ ದೃಷ್ಟಿಯಿಂದ ನೋಡಿದರೆ ಇವು ಅಸತ್ಯವಾಗಿಯೇ ಇರುವವು ಎಂದು ಭಾವ. ಇದನ್ನು 'ಉಕ್ತಾಃ' (ಹೇಳಲ್ಪಟ್ಟವು) ಎಂಬ ಮಾತು ಸೂಚಿಸುತ್ತದೆ.

‡. ದೇಹವು ಬಹಳವಾಗಿ ಮಾರ್ಪಟ್ಟರೆ ಆತನ ದೇಹವು ಹಾಳಾಯಿತು— ಎನ್ನುತ್ತಾರೆ. ಹೀಗೆ ಮಾರ್ಪಡುವದಕ್ಕೆ ಪರಿಣಾಮಿ ಎಂದು ಹೆಸರು. ಪೃಥ್ವಿ ಮುಂತಾದವುಗಳು ಮಾರ್ಪಡುತ್ತಲೇ ಇದ್ದರೂ ಅದೇ ಇದು ಎಂಬ ಬುದ್ಧಿಯು ನಮಗೆ ಇರುವದರಿಂದ ಅವು ನಿತ್ಯವೆ— ಎಂದು ಸಾಂಖ್ಯರೇ ಮುಂತಾದವರು ಹೇಳುತ್ತಾರೆ. ಆತ್ಮನು ನಿತ್ಯನೆಂದರೆ ಹೀಗೆ ಪರಿಣಾಮಿನಿತ್ಯನಲ್ಲ ; ಒಂದೇ ರೂಪದಲ್ಲಿರುವವನು, ನಾಶವಿಲ್ಲದವನು. ಇಂಥ ನಿತ್ಯತ್ವವನ್ನು ಕೂಟಸ್ಥನಿತ್ಯತ್ವ ಎನ್ನುತ್ತಾರೆ.

§. ಶಾಸ್ತ್ರದಿಂದಲೂ ಆತ್ಮನನ್ನು ಗೊತ್ತುಪಡಿಸುವದಕ್ಕೆ ಆಗದಿದ್ದರೆ ಶಾಸ್ತ್ರವು ಪ್ರಮಾಣವೆಂಬದು ಹೇಗೆ? ಎಂದು ಪ್ರಶ್ನೆ.

ಮೊದಲು ಪ್ರತ್ಯಕ್ಷವೇ ಮುಂತಾದವುಗಳಿಂದಲೂ* (ಗೊತ್ತುಪಡಿಸ)ಲಾಗುವದಲ್ಲ?
(ಪರಿಹಾರ) ಹಾಗಲ್ಲ, ಏಕೆಂದರೆ ಆತ್ಮನು ಸ್ವತಃಸಿದ್ಧನಾಗಿರುತ್ತಾನೆ; ಆತ್ಮನೆಂಬ ಪ್ರಮಾತೃವು† ಸಿದ್ಧವಾಗಿದ್ದರೇ ಪ್ರಮೆಯನ್ನು ಸಂಪಾದಿಸಬೇಕೆಂಬ ಇಚ್ಛೆಯುಳ್ಳವನು ಪ್ರಮಾಣಗಳನ್ನು ಹುಡುಕುವದೆಂಬದು ಸರಿಯಾಗುತ್ತದೆ. 'ನಾನು ಇಂಥವನು' ಎಂದು ಮೊದಲು ತನ್ನನ್ನು ಪ್ರಮಾಣಗಳಿಂದ ಗೊತ್ತುಮಾಡಿಕೊಂಡು‡ ಆಮೇಲೆ ಪ್ರಮೇಯವನ್ನು ಗೊತ್ತುಪಡಿಸುವದಕ್ಕೆಂದು (ಯಾರೂ) ಹೊರಡುವದಿಲ್ಲವಷ್ಟೆ? ಆತ್ಮನು ಎಂಬ (ತನ್ನ ಸ್ವರೂಪವು) ಯಾರಿಗೂ ಅಪ್ರಸಿದ್ಧವಾಗಿರುವದಿಲ್ಲ. ಶಾಸ್ತ್ರವೆಂಬುದಾದರೋ ಅಂತ್ಯಪ್ರಮಾಣವಾಗಿರುವದು.§ (ಇದು) ಆತ್ಮನದಲ್ಲದ ಧರ್ಮಗಳ ಆರೋಪಣೆಯನ್ನು ತೆಗೆದುಹಾಕುವದರಿಂದ|| ಮಾತ್ರ ಆತ್ಮನ ವಿಷಯದಲ್ಲಿ ಪ್ರಮಾಣವಾಗಿರುವದೇ ಹೊರತು, ತಿಳಿಯದ ವಿಷಯವನ್ನು ತಿಳಿಸಿಕೊಡುವದರಿಂದ (ಪ್ರಮಾಣವೆನಿಸಿರುವದಿಲ್ಲ). ಆದ್ದರಿಂದಲೇ "ಯಾವದು ನೇರಾಗಿಯೂ** ಪರೋಕ್ಷವಲ್ಲದೆಯೂ ಇರುವ ಬ್ರಹ್ಮವಾಗಿದೆಯೋ ಯಾವದು ಎಲ್ಲಕ್ಕೂ ಒಳಗಿನ ಆತ್ಮವೋ (ಅದನ್ನು ಹೇಳು)" (ಬೃ) ಎಂದು ಶ್ರುತಿ ಇರುವದು.

---

*. ದೇಹಾತ್ಮಬುದ್ಧಿ ಇರುವಾಗ ಆತ್ಮನು ಪ್ರತ್ಯಕ್ಷಗೋಚರನು. ಮನಆತ್ಮಬುದ್ಧಿ ಇರುವಾಗ ಅನುಮಾನಗೋಚರನು. ಆದರೆ ನಿಜವಾದ ಆತ್ಮಸ್ವರೂಪವನ್ನು ಶಾಸ್ತ್ರವು ತಿಳಿಸುವದರಿಂದ ಶಾಸ್ತ್ರವೇ ಆತ್ಮವಿಷಯದಲ್ಲಿ ನಿಜವಾದ ಪ್ರಮಾಣವು- ಎಂದು ಪೂರ್ವಪಕ್ಷಿಯ ಭಾವ.

†. ನಿಜವಾಗಿ ನೋಡಿದರೆ ಪ್ರಮಾತೃತ್ವವಾಗಲಿ, ಇಚ್ಛೆಯಾಗಲಿ— ಆತ್ಮನಲ್ಲಿರುವದಿಲ್ಲ. ಆದರೆ ಪ್ರಮಾತೃತ್ವಕ್ಕೆ ಆಧಾರವಾದ ಆತ್ಮನಿಲ್ಲದಿದ್ದರೆ ಪ್ರಮಾತೃತ್ವವೇ ಸಿದ್ಧಿಯಾಗುವದಿಲ್ಲ; ಪ್ರಮಾತೃತ್ವವಿಲ್ಲದೆ ಪ್ರಮಾಣವ್ಯವಹಾರವೂ ಸಿದ್ಧಿಸುವದಿಲ್ಲ. ಆದ್ದರಿಂದ ಪ್ರಮಾಣವ್ಯವಹಾರಕ್ಕೆ ಮೊದಲೇ ಸಿದ್ಧವಾಗಿರುವ ಆತ್ಮನು ಪ್ರಮಾಣಸಿದ್ಧನಾಗಲಾರನು; ಅವನು ತಾನೇ ಸಿದ್ಧನಾಗಿರುತ್ತಾನೆ.

‡. 'ಪ್ರಮಾಯ' ಎಂಬ (ಅ||) ಪಾಠವೇ ಸರಿ; 'ಅಪ್ರಮಾಯ' ಎಂಬ (ಗು||) ಪಾಠವು ಹಿಂದುಮುಂದಿನ ವಾಕ್ಯಗಳನ್ನು ನೋಡಿದರೆ ಅಷ್ಟುಹೊಂದಿಕೆಯಾಗಿಲ್ಲವೆಂಬುದು ಸ್ಪಷ್ಟವು. ಪ್ರಮಾತೃ ಎಂದರೆ ಪ್ರಮಾಣಗಳನ್ನುಪಯೋಗಿಸುವಾತನು; ಪ್ರಮಾಣವೆಂದರೆ ಸರಿಯಾದ ತಿಳಿವಿನ ಸಾಧನ: ಪ್ರಮೆ ಅಥವಾ ಪ್ರಮಿತಿ ಎಂದರೆ ಸರಿಯಾದ ತಿಳಿವು: ಪ್ರಮೇಯವೆಂದರೆ ತಿಳಿಯಬೇಕಾಗಿರುವ ವಸ್ತು.

§. ಪ್ರಮಾತೃ, ಪ್ರಮಾಣ, ಪ್ರಮೇಯ— ಎಂಬ ವ್ಯವಹಾರವೇ ಸುಳ್ಳೆಂದು ತಿಳಿಸಿಕೊಡುವದು. ಈ ಅಧ್ಯಾಯದ ೬೯ನೆಯ ಶ್ಲೋಕದ ಭಾಷ್ಯವನ್ನು ನೋಡಿ.

||. ಪ್ರಮಾಣವು ತನ್ನ ಪ್ರಮೇಯದ ಅಜ್ಞಾನವನ್ನು ಕಳೆದರೆ ಸಾಕು, ಅಷ್ಟರಿಂದಲೇ ಪ್ರಮಾಣವೆನಿಸುತ್ತದೆ.

**. ಬ್ರಹ್ಮವು ಸ್ವತಃಸಿದ್ಧವೂ ಸ್ವಪ್ರಕಾಶವೂ ಆಗಿರುವದೆಂಬುದಕ್ಕೆ ಶ್ರುತಿ.

ಹೀಗೆ ಆತ್ಮನು ನಿತ್ಯನೂ ವಿಕಾರಗಳಿಲ್ಲದವನೂ ಆಗಿರುವದರಿಂದ ಯುದ್ಧ ಮಾಡು, ಎಂದರೆ ಯುದ್ಧವನ್ನು ಬಿಡಬೇಡ ಎಂದರ್ಥ. ಇಲ್ಲಿ ಯುದ್ಧವನ್ನು ಮಾಡಲೇಬೇಕೆಂದು ವಿಧಿಸಿರುವದಿಲ್ಲ. ಏಕೆಂದರೆ ತಾನೇ ಯುದ್ಧಕ್ಕೆ ಹೊರಟಿರುವ ಈ (ಅರ್ಜುನನು) ಶೋಕಮೋಹಗಳ ಅಡ್ಡಿಯಿಂದ ಸುಮ್ಮನೆ ಕೂತಿದ್ದಾನೆ; ಅವನು ಮಾಡಬೇಕೆಂದಿರುವ (ಯುದ್ಧಕ್ಕೆ) ಅಡ್ಡಿಯಾಗಿರುವದನ್ನು ಹೋಗಲಾಡಿಸುವದಷ್ಟನ್ನೇ ಭಗವಂತನು ಮಾಡುತ್ತಿದ್ದಾನೆ. ಆದ್ದರಿಂದ 'ಯುದ್ಧ ಮಾಡು' ಎಂಬದು ಅನುವಾದವೇ* ಹೊರತು ವಿಧಿಯಲ್ಲ.

ಗೀತಾಶಾಸ್ತ್ರವು ಶೋಕ ಮೋಹ ಮುಂತಾದ ಸಂಸಾರಕಾರಣವನ್ನು ಹೋಗಲಾಡಿಸುವದಕ್ಕೆ ಹುಟ್ಟಿರುವದೇ ಹೊರತು (ಕರ್ಮದಲ್ಲಿ) ಪ್ರವೃತ್ತಿಯನ್ನುಂಟುಮಾಡುವದಕ್ಕಲ್ಲ ಎಂಬೀ ಅಭಿಪ್ರಾಯಕ್ಕೆ ಸಾಕ್ಷಿಯಾಗಿ ಭಗವಂತನು (ಈಗ) ಎರಡು ಋಕ್ಕುಗಳನ್ನು ತಂದು ಹೇಳುತ್ತಾನೆ.

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥ ೧೯ ॥**

೧೯. ಈತನು ಕೊಲ್ಲುವವನೆಂದು ಯಾವನು ತಿಳಿಯುತ್ತಾನೋ, ಮತ್ತು ಈತನು ಕೊಲ್ಲಲ್ಪಡತಕ್ಕವನೆಂದು ಯಾವನು ತಿಳಿಯುತ್ತಾನೋ ಅವರಿಬ್ಬರೂ (ನಿಜವನ್ನು) ಅರಿಯರು. ಇವನು ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂ ಇಲ್ಲ.

[ ಭಾಷ್ಯ ]

'ಭೀಷ್ಮನೇ ಮುಂತಾದವರು ಯುದ್ಧದಲ್ಲಿ ನನ್ನಿಂದ ಕೊಲ್ಲಲ್ಪಡುವರು, ನಾನೇ ಅವರನ್ನು ಕೊಲ್ಲುವವನು'– ಎಂದು ನೀನು ತಿಳಿದಿರುವೆಯಷ್ಟೆ; ಈ ನಿನ್ನ ಬುದ್ಧಿಯು ತಪ್ಪಾದದ್ದು. ಹೇಗೆಂದರೆ:– ಈ ಪ್ರಕೃತನಾದ ದೇಹಿಯು ಕೊಲ್ಲುವವನು– ಎಂದರೆ ಕೊಲ್ಲುವದೆಂಬ ಕ್ರಿಯೆಗೆ ಕರ್ತನು– ಎಂದು ಯಾವನು ತಿಳಿಯುತ್ತಾನೋ, ಮತ್ತು ಯಾವ ಇನ್ನೊಬ್ಬನು ಇವನನ್ನು ಹತನನ್ನಾಗಿ– ಎಂದರೆ ದೇಹವನ್ನು ಕೊಂದರೆ ನನ್ನನ್ನೇ ಕೊಂದಂತೆ ಎಂದು– ಕೊಲ್ಲುವದೆಂಬ ಕ್ರಿಯೆಗೆ (ಆತ್ಮನು) ಕರ್ಮವೆಂದು ತಿಳಿಯುತ್ತಾನೋ ಅವರಿಬ್ಬರೂ ಅರಿಯರು, ಎಂದರೆ

---

* ಹೊಸ ವಿಷಯವನ್ನು ಹೇಳುವಾಗ ಮೊದಲೇ ಸಿದ್ಧವಾಗಿರುವ ವಿಷಯವನ್ನು ಅಂದುಕೊಳ್ಳುವದುಂಟು. ಇದಕ್ಕೆ ಅನುವಾದವೆಂದು ಹೆಸರು. ಅರ್ಜುನನಿಗೆ ಯುದ್ಧಮಾಡಬೇಕೆಂದು ಮೊದಲೇ ತಿಳಿದಿತ್ತು. ಅದನ್ನು ಮತ್ತೆ ಹೇಳಿದ್ದು ಅನುವಾದವು. ಇಲ್ಲಿ ಹೊಸದಾಗಿ ಹೇಳಿದ್ದು ಏನೆಂದರೆ ಆತ್ಮನು ನಿತ್ಯನಾದ್ದರಿಂದ ಅವನ ವಿಷಯದಲ್ಲಿ ಶೋಕಪಡಬೇಕಾದದ್ದಿಲ್ಲವೆಂಬದು. ಇದು ಪ್ರತಿಪಾದನೆ. ಪ್ರವೃತ್ತಿಯೇ ಗೀತಾರ್ಥವೆಂದು ಈಚೆಗೆ ಕೆಲವರು ವಾದಿಸುತ್ತಿದ್ದಾರೆ. ಇದು ಸರಿಯಲ್ಲ. ಪೀಠಿಕೆಯನ್ನು ನೋಡಿ.

ಆತ್ಮನನ್ನು ವಿಂಗಡಿಸಿ ತಿಳಿದುಕೊಳ್ಳದೆ ಇರುವರು. ದೇಹವನ್ನು ಕೊಂದದ್ದರಿಂದ 'ನಾನು ಕೊಲ್ಲುವೆನು, ನಾನು ಕೊಲ್ಲಲ್ಪಟ್ಟಿರುವೆನು' ಎಂದು ಆತ್ಮನನ್ನು ಅಹಂಪ್ರತ್ಯಯಕ್ಕೆ* (ನಾನು ಎಂಬ ಅರಿವಿಗೆ) ವಿಷಯನೆಂದು ಯಾರು ತಿಳಿಯು ವರೋ ಅವರು ಆತ್ಮನ ಸ್ವರೂಪವನ್ನು ಅರಿಯದವರು ಎಂದು ಅರ್ಥ. ಏಕೆಂದರೆ ಈ ಆತ್ಮನು ಕೊಲ್ಲುವದೂ ಇಲ್ಲ, ಎಂದರೆ ಕೊಲ್ಲುವದೆಂಬ ಕ್ರಿಯೆಗೆ ಕರ್ತನೂ† ಅಲ್ಲ; ಕೊಲ್ಲಲ್ಪಡುವದೂ ಇಲ್ಲ, ಎಂದರೆ (ಕೊಲ್ಲುವದೆಂಬ ಕ್ರಿಯೆಗೆ) ಕರ್ಮವೂ ಅಲ್ಲ. ಏಕೆಂದರೆ ಇವನು ಯಾವ ವಿಕಾರಗಳೂ ಇಲ್ಲದವನಾಗಿರುತ್ತಾನೆ.

ಆತ್ಮನಲ್ಲಿ ವಿಕಾರವಿಲ್ಲವೆಂಬುದು ಹೇಗೆ? ಎಂಬುದನ್ನು ತಿಳಿಸುವದಕ್ಕೆ (ಈ) ಎರಡನೆಯ ಮಂತ್ರವು‡ (ಬಂದಿರುತ್ತದೆ).

**ನ ಜಾಯತೇ ಮ್ರಿಯತೇ ವಾ ಕದಾಚಿ**
**ನ್ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

೨೦. ಈತನು ಎಂದೆಂದಿಗೂ ಹುಟ್ಟುವದೂ ಇಲ್ಲ. ಸಾಯುವದೂ ಇಲ್ಲ. ಮೊದಲು ಇದ್ದು ಆಮೇಲೆ ಇಲ್ಲವಾಗುವದೂ ಇಲ್ಲ. ಇವನು ಜನ್ಮವಿಲ್ಲದವನು, ನಿತ್ಯನು, ಶಾಶ್ವತನು, ಪುರಾಣನು. ಶರೀರವು ಹತವಾಗುತ್ತಿದ್ದರೂ ಇವನು ಹತನಾಗುವದಿಲ್ಲ.

*. ಇಲ್ಲಿ ಭಾಷ್ಯಪಾಠ್ಯವು ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುತ್ತದೆ. 'ನ ಜ್ಞಾತವನ್ತೌ ವಿವೇಕೇನಾತ್ಮಾನಮ್ । ಹನ್ತಾಹಂ ಹತೋಽಸ್ಮ್ಯಹಮಿತಿ ದೇಹಹನನೇನ ಆತ್ಮಾನಂ ಅಹಂಪ್ರತ್ಯಯವಿಷಯಂ ಯೌ ವಿಜಾನೀತಃ, ತಾವಾತ್ಮಸ್ವರೂಪಾನಭಿಜ್ಞಾವಿತ್ಯರ್ಥಃ ।' — ಎಂದು ಪಾಠವನ್ನು ಇಟ್ಟುಕೊಂಡಿದೆ. 'ಅಹಂಪ್ರತ್ಯಯವಿಷಯಂ' ಎಂಬ ಮಾತು ಎರಡು ಸಲ ಬಂದಿರುವ (ನಿ॥ ಗು॥) ಪಾಠದಲ್ಲಿ ಆತ್ಮನನ್ನು ಅಹಂಪ್ರತ್ಯಯವಿಷಯನೆಂದು ತಿಳಿಯಬೇಕೆಂದು ತಾತ್ಪರ್ಯವಾಗುತ್ತದೆ. ಅಹಂಪ್ರತ್ಯಯವಿಷಯನೆಂಬ ಮತವು ಮೀಮಾಂಸಕರದ್ದಾದ್ದರಿಂದ ಆ ಪಾಠದಲ್ಲಿ ಆತ್ಮನು ವಿಷಯಿ- ಎಂಬ ಅರ್ಥವನ್ನು ಹೇಗೋ ಹೊರಡಿಸಬೇಕಾಗುತ್ತದೆ.

†. ಕರ್ತೃ ಎಂದರೆ ತನ್ನಲ್ಲುಂಟಾಗುವ ಕ್ರಿಯೆಯಿಂದ ಮಾರ್ಪಡುವವನು; ಕರ್ಮವೆಂದರೆ ಕರ್ತೃವಿನ ಕ್ರಿಯೆಯ ಫಲದಿಂದ ಮಾರ್ಪಡುವವನು. ಆತ್ಮನಲ್ಲಿ ಯಾವ ಮಾರ್ಪಾಡೂ ಇಲ್ಲದ್ದರಿಂದ ಅವನು ಕರ್ತೃವೂ ಅಲ್ಲ ಕರ್ಮವೂ ಅಲ್ಲ.

‡. ಇಲ್ಲಿರುವ ಶ್ಲೋಕಗಳಲ್ಲಿ ಕಠೋಪನಿಷತ್ತಿನ ಮಂತ್ರಗಳ ಅಭಿಪ್ರಾಯವಿದೆಯೇ ಹೊರತು ಮಂತ್ರದ ಮಾತುಗಳೆಲ್ಲ ಇರುವದಿಲ್ಲ. ಇಲ್ಲಿಯ ಭಾಷ್ಯದ ವಿಷಯಕ್ಕೆ ಬ್ರಹ್ಮಾನಂದಗಿರಿವ್ಯಾಖ್ಯಾನಕಾರರು ಪಟ್ಟಿರುವ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ಕೊಟ್ಟಿರುತ್ತದೆ.

[ ಭಾಷ್ಯ ]

ಈ ಆತ್ಮನು ಹುಟ್ಟುವದಿಲ್ಲ ಎಂದರೆ ಉತ್ಪತ್ತಿಯಾಗುವದಿಲ್ಲ; ಆತ್ಮನಲ್ಲಿ ಹುಟ್ಟು ಪದೆಂಬ ವಸ್ತುವಿಕಾರವು ಇಲ್ಲವೆಂದರ್ಥ. 'ಸಾಯುವದೂ ಇಲ್ಲ.' (ಇಲ್ಲಿ) 'ವಾ' ಎಂಬ ಮಾತು 'ಮತ್ತು' ಎಂಬ ಅರ್ಥದಲ್ಲಿ ಬಂದಿರುತ್ತದೆ. 'ಸಾಯುವದೂ ಇಲ್ಲ'– ಎಂಬದರಿಂದ ವಿನಾಶ ಎಂಬ ಕೊನೆಯ ವಿಕಾರವು (ಆತ್ಮನಲ್ಲಿ) ಇಲ್ಲವೆಂದು ಹೇಳಿದಂತಾಯಿತು. 'ಎಂದೆಂದಿಗೂ' ಎಂಬ ಮಾತನ್ನು– 'ಎಂದೆಂದಿಗೂ ಹುಟ್ಟುವದಿಲ್ಲ' 'ಎಂದೆಂದಿಗೂ ಸಾಯುವದಿಲ್ಲ' ಎಂದೀ ರೀತಿಯಲ್ಲಿ ಎಲ್ಲಾ ವಿಕಾರಪ್ರತಿಷೇಧಗಳಿಗೂ ಸೇರಿಸಿಕೊಳ್ಳಬೇಕು. (ಹುಟ್ಟುಸಾವುಗಳು ಇವನಿಗೆ) ಏಕೆ (ಇಲ್ಲ)ವೆಂದರೆ, ಈ ಆತ್ಮನು (ಮೊದಲು) ಇದ್ದು ಆಮೇಲೆ ಇಲ್ಲವಾಗುವದೂ ಇಲ್ಲ; ಎಂದರೆ (ಮೊದಲು) ಇರುವಿಕೆ ಎಂಬ ವಿಕಾರವನ್ನು ಅನುಭವಿಸಿ ಆಮೇಲೆ ಮತ್ತೆ ಅಭಾವವನ್ನು ಹೊಂದುವದಿಲ್ಲ. ಆದ್ದರಿಂದ (ಇವನು) ಸಾಯುವದಿಲ್ಲ. ಯಾವನು ಮೊದಲಿದ್ದು ಆಮೇಲೆ ಇಲ್ಲವಾಗುವನೋ ಅವನನ್ನಲ್ಲವೆ ಲೋಕದಲ್ಲಿ* 'ಸಾಯುವನು' ಎನ್ನುವದು? ('ಇಲ್ಲವಾಗುವದೂ ಇಲ್ಲ' ಎಂಬಲ್ಲಿ) ವಾ (ಊ), ನ (ಇಲ್ಲ)– ಎಂಬ ಮಾತುಗಳಿರುವದರಿಂದ 'ಈ ಆತ್ಮನು ದೇಹದಂತೆ ಮೊದಲು ಇಲ್ಲದೆ ಇದ್ದು ಮತ್ತೆ ಉಂಟಾಗುವದೂ ಇಲ್ಲ; ಆದ್ದರಿಂದ ಹುಟ್ಟುವದೂ ಇಲ್ಲ' (ಎಂದೂ ಇಟ್ಟುಕೊಳ್ಳಬೇಕು). ಯಾವನು ಮೊದಲು ಇಲ್ಲದೆ ಇದ್ದು ಆಮೇಲೆ ಉಂಟಾಗುವನೋ ಅವನನ್ನಲ್ಲವೆ 'ಹುಟ್ಟುತ್ತಾನೆ' ಎನ್ನುವದು? ಆತ್ಮನು ಹೀಗಿಲ್ಲ. ಆದ್ದರಿಂದ ಅವನು ಹುಟ್ಟುವದಿಲ್ಲ.

ಹೀಗಿರುವದರಿಂದ ಇವನು ಅಜನು. ಸಾಯುವದಿಲ್ಲವಾದ್ದರಿಂದ (ಇವನು) ನಿತ್ಯನೂ ಆಗಿರುವನು. ಮೊದಲಿನ ಮತ್ತು ಕೊನೆಯ ವಿಕಾರಗಳೆರಡನ್ನೂ ಇಲ್ಲವೆಂದ ಮೇಲೆ ಎಲ್ಲಾ ವಿಕ್ರಿಯೆಗಳನ್ನೂ ಇಲ್ಲವೆಂದಂತೆಯೇ ಆಗುತ್ತದೆಯಾದರೂ ಇಲ್ಲ ಹೇಳದೆ ಇರುವ ಯೌವನವೇ ಮುಂತಾದ ಎಲ್ಲಾ ವಿಕಾರಗಳನ್ನೂ ಇಲ್ಲವೆಂದಂತೆ ಆಗುವದಕ್ಕಾಗಿ ನಡುವಣ ವಿಕಾರಗಳನ್ನೂ ಅವುಗಳನ್ನು ಹೇಳುವ ಆಯಾ ಮಾತುಗಳಿಂದಲೇ ನಿರಾಕರಣೆ ಮಾಡಬೇಕೆಂದು 'ಶಾಶ್ವತನು' ಮುಂತಾಗಿ ಹೇಳಿರುತ್ತಾನೆ. ಶಾಶ್ವತ ಎಂಬುದರಿಂದ ಅಪಕ್ಷಯವೆಂಬ ವಿಕಾರವನ್ನು ಇಲ್ಲವೆಂದಿರುತ್ತದೆ. ಶಾಶ್ವತನು ಎಂದರೆ ಯಾವಾಗಲೂ ಇರುವವನು. (ಆತ್ಮನಿಗೆ) ಅವಯ

---

*. ಇರುವ ವಸ್ತುವಿಗೆ ನಾಶವಿಲ್ಲ, ಇಲ್ಲದ್ದು ಹುಟ್ಟಲಾರದು– ಎಂಬುದು ಪರಮಾರ್ಥ ದೃಷ್ಟಿಯಿಂದ ಹೇಳಿದ್ದು. ಸಾವು ಮುಂತಾದವುಗಳನ್ನು ಇಲ್ಲಿ ನಿಷೇಧಿಸಿರುವದು ಲೌಕಿಕರ ಅಭಿಪ್ರಾಯದಿಂದ. ವ್ಯವಹಾರದಲ್ಲಿ ಜನರು ಆತ್ಮನಲ್ಲಿ ಆರೋಪಿಸಿರುವ ವಿಕಾರಗಳು ನಿಜವಾಗಿ ಆತ್ಮನಲ್ಲಿಲ್ಲವೆಂಬುದೇ ಇಲ್ಲಿ ತಿಳಿಯಬೇಕಾದದ್ದು.

ವಗಳಿಲ್ಲದ್ದರಿಂದ (ಇವನು) ತನ್ನ ರೂಪದಿಂದ ಕ್ಷಯವಾಗುವದಿಲ್ಲ; ಗುಣಗಳಿಲ್ಲದ್ದರಿಂದ ಗುಣಗಳ ಕ್ಷಯದಿಂದಲೂ ಕ್ಷಯವಾಗುವದಿಲ್ಲ. ಕ್ಷಯಕ್ಕೆ ವಿರುದ್ಧವಾದ 'ವೃದ್ಧಿ' ಎಂಬ ವಿಕಾರವನ್ನೂ 'ಪುರಾಣನು' ಎಂಬ ಮಾತು ನಿರಾಕರಿಸುತ್ತದೆ. ಅವಯವಗಳು ಒಂದು ಸೇರುವದರಿಂದ ಯಾವದು ಹೆಚ್ಚಿಕೊಳ್ಳುವದೋ ಅದು ಬೆಳೆಯುತ್ತದೆಯೆಂದೂ ಹೊಸದೆಂದೂ ಎನ್ನಿಸಿಕೊಳ್ಳುತ್ತದೆ; ಆದರೆ ಈ ಆತ್ಮನು ಅವಯವಗಳಿಲ್ಲದವನಾದ್ದರಿಂದ ಮೊದಲೂ ಹೊಸಬನೆ. ಆದ್ದರಿಂದ (ಇವನು) 'ಪುರಾಣನು' ಎಂದರೆ ಇವನು ವೃದ್ಧಿಯನ್ನು* ಹೊಂದುವದಿಲ್ಲ–ಎಂದರ್ಥ. ಮತ್ತು ಶರೀರವು ಹತವಾಗುತ್ತಿದ್ದರೂ ಎಂದರೆ ಪರಿಣಾಮವಾಗುತ್ತಿದ್ದರೂ ತಾನು ಹತನಾಗುವದಿಲ್ಲ, ಪರಿಣಾಮವಾಗುವದಿಲ್ಲ. ಪುನರುಕ್ತಿಯಾಗದೆ ಇರುವದಕ್ಕಾಗಿ ಇಲ್ಲಿ (ನ ಹನ್ಯತೇ ಎಂಬಲ್ಲಿ) ಹನ ಧಾತುವಿಗೆ ವಿಪರಿಣಾಮ-ಎಂಬ ವಿಕಾರವೇ ಅರ್ಥವೆಂದು† ಇಟ್ಟುಕೊಳ್ಳಬೇಕು; 'ನ ಹನ್ಯತೇ' ಎಂದರೆ ಪರಿಣಾಮವಾಗುವದಿಲ್ಲ ಎಂದರ್ಥ.

ಈ ಮಂತ್ರದಲ್ಲಿ ಲೋಕದ ವಸ್ತುಗಳಿಗಾಗುವ ಆರು‡ ಭಾವವಿಕಾರಗಳು ಆತ್ಮನಲ್ಲಿರುವದಿಲ್ಲವೆಂದು ಹೇಳಿರುತ್ತದೆ ಆತ್ಮನಲ್ಲಿ ಯಾವ ವಿಧವಾದ ವಿಕಾರವೂ ಇಲ್ಲ– ಎಂದು ವಾಕ್ಯದ (ಒಟ್ಟು) ಅರ್ಥವು. ಹೀಗಿರುವದರಿಂದ "ಅವರಿಬ್ಬರೂ ಅರಿಯರು" (೨–೧೯) ಎಂದು ಹಿಂದಿನ ಮಂತ್ರಕ್ಕೂ ಇದಕ್ಕೂ ಸಂಬಂಧವನ್ನು (ಮಾಡಿಕೊಳ್ಳಬೇಕು).

'ಈತನು ಕೊಲ್ಲುವವನೆಂದು ಯಾವನು ತಿಳಿಯುತ್ತಾನೋ' (೨-೧೯) ಎಂಬ ಮಂತ್ರದಿಂದ 'ಕೊಲ್ಲುವದೆಂಬ ಕ್ರಿಯೆಗೆ ಆತ್ಮನು ಕರ್ತೃವೂ ಅಲ್ಲ, ಕರ್ಮವೂ ಅಲ್ಲ' ಎಂದು ಹೇಳಿ, 'ಹುಟ್ಟುವದೂ ಇಲ್ಲ' (೨-೨೦) ಎಂಬ (ಮಂತ್ರ)ದಲ್ಲಿ ಆತ್ಮನು ನಿರ್ವಿಕಾರನೆಂಬುದಕ್ಕೆ ಹೇತುವನ್ನು ತಿಳಿಸಿ, ಈಗ ಹಿಂದೆ ಹೇಳಿದ ವಿಷಯವನ್ನು ಉಪಸಂಹಾರ ಮಾಡುತ್ತಾನೆ:—

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**

**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ॥ ೨೧ ॥**

---

*. ಆತ್ಮನು ಬೇರೆ ಬೇರೆ ಅನುಭವಗಳಿಂದ ವೃದ್ಧಿಹೊಂದುತ್ತಲಿರುವನೆಂದು ಜನರು ಭಾವಿಸುವರು. ನಿಜವಾಗಿ ಹಾಗಿಲ್ಲವೆಂದು ಭಾವ.

†. ಧಾತುಗಳಿಗೆ ಅನೇಕಾರ್ಥಗಳುಂಟು. ಇಲ್ಲಿ ಪರಿಣಾಮ– ಎಂಬುದು ಅರ್ಥವು.

‡. ಅಸ್ತಿ (ಇದೆ), ಜಾಯತೇ (ಹುಟ್ಟುತ್ತದೆ), ವರ್ಧತೇ (ಬೆಳೆಯುತ್ತದೆ), ಪರಿಣಮತೇ (ಮಾರ್ಪಡುತ್ತದೆ), ಅಪಕ್ಷೀಯತೇ (ಸವೆಯುತ್ತದೆ), ನಶ್ಯತಿ (ಹಾಳಾಗುತ್ತದೆ) – ಇವೇ ಆರು ವಿಕಾರಗಳು.

೨೧. ಎಲೈ ಪಾರ್ಥನೆ, ಈತನು ಅವಿನಾಶಿಯೆಂದೂ ನಿತ್ಯನೆಂದೂ ಅಜನೆಂದೂ ಅವ್ಯಯನೆಂದೂ ಯಾವನು ತಿಳಿದಿರುತ್ತಾನೋ ಆ ಪುರುಷನು ಯಾವನನ್ನು ಹೇಗೆ ಕೊಲ್ಲಿಸುತ್ತಾನೆ? ಯಾವನನ್ನು (ಹೇಗೆ) ಕೊಲ್ಲುತ್ತಾನೆ?

[ ಭಾಷ್ಯ ]

ಈತನು 'ಅವಿನಾಶಿ' ಎಂದರೆ ಕೊನೆಯುದಾದ (ನಾಶವಾಗುವದೆಂಬ) ವಸ್ತು ವಿಕಾರವು ಇಲ್ಲದವನೆಂದೂ 'ನಿತ್ಯನು' ಎಂದರೆ ಮಾರ್ಪಾಡಿಲ್ಲದವನೆಂದೂ 'ಯಾವನು ತಿಳಿದಿರುತ್ತಾನೋ'-ಎಂದು ಅನ್ವಯಮಾಡಿಕೊಳ್ಳಬೇಕು. 'ಈತನು' ಎಂದರೆ ಹಿಂದಿನ ಮಂತ್ರದಲ್ಲಿ ಹೇಳಿದ ಸ್ವರೂಪವುಳ್ಳ (ಆತ್ಮನು) 'ಅಜನೆಂದೂ' ಎಂದರೆ ಹುಟ್ಟಿಲ್ಲದವನೆಂದೂ, 'ಅವ್ಯಯನೆಂದೂ' ಎಂದರೆ ಅಪಕ್ಷಯ (ಸವೆಯುವದು ಎಂಬ ವಿಕಾರ)ವಿಲ್ಲದವನೆಂದೂ ( ಯಾವನು ತಿಳಿದಿರುತ್ತಾನೋ, ) 'ಆ ಪುರುಷನು' ಎಂದರೆ ಪ್ರಕೃತನಾದ ಆ ಜ್ಞಾನಿಯು, 'ಹೇಗೆ' ಎಂದರೆ ಯಾವ ಪ್ರಕಾರದಿಂದ ಯಾವನನ್ನು 'ಕೊಲ್ಲುವನು,' ಕೊಲ್ಲುವದೆಂಬ ಕ್ರಿಯೆಯನ್ನು ಮಾಡುವನು? ಮತ್ತು ಹೇಗೆ 'ಕೊಲ್ಲಿಸುವನು' ಎಂದರೆ ಕೊಲ್ಲುವಾತನನ್ನು ಪ್ರೇರಿಸುವನು? ಹೇಗೂ ಯಾರನ್ನೂ ಕೊಲ್ಲುವದಿಲ್ಲ, ಹೇಗೂ ಯಾರನ್ನೂ ಕೊಲ್ಲಿಸುವದಿಲ್ಲ ಎಂದು ಎರಡು ಕಡೆಯಲ್ಲಿಯೂ ಆಕ್ಷೇಪಾರ್ಥವನ್ನು ಮಾಡಿಕೊಳ್ಳಬೇಕು; ಏಕೆಂದರೆ ಪ್ರಶ್ನಾರ್ಥವು* ಹೊಂದುವದಿಲ್ಲ. ಅವಿಕ್ರಿಯನಾಗಿರುವದೆಂಬ ಹೇತುವು (ಎಲ್ಲಾ ಕ್ರಿಯೆಯ ನಿಷೇಧಕ್ಕೂ) ಸಮಾನವಾಗಿರುವದರಿಂದ ಜ್ಞಾನಿಗೆ ಯಾವ ಕರ್ಮವೂ† ಇಲ್ಲವೆಂಬುದೇ ಈ ಪ್ರಕರಣದಲ್ಲಿ ಭಗವಂತನ ಅಭಿಪ್ರಾಯವು. (ಹೀಗಿರುವಾಗ 'ಹೇಗೆ ಕೊಂದಾನು?' ಎಂದು) ಕೊಲ್ಲುವ ಕ್ರಿಯೆಯನ್ನು ಮಾತ್ರ ಆಕ್ಷೇಪಿಸಿರುವದು ಉದಾಹರಣೆಗಾಗಿ ಹೇಳಿದ್ದೆಂದು ತಿಳಿಯಬೇಕು.

(ಆಕ್ಷೇಪ) ಜ್ಞಾನಿಗೆ ಕರ್ಮವಿಲ್ಲವೆಂಬುದಕ್ಕೆ ಭಗವಂತನು ಯಾವ ಹೇತುವನ್ನು ಕಂಡು "ಇಂಥ ಪುರುಷನು ಹೇಗೆ (ಕೊಂದಾನು?)" ಎಂದು ಕರ್ಮಗಳನ್ನೆಲ್ಲ ಆಕ್ಷೇಪಿಸಿರುತ್ತಾನೆ?

(ಪರಿಹಾರ) ಆತ್ಮನು ಅವಿಕ್ರಿಯನು– ಎಂಬುದೇ ಯಾವ ಕರ್ಮಗಳೂ (ಜ್ಞಾನಿಗೆ) ಸಂಭವಿಸದೆ ಇರುವದಕ್ಕೆ (ಸಾಕಾದ) ಕಾರಣವೆಂದು (ನಾವು ಮೊದಲೆ) ಹೇಳಿಲ್ಲವೆ?

---

*. ಹೇಗೆ ಕೊಲ್ಲುವನು? ಎಂದು ಪ್ರಶ್ನೆಯಲ್ಲ, 'ಕೊಲ್ಲಲಾರನು' ಎಂಬುದೇ ಅಭಿಪ್ರಾಯ.

†. ಕರ್ಮವೆಂದರೆ ಕೆಲಸವು. ಕೆಲಸಕ್ಕೆ ಕರ್ತೃವಾಗುವವನು ಆ ಕೆಲಸದಿಂದ ವಿಕಾರವನ್ನು ಹೊಂದುವನು. ವಿಕಾರವಿಲ್ಲದವನು ಯಾವ ಕೆಲಸವನ್ನೂ ಮಾಡುವದಿಲ್ಲವೆಂಬುದು ಸ್ಪಷ್ಟವು.

(ಆಕ್ಷೇಪ) ಹೌದು, ಹೇಳಿದಿರಿ. ಆದರೆ ಅದು ತಕ್ಕ ಕಾರಣವಲ್ಲ. ಏಕೆಂದರೆ ಜ್ಞಾನಿಯು ಬೇರೆಯಾಗಿರುತ್ತಾನೆ, ಆತ್ಮನು* ಅವಿಕ್ರಿಯನಾಗಿರುತ್ತಾನೆ. ಮೋಟುಮರದಲ್ಲಿ ಯಾವ ವಿಕಾರವೂ ಇಲ್ಲ— ಎಂದು ತಿಳಿದವನಿಗೆ (ಯಾವ) ಕರ್ಮವೂ ಸಂಭವಿಸುವದಿಲ್ಲ† ಎನ್ನುವದಕ್ಕೆ ಆಗಲಾರದಷ್ಟೆ?

(ಪರಿಹಾರ) ಹಾಗಲ್ಲ; ಏಕೆಂದರೆ ಜ್ಞಾನಿಯೇ ಆತ್ಮನು. ದೇಹವೇ ಮುಂತಾದವುಗಳ ಗುಂಪಿಗೆ ಜ್ಞಾನವು (ಸಂಬಂಧಿಸಿರುವದಿಲ್ಲ); ಆದ್ದರಿಂದ ಪರಿಶೇಷ ನ್ಯಾಯದಿಂದ‡ (ಅವುಗಳಿಂದ) ಕೂಡಿಲ್ಲದ ಆತ್ಮನೇ ಜ್ಞಾನಿಯು. ಅವನು ವಿಕ್ರಿಯೆಗಳಿಲ್ಲದವನಾಗಿರುವದರಿಂದ ಆ ಜ್ಞಾನಿಗೆ (ಯಾವ) ಕರ್ಮವೂ ಸಂಭವಿಸುವದಿಲ್ಲ. ಆದ್ದರಿಂದ ಆ 'ಪುರುಷನು (ಹೇಗೆ ಕೊಂದಾನು)'- ಎಂದು (ಕರ್ಮಗಳನ್ನು) ಆಕ್ಷೇಪಿಸಿದ್ದು ಸರಿಯೆ. (ಆತ್ಮನು) ಅವಿಕ್ರಿಯನೇ ಆಗಿದ್ದರೂ ಬುದ್ಧಿಯೇ ಮುಂತಾದವುಗಳಿಂದರಿತ ಶಬ್ದವೇ ಮುಂತಾದ ವಿಷಯಗಳನ್ನು ಆತ್ಮನೇ ಅರಿಯುವನೆಂದು (ಆತ್ಮಾನಾತ್ಮಗಳನ್ನು) ಪಿಂಗಡಿಸಿಕೊಳ್ಳದ ಜ್ಞಾನವೆಂಬ ಬುದ್ಧಿವೃತ್ತಿರೂಪವಾದ **ಅವಿದ್ಯೆಯಿಂದ**§ ಹೇಗೆ ಕಲ್ಪಿಸಲ್ಪಡುತ್ತಾನೋ ಹಾಗೆಯೇ ನಿಜವಾಗಿ ಅವಿಕ್ರಿಯನಾಗಿಯೇ ಇದ್ದುಕೊಂಡಿರುವ ಆತ್ಮನು ಆತ್ಮಾನಾತ್ಮ

---

*. ಆತ್ಮನು ಅವಿಕ್ರಿಯನು ಎಂದು ತಿಳಿದ ಮಾತ್ರಕ್ಕೆ ಜ್ಞಾನಿಗೆ ಕರ್ಮವಿಲ್ಲವೆನ್ನುವದೇಕೆ? ಎಂದು ಪ್ರಶ್ನೆ. ಜೀವನು ಬೇರೆ, ಅವಿಕ್ರಿಯನಾದ ಪರಮಾತ್ಮನು ಬೇರೆ— ಎಂಬುವರ ಮತದಲ್ಲಿ ಈ ಶ್ಲೋಕಕ್ಕೆ ಸಮಂಜಸವಾದ ಅಭಿಪ್ರಾಯವನ್ನು ಹೇಳುವದಕ್ಕಾಗುವದಿಲ್ಲವೆಂಬದನ್ನು ಈ ಪೂರ್ವಪಕ್ಷದಿಂದ ಭಾಷ್ಯಕಾರರು ಸ್ಪಷ್ಟಗೊಳಿಸಿದಾರೆ.

†. (ಅ||) ಪಾಠದಲ್ಲಿ 'ನ ಸಂಭವತಿ' ಎಂದು ತಿದ್ದಿಕೊಳ್ಳಬೇಕು.

‡. ದೇಹ, ಪ್ರಾಣ, ಇಂದ್ರಿಯ— ಮುಂತಾದವುಗಳನ್ನು ಜ್ಞಾನಿ ಎಂದು ಕರೆಯುವದಕ್ಕಿಲ್ಲವಾದ್ದರಿಂದ, ಪರಿಶೇಷವಾದ—ಎಂದರೆ ಇವುಗಳು ಹೋಗುತ್ತಾ ಉಳಿದ— ಆತ್ಮನೇ ಜ್ಞಾನಿ; ದೇಹಾದಿಗಳು ಜಡವಾದ್ದರಿಂದ ಅವುಗಳು ಜ್ಞಾನಿಯಾಗಲಾರವು.

§. ಆತ್ಮನು ಜ್ಞಾನಿಯೂ ಅಲ್ಲ, ಅಜ್ಞಾನಿಯೂ ಅಲ್ಲ. ವಿಕಾರವನ್ನು ಹೊಂದುತ್ತಿರುವ ಬುದ್ಧಿವೃತ್ತಿಯೆಂಬ ಉಪಾಧಿಯಿಂದ ಜ್ಞಾನಿಯೆಂದೂ ಅಜ್ಞಾನಿಯೆಂದೂ ವ್ಯವಹಾರವುಂಟಾಗುತ್ತದೆ. ಹೇಗೆಂದರೆ ಆತ್ಮಾನಾತ್ಮವಿವೇಕರೂಪವಾದ ಬುದ್ಧಿವೃತ್ತಿಯು 'ವಿದ್ಯೆ', 'ಜ್ಞಾನ'— ಎಂದು ವ್ಯವಹರಿಸಲ್ಪಡುತ್ತದೆ; ಆ ಉಪಾಧಿಯಿಂದ ಆತ್ಮನು ಜ್ಞಾನಿಯೆನಿಸುವನು. ಆತ್ಮಾನಾತ್ಮವಿವೇಕವಿಲ್ಲದೆ ಅನಾತ್ಮಧರ್ಮಗಳನ್ನು ಆತ್ಮನಲ್ಲಿ ಆರೋಪಮಾಡುವ ಬುದ್ಧಿವೃತ್ತಿಯು 'ಅವಿದ್ಯೆ' 'ಅಜ್ಞಾನ' ಎಂದು ವ್ಯವಹರಿಸಲ್ಪಡುತ್ತದೆ; ಆ ಉಪಾಧಿಯಿಂದ ಆತ್ಮನು ಅಜ್ಞಾನಿಯೆನಿಸುವನು.

ಗಳನ್ನು ವಿಂಗಡಿಸುವ ಜ್ಞಾನವೆಂಬ ಬುದ್ಧಿವೃತ್ತಿರೂಪವಾದ ಅಸತ್ಯರೂಪವಾಗಿಯೇ* ಇರುವ ವಿದ್ಯೆಯಿಂದ 'ಜ್ಞಾನಿ' ಎನ್ನಿಸಿಕೊಳ್ಳುತ್ತಾನೆ.

ಜ್ಞಾನಿಗೆ ಕರ್ಮವು ಸಂಭವಿಸುವದಿಲ್ಲವೆಂದು ಹೇಳಿದ್ದರಿಂದ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳು ಯಾವ ಯಾವವು ಇವೆಯೋ ಅವೆ(ಲ್ಲ) ಅಜ್ಞಾನಿಗೋಸ್ಕರ ವಿಹಿತವಾಗಿವೆ ಎಂಬದು ಭಗವಂತನ ನಿಶ್ಚಯವೆಂದು ಗೊತ್ತಾಗುತ್ತದೆ.

(ಆಕ್ಷೇಪ) ಜ್ಞಾನವೂ ಅಜ್ಞಾನಿಗೋಸ್ಕರವಾಗಿಯೇ ವಿಹಿತವಾಗಿರುತ್ತದೆಯಲ್ಲವೆ? † ಏಕೆಂದರೆ ಯಾವಾತನಿಗೆ ಜ್ಞಾನವುಂಟಾಗಿಬಿಟ್ಟಿರುವದೋ ಆತನಿಗೆ ಜ್ಞಾನವನ್ನು ಹೇಳುವದೆಂಬದು ಅರೆದ (ಹಿಟ್ಟನ್ನೇ) ಅರೆಯುವಂತೆ ವ್ಯರ್ಥವಾಗುವದು. ಹೀಗಿರುವಲ್ಲಿ ಅಜ್ಞಾನಿಗೆ ಕರ್ಮಗಳನ್ನು ವಿಧಿಸಿದೆಯೆಂದೂ ಜ್ಞಾನಿಗಾಗಿ(ವಿಧಿಸಿ)ಲ್ಲವೆಂದೂ ವಿಶೇಷವನ್ನು (ಹೇಳುವದು) ಯುಕ್ತವಲ್ಲ.

(ಪರಿಹಾರ) ಹಾಗಲ್ಲ. ಏಕೆಂದರೆ ಮಾಡಬೇಕಾದದ್ದಿರುವದು, ಇಲ್ಲದ್ದು-ಎಂಬ ವಿಶೇಷವನ್ನು (ಹೇಳ)ಬಹುದು, (ಹೇಗೆಂದರೆ-) ಅಗ್ನಿಹೋತ್ರವೇ ಮುಂತಾದ ವಿಧಿಗಳ ಅರ್ಥವನ್ನು ತಿಳಿದುಕೊಂಡ ಮೇಲೆ ಅನೇಕ ಸಾಮಗ್ರಿಗಳನ್ನು‡ ಕೂಡಿಹಾಕಿಕೊಂಡು ಆ ಅಗ್ನಿಹೋತ್ರವೇ ಮುಂತಾದ ಕರ್ಮಗಳನ್ನು ಮಾಡಬೇಕಾಗಿರುವದೆಂದೂ 'ನಾನು ಕರ್ತನು, ನಾನು ಮಾಡತಕ್ಕ (ಕರ್ಮವುಂಟು)-ಎಂದೂ ಈ ಪರಿಯಾಗಿ ತಿಳಿವುಳ್ಳ ಅಜ್ಞಾನಿಗೆ ಹೇಗೆ ಮಾಡತಕ್ಕದ್ದಿರುವದೋ 'ಆತ್ಮನು ಹುಟ್ಟುವದಿಲ್ಲ' ( ೨-೨೦ ) ಎಂದು ಮುಂತಾಗಿ ಹೇಳಿರುವ ಆತ್ಮಸ್ವರೂಪವನ್ನು ತಿಳಿಸುವ ವಾಕ್ಯದ ಅರ್ಥವನ್ನು ತಿಳಿದುಕೊಂಡ ಮೇಲೆಯೂ ಅದರಂತೆ ಯಾವದನ್ನೂ ಮಾಡಬೇಕಾದದ್ದಿರುವದಿಲ್ಲ;§ 'ನಾನು (ಕರ್ಮಗಳನ್ನು) ಮಾಡುವವನೂ ಅಲ್ಲ, (ಅವುಗಳ ಫಲವನ್ನು) ಅನುಭವಿಸುವವನೂ ಅಲ್ಲ' ಎಂದು ಮುಂತಾಗಿ- ಆತ್ಮನು ಒಬ್ಬನು, ಅಕರ್ತೃ ಎಂಬದೇ ಮುಂತಾದ ವಿಷಯ

---

*. ವಿದ್ಯೆ, ಅವಿದ್ಯೆ- ಎಂಬ ಬುದ್ಧಿವೃತ್ತಿಗಳು ಪರಮಾರ್ಥವಾಗಿರುವವಲ್ಲ ; ಇವು ಜ್ಞಾನಿ, ಅಜ್ಞಾನಿ- ಎಂಬ ವ್ಯವಹಾರಕ್ಕೆ ಮಾತ್ರ ಕಾರಣವಾಗಿವೆ. ಆದ್ದರಿಂದ ಆತ್ಮನು ನಿರ್ವಿಕಾರಿ ಎಂಬ ಪ್ರಕೃತಾರ್ಥಕ್ಕೆ ಹಾನಿಯೂ ಇಲ್ಲ .

†. ಜ್ಞಾನವೂ ಕರ್ಮದಂತೆ ವಿಧಿಸುವದಕ್ಕೆ ತಕ್ಕದ್ದೆಂದು ಪೂರ್ವಪಕ್ಷಿಯು ಭಾವಿಸಿರುತ್ತಾನೆ.

‡. ಕರ್ಮಕ್ಕೆ ಬೇಕಾದ ಸಾಧನಗಳು.

§. ವಾಕ್ಯಾರ್ಥದಿಂದಲೇ ತತ್ತ್ವಸಾಕ್ಷಾತ್ಕಾರವಾಗುವದಿಲ್ಲವೆಂತಲೂ ವಾಕ್ಯಾರ್ಥವನ್ನು ತಿಳಿದುಕೊಂಡ ಮೇಲೂ ಧ್ಯಾನಾದಿಗಳನ್ನು ಮಾಡತಕ್ಕದ್ದು ಇದೆಯೆಂತಲೂ ಹೇಳುವ ಈಗಿನ ವೇದಾಂತಿಗಳ ಮತವು ಈ ಭಾಷ್ಯಕ್ಕೆ ವಿರುದ್ಧವಾಗಿದೆ.

ಗಳನ್ನು– ಅರಿತಿರುವದೇ ಹೊರತು ಮತ್ತೆ ಯಾವ (ಅರಿವೂ ಅವನಿಗೆ) ಆಗುವದಿಲ್ಲ. ಆದ್ದರಿಂದ ಈ ವಿಶೇಷವನ್ನು (ಹೇಳಿದ್ದು) ಯುಕ್ತವಾಗಿರುತ್ತದೆ.

ಯಾವನಾದರೆ 'ನಾನು ಮಾಡುವವನು' ಎಂದು ತನ್ನನ್ನು ತಿಳಿದುಕೊಳ್ಳುವನೋ ಅವನಿಗೆ 'ನಾನು ಇಂಥದನ್ನು ಮಾಡಬೇಕಾಗಿದೆ' ಎಂಬ ಬುದ್ಧಿಯು ಅವಶ್ಯವಾಗಿ ಹುಟ್ಟಿಯೇ ತೀರುವದು. ಆದರಿಂದ ಅವನು (ಕರ್ಮಕ್ಕೆ) ಅಧಿಕಾರಿಯಾಗಿರುವನು ; ಆದ್ದರಿಂದ ಅವನಿಗೆ ಕರ್ಮಗಳು ಸಂಭವಿಸುತ್ತವೆ. ಅವನು ಅಜ್ಞಾನಿಯು, ಏಕೆಂದರೆ 'ಅವರಿಬ್ಬರೂ ಅರಿಯರು' (೨–೧೯) ಎಂದು (ಮೊದಲು) ಹೇಳಿರುತ್ತದೆ; ಮತ್ತು ಮೇಲೆ ಹೇಳಿದಂಥ ಜ್ಞಾನಿಗೆ ಕರ್ಮ(ವಿರಬಹುದೆಂಬುದನ್ನು) 'ಆ ಪುರುಷನು ಹೇಗೆ ಕೊಂದಾನು ?' (೨–೨೧) ಎಂದು ಈಗ ಆಕ್ಷೇಪಿಸಿರುತ್ತದೆ.

ಆದ್ದರಿಂದ ಮೇಲೆ ಹೇಳಿದಂತೆ ಆತ್ಮನು ವಿಕಾರವಿಲ್ಲದವನೆಂದು ತಿಳಿದುಕೊಂಡಿರುವ ಜ್ಞಾನಿಗೂ [ಮುಮುಕ್ಷುವಿಗೂ] * ಸರ್ವಕರ್ಮಸಂನ್ಯಾಸದಲ್ಲಿಯೇ ಅಧಿಕಾರವು. ಆದ್ದರಿಂದಲೇ ಭಗವಂತನಾದ ನಾರಾಯಣನು ಜ್ಞಾನಿಗಳಾದ ಸಾಂಖ್ಯರನ್ನೂ ಅಜ್ಞಾನಿಗಳಾದ ಕರ್ಮಿಗಳನ್ನೂ ವಿಂಗಡಿಸಿ "ಸಾಂಖ್ಯರಿಗೆ ಜ್ಞಾನಯೋಗದಿಂದಲೂ ಯೋಗಿಗಳಿಗೆ ಕರ್ಮಯೋಗದಿಂದಲೂ" (೩–೩) ಎಂದು ಎರಡು ನಿಷ್ಠೆಗಳನ್ನು ಹೇಳಿರುತ್ತಾನೆ. ಆದ್ದರಿಂದಲೇ ಭಗವದ್ವ್ಯಾಸರು ತಮ್ಮ ಮಗನಿಗೆ 'ಇವೆರಡು ದಾರಿಗಳು'† (ಭಾ॥) ಎಂದು ಮುಂತಾಗಿ ಹೇಳಿರುತ್ತಾರೆ. ಆದ್ದರಿಂದಲೇ 'ಕ್ರಿಯಾಮಾರ್ಗವೇ ಮೊದಲು ಆಮೇಲೆ ಸಂನ್ಯಾಸವು" (ಶ್ರು)‡ ಎಂದು (ವಚನವಿದೆ). ಈ ವಿಂಗಡವನ್ನೇ " ತತ್ತ್ವವನ್ನರಿಯದೆ ಅಹಂಕಾರದಿಂದ ಮೂಢವಾದ ಮನಸ್ಸುಳ್ಳವನು 'ನಾನು ಕರ್ತ'ನೆಂದು ತಿಳಿದುಕೊಳ್ಳುತ್ತಾನೆ, (೩–೨೭) ಆದರೆ ತತ್ತ್ವವನ್ನರಿತವನು 'ನಾನು ಮಾಡುವದಿಲ್ಲ'– ಎಂದು (ತಿಳಿಯುತ್ತಾನೆ)" (೫–೨೮) ಎಂತಲೂ "ಎಲ್ಲಾ ಕರ್ಮಗಳನ್ನೂ ಮನಸ್ಸಿ

---

*. 'ಮುಮುಕ್ಷೋಶ್ಚ' ಎಂಬ ಮಾತು ಮುದ್ರಿತವಾದ ಎಲ್ಲಾ ಪುಸ್ತಕಗಳಲ್ಲಿಯೂ ಕಂಡು ಬರುತ್ತದೆ. ಆದರೆ ಈ ಪ್ರಕರಣದಲ್ಲಿ ಜ್ಞಾನಿ, ಅಜ್ಞಾನಿ– ಎಂಬ ಎರಡು ಭಾಗವೇ ಬೇಕಾಗಿರುತ್ತದೆ. ಈ ಮಾತು ಹೇಗೋ ಇಲ್ಲಿ ಲೇಖಕರ ಪ್ರಮಾದದಿಂದ ಸೇರಿಕೊಂಡಿದೆ ಎಂದು ಭಾವಿಸಬೇಕಾಗಿದೆ. ಮುಮುಕ್ಷುವಿಗೆ ಹೇಳುವ ಸಂನ್ಯಾಸವು ಗೌಣವೆಂಬದು ಮುಂದೆ ಗೊತ್ತಾಗುವದು.

†. ದ್ವಾವಿಮಾವಥ ಪಂಥಾನೌ ಯತ್ರ ವೇದಾಃ ಪ್ರತಿಷ್ಠಿತಾಃ।
ಪ್ರವೃತ್ತಿಲಕ್ಷಣೋ ಧರ್ಮೋ ನಿವೃತ್ತೌ ಚ ಸುಭಾಷಿತಃ ॥
( ನಿವೃತ್ತಿಶ್ಚ ವಿಭಾವಿತಃ ) (ಭಾ॥ ಶಾಂ॥ ೨೪೧–೬)

‡. ಈ ಶ್ರುತಿಯು ಯಾವದೋ ಗೊತ್ತಿಲ್ಲ. ಈಶಾವಾಸ್ಯ, ಬೃಹದಾರಣ್ಯಕ– ಈ ಉಪನಿಷತ್ತುಗಳ ಭಾಷ್ಯದಲ್ಲಿಯೂ ಆಚಾರ್ಯರು ಇದರ ಅರ್ಥವನ್ನು ಮಾತ್ರ ಉದಾಹರಿಸಿರುತ್ತಾರೆ.

ನಿಂದ ಸಂನ್ಯಾಸ ಮಾಡಿ ಇರುತ್ತಾನೆ'' (೫–೧೩) ಎಂದು ಮುಂತಾಗಿಯೂ ಭಗವಂತನು ಮುಂದೆಯೂ ಮತ್ತೆ ಮತ್ತೆ ತೋರಿಸಿಕೊಟ್ಟಿರುತ್ತಾನೆ.

ಹೀಗಿರುವಲ್ಲಿ ಕೆಲವರು ತಾವೇ ಪಂಡಿತರೆಂದು ತಿಳಿದುಕೊಂಡು ಹೇಳುತ್ತಾರೇನೆಂದರೆ– 'ಹುಟ್ಟುವದೇ ಮುಂತಾದ ಆರು ವಿಕಾರಗಳಿಲ್ಲದವನಾದ್ದರಿಂದ ವ್ಯಾಪಾರಾದಿಲ್ಲದವನಾಗಿಯೂ ಕರ್ತನಲ್ಲದೆಯೂ ಇರುವ ಒಬ್ಬನೇ ಒಬ್ಬನಾದ ಆತ್ಮನು ನಾನು'– ಎಂಬ ಜ್ಞಾನವು ಯಾರಿಗೂ ಹುಟ್ಟುವದಿಲ್ಲ; ಹಾಗೆ ಹುಟ್ಟುವದಾದರೆ (ಸರ್ವಕರ್ಮ)ಸಂನ್ಯಾಸವನ್ನು ಹೇಳಬಹುದಾಗಿತ್ತು.

(ಪರಿಹಾರ) ಆದರೆ ಇದು ಸರಿಯಲ್ಲ.* ಏಕೆಂದರೆ (ಅವರ ಪಕ್ಷದಲ್ಲಿ) 'ಹುಟ್ಟುವದಿಲ್ಲ' (೨–೨೦) ಎಂದು ಮುಂತಾಗಿರುವ ಶಾಸ್ತ್ರೋಪದೇಶವು ವ್ಯರ್ಥವಾಗಬೇಕಾಗುವದು. ಧರ್ಮಾಧರ್ಮಗಳುಂಟು ಎಂಬ ಜ್ಞಾನವೂ ಕರ್ತೃವಾದ (ಜೀವನು ಜನ್ಮಾಂತರದಲ್ಲಿ) ಬೇರೊಂದು ದೇಹಕ್ಕೆ ಸಂಬಂಧಪಟ್ಟಿರುವನೆಂಬ ಜ್ಞಾನವೂ ಶಾಸ್ತ್ರೋಪದೇಶದ ಬಲದಿಂದ ಹೇಗೆ ಉಂಟಾಗುತ್ತದೆಯೋ, ಅದರಂತೆ ಅದೇ ಆತ್ಮನು ಯಾವ ವಿಕಾರವೂ ಇಲ್ಲದವನೆಂದೂ ಅಕರ್ತೃವೆಂದೂ ಒಬ್ಬನೇ ಎಂದೂ ಶಾಸ್ತ್ರದಿಂದ ಏತಕ್ಕೆ ಜ್ಞಾನವು ಹುಟ್ಟುವದಿಲ್ಲ?† ಎಂದು ಅಂಥವರನ್ನು ಕೇಳಬೇಕು. ಆತ್ಮನು (ಯಾವ) ಕರಣಕ್ಕೂ ಗೋಚರನಾಗುವವನಲ್ಲವಾದ್ದರಿಂದ (ಇಂಥ ಜ್ಞಾನವು ಹುಟ್ಟಲಾರದು) ಎಂದರೆ (ಅದು) ಸರಿಯಲ್ಲ; ಏಕೆಂದರೆ 'ಮನಸ್ಸಿನಿಂದಲೇ ಅರಿತುಕೊಳ್ಳಬೇಕು' (ಬೃ) ಎಂದು ಶ್ರುತಿಯಲ್ಲಿರುತ್ತದೆ. ಶಾಸ್ತ್ರದ ಮತ್ತು ಆಚಾರ್ಯರ ಉಪದೇಶದಿಂದಲೂ ಶಮದಮಾದಿಗಳಿಂದಲೂ ಸಂಸ್ಕಾರವನ್ನು ಹೊಂದಿದ ಮನಸ್ಸು ಆತ್ಮನನ್ನು ಕಾಣುವದಕ್ಕೆ ಕರಣವಾಗಿರುವದು.‡ ಆದ್ದರಿಂದ ಆ (ಆತ್ಮನನ್ನು) ಅರಿತುಕೊಳ್ಳುವದಕ್ಕೆ ಅನುಮಾ

---

*. ಜ್ಞಾನವು ಹುಟ್ಟದೆ ಇರುವದಕ್ಕೆ ಕಾರಣವೇನು? (೧) ಕರಣದೋಷವೆ? (೨) ಪ್ರಮಾಣದ ಅಭಾವವೆ? (೩) ಹುಟ್ಟಿದರೂ ಪ್ರಯೋಜನವಿಲ್ಲವೆಂಬುದರಮೇಲೆ ಜನರು ತಿಳಿದುಕೊಳ್ಳುವದಕ್ಕೆ ಪ್ರವೃತ್ತರಾಗದೆ ಇರುವದೆ? ಇವು ಮೂರೂ ಪ್ರಕೃತದಲ್ಲಿ ಇಲ್ಲ.

†. ವಾಕ್ಯವು ಬೋಧಕವಲ್ಲವೆಂದರೆ ಕರ್ಮಬೋಧಕವಾಕ್ಯಕ್ಕೂ ಅಪ್ರಾಮಾಣ್ಯವು ಬರುವದು ಎಂದು ಅಭಿಪ್ರಾಯ. ಸ್ವರ್ಗಾದಿಗಳು ಪರೋಕ್ಷವಾಗಿರುವದರಿಂದ ಕರ್ಮಕಾಂಡದ ವಾಕ್ಯಗಳ ಪ್ರಮಾಣತೆಯ ವಿಷಯಕ್ಕೆ ಸಂದೇಹ ಬಂದರೂ ಬರಬಹುದು; ಅಪರೋಕ್ಷನಾಗಿರುವ ಆತ್ಮನ ವಿಷಯದಲ್ಲಿ ವೇದಕ್ಕೆ ಪ್ರಮಾಣತ್ವವು ಇಲ್ಲವೆಂಬುದು ತೀರ ಸಾಹಸವು.

‡. ಮನಸ್ಸು ಶುದ್ಧವಾಗಿದ್ದು ಶ್ರವಣಮನನಗಳನ್ನು ಮಾಡಿದಾತನಿಗೆ ಅವಶ್ಯವಾಗಿ ಜ್ಞಾನವಾಗಿಯೇ ತೀರುವದೆಂದು ಭಾವ. ಇಲ್ಲಿ ಬಂದಿರುವ 'ಕರಣ' ಎಂಬ ಮಾತಿಗೆ ಪ್ರಾಮುಖ್ಯವನ್ನು ಕೊಟ್ಟು ಈಚಿನ ವೇದಾಂತಿಗಳು ಹೊರಪಡಿಸಿರುವ ವಿವಾದದ ವಿಷಯದಲ್ಲಿ ಪರಿಶಿಷ್ಟವನ್ನು ನೋಡಿರಿ.

ನವೂ* ಆಗಮವೂ ಇದ್ದರೂ (ಆತ್ಮ)ಜ್ಞಾನವು ಹುಟ್ಟುವದಿಲ್ಲ ಎಂದು ಹೇಳು ವದು ಸಾಹಸದ ಮಾತು. ಜ್ಞಾನವು ಹುಟ್ಟಿದರೆ ತನಗೆ ವಿರುದ್ಧವಾದ ಅಜ್ಞಾನ ವನ್ನು ಅವಶ್ಯವಾಗಿ ಹೋಗಲಾಡಿಸಿಯೇ† ತೀರುವದು- ಎಂದು ಒಪ್ಪಬೇಕು. ಈ ಅಜ್ಞಾನವನ್ನೂ‡ ಹಿಂದೆ "ನಾನು ಕೊಲ್ಲುತ್ತೇನೆ, ನಾನು ಕೊಲ್ಲಲ್ಪಡುವೆನು, ಎಂಬವರಿಬ್ಬರೂ ಅರಿಯರು" (೨-೧೯) ಎಂಬ ವಾಕ್ಯದಿಂದ ತೋರಿಸಿಕೊಟ್ಟಿರು ತ್ತದೆ. ಆತ್ಮನು ಕೊಲ್ಲುವದೆಂಬ ಕ್ರಿಯೆಗೆ ಕರ್ತನೆಂದೂ ಕರ್ಮವೆಂದೂ ಪ್ರೇರಕ ನೆಂದೂ ತಿಳಿಯುವದು ಅಜ್ಞಾನದ ಫಲವೆಂದು ಇಲ್ಲಿ ಹೇಳಿರುತ್ತದೆ(ಯಾದರೂ) ಕರ್ತೃತ್ವವೇ ಮುಂತಾದದ್ದು ಅಜ್ಞಾನದಿಂದಾಗಿರುವದೆಂಬುದು ಎಲ್ಲ ಕ್ರಿಯೆಗ ಳಿಗೂ ಸಮಾನವಾಗಿರುತ್ತದೆ; ಏಕೆಂದರೆ ಆತ್ಮನು ವಿಕಾರವಿಲ್ಲದವನಾಗಿರುತ್ತಾನೆ. ವಿಕಾರವುಳ್ಳ ಕರ್ತೃವೇ ತನಗೆ ಕರ್ಮವಾಗಿರುವ ಮತ್ತೊಬ್ಬನನ್ನು ಮಾಡು ಎಂದು ಪ್ರೇರಿಸುತ್ತಾನೆ. ಆದ್ದರಿಂದ ಭಗವಂತನಾದ ವಾಸುದೇವನು "ಅವಿ ನಾಶಿಯೆಂದು ತಿಳಿದರೆ......ಆ ಪುರುಷನು ಹೇಗೆ (ಕೊಂದಾನು?)" ಎಂದು ಜ್ಞಾನಿಗೆ ಯಾವ ಕರ್ಮದಲ್ಲಿಯೂ ಕರ್ತೃತ್ವವಾಗಲಿ ಪ್ರೇರಕಕರ್ತೃತ್ವವಾಗಲಿ ಇರುವದಿಲ್ಲವೆಂದು ಒಂದು ಕ್ರಿಯೆಯನ್ನೂ ಬಿಡದೆ (ಎಲ್ಲಾ ಕ್ರಿಯೆಗಳಲ್ಲಿಯೂ ಕರ್ತೃತ್ವವನ್ನು) ನಿವಾರಣೆಮಾಡಿರುತ್ತಾನೆ. ಜ್ಞಾನಿಗೆ ಯಾವ ಕರ್ಮದಲ್ಲಿಯೂ ಅಧಿಕಾರವಿಲ್ಲವೆಂದು§ ತೋರಿಸಿಕೊಡಬೇಕೆಂಬುದೇ ಹೀಗೆ ನಿವಾರಣೆಮಾಡಿದ್ದರ ಉದ್ದೇಶವು.

(ಪ್ರಶ್ನೆ) ಹಾಗಾದರೆ ಜ್ಞಾನಿಗೆ ಮತ್ತೇತರಲ್ಲಿ ಅಧಿಕಾರ?

(ಉತ್ತರ) ಇದಕ್ಕೆ ಮೊದಲೇ 'ಜ್ಞಾನಯೋಗೇನ ಸಾಂಖ್ಯಾನಾಂ' (ಸಾಂ ಖ್ಯರಿಗೆ ಜ್ಞಾನಯೋಗದಿಂದಲೂ) ಎಂಬ ಶ್ಲೋಕದಲ್ಲಿ (೩-೩) ಉತ್ತರ ಹೇಳಿ

*. ಅನುಮಾನವು ಸ್ವತಂತ್ರಪ್ರಮಾಣವಲ್ಲ; ಆಗಮಕ್ಕೆ ಅನುಗ್ರಾಹಕವಾದ ತರ್ಕವು.

†. ಕರಣದೋಷವಿಲ್ಲವೆಂದೂ ಪ್ರಮಾಣವಿದೆಯೆಂದೂ ಹಿಂದೆ ತೋರಿಸಿದ್ದಾಯಿತು. ಈಗ ಜ್ಞಾನದ ಪ್ರಯೋಜನವನ್ನು ತೋರಿಸಿಕೊಡುತ್ತಾರೆ. ಅಜ್ಞಾನವನ್ನು ಜ್ಞಾನವು ಕಳೆಯುತ್ತದೆ; ಆಮೇಲೆ ಅಜ್ಞಾನದಿಂದಾಗುವ ಕಾಮಕರ್ಮಫಲಭೋಗಾದಿಗಳೆಂಬ ಅನರ್ಥವುಂಟಾಗುವದಿಲ್ಲ. ಇದೇ ಪ್ರಯೋಜನ.

‡. ದೇಹಾದಿಗಳ ಧರ್ಮವನ್ನು ಆತ್ಮನಲ್ಲಿ ಆರೋಪಿಸುವ ತಪ್ಪುತಿಳಿವೇ ಅಜ್ಞಾನವು. ಇಲ್ಲಿ ಈಚಿನ ವೇದಾಂತಿಗಳು ಹೇಳುವ ಭಾವಾಜ್ಞಾನಕ್ಕೇನೂ ಅವಕಾಶವಿಲ್ಲ.

§. 'ಜ್ಞಾನಿಗೆ ಕರ್ಮದಲ್ಲಿ ಅಧಿಕಾರವಿಲ್ಲ' ಎಂದರೆ ಅವನು ಕರ್ಮವನ್ನು ಮಾಡಕೂಡದು ಎಂದು ಅರ್ಥವಲ್ಲ; ಅವನಿಗೆ ಕರ್ತೃತ್ವವಿಲ್ಲವಾದ್ದರಿಂದ ಅವನಿಗಾಗಿ ಶಾಸ್ತ್ರದಲ್ಲಿ ಕರ್ಮವನ್ನು ಹೇಳಿಲ್ಲ ಎಂಬುದೇ ಇಲ್ಲಿ ತಿಳಿಯಬೇಕಾದದ್ದು.

ಬಿಟ್ಟಿರುತ್ತದೆ.* ಆದ್ದರಿಂದಲೇ ಮುಂದೆ 'ಸರ್ವಕರ್ಮಾಣಿ ಮನಸಾ' (೫-೧೩) ಎಂದು ಮುಂತಾಗಿರುವ ಶ್ಲೋಕದಲ್ಲಿ ಸರ್ವಕರ್ಮಸಂನ್ಯಾಸವನ್ನು (ಭಗವಂತನು) ಹೇಳಿರುತ್ತಾನೆ.

(ಆಕ್ಷೇಪ) (ಆ ಶ್ಲೋಕದಲ್ಲಿ) 'ಮನಸ್ಸಿನಿಂದ' (ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ)– ಎಂದಿರುವದರಿಂದ ಮಾತಿನ ಮತ್ತು ಶರೀರದ (ಕರ್ಮಗಳ) ಸಂನ್ಯಾಸವನ್ನು (ಅಲ್ಲಿ ಹೇಳಿದಂತಾಗುವ )ದಿಲ್ಲ.

(ಪರಿಹಾರ) ಹಾಗಲ್ಲ. ಏಕೆಂದರೆ 'ಎಲ್ಲಾ ಕರ್ಮಗಳನ್ನೂ' (ಸಂನ್ಯಾಸಮಾಡಿ) ಎಂಬ ವಿಶೇಷಣವನ್ನು (ಅಲ್ಲಿ) ಕೊಟ್ಟಿರುತ್ತದೆ.

(ಆಕ್ಷೇಪ) (ಎಲ್ಲಾ ಕರ್ಮಗಳನ್ನೂ ಎಂದರೆ) 'ಮನಸ್ಸಿನ ಎಲ್ಲಾ ಕರ್ಮಗಳನ್ನೂ' (ಸಂನ್ಯಾಸಮಾಡಿ)– ಎಂಬುದೇ (ಅದಕ್ಕೆ ಅಭಿಪ್ರಾಯ).

(ಪರಿಹಾರ) ಹಾಗಲ್ಲ. ಮಾತಿನ ಮತ್ತು ಶರೀರದ ಕೆಲಸಗಳು ಮನೋವ್ಯಾಪಾರವು ನಡೆದ ಮೇಲೆಯೇ ನಡೆಯುತ್ತವೆಯಾದ್ದರಿಂದ ಮನಸ್ಸು ಕೆಲಸಮಾಡದಿದ್ದರೆ (ಅವುಗಳು) ಇರಲಾರವು.

(ಆಕ್ಷೇಪ) (ಹಾಗಾದರೆ) 'ಶಾಸ್ತ್ರದಲ್ಲಿ ವಿಹಿತವಾಗಿರುವ† ವಾಕ್ಕಾಯಕರ್ಮಗಳಿಗೆ ಕಾರಣವಾದ ಮಾನಸಕರ್ಮಗಳನ್ನು ಬಿಟ್ಟು ಉಳಿದ ಎಲ್ಲಾ ಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ ಇರುತ್ತಾನೆ'–(ಎಂದರ್ಥಮಾಡೋಣ).

(ಪರಿಹಾರ) ಅದೂ ಆಗಲಾರದು. ಏಕೆಂದರೆ 'ಮಾಡದೆಯೇ ಮಾಡಿಸದೆಯೇ' ಎಂಬ ವಿಶೇಷಣವೂ (ಈ ಶ್ಲೋಕದಲ್ಲಿ ಇರುತ್ತದೆ).

(ಆಕ್ಷೇಪ) ಭಗವಂತನು ಹೇಳಿದ ಈ ಸರ್ವಕರ್ಮಸಂನ್ಯಾಸವು ಸಾಯುವವನಿಗೇ ಹೊರತು ಬದುಕಿರುವವನಿಗಲ್ಲ‡ (ಎಂದು ಏಕೆ ತಿಳಿಯಬಾರದು ?)

---

*. ಜ್ಞಾನದಲ್ಲಿ ಅಧಿಕಾರ– ಎಂದದ್ದರಿಂದ ಜ್ಞಾನವೆಂಬದು ಮಾಡತಕ್ಕ ಕ್ರಿಯೆಯೆಂದು ಭಾವಿಸಕೂಡದು. ೫೧ನೆಯ ಪುಟದ † ಟಿಪ್ಪಣಿಯನ್ನೂ ಅದರ ಮೇಲಿನ ಭಾಷ್ಯವನ್ನೂ ನೋಡಿ.

†. ಶಾಸ್ತ್ರಾಧ್ಯಯನವು ವಾಕ್ಕರ್ಮ, ಯಜ್ಞಾದಿಗಳು ಕಾಯಕರ್ಮ. ಇವುಗಳೆರಡಕ್ಕೂ ಮನೋವ್ಯಾಪಾರವು ಅವಶ್ಯಕವಾಗಿರುವದು. ಶಾಸ್ತ್ರವು ತಾನೇ ವಿಧಿಸಿದ ಕರ್ಮವನ್ನು ಬಿಟ್ಟುಬಿಡಬೇಕೆಂದು ತಾನೇ ಉಪದೇಶಮಾಡುವದೆಂಬುದು ಯೋಗ್ಯವಲ್ಲವಾದ್ದರಿಂದ ಲೌಕಿಕಕರ್ಮಗಳನ್ನು ಬಿಟ್ಟು ಶಾಸ್ತ್ರೀಯಕರ್ಮಗಳನ್ನು ಮಾಡಬೇಕು ಎಂದು ಅವುಗಳಲ್ಲಿ ಆದರವನ್ನು ಭಗವಂತನು ತೋರಿಸಿರುತ್ತಾನೆ– ಎಂದು ಪೂರ್ವಪಕ್ಷಿಯ ಭಾವ.

‡. ಎಲ್ಲಾ ಕರ್ಮಗಳನ್ನೂ ಬಿಡುವದೆಂಬುದು ಬದುಕಿರುವವನಿಗೆ ಆಗುವ ಹಾಗೇ ಇಲ್ಲ. ಆದ್ದರಿಂದ ಸಾಯುವವರೆಗೆ ಕರ್ಮವನ್ನು ಮಾಡುತ್ತಿರಬೇಕೆಂಬುದೇ ಇಲ್ಲಿ ತಾತ್ಪರ್ಯವೆಂದು ಪೂರ್ವಪಕ್ಷಿಯ ಭಾವ.

(ಪರಿಹಾರ) ಇದೂ ಸರಿಯಲ್ಲ. ಏಕೆಂದರೆ (ಆ ಪಕ್ಷದಲ್ಲಿ) 'ಒಂಬತ್ತು ಬಾಗಿಲುಗಳ ಪುರ(ವಾದ ದೇಹ)ದಲ್ಲಿ ಇರುತ್ತಾನೆ' ಎಂಬ ವಿಶೇಷಣವು ಹೊಂದದೆ ಹೋಗುತ್ತದೆ. ಎಲ್ಲಾ ಕರ್ಮಗಳನ್ನೂ ಬಿಟ್ಟು ಸತ್ತವನು ಆ ದೇಹದಲ್ಲಿರುವನೆಂಬುದು ಆಗದ ಮಾತು.

(ಆಕ್ಷೇಪ) "ಕರ್ಮಗಳನ್ನು ಮಾಡದೆಯೂ ಮಾಡಿಸದೆಯೂ (ಅವುಗಳನ್ನು) ದೇಹದಲ್ಲಿ ಇಟ್ಟು"* ಎಂದು ಸಂಬಂಧ(ಮಾಡಿಕೊಳ್ಳಬೇಕೇ) ಹೊರತು 'ದೇಹದಲ್ಲಿ ಇರುತ್ತಾನೆ' ಎಂದು (ಸಂಬಂಧಮಾಡಬಾರದು.)

(ಪರಿಹಾರ) ಹಾಗಲ್ಲ. ಆತ್ಮನು ಯಾವಾಗಲೂ† ಅಕ್ರಿಯನೆಂದು (ಭಗವಂತನು) ಒತ್ತಿ ಹೇಳಿರುತ್ತಾನೆ. ಇದಲ್ಲದೆ 'ಇರು' ಎಂಬ ಕ್ರಿಯೆಗೆ ಅಧಿಕರಣವು‡ ಬೇಕಾಗುತ್ತದೆ, 'ಸಂನ್ಯಾಸ' (ಬಿಡು) ಎಂಬ ಕ್ರಿಯೆಗೆ ಬೇಡ. ನ್ಯಾಸ ಶಬ್ದಕ್ಕೆ 'ಸಂ'– ಎಂಬ ಉಪಸರ್ಗವನ್ನು ಸೇರಿಸಿದರೆ 'ಬಿಡುವದು' ಎಂದು ಅರ್ಥವಾಗುವದೇ ಹೊರತು 'ಇಡುವದು' ಎಂದು ಅರ್ಥವಾಗುವದಿಲ್ಲ.§

ಆದ್ದರಿಂದ ಗೀತಾಶಾಸ್ತ್ರದಲ್ಲಿ ಆತ್ಮಜ್ಞಾನಿಗೆ ಸಂನ್ಯಾಸದಲ್ಲಿಯೇ ಅಧಿಕಾರವೇ ಹೊರತು ಕರ್ಮದಲ್ಲಿ ಅಲ್ಲ. ಈ ವಿಷಯವನ್ನು ಮುಂದೆಯೂ ಆತ್ಮಜ್ಞಾನದ ಪ್ರಕರಣವು ಬಂದಾಗ ಅಲ್ಲಲ್ಲಿ ತೋರಿಸಿಕೊಡುವೆವು.

---

*. ಇದುವರೆಗೆ 'ಸಂನ್ಯಸ್ಯ' ಎಂಬ ಮಾತಿಗೆ ಬಿಟ್ಟು–ಎಂಬ ಅರ್ಥವಿದೆಯೆಂದು ಇಟ್ಟುಕೊಂಡು ಪೂರ್ವಪಕ್ಷವನ್ನು ಮಾಡಿತ್ತು. ಈಗ 'ನ್ಯಾಸ' ಎಂಬ ಮಾತಿಗೆ 'ಇಡುವದು' ಎಂದು ಅರ್ಥವಾದ್ದರಿಂದ 'ಸಂನ್ಯಾಸ'ವೆಂದರೆ ಚೆನ್ನಾಗಿ ಇಟ್ಟು – ಎಂಬುದೇ ಅರ್ಥವು ಎಂದು ಪೂರ್ವಪಕ್ಷಿಯು ಅಭಿಪ್ರಾಯಪಟ್ಟಿರುತ್ತಾನೆ. 'ವಶೀ ದೇಹೀ ಸರ್ವಕರ್ಮಾಣಿ ಮನಸಾ ಸಂನ್ಯಸ್ಯ, ನೈವ ಕುರ್ವನ್ ನ ಕಾರಯನ್, ನವದ್ವಾರೇ ಪುರೇ ಸುಖಂ ಆಸ್ತೇ' (ಜಿತೇಂದ್ರಿಯನಾದ ದೇಹಿಯು ಸಕಲ ಕರ್ಮಗಳನ್ನೂ ಮನಸ್ಸಿನಿಂದ ತ್ಯಾಗಮಾಡಿ ಒಂಬತ್ತು ಬಾಗಿಲಿನ ಪುರವಾದ ದೇಹದಲ್ಲಿ ಏನನ್ನೂ ಮಾಡದೆಯೂ ಏನನ್ನೂ ಮಾಡಿಸದೆಯೂ ಸುಖವಾಗಿರುತ್ತಾನೆ)– ಎಂಬುದು ಸಿದ್ಧಾಂತಿಗೆ ಸಮ್ಮತವಾದ ಅನ್ವಯ, 'ಸರ್ವಕರ್ಮಾಣಿ ಮನಸಾ ನವದ್ವಾರಪುರೇ ಸಂನ್ಯಸ್ಯ ಸುಖಂ ಆಸ್ತೇ' (ಎಲ್ಲಾ ಕರ್ಮಗಳನ್ನೂ ನವದ್ವಾರಪುರದಲ್ಲಿಟ್ಟು ಸುಖವಾಗಿರುತ್ತಾನೆ)– ಹೀಗೆ ಅನ್ವಯಮಾಡೋಣ ಎಂಬುದು ಪೂರ್ವಪಕ್ಷಿಯ ಸೂಚನೆ.

†. ಸರ್ವತ್ರ– ಎಂದರೆ ಎಲ್ಲಾ ಅವಸ್ಥೆಗಳಲ್ಲಿಯೂ ಎಂಬ ಅರ್ಥವೇ ಹೊಂದುವದು. ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಎಂದು ವ್ಯಾಖ್ಯಾನಕಾರರು ಬರೆದಿರುವದು ಅಷ್ಟು ಸಮಂಜಸವಾಗಿಲ್ಲ.

‡. ಅಧಿಕರಣವೆಂದರೆ ಆಧಾರವು. 'ಇರುತ್ತಾನೆ' ಎನ್ನುವಾಗ ಇಂಥಲ್ಲಿ ಇರುತ್ತಾನೆಂದು ಹೇಳಬೇಕು; 'ಬಿಡುತ್ತಾನೆ' ಎನ್ನುವಾಗ ಇಂಥಲ್ಲಿ ಬಿಡುತ್ತಾನೆಂದು ಹೇಳಬೇಕಾದ್ದಿಲ್ಲ. ಆದ್ದರಿಂದ ಆಕಾಂಕ್ಷೆಯಿರುವ ಪದಕ್ಕೆ ಅನ್ವಯಮಾಡುವದೇ ಯುಕ್ತ.

§. ರೂಢಿಯನ್ನು ಅನುಸರಿಸುವದೇ ಯುಕ್ತವೆಂದು ಭಾವ.

(ಈಗ) ಪ್ರಕೃತವಾಗಿರುವ (ಸಂಗತಿ)ಯನ್ನು ಹೇಳುವೆವು. ಆತ್ಮನು ನಾಶವಿಲ್ಲದವನೆಂದು ಹೇಳಿದೆಯಷ್ಟೆ; ಅದು ಹೇಗೆಂತೆ? ಎಂದರೆ ಹೇಳುತ್ತಾನೆ:—

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

೨೨. ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸದಾಗಿರುವ ಬೇರೆ (ಬಟ್ಟೆ)ಗಳನ್ನು ಹೇಗೆ ತೆಗೆದುಕೊಳ್ಳುವನೋ, ಅದರಂತೆ ದೇಹಿಯಾದ (ಆತ್ಮನು) ಜೀರ್ಣವಾದ ದೇಹವನ್ನು ಬಿಟ್ಟು ಹೊಸದಾಗಿರುವ ಬೇರೆ (ದೇಹ)ಗಳನ್ನು ಸೇರುತ್ತಾನೆ.

[ಭಾಷ್ಯ]

ಲೋಕದಲ್ಲಿ ಮನುಷ್ಯನು ಹಳೆಯವಾಗಿ ದುರ್ಬಲವಾಗಿರುವ ಬಟ್ಟೆಗಳನ್ನು ಬಿಟ್ಟು ಹೊಸದಾಗಿರುವವುಗಳನ್ನು ಹೇಗೆ ತೆಗೆದುಕೊಳ್ಳುವನೋ ಅದರಂತೆಯೇ ದೇಹಿಯು ಎಂದರೆ ಆತ್ಮನು ಹಳೆಯದಾದ ಶರೀರಗಳನ್ನು ಬಿಟ್ಟು ಬೇರೆ ಹೊಸ (ದೇಹಗಳನ್ನು) ಪಡೆಯುತ್ತಾನೆ. (ದೃಷ್ಟಾಂತದಲ್ಲಿ) ಹೇಗೆ ಮನುಷ್ಯನು ಅವಿಕ್ರಿಯನಾಗಿಯೇ* (ಬಟ್ಟೆಗಳನ್ನು ತೆಗೆದುಕೊಳ್ಳುತ್ತಾನೋ) ಅದರಂತೆ (ಆತ್ಮನು ಅವಿಕ್ರಿಯನಾಗಿಯೇ ಹೊಸ ದೇಹವನ್ನು ಸೇರುತ್ತಾನೆ) ಎಂದರ್ಥ.

(ಆತ್ಮನಲ್ಲಿ) ವಿಕಾರವೇ ಇಲ್ಲವೆಂಬುದಕ್ಕೆ ಕಾರಣವೇನು?† ಎಂದರೆ ಹೇಳುತ್ತಾನೆ:—

**ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

೨೩ ಈತನನ್ನು ಶಸ್ತ್ರಗಳು ಕತ್ತರಿಸಲಾರವು; ಈತನನ್ನು ಬೆಂಕಿಯು ಸುಡಲಾರದು. ಈತನನ್ನು ನೀರು ನೆನೆಸಲೂ ಆರದು, ಗಾಳಿಯು ಒಣಗಿಸಲೂ ಆರದು.

---

*. ಮನುಷ್ಯನು ಬಟ್ಟೆಯ ವಿಕಾರದಿಂದ ತಾನು ವಿಕಾರವನ್ನು ಹೊಂದುವದಿಲ್ಲ. ಅದರಂತೆ ಆತ್ಮನೂ ದೇಹವಿಕಾರದಿಂದ ವಿಕಾರವನ್ನು ಹೊಂದುವದಿಲ್ಲ— ಎಂಬುದೇ ದೃಷ್ಟಾಂತದಲ್ಲಿ ಹೇಳಿರುವ ಸಾಮ್ಯವೆಂದು ಭಾವ. ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ಸೋಡಿ.

†. ನಿರವಯವನೆಂಬುದೇ ಕಾರಣವೆಂದು ತಿಳಿಸುವದಕ್ಕೆ ಮುಂದಿನ ಶ್ಲೋಕವು ಬಂದಿದೆ— ಎಂದು ಭಾವ.

[ಭಾಷ್ಯ]

ಈ ಪ್ರಕೃತನಾದ ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು; ನಿರವಯವನಾಗಿರುವದರಿಂದ ಕತ್ತಿ ಮುಂತಾದ ಆಯುಧಗಳು ಇವನ ಅವಯವಗಳನ್ನು ಬಿಡಿಸಲಾರವು (ಎಂದರ್ಥ). ಮತ್ತು ಇವನನ್ನು ಬೆಂಕಿಯು ಸುಡಲಾರದು ಎಂದರೆ ಬೆಂಕಿಯು ಇವನನ್ನು ಬೂದಿಮಾಡಲಾರದು. ಹಾಗೂ ನೀರು ಇವನನ್ನು ನೆನಸಲಾರದು. ಅವಯವಗಳಿಂದ ಕೂಡಿದ ವಸ್ತುವನ್ನು ನೆನಸಿ (ಅದರ) ಅವಯವಗಳನ್ನು ಬೇರ್ಪಡುವಂತೆ ಮಾಡುವ ಶಕ್ತಿ ನೀರಿಗೆ ಉಂಟು; ನಿರವಯವನಾದ ಆತ್ಮನ ವಿಷಯದಲ್ಲಿ ಇದೂ ಆಗುವದಿಲ್ಲ. ಇದರಂತೆ (ನೀರಿನಿಂದ) ಒದ್ದೆಯಾಗಿರುವ ವಸ್ತುವನ್ನು (ಅದರ) ಒದ್ದೆಯನ್ನು ಹೀರುವದರ ಮೂಲಕ ವಾಯುವು ನಾಶಪಡಿಸುತ್ತದೆ; ಆದರೆ ಈ ಆತ್ಮನನ್ನು* ವಾಯುವೂ ಒಣಗಿಸಲಾರದು.

ಹೀಗಿರುವದರಿಂದ:—

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

೨೪. ಇವನನ್ನು ಕತ್ತರಿಸುವದಕ್ಕಾಗುವದಿಲ್ಲ, ಇವನನ್ನು ಸುಡುವದಕ್ಕಾಗುವದಿಲ್ಲ, ನೆನಸುವದಕ್ಕಾಗುವದಿಲ್ಲ, ಒಣಗಿಸುವದಕ್ಕಾಗುವದಿಲ್ಲ. ಈತನು ನಿತ್ಯನು, ಸರ್ವಗತನು, ಸ್ಥಾಣು, ಅಚಲನು, ಸನಾತನನು.

[ಭಾಷ್ಯ]

ಒಂದಕ್ಕೊಂದು ನಾಶಕ್ಕೆ ಕಾರಣವಾಗಿರುವ ಭೂತಗಳು ಈ ಆತ್ಮನನ್ನು ನಾಶಗೊಳಿಸಲಾರದೆ ಇರುವವಾದ್ದರಿಂದ, (ಈತನು) ನಿತ್ಯನು; ನಿತ್ಯನಾದ್ದರಿಂದ ಎಲ್ಲೆಲ್ಲಿಯೂ ಹಬ್ಬಿರುವವನು. ಸರ್ವವ್ಯಾಪಕನಾಗಿರುವದರಿಂದ ಸ್ಥಾಣುವು,† ಎಂದರೆ ಕಂಬದ ಹಾಗೆ ಸ್ಥಿರವಾಗಿ ಇರುವವನು ಎಂದಭಿಪ್ರಾಯ. ಹೀಗೆ ಸ್ಥಿರವಾಗಿರುವದರಿಂದ ಈ ಆತ್ಮನು ಅಲ್ಲಾಡದೆ ಇರುವನು. ಆದ್ದರಿಂದಲೇ ಸನಾತನನು, ಎಂದರೆ ಹಳಬನು; ಮತ್ತೆ ಯಾವ ಕಾರಣದಿಂದಲೂ ಹುಟ್ಟಿದ ಹೊಸಬನಲ್ಲ ಎಂದರ್ಥ.

ಒಂದು ಶ್ಲೋಕದಲ್ಲಿ (೨–೨೦) 'ಹುಟ್ಟುವದಿಲ್ಲ, ಸಾಯುವದೂ ಇಲ್ಲ' ಎಂದು ಮೊದಲಾದ ಮಾತುಗಳಿಂದ ಆತ್ಮನು ನಿತ್ಯನೆಂದೂ ಅವಿಕ್ರಿಯನೆಂದೂ

---

*. 'ಸ್ವಾತ್ಮಾನಂ' ಎಂಬ (ಗು|| ನ||) ಪಾಠದಲ್ಲಿ 'ತನ್ನ ಆತ್ಮನನ್ನು' ಎಂದು ಅರ್ಥ ಮಾಡಬೇಕು; ಆಗ ತನ್ನನ್ನು ತಾನೇ ನಾಶಮಾಡಿಕೊಳ್ಳುವದು ಆಗಲಾರದು ಎಂಬ ವಿಶೇಷ ಅರ್ಥವು ಹೊರಡುತ್ತದೆ. ಆದರೆ ಪ್ರಕೃತಕ್ಕೆ ಅದು ಬೇಕಿಲ್ಲವೆಂದು ತೋರುತ್ತದೆ.

†. ಇಲ್ಲಿ ಮತಾಂತರದವರ ಪಾಠವು ಬೇರೆ. ಪರಿಶಿಷ್ಟವನ್ನು ನೋಡಿ.

ಹೇಳಿಬಿಟ್ಟಿರುವದರಿಂದ ಈ (೨೧-೨೪) ಶ್ಲೋಕಗಳಲ್ಲಿ ಆತ್ಮವಿಷಯವಾಗಿ ಏನು ಹೇಳಿದೆಯೋ ಅದು ಆ ಶ್ಲೋಕದ ಅರ್ಥಕ್ಕಿಂತ ಬೇರೆಯಾಗಿರುವದಿಲ್ಲವೆಂದೂ ಸ್ವಲ್ಪ ಮಟ್ಟಿಗೆ ಮೊದಲಿನ ಶಬ್ದವನ್ನೂ ಸ್ವಲ್ಪಮಟ್ಟಿಗೆ ಮೊದಲು ಹೇಳಿದ ವಿಷಯವನ್ನೂ ಮತ್ತೆ (ಇಲ್ಲಿಯೂ) ಹೇಳಿದೆಯೆಂದೂ ಈ (೨೧–೨೪) ಶ್ಲೋಕಗಳಲ್ಲಿ ಪುನರುಕ್ತಿ ದೋಷವನ್ನು ಹಾಕಬಾರದು. ಆತ್ಮವಸ್ತುವನ್ನು ತಿಳಿಯುವದು ಕಷ್ಟವಾಗಿರುವದರಿಂದ ಅವ್ಯಕ್ತವಾಗಿರುವ (ಈ) ತತ್ತ್ವವು ಸಂಸಾರಿಗಳಿಗೆ ಹೇಗಾದರೂ ಬುದ್ಧಿಗೋಚರವಾಗಿ ಸಂಸಾರನಿವೃತ್ತಿಯನ್ನುಂಟುಮಾಡಲಿ – ಎಂದು ಭಗವಂತನಾದ **ವಾಸುದೇವನು** ಮತ್ತೆ ಮತ್ತೆ (ಬೇರೆ ಬೇರೆ) ಪ್ರಸಕ್ತಿಯನ್ನು ತಂದು ಅದೇ ವಸ್ತುವನ್ನೇ ಬೇರೆ ಬೇರೆ ಮಾತುಗಳಿಂದ ತಿಳಿಸುತ್ತಿದ್ದಾನೆ.

**ಅವ್ಯಕ್ತೋಽಯಮಚಿನ್ತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

೨೫. ಈತನು ಅವ್ಯಕ್ತನೆಂದೂ ಅಚಿಂತ್ಯನೆಂದೂ ವಿಕಾರವಿಲ್ಲದವನೆಂದೂ ಹೇಳುವರು. ಆದ್ದರಿಂದ ಈತನು ಹೀಗಿರುವನೆಂದು ತಿಳಿದ ಮೇಲೆ ನೀನು ಶೋಕಿಸಬಾರದು.

[ ಭಾಷ್ಯ ]

ಇದಲ್ಲದೆ ಈ ಆತ್ಮನು ಯಾವ ಕರಣಗಳಿಗೂ ವಿಷಯನಲ್ಲವಾದ್ದರಿಂದ ವ್ಯಕ್ತವಾಗಿ (ತೋರು)ವದಿಲ್ಲ ; ಆದ್ದರಿಂದ (ಇವನು) ಅವ್ಯಕ್ತನು. ಆದ್ದರಿಂದಲೇ ಇವನು ಅಚಿಂತ್ಯನು, ಯಾವ ವಸ್ತು ಇಂದ್ರಿಯಗಳಿಗೆ ಗೋಚರವಾಗಿರುವದೋ ಅದು ಯೋಚಿಸುವದಕ್ಕೆ ತಕ್ಕ ವಿಷಯವಾಗಿರುತ್ತದೆ ; ಆದರೆ ಈ ಆತ್ಮನು ಇಂದ್ರಿಯಗಳಿಗೆ ಗೋಚರನಲ್ಲವಾದ್ದರಿಂದ ಅಚಿಂತ್ಯನು. ಇವನು* ಅವಿಕಾರ್ಯನು. ಹೇಗೆ ಹಾಲು ಮೊಸರಿನ ಹೆಪ್ಪು ಮುಂತಾದ್ದರಿಂದ ಮಾರ್ಪಡುವದೋ ಹಾಗೆ ಈ ಆತ್ಮನು (ಮಾರ್ಪಡುವದಿಲ್ಲ). ಇವನು ಅವಯವಗಳಿಲ್ಲದವನಾದ್ದರಿಂದಲೂ ಮಾರ್ಪಡುವದಿಲ್ಲ;† ಅವಯವಗಳಿಲ್ಲದೆ (ಇದ್ದರೂ) ವಿಕಾರವುಳ್ಳದ್ದಾಗಿರುವ ವಸ್ತುವನ್ನು ನಾವು ನೋಡಿಯೇ ಇಲ್ಲ. ಹೀಗೆ ಮಾರ್ಪಾಡಿಲ್ಲದವನಾದ್ದರಿಂದ ಈ ಆತ್ಮನು 'ಅವಿಕಾರ್ಯನು' ಎನಿಸುತ್ತಾನೆ. ಆದಕಾರಣ, ಹೀಗೆ ಮೇಲೆ ಹೇಳಿದ ರೀತಿಯಲ್ಲಿ ಈ ಆತ್ಮ

---

*. ಇಲ್ಲಿ 'ಅತ ಏವ' ಎಂಬ ಮಾತುಗಳು ಗು॥ ಪಾಠದಲ್ಲಿಲ್ಲ, ಅವಶ್ಯಕವಿಲ್ಲವೆಂದೂ ತೋರುತ್ತದೆ; ಏಕೆಂದರೆ ಅಚಿಂತ್ಯನಾದ್ದರಿಂದ ಅವಿಕಾರ್ಯನು ಎನ್ನುವದೇನೂ ಯುಕ್ತವಲ್ಲ.

†. ಆತ್ಮನು ಸ್ವರೂಪದಿಂದಲೂ ಮಾರ್ಪಡುವದಿಲ್ಲ, ಅವಯವಗಳಿಂದಲೂ ಮಾರ್ಪಡುವದಿಲ್ಲ.

ನನ್ನು ತಿಳಿದುಕೊಂಡು ಶೋಕಿಸದೆ ಇರು; ನಾನು ಇವರನ್ನು ಕೊಲ್ಲುವೆನೆಂದೂ ಇವರು ನನ್ನಿಂದ ಕೊಲ್ಲಲ್ಪಡುವರೆಂದೂ (ದುಃಖಿಸದೆ ಇರು).

## ಲೌಕಿಕದೃಷ್ಟಿಯಿಂದ ನೋಡಿದರೂ ಶೋಕಕ್ಕೆ ಕಾರಣವಿಲ್ಲ

ಆತ್ಮನು ಅನಿತ್ಯನೆಂದೇ ಇಟ್ಟುಕೊಂಡು ಈ (ಮುಂದಿನ) ಮಾತನ್ನು ಹೇಳುತ್ತಾನೆ:—

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥ ೨೬ ॥**

೨೬. ಈತನು ಯಾವಾಗಲೂ ಹುಟ್ಟುತ್ತಲೇ ಇರುವನೆಂದೂ ಯಾವಾಗಲೂ ಸಾಯುತ್ತಲೇ ಇರುವನೆಂದೂ ತಿಳಿದಿರುವೆಯಾದರೆ, ಎಲೈ ಮಹಾಬಾಹುವೆ, ಆಗಲೂ ನೀನು ಹೀಗೆ* ಶೋಕಿಸಬಾರದು.

[ ಭಾಷ್ಯ ]

(ಇಲ್ಲಿ) 'ಅಥ ಚ' (ಹೀಗಿದ್ದರೂ) ಎಂಬ ಮಾತು ಅಂಗೀಕಾರವನ್ನು ಸೂಚಿಸುತ್ತದೆ. ಈ ಪ್ರಕೃತನಾದ ಆತ್ಮನನ್ನು (ಸಾಮಾನ್ಯ)ಜನರು ಅರಿತಿರುವಂತೆಯೇ ಯಾವಾಗಲೂ ಹುಟ್ಟುತ್ತಲೇ ಇರುವನೆಂದೂ ಎಂದರೆ ಒಂದೊಂದು ಶರೀರವು ಹುಟ್ಟುವಾಗಲೂ (ಇವನು ಹುಟ್ಟುತ್ತಿರುವನೆಂದೂ) ಆಯಾ ಶರೀರಗಳು ನಾಶವಾದಹಾಗೆಲ್ಲ ಯಾವಾಗಲೂ ಸಾಯುತ್ತಲೆ ಇರುವನೆಂದೂ ತಿಳಿದಿರುವೆಯಾದರೆ-ಎಲೈ ಮಹಾಬಾಹುವೆ, ಆತ್ಮನು (ನೀನು ತಿಳಿದಿರುವ) ಹಾಗೆಯೇ ಇದ್ದಾನೆಂದು ಇಟ್ಟುಕೊಂಡರೂ, ಹುಟ್ಟಿದವನಿಗೆ ನಾಶವೂ ನಾಶವಾದವನಿಗೆ ಹುಟ್ಟೂ ಅವಶ್ಯವಾಗಿ ಆಗಿಯೇ ತೀರಬೇಕಾಗಿರುವದರಿಂದ, ನೀನು ಹೀಗೆ ಶೋಕಿಸುವದು ಯುಕ್ತವಲ್ಲ.

ಹೀಗಿರುವದರಿಂದ:—

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

೨೭. ಹುಟ್ಟಿದವನಿಗೆ ಮೃತ್ಯು ನಿಶ್ಚಯವಾಗಿರುವದು, ಸತ್ತವನಿಗೆ ಜನ್ಮವೂ ನಿಶ್ಚಯವಾಗಿರುವದು. ಹೀಗಿರುವದರಿಂದ, ಪರಿಹರಿಸಿಕೊಳ್ಳಲಾಗದ ಈ ಅರ್ಥದಲ್ಲಿ ನೀನು ಶೋಕಿಸಬಾರದು.

---

*. ನೈನಂ- ಎಂದು ಪಾಠವಾದರೆ 'ಹೀಗೆ' ಎಂಬುದಕ್ಕೆ ಬದಲು 'ಇವನನ್ನು ಕುರಿತು' ಎಂದು ಅರ್ಥದಲ್ಲಿಟ್ಟುಕೊಳ್ಳಬೇಕಾಗುವದು.

[ ಭಾಷ್ಯ ]

ಹುಟ್ಟಿದವನಿಗೆ, ಎಂದರೆ ಯಾವ (ಯಾವ)ನಿಗೆ ಜನ್ಮವುಂಟಾಗುವದೋ ಅವನಿಗೆ, ಮರಣವು ನಿಶ್ಚಯವು ಎಂದರೆ ತಪ್ಪದು. ಸತ್ತವನಿಗೆ ಜನ್ಮವೂ ನಿಶ್ಚಯವು. ಹೀಗೆ ಹುಟ್ಟುಸಾವುಗಳೆಂಬ ಈ ವಿಷಯವು ಪರಿಹರಿಸಿಕೊಳ್ಳುವದಕ್ಕೆ ಆಗದೆ ಇರುವದು. ತಪ್ಪಿಸಿಕೊಳ್ಳಲಾಗದ ಈ ವಿಷಯದಲ್ಲಿ ನೀನು ದುಃಖಪಡಬಾರದು.

ಕಾರ್ಯಕರಣಗಳ* ಗುಂಪಷ್ಟೇ ಪ್ರಾಣಿಗಳೆಂದು ( ಇಟ್ಟುಕೊಂಡರೂ ಅವುಗಳನ್ನು) ಕುರಿತು ಶೋಕಿಸುವದೂ ಯುಕ್ತವಲ್ಲ. ಏಕೆಂದರೆ:—

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

೨೮. ಭೂತಗಳು ಅವ್ಯಕ್ತವಾದ ಆದಿಯುಳ್ಳಂಥವು, ವ್ಯಕ್ತವಾದ ಮಧ್ಯವುಳ್ಳಂಥವು, ಅವ್ಯಕ್ತವಾದ ನಾಶವುಳ್ಳಂಥವುಗಳೇ ಆಗಿರುವವು. ಈ ವಿಷಯದಲ್ಲಿ ದುಃಖವೇಕೆ?

[ ಭಾಷ್ಯ ]

ಅವ್ಯಕ್ತವೆಂದರೆ ಕಾಣದೆ ಇರುವದು, ಗೋಚರಿಸದೆ ಇರುವದು. ಮಗನು ಗೆಳೆಯನು ಮುಂತಾದ ಕಾರ್ಯಕರಣಗಳ ಗುಂಪಿನ ರೂಪದಲ್ಲಿರುವ ಪ್ರಾಣಿಗಳು ಹುಟ್ಟುವದಕ್ಕೆ ಮೊದಲು ಅವ್ಯಕ್ತವಾಗಿರುವವು ; ಆದ್ದರಿಂದ ಅವು ಅವ್ಯಕ್ತವಾದ ಆದಿಯುಳ್ಳವುಗಳಾಗಿವೆ. ಹುಟ್ಟಿದ ಮೇಲೆ ಸಾಯುವದಕ್ಕೆ ಮುಂಚೆ ನಡುವಿನ ಕಾಲದಲ್ಲಿ ವ್ಯಕ್ತವಾಗಿರುವವು. ಮತ್ತೆ ಅವ್ಯಕ್ತವಾದ ನಿಧನವುಳ್ಳವಾಗಿಯೇ ಆಗುವವು. ಅವ್ಯಕ್ತವಾದ ಎಂದರೆ ಕಾಣದ ಹಾಗೆ ಆಗುವ ನಿಧನವು ಎಂದರೆ ಮರಣವು ಇವಕ್ಕೆ ಆಗುವದರಿಂದ ಇವು ಅವ್ಯಕ್ತನಿಧನಗಳು. ಸತ್ತ ಮೇಲೆ ಕಾಣದೆಯೇ ಹೋಗುವವು ಎಂದು ಅರ್ಥ. ಈ ವಿಷಯದಲ್ಲಿ, " **ಅದರ್ಶನಾದಾಪತಿತಃ ಪುನಶ್ಚಾದರ್ಶನಂ ಗತಃ । ನಾಸೌ ತವ ನ ತಸ್ಯ ತ್ವಂ ವೃಥಾ ಕಾ ಪರಿದೇವನಾ॥** " (ಈತನು ಮೊದಲು ಕಾಣದೆ ಇದ್ದು ಹುಟ್ಟಿದನು; ಮತ್ತೆ ಕಾಣದೆ ಹೋಗಿರುತ್ತಾನೆ. ಇವನು ನಿನ್ನವನಲ್ಲ, ನೀನು ಅವನಿಗೆ ಸೇರಿದವನಲ್ಲ. ಸುಮ್ಮನೆ ದುಃಖಪಡುವದರಿಂದೇನು ?) ಎಂಬ ವಚನವಿರುತ್ತದೆ.† ಈ ವಿಷಯದಲ್ಲಿ ದುಃಖ

---

*. ದೇಹೇಂದ್ರಿಯಗಳ. ಹಿಂದೆ ದೇಹಿ ಎಂಬ ಮಾತನ್ನು ಆತ್ಮಪ್ರಧಾನವಾಗಿ ಉಪಯೋಗಿಸಿತ್ತು ; ಈಗ 'ಭೂತ' ಎಂಬ ಮಾತನ್ನು ದೇಹಪ್ರಧಾನವಾಗಿ ಉಪಯೋಗಿಸಿದೆ ಎಂದು ಭಾವ.

†. ಈ ಶ್ಲೋಕವು ಎಲ್ಲಿಯದೋ ತಿಳಿಯದು. ಇದು ಪುರಾಣವಾಕ್ಯವೆಂದು ವ್ಯಾಖ್ಯಾನಕಾರರು ಬರೆದಿದ್ದಾರೆ. ಸ್ತ್ರೀಪರ್ವದಲ್ಲಿ (೨-೧೩) ಇಂಥದ್ದೇ ಒಂದು ಶ್ಲೋಕವಿದೆ:— ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ ಗತಾಃ । ನೈತೇ ತವ ನ ತೇಷಾಂ ತ್ವಂ ತತ್ರ ಕಾಪರಿದೇವನಾ ॥ ಇದು ಧೃತರಾಷ್ಟ್ರನಿಗೆ ವಿದುರನು ಹೇಳಿರುವ ವಾಕ್ಯ.

ವೇನು ? ಎಂದರೆ ಮೊದಲು ತೋರದೆ ಇದ್ದು, ನಡುವೆ ತೋರಿ, ಆಮೇಲೆ ತೋರದೆ ಹೋಗುವ ಬರಿಯ ಭ್ರಾಂತಿಯ ರೂಪದ (ಈ) ಪ್ರಾಣಿಗಳಿಗಾಗಿ ದುಃಖಪಡು ವದರಿಂದ ಏನು ತಾನೆ ಪ್ರಯೋಜನ ? ಎಂದರ್ಥ.

## ಆತ್ಮನನ್ನು ಯಥಾರ್ಥವಾಗಿ ಅರಿಯುವದು ಬಲುಕಷ್ಟ

ಈ ಪ್ರಕೃತನಾದ* ಆತ್ಮನನ್ನು ಅರಿಯುವದು ಬಲುಕಷ್ಟ.† ಈ ವಿಷಯ ದಲ್ಲಿ ಭ್ರಾಂತಿಯಾಗುವದು (ಎಲ್ಲರಿಗೂ) ಸಮಾನವಾಗಿರುವಾಗ ನಿನ್ನೊಬ್ಬನನ್ನೇ ಏಕೆ ದೂರಲಿ? ಈ ಆತ್ಮನನ್ನು ಅರಿಯುವದು ಕಷ್ಟವೆಂಬುದಾದರೂ ಹೇಗೆ ? – ಎಂದು (ನೀನು ಕೇಳಬಹುದು, ಅದನ್ನು ಹೇಳುತ್ತೇನೆ ಕೇಳು ಎಂದು) (ಭಗ ವಂತನು) ಹೇಳುತ್ತಾನೆ:—

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನ**
**ಮಾಶ್ಚರ್ಯವದ್ವದತಿ ತಥೈವಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥**

೨೯. ಈತನನ್ನು ಒಬ್ಬನು ಆಶ್ಚರ್ಯದಂತೆ ಎಣಿಸುತ್ತಾನೆ. ಮತ್ತು ಇನ್ನೊ ಬ್ಬನು ಆಶ್ಚರ್ಯದಂತೆಯೇ ಹೇಳುತ್ತಾನೆ. ಮತ್ತು ಇನ್ನೊಬ್ಬನು ಈತನನ್ನು ಆಶ್ಚರ್ಯದಂತೆ ಕೇಳುತ್ತಾನೆ. (ಹೀಗೆ) ಕೇಳಿದರೂ ಯಾರೂ ಈತನನ್ನು ಅರಿ ಯರು.

[ ಭಾಷ್ಯ ]

ಆಶ್ಚರ್ಯವೆಂದರೆ ಹಿಂದೆ ಕಾಣದೆ ಇದ್ದು ಈಗ ಅಕಸ್ಮಾತ್ತಾಗಿ ಕಾಣುವ ಅದ್ಭುತವು. ಅದರಂತೆ, ಎಂದರೆ ಆಶ್ಚರ್ಯವಾಗಿದ್ದರೆ ಹೇಗೋ‡ ಹಾಗೆ ಈ

---

*. ಲೌಕಿಕದೃಷ್ಟಿಯನ್ನು ಸುಮ್ಮನೆ ನಡುವೆ ಹೇಳಿರುತ್ತದೆಯೇ ಹೊರತು ಅದರಲ್ಲಿ ಅಭಿ ಪ್ರಾಯವಿಲ್ಲ. ಆತ್ಮನು ನಿತ್ಯನೆಂಬುದೇ ಇಲ್ಲಿ ಪ್ರಕೃತ.

†. ಆತ್ಮನನ್ನರಿಯುವದು ಕಷ್ಟವಾಗಿರುವದರಿಂದ ಬಹುಜನರು ಅಜ್ಞರಾಗಿರುವರು. ಇದೇ ಸಂಸಾರದ ಶೋಕಮೋಹಗಳಿಗೆ ಕಾರಣ. ಆತ್ಮನ ನಿಜವಾದ ನಿತ್ಯಸ್ವರೂಪವನ್ನು ತಿಳಿದರೆ ಯಾವ ಶೋಕಕ್ಕೂ ಕಾರಣವಿರುವದಿಲ್ಲವಾದ್ದರಿಂದ ನೀನು ಆ ಸ್ವರೂಪವನ್ನು ತಿಳಿದು ಶೋಕದಿಂದ ಪಾರಾಗು ಎಂದು ಬೋಧಿಸುವದೇ ಇಲ್ಲಿ ಉದ್ದೇಶವು.

‡. ಆತ್ಮನನ್ನು ಎಂದೂ ಕಾಣದವನಂತೆ ತಿಳಿಯುವದೂ, ಹೊಸ ಆಶ್ಚರ್ಯವನ್ನು ಹೇಳುವ ಹಾಗೆ ಆತ್ಮವಿಷಯವನ್ನು ಮಿಕ್ಕವರಿಗೆ ತಿಳಿಸುವದೂ, ಎಂದೂ ಕೇಳದವನಂತೆ ಆತ್ಮವಿಷಯವನ್ನು ಬೆರಗಾಗಿ ಕೇಳುವದೂ- ಅಜ್ಞಾನದ ಗುರುತುಗಳು. ಏಕೆಂದರೆ ಆತ್ಮನು ನಿತ್ಯಸಿದ್ಧನಾಗಿರುತ್ತಾನೆ.

ಆತ್ಮನನ್ನು ಒಬ್ಬನು ಎಣಿಸುತ್ತಾನೆ. ಆದರಂತೆಯೇ ಮತ್ತೊಬ್ಬನೂ ಆಶ್ಚರ್ಯದಂತೆಯೇ ಹೇಳುತ್ತಾನೆ. ಇನ್ನೊಬ್ಬನೂ ಆಶ್ಚರ್ಯದಂತೆಯೇ ಈತನನ್ನು ಕೇಳುತ್ತಾನೆ. ಹೀಗೆ ಕಂಡೂ ಹೇಳಿಯೂ ಕೇಳಿಯೂ ಯಾರೊಬ್ಬರೂ ಈ ಆತ್ಮನನ್ನು* ಅರಿಯರು.

ಅಥವಾ ಯಾವಾತನು ಈ ಆತ್ಮನನ್ನು ಕಾಣುವನೋ ಆವನು ಆಶ್ಚರ್ಯದಂತೆ† (ಇರುವನು) ಯಾವಾತನು ಹೇಳುತ್ತಾನೋ ಯಾವಾತನು ಕೇಳುತ್ತಾನೋ ಅವನು (ಆಶ್ಚರ್ಯದಂತೆಯೇ. ಏಕೆಂದರೆ) ಸಾವಿರಾರು ಜನಗಳಲ್ಲಿ ಎಲ್ಲಿಯೋ ಒಬ್ಬನಾಗಿರುತ್ತಾನೆ. ಆದ್ದರಿಂದ ಆತ್ಮನನ್ನು ತಿಳಿದುಕೊಳ್ಳುವದು ಕಷ್ಟ ಎಂದಭಿಪ್ರಾಯ.

## ಆತ್ಮನ ನಿತ್ಯತ್ವದ ಉಪಸಂಹಾರ

ಈಗ ಈ ಪ್ರಕರಣದ ಅರ್ಥವನ್ನು ಉಪಸಂಹಾರಮಾಡುವದಕ್ಕಾಗಿ (ಭಗವಂತನು ಹೀಗೆಂದು) ಹೇಳುತ್ತಾನೆ:—

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

೩೦. ಎಲೈ ಭರತವಂಶೋತ್ಪನ್ನನೆ, ಎಲ್ಲರ ದೇಹದಲ್ಲಿಯೂ ಇರುವ ಈ ಆತ್ಮನು ಎಂದಿಗೂ ಕೊಲ್ಲುವದಕ್ಕಾಗುವವನಲ್ಲ. ಆದ್ದರಿಂದ ನೀನು ಯಾವ ಪ್ರಾಣಿಗಳನ್ನು ಕುರಿತೂ ಶೋಕಿಸಬಾರದು.

[ ಭಾಷ್ಯ ]

ಈ ದೇಹಿಯು ಎಂದರೆ ಶರೀರಾಭಿಮಾನಿಯಾದ ಜೀವನು, [ ಎಂದಿಗೂ ಎಂದರೆ ಯಾವ ಅವಸ್ಥೆಯಲ್ಲಿದ್ದರೂ ಅವಯವಗಳಿಲ್ಲದವನಾದ್ದರಿಂದಲೂ ನಿತ್ಯನಾದ್ದರಿಂದಲೂ ಯಾರ ದೇಹದಲ್ಲಿಯೂ– ಸರ್ವಗತನಾದ್ದರಿಂದ, ಸ್ಥಾವರಾದಿ(ದೇಹ)ಗಳಲ್ಲಿರುವವನಾದಾಗ್ಯೂ ] ಯಾವ ಜೀವರಾಶಿಯ‡ ದೇಹವು ಕೊಲ್ಲಲ್ಪಟ್ಟರೂ

---

*. ನಿಜವಾದ ಸ್ವರೂಪವನ್ನು ಅರಿಯರು.

†. "ಆಶ್ಚರ್ಯೋ ವಕ್ತಾ" ಎಂಬ ಕಠೋಪನಿಷತ್ತನ್ನನುಸರಿಸಿ ಈ ಅರ್ಥವನ್ನು ಹೇಳಿದೆ. ಅಜ್ಞರೇ ಬಹಳ. ಜ್ಞಾನಿಗಳು ಲೋಕಕ್ಕೆ ಆಶ್ಚರ್ಯರೂಪರಾಗಿರುವರು– ಎಂದು ಭಾವ.

‡. ಇದರ ಹಿಂದೆ ಚೌಕನೆಯ ಕಂಸದಲ್ಲಿಟ್ಟಿರುವ ಭಾಗವು ಗು|| ಪಾಠದಲ್ಲಿಲ್ಲ. ಆದರೆ ಇದು ಆವಶ್ಯವೆಂದು ತೋರುತ್ತದೆ.

ಈ ದೇಹಿಯು- ಕೊಲ್ಲಲ್ಪಡುವನಾಗಿಲ್ಲ. ಹೀಗಿರುವದರಿಂದ* ಭೀಷ್ಮನೇ ಮುಂತಾದ ಯಾವ ಪ್ರಾಣಿಗಳಿಗೋಸ್ಕರವೂ ನೀನು ಶೋಕಪಡಬಾರದು.

## ಸ್ವಧರ್ಮದ ದೃಷ್ಟಿಯಿಂದಲೂ ಶೋಕಕ್ಕೆ ಕಾರಣವಿಲ್ಲ

ಪರಮಾರ್ಥ ತತ್ತ್ವದ ದೃಷ್ಟಿಯಿಂದ ನೋಡಿದರೆ ಶೋಕವನ್ನಾಗಲಿ ಮೋಹವನ್ನಾಗಲಿ ಮಾಡತಕ್ಕದ್ದಲ್ಲ- ಎಂದು ಇಲ್ಲಿ(ಯವರೆಗಿನ ಪ್ರಕರಣದಲ್ಲಿ)† ಹೇಳಿದ್ದಾಯಿತಷ್ಟೆ. ಆದರೆ ಬರಿಯ ಪರಮಾರ್ಥತತ್ತ್ವದ ದೃಷ್ಟಿಯಿಂದ ಮಾತ್ರವೇ ಅಲ್ಲ, ಮತ್ತೇನೆಂದರೆ:—

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಮ್ಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ**

೩೧. ನಿನ್ನ ಧರ್ಮವನ್ನು ನೋಡಿದರೂ ನೀನು ಎದೆಗುಂದಿ ಹಿಂದುಮುಂದೆ ನೋಡಬಾರದು. ಏಕೆಂದರೆ ಕ್ಷತ್ರಿಯನಾದವನಿಗೆ ಧರ್ಮವಾದ ಯುದ್ಧಕ್ಕಿಂತ ಶ್ರೇಯಸ್ಕರವಾದದ್ದು ಮತ್ತೊಂದಿರುವದಿಲ್ಲ.

[ಭಾಷ್ಯ]

ಸ್ವಧರ್ಮವನ್ನು ನೋಡಿದರೂ- ಸ್ವಧರ್ಮವೆಂದರೆ ನಿನ್ನ ಕ್ಷತ್ರಿಯಧರ್ಮವಾದ ಯುದ್ಧವು ಅದನ್ನು ನೋಡಿದರೂ- ನೀನು ಚಲಿಸುವದಕ್ಕೆ ಕಾರಣವಿಲ್ಲ; ಧರ್ಮವಾಗಿಯೂ (ಕ್ಷತ್ರಿಯನಿಗೆ) ಸ್ವಾಭಾವಿಕವಾಗಿಯೂ, ಇರುವ ನಿನ್ನ ಸ್ವಭಾವವನ್ನು ಬಿಟ್ಟು (ಚಲಿಸುವದಕ್ಕೆ ಕಾರಣವಿಲ್ಲ) ಎಂದು ಅಭಿಪ್ರಾಯ ಈ ಯುದ್ಧವು ಪೃಥಿವಿಯನ್ನು ಜಯಿಸುವದರ ಮೂಲಕ ಧರ್ಮವನ್ನು (ನೆಲೆಗೊಳಿಸುವದ)ಕ್ಕೂ ಪ್ರಜೆಗಳನ್ನು ಕಾಪಾಡುವದಕ್ಕೂ (ಕಾರಣವಾಗುತ್ತದೆ)ಯಾದ್ದರಿಂದ ಇದು ಧರ್ಮವನ್ನು ಬಿಟ್ಟಿರುವದಿಲ್ಲ, ಪರಮಧರ್ಮವಾಗಿರುತ್ತದೆ. ಅಂಥ ಧರ್ಮವಾದ ಯುದ್ಧಕ್ಕಿಂತ (ಹೆಚ್ಚಿನ) ಬೇರೆ ಶ್ರೇಯಸ್ಕರವಾದ (ಸಾಧನವು) ಕ್ಷತ್ರಿಯನಿಗೆ ಇರುವದಿಲ್ಲ. ಆದಕಾರಣ (ಅದನ್ನು ಬಿಡತಕ್ಕದ್ದಲ್ಲ).

ಯುದ್ಧವನ್ನು ಮಾಡತಕ್ಕದ್ದೆಂಬುದಕ್ಕೆ ಇನ್ನೂ ಒಂದು ಕಾರಣವನ್ನು (ಭಗವಂತನು) ಹೇಳುತ್ತಾನೆ:—

---

*. ದೇಹವು ಅನಿತ್ಯ, ಅಸತ್ಯ; ಆತ್ಮನು ಅವಿಕ್ರಿಯನು, ನಿತ್ಯನು, ಸತ್ಯಸ್ವರೂಪನು; ಹೀಗಿರುವದರಿಂದ ಜೀವರುಗಳ ದೇಹನಿಮಿತ್ತದಿಂದಾದರೂ ಆತ್ಮನಿಮಿತ್ತದಿಂದಾದರೂ ದುಃಖಿಸುವದಕ್ಕೆ ಕಾರಣವಿಲ್ಲವೆಂದು ಭಾವ.

†. ಇಲ್ಲಿ (ಇಹ) ಎಂದರೆ ೨-೩೦ನೆಯ ಶ್ಲೋಕದಲ್ಲಿ ಎಂದು ವ್ಯಾಖ್ಯಾನಕಾರರು ಹೇಳಿರುತ್ತಾರೆ. ಆದರೆ ಈ ಪ್ರಕರಣವೆಲ್ಲ ಆತ್ಮಸ್ವರೂಪವನ್ನು ಹೇಳುವದೇ ಆಗಿರುತ್ತದೆ.

**ಯದೃಚ್ಛಯಾಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಮ್ ॥**

೩೨. ಎಲೈ ಪಾರ್ಥನೆ, ತನಗೆ ತಾನೇ ಬಂದಿರುವದಾಗಿಯೂ ಹಾರು ಹೊಡೆದಿರುವ ಸ್ವರ್ಗದ ಬಾಗಿಲಾಗಿಯೂ ಇರುವ ಇಂಥ ಯುದ್ಧವು ಸುಖಿಗಳಾದ ಕ್ಷತ್ರಿಯರಿಗೆ (ಮಾತ್ರ) ಸಿಕ್ಕುತ್ತದೆ.

[ ಭಾಷ್ಯ ]

ಎಲೈ ಪಾರ್ಥನೆ, ತನಗೆ ತಾನೇ, ಅಪ್ರಾರ್ಥಿತವಾಗಿ, ಬಂದಿರುವದಾಗಿಯೂ ಹಾರುಹೊಡೆದು ತೆರೆದಿರುವ ಸ್ವರ್ಗದ ಬಾಗಿಲಾಗಿಯೂ ಇರುವ ಇಂಥ ಯುದ್ಧವು ಯಾರಿಗೆ ದೊರೆಯುವದೋ, ಅವರು ಸುಖಿಗಳಲ್ಲವೆ?

ಹೀಗೆ ನೀನು ಮಾಡಲೇಬೇಕಾಗಿರುವದಾದರೂ,

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಙ್ಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**

೩೩. ಹಾಗಿಲ್ಲದೆ ಈ ಧರ್ಮವಾದ ಯುದ್ಧವನ್ನು ನೀನು ಮಾಡದೆಹೋಗುವದಾದರೆ ಅದರಿಂದ ಸ್ವಧರ್ಮವನ್ನೂ ಕೀರ್ತಿಯನ್ನೂ ಕಳೆದುಕೊಂಡು ಪಾಪವನ್ನು ಹೊಂದುತ್ತೀಯೆ.

[ ಭಾಷ್ಯ ]

ಧರ್ಮಕ್ಕೆ ಹೊರತಾಗದೆ ( ನಿನ್ನ ಧರ್ಮವಾಗಿ ) ವಿಹಿತವಾಗಿರುವ ಈ ಯುದ್ಧವನ್ನು ನೀನು ಮಾಡದೆ ಬಿಟ್ಟುಬಿಡುತ್ತೀಯಾದರೆ, ಅದರಿಂದ ಎಂದರೆ ಇದನ್ನು ಮಾಡದೆ ಇರುವದರಿಂದ ಸ್ವಧರ್ಮವನ್ನೂ, ಪರಮೇಶ್ವರನೇ* ಮೊದಲಾದವರನ್ನು ಕಂಡು ಬಂದಿರುವದರಿಂದ ನಿನಗೆ ಬಂದಿರುವ ಒಳ್ಳೆಯ ಹೆಸರನ್ನೂ, ಕಳೆದುಕೊಂಡು ಬರಿಯ ಪಾಪವನ್ನೇ ಹೊಂದುತ್ತೀಯೆ.

ಸ್ವಧರ್ಮವನ್ನೂ ಒಳ್ಳೆಯ ಹೆಸರನ್ನೂ ಕಳೆದುಕೊಳ್ಳುವದೊಂದೇ ಅಲ್ಲ,

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

೩೪. ನಿನ್ನ ಅಪಯಶಸ್ಸನ್ನೂ ಜನರು ಎಂದೆಂದಿಗೂ ಆಡಿಕೊಳ್ಳುತ್ತಿರುವರು. ಸಂಭಾವಿತನಾದವನಿಗೆ ಅಕೀರ್ತಿಯೆಂಬುದು ಮರಣಕ್ಕಿಂತ ಹೆಚ್ಚು.

---

*. ಕಿರಾತವೇಷಧಾರಿಯಾದ ಪರಮೇಶ್ವರನೊಡನೆ ಯುದ್ಧವನ್ನು ಮಾಡಿ ಅವನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಅರ್ಜುನನು ತಂದಿದ್ದನು, ದೇವೇಂದ್ರನನ್ನೂ ಕಂಡು ಬಂದಿದ್ದನು.

[ ಭಾಷ್ಯ ]

ನಿನಗೆ ಯುದ್ಧದಲ್ಲಿ ಉಂಟಾದ ಅಪಯಶಸ್ಸನ್ನು ಜನರು ಎಂದೆಂದಿಗೂ ಎಂದರೆ ಬಹುಕಾಲದವರೆಗೂ ಆಡಿಕೊಳ್ಳುತ್ತಿರುವರು. ಧರ್ಮಾತ್ಮನು, ಶೂರನು-ಎಂಬಿವೇ ಮುಂತಾದ ಗುಣಗಳಿಂದ ಗೌರವವನ್ನು ಪಡೆದಿರುವ (ನಿನ್ನಂಥ)ವನಿಗೆ ಅಪಕೀರ್ತಿಯೆಂಬುದು ಮರಣಕ್ಕಿಂತ ಹೆಚ್ಚು, ಎಂದರೆ ಅಪಯಶಸ್ಸಿಗಿಂತ ಮರಣವೇ ಮೇಲು ಎಂದರ್ಥ.

**ಭಯಾದ್ರಣಾದುಪರತಂ ಮಂಸ್ಯನ್ತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್॥**

೩೫. ನೀನು ಅಂಜಿಕೆಯಿಂದ ಯುದ್ಧವನ್ನು ಬಿಟ್ಟಿಯೆಂದು ಮಹಾರಥರುಗಳು ಎಣಿಸುವರು. ಅವರಿಗೆಲ್ಲ ಮಾನ್ಯನಾಗಿರುವ ನೀನು (ಇನ್ನು ಮುಂದೆ) ಲಾಘವವನ್ನು ಹೊಂದುತ್ತೀಯೆ.

[ ಭಾಷ್ಯ ]

ಇದಲ್ಲದೆ ದುರ್ಯೋಧನನೇ ಮುಂತಾದ ಮಹಾರಥರು, ಕರ್ಣಾದಿಗಳ ಹೆದರಿಕೆಯಿಂದ ನೀನು ಯುದ್ಧಕ್ಕೆ ಹಿಂಜರಿದೆಯೆಂದು ಎಣಿಸುವರೇ ಹೊರತು ಕೃಪೆಯಿಂದ (ಹಿಮ್ಮೆಟ್ಟಿದೆಯೆಂದು ಎಣಿಸಲಾರರು.) ಆ ದುರ್ಯೋಧನಾದಿಗಳಿಗೆ ಮಾನ್ಯನಾಗಿ, ಅನೇಕ ಗುಣಗಳುಳ್ಳವನೆಂಬ ಮೆಚ್ಚಿಗೆಗೆ ಪಾತ್ರನಾಗಿರುವ ನೀನು ಇನ್ನು ಮೇಲೆ ಲಾಘವವನ್ನು ಹೊಂದುತ್ತೀಯೆ, ಎಂದರೆ (ಅವರ ದೃಷ್ಟಿಯಲ್ಲಿ) ಹಗುರವಾಗಿ ಬಿಡುತ್ತೀಯೆ.

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯನ್ತಿ ತವಾಹಿತಾಃ ।**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥**

೩೬. ನಿನ್ನ ಶತ್ರುಗಳೂ ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ಆಡಬಾರದ ಮಾತುಗಳನ್ನು ಬಹುವಾಗಿ ಆಡುವರು. ಇದಕ್ಕಿಂತ ಹೆಚ್ಚು ದುಃಖಕರವಾದದ್ದು ಮತ್ತೇನಿದೆ?

[ ಭಾಷ್ಯ ]

ಇದಲ್ಲದೆ ನಿನ್ನ ಅಹಿತರು ಎಂದರೆ ಶತ್ರುಗಳು ನಿವಾತಕವಚರೆ* ಮುಂತಾದವರೊಡನೆ ಯುದ್ಧಮಾಡಿದ ನಿನ್ನ ಸಾಮರ್ಥ್ಯವನ್ನು (ಕೂಡ) ನಿಂದಿಸುತ್ತ ಆಡಬಾರದ ಅನೇಕ ಮಾತುಗಳನ್ನು ಆಡುವರು. ಇಂಥ ನಿಂದೆಯನ್ನು ಪಡೆಯುವದ

*. ಪಾಶುಪತಾಸ್ತ್ರವನ್ನು ಪಡೆದು ಬಂದ ಮೇಲೆ ಇಂದ್ರನಿಗೆ ಸಹಾಯಮಾಡುವದಕ್ಕೆ ಹೋಗಿ ಅರ್ಜುನನು ನಿವಾತಕವಚರೆಂಬ ರಾಕ್ಷಸರನ್ನು ಸಂಹರಿಸಿದ್ದನು.

ಕ್ಕಿಂತ ಹೆಚ್ಚು ದುಃಖಕರವಾದದ್ದು ಮತ್ತೆ ಯಾವದು? ಇದಕ್ಕಿಂತಲೂ ಹೆಚ್ಚಿನ ಕಷ್ಟವನ್ನುಂಟುಮಾಡುವ ದುಃಖವೇ ಇಲ್ಲ– ಎಂದು ಅಭಿಪ್ರಾಯ.

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

೩೭. ಹತನಾದರೆ ಸ್ವರ್ಗವನ್ನು ಪಡೆಯುತ್ತೀಯೆ, ಗೆದ್ದರೆ ಭೂಮಿಯನ್ನು ಭೋಗಿಸುತ್ತೀಯೆ. ಆದ್ದರಿಂದ ಎಲೈ ಕೌಂತೇಯನೆ, ಯುದ್ಧಕ್ಕೆ ಮನಸ್ಸನ್ನು ನಿಶ್ಚಯಪಡಿಸಿಕೊಂಡು ಏಳು.

[ ಭಾಷ್ಯ ]

ಯುದ್ಧವನ್ನು ಮಾಡಿದರೆ ಎಂದರೆ– ಕರ್ಣಾದಿಗಳಿಂದ ಹತನಾದರೆ ಸ್ವರ್ಗವನ್ನು ಪಡೆಯುತ್ತೀಯೆ, ಅಥವಾ ಕರ್ಣನೇ ಮುಂತಾದ ಶೂರರನ್ನು (ನೀನೇ) ಜಯಿಸಿದರೆ ಭೂಮಿಯನ್ನು ಆಳುತ್ತೀಯೆ. ಆದ್ದರಿಂದ ನಿನಗೆ (ಈ) ಎರಡು ವಿಧದಿಂದಲೂ ಲಾಭವೇ ಆಗುವದೆಂದು ಅಭಿಪ್ರಾಯ. ಹೀಗಿರುವದರಿಂದ ಎಲೈ ಅರ್ಜುನನೆ, 'ಶತ್ರುಗಳನ್ನಾದರೂ ಜಯಿಸುತ್ತೇನೆ ಅಥವಾ ಯುದ್ಧದಲ್ಲಿ ಮರಣವನ್ನಾದರೂ ಹೊಂದುತ್ತೇನೆ'- ಎಂದು ನಿಶ್ಚಯಮಾಡಿಕೊಂಡು ಯುದ್ಧಕ್ಕೆ ಏಳು.

ಹೀಗೆ ಯುದ್ಧವೇ ಸ್ವಧರ್ಮವೆಂದು* ಯುದ್ಧಮಾಡುವವನಾದರೆ, ಈ ಉಪದೇಶವನ್ನು ಕೇಳು:—

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮**

೩೮. ಸುಖದುಃಖಗಳನ್ನೂ ಲಾಭಾಲಾಭಗಳನ್ನೂ ಜಯಾಜಯಗಳನ್ನೂ ಸಮವೆಂದು ಎಣಿಸಿಕೊಂಡು ಯುದ್ಧಕ್ಕೆ ಸಿದ್ಧನಾಗು. ಹೀಗಾದರೆ ನೀನು ಪಾಪವನ್ನು ಹೊಂದುವದಿಲ್ಲ.

[ ಭಾಷ್ಯ ]

ಸುಖದುಃಖಗಳನ್ನು ಸಮವಾಗಿ ಎಣಿಸಿಕೊಂಡು ಎಂದರೆ (ಅವುಗಳಲ್ಲಿ) ರಾಗದ್ವೇಷಗಳನ್ನು† ಮಾಡದೆ ಎಂದರ್ಥ. ಇದರಂತೆ ಲಾಭಾಲಾಭಗಳನ್ನೂ ಜಯಾಪಜಯಗಳನ್ನೂ ಸಮವಾಗಿ ಎಣಿಸಿ ಆಮೇಲೆ ಯುದ್ಧಕ್ಕೆ ಹೊರಡು. ಹೀಗೆ ಯುದ್ಧಮಾಡಿದರೆ ನಿನಗೆ ಪಾಪವು ಬರುವದಿಲ್ಲ.

---

*. ೩೧ನೆಯ ಶ್ಲೋಕದಿಂದ ಇಲ್ಲಿಯವರೆಗೂ 'ಸ್ವಧರ್ಮವನ್ನು ಮಾಡಬೇಕು' ಎಂಬ ದೃಷ್ಟಿಯಿಂದ ಮಾತನಾಡುತ್ತಿದೆಯಷ್ಟೆ. ಆ ದೃಷ್ಟಿಯಿಂದ ಕರ್ಮವನ್ನು ಮಾಡುವಾಗ ಮನಸ್ಸು ಹೇಗಿರಬೇಕೆಂಬುದನ್ನು ಹೇಳುತ್ತಾನೆ.

†. ಸುಖದಲ್ಲಿ ರಾಗವನ್ನು ಮಾಡದೆ, ದುಃಖದಲ್ಲಿ ದ್ವೇಷವನ್ನು ಮಾಡದೆ.

ಈ ಉಪದೇಶವು ಪ್ರಸಂಗಾನುಸಾರವಾಗಿ* ಹೇಳಿದ್ದು. 'ಸ್ವಧರ್ಮಮಪಿ ಚಾವೇಕ್ಷ್ಯ' (೩೧) ಎಂಬುದೇ ಮುಂತಾದ ಶ್ಲೋಕಗಳಲ್ಲಿ ಶೋಕಮೋಹಗಳನ್ನು ಕಳೆಯುವದಕ್ಕೆ ಲೌಕಿಕನ್ಯಾಯವನ್ನು (ಪ್ರಸಕ್ತಿಯಿಂದ) ಹೇಳಿರುತ್ತದೆಯೇ ಹೊರತು ತಾತ್ಪರ್ಯದಿಂದ ಅದನ್ನು ಹೇಳಿರುವದಿಲ್ಲ. ಇಲ್ಲಿ (ನಿಜವಾಗಿ) ಪ್ರಕೃತವಾಗಿರುವದು ಪರಮಾರ್ಥಜ್ಞಾನವು. ಅದನ್ನು ಹೇಳಿದ್ದಾಯಿತಾದ್ದರಿಂದ ಈ ಗೀತಾಶಾಸ್ತ್ರದ ವಿಷಯಗಳ ವಿಂಗಡವನ್ನು ತೋರಿಸಿಕೊಡುವದಕ್ಕಾಗಿ 'ಏಷಾ ತೇಽಭಿಹಿತಾ' ಎಂಬ ಮುಂದಿನ ಶ್ಲೋಕದಲ್ಲಿ ಅದನ್ನು ಉಪಸಂಹಾರ† ಮಾಡಿರುತ್ತದೆ. ಹೀಗೆ ಶಾಸ್ತ್ರದ ವಿಷಯಗಳ ವಿಭಾಗವನ್ನು ಇಲ್ಲಿ ತೋರಿಸಿದರೆ ಮುಂದೆ "ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇಣ ಯೋಗಿನಾಮ್" (೩-೩) (ಜ್ಞಾನಯೋಗದಿಂದ ಸಾಂಖ್ಯರಿಗೂ ಕರ್ಮಯೋಗದಿಂದ ಯೋಗಿಗಳಿಗೂ ನಿಷ್ಠೆಯನ್ನು ಹೇಳಿದೆನು)– ಎಂದು ಎರಡು ನಿಷ್ಠೆಗಳನ್ನು ಕುರಿತು ಹೇಳುವ ಶಾಸ್ತ್ರವು ಸುಲಭವಾಗಿ‡ ಮುಂದಕ್ಕೆ ಸಾಗುವದು. ಮತ್ತು ಹೀಗೆ ವಿಷಯವನ್ನು ವಿಂಗಡಿಸುವದರಿಂದ ಕೇಳುವವರಿಗೂ ಸುಲಭವಾಗಿ (ವಿಷಯವು) ಗೊತ್ತಾಗುತ್ತದೆ. ಆದ್ದರಿಂದ ಭಗವಂತನು (ಹೀಗೆ) ಹೇಳುತ್ತಾನೆ:–

## ಕರ್ಮಯೋಗದ ಮಹಿಮೆ

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ॥**

---

*. ಪರಮಾರ್ಥದೃಷ್ಟಿಯಿಂದ ನೋಡಿದರೆ ಶೋಕಕ್ಕೆ ಕಾರಣವಿಲ್ಲವೆಂದು ಹೇಳುವ ಸಂದರ್ಭದಲ್ಲಿ ಲೌಕಿಕದೃಷ್ಟಿಯಿಂದ ನೋಡಿದರೂ ಶೋಕಕ್ಕೆ ಕಾರಣವಿಲ್ಲವೆಂದು ಹೇಳುವದಕ್ಕಾಗಿ 'ಸ್ವಧರ್ಮಮಪಿ' ಮುಂತಾದ ಶ್ಲೋಕಗಳು ಬಂದಿರುತ್ತವೆ ಎಂದು ಭಾವ.

†. ಯುದ್ಧಮಾಡಬೇಕೆಂಬುದೂ ಭಗವಂತನ ತಾತ್ಪರ್ಯಕ್ಕೇ ಸೇರಿದ್ದಾಗಿದ್ದರೆ ಅದನ್ನೂ ಉಪಸಂಹಾರ ಮಾಡಬೇಕಾಗುತ್ತಿತ್ತು; ಆದರೆ ಜ್ಞಾನವನ್ನು ಮಾತ್ರ ಇಲ್ಲಿ ಉಪಸಂಹಾರ ಮಾಡಿರುವದರಿಂದ ಇದನ್ನು ಹೇಳುವದೇ ಅವನ ಆಶಯವೆಂದು ಸ್ಪಷ್ಟವಾಗುತ್ತದೆ.

‡. ಜ್ಞಾನವೂ ಕರ್ಮವೂ ಸೇರಿ ಒಂದು ಸಾಧನವೆಂಬುದೆ ಭಗವಂತನ ತಾತ್ಪರ್ಯವೆನ್ನುವವರ ಪಕ್ಷವು ಇವು ಬೇರೆಬೇರೆ ಸಾಧನಗಳೆಂದು ಹೇಳುವ ವಚನಗಳಿಗೆ ವಿರೋಧವಾಗಿರುವದು. ಜ್ಞಾನವು ಕೆಲವರಿಗೆ, ಕರ್ಮವು ಕೆಲವರಿಗೆ– ಹೀಗೆ ಯೋಗ್ಯತಾನುಸಾರವಾಗಿ ಬೇರೆ ಬೇರೆ ಎರಡು ಸಾಧನಗಳನ್ನು ಹೇಳಿದೆ ಎಂಬ ಪಕ್ಷದಲ್ಲಿ ಯಾವ ವಿರೋಧವೂ ಇರುವದಿಲ್ಲ,

೩೯. ಈವರೆಗೆ ನಿನಗೆ ಹೇಳಿದ್ದು ಸಾಂಖ್ಯಬುದ್ಧಿಯು. ಈಗ ಯೋಗ ಬುದ್ಧಿಯ ವಿಷಯವನ್ನು ಕೇಳು. ಎಲೈ ಪಾರ್ಥನೆ, ( ನೀನು ) ಈ ಬುದ್ಧಿಯುಳ್ಳ ವನಾದರೆ ಕರ್ಮಬಂಧವನ್ನು ಕಡಿದುಹಾಕುವೆ.

[ ಭಾಷ್ಯ ]

ಇಲ್ಲಿಯವರೆಗೆ ನಿನಗೆ ಹೇಳಿದ್ದು ಸಾಂಖ್ಯದ ಬುದ್ಧಿಯು– ಎಂದರೆ ಪರಮಾರ್ಥವಸ್ತುವನ್ನು ವಿಂಗಡಿಸಿ ತಿಳಿಯುವ ವಿಷಯಕ್ಕೆ ಸಂಬಂಧಪಟ್ಟ– ಜ್ಞಾನವು.* ಸಂಸಾರಕ್ಕೆ ಕಾರಣವಾದ ಶೋಕಮೋಹಗಳೇ ಮುಂತಾದ ದೋಷಗಳ ನಿವೃತ್ತಿಗೆ (ಇದು) ನೇರಾಗಿ ಕಾರಣವಾಗಿರುವದು. ಇದನ್ನು ಪಡೆಯುವದಕ್ಕೆ ಸಾಧನವಾಗಿರುವ ಯೋಗ(ಬುದ್ಧಿಯ ವಿಷಯ)ದಲ್ಲಾದರೆ ಎಂದರೆ ದ್ವಂದ್ವಗಳನ್ನು ತ್ಯಾಗಮಾಡಿ† ಯಾವ ಸಂಗವೂ ಇಲ್ಲದೆ ಈಶ್ವರನ ಆರಾಧನಕ್ಕಾಗಿ ಮಾಡುವ ಕರ್ಮಾನುಷ್ಠಾನರೂಪವಾದ ಕರ್ಮಯೋಗದ ಮತ್ತು ಸಮಾಧಿಯೋಗದ‡ ವಿಷಯದಲ್ಲಾದರೆ– ಇಗೋ ಈ ಮುಂದೆ ನಾನು ಹೇಳುವ ಜ್ಞಾನವನ್ನು ಕೇಳು.

ಈ ಜ್ಞಾನದಲ್ಲಿ ಆದರವುಂಟಾಗುವದಕ್ಕಾಗಿ (ಈಗ) ಅದನ್ನು ಹೊಗಳುತ್ತಾನೆ: ಎಲೈ ಪಾರ್ಥನೆ, ಈ ಯೋಗವಿಷಯಕವಾದ ಬುದ್ಧಿಯುಳ್ಳವನಾದರೆ ಕರ್ಮಬಂಧವನ್ನು– ಧರ್ಮಾಧರ್ಮಗಳೆಂಬ ಕರ್ಮವೆ ಬಂಧವು. ಈ ಕರ್ಮಬಂಧವನ್ನು– ಬಿಡಿಸಿಕೊಳ್ಳುವೆ, ಈಶ್ವರನ ಪ್ರಸಾದದಿಂದ ಜ್ಞಾನವನ್ನು ಪಡೆದೇ§ (ತಪ್ಪಿಸಿಕೊಳ್ಳುತ್ತೀಯೆ) ಎಂದು ಅಭಿಪ್ರಾಯ.

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦**

---

*. ಗೀತೆಯಲ್ಲಿ ಉಪದೇಶವಾಗಿರುವ ಕರ್ಮಯೋಗದ ಸ್ವರೂಪವನ್ನು ಅರಿಯುವದಕ್ಕೆ ಈ ಶ್ಲೋಕವು ಬಹಳ ಅವಶ್ಯಕವು. ಸಾಂಖ್ಯವೆಂದರೆ ಪರಮಾರ್ಥಜ್ಞಾನವು, ಕರ್ಮಯೋಗ(ಅಥವಾ ಸಂಕ್ಷೇಪವಾಗಿ ಹೇಳುವಾಗ 'ಯೋಗ')ವೆಂದರೆ ನಿಷ್ಕಾಮಬುದ್ಧಿಯಿಂದ ಮಾಡುವ ಕರ್ಮವು– ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡ ಹೊರತು ಗೀತಾರ್ಥವು ನಿರ್ಣಯವಾಗುವದಿಲ್ಲ. ಮುಂದೆ ೩ನೆಯ ಅಧ್ಯಾಯದಲ್ಲಿ ಇದು ಸ್ಪಷ್ಟವಾಗುವದು. ಸಾಂಖ್ಯವೆಂದರೆ ಸಂನ್ಯಾಸವು– ಕರ್ಮವನ್ನು ಬಿಡುವದು– ಎಂದು ಬಾಲಗಂಗಾಧರತಿಲಕರವರು ವ್ಯಾಖ್ಯಾನಮಾಡಿಕೊಂಡದ್ದರಿಂದ ಅವರ ಗೀತಾಸಿದ್ಧಾಂತವೇ ಬೇರೆಯಾಗಿಬಿಟ್ಟಿದೆ. ಈ ಮತವು ನಿರಾಧಾರವೆಂಬುದಕ್ಕೆ ಪೀಠಿಕೆಯನ್ನು ನೋಡಿ.

†. ರಾಗದ್ವೇಷವಿಲ್ಲದೆ ಸಹಿಸಿಕೊಂಡು. ‡. ಯೋಗವೆಂಬ ಮಾತಿನಲ್ಲಿ ಫಲಾಸಕ್ತಿಯಿಲ್ಲದೆ ಮಾಡುವ ಕರ್ಮವೂ ಮನಸ್ಸಿನಲ್ಲಿ ಮಾಡುವ ಧ್ಯಾನವೂ ಸೇರಿರುವವು. §. ಜ್ಞಾನವು ಬಂಧನಿವೃತ್ತಿಗೆ ನೇರಾದ ಕಾರಣವು ; ಯೋಗವು ಜ್ಞಾನವನ್ನು ಕೊಟ್ಟು ಅದರ ಮೂಲಕ ಮುಕ್ತಿಯನು ಕೊಡುವದು.

೪೦. ಇಲ್ಲಿ ಮಾಡಿದ್ದಕ್ಕೆ ನಾಶವಿಲ್ಲ, ದೋಷವಿಲ್ಲ. ಈ ಧರ್ಮವನ್ನು ಸ್ವಲ್ಪ (ಮಾಡಿದರೂ) ಮಹಾಭಯದಿಂದ ಕಾಪಾಡುತ್ತದೆ.

[ಭಾಷ್ಯ]

ಇನ್ನೂ ಒಂದು ವಿಷಯ. ಈ ಮೋಕ್ಷಮಾರ್ಗವಾದ ಕರ್ಮಯೋಗದಲ್ಲಿ, ಮಾಡಿದ್ದಕ್ಕೆ ನಾಶವಿಲ್ಲ. ಅಭಿಕ್ರಮ ಎಂಬ ಮಾತಿಗೆ ಉಪಕ್ರಮಿಸುವದು, ಪ್ರಾರಂಭಿಸುವದು ಎಂದರ್ಥ. ಕೃಷಿ ಮುಂತಾದವುಗಳಲ್ಲಿ* ಮಾಡಿದ್ದಕ್ಕೂ ಫಲವಿಲ್ಲದೆ ಹೋಗಬಹುದು; ಆದರಂತೆ ಈ ಯೋಗವಿಷಯದಲ್ಲಿ ಫಲವಿಲ್ಲದೆ ಹೋಗುವದೆಂಬುದಿಲ್ಲ– ಎಂದರ್ಥ. ಮತ್ತು ವೈದ್ಯದಲ್ಲಿರುವ ಹಾಗೆ† ಇದರಲ್ಲಿ ದೋಷವೂ ಇರುವದಿಲ್ಲ. ಮತ್ತೆ ಹೇಗೆಂದರೆ ಈ ಯೋಗವೆಂಬ ಧರ್ಮವನ್ನು ಸ್ವಲ್ಪ ಅನುಷ್ಠಾನಮಾಡಿದರೂ (ಅದು) ಹುಟ್ಟುವದು ಸಾಯುವದು– ಮುಂತಾದ ಸಂಸಾರದ ಮಹಾಭಯವುಂಟಾಗದಂತೆ ಕಾಪಾಡುವದು.‡

## ಕಾಮಿಗಳಿಗೆ ಕರ್ಮಯೋಗವು ದಕ್ಕದು

ಇದುವರೆಗೆ ಹೇಳಿದ ಸಾಂಖ್ಯಜ್ಞಾನ,§ ಮತ್ತು ಈ ಮುಂದೆ ಹೇಳುವ ಯೋಗಜ್ಞಾನ– ಎಂಬ ಈ ಜ್ಞಾನವು,

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥**

*. ಬೇಸಾಯ ಮಾಡಿದರೂ ಮಳೆಯಿಲ್ಲದೆ ಹೋದರೆ ಮಾಡಿದ ಶ್ರಮವು ವ್ಯರ್ಥವಾಗಬಹುದಲ್ಲವೆ? ಆದರೆ ಈ ಯೋಗದಲ್ಲಿ ಮಾಡಿದ ಕರ್ಮಕ್ಕೆ ಹಾಗೆ ಫಲವಿಲ್ಲದೆ ಹೋಗುವದಿಲ್ಲ

†. ರೋಗಕ್ಕೆ ಮಾಡಿದ ಚಿಕಿತ್ಸೆಯಿಂದ ರೋಗವು ಹೋಗುವ ಬದಲು ಅದು ಹೆಚ್ಚಾಗಲೂ ಬಹುದು, ಅಥವಾ ಬೇರೊಂದು ರೋಗವು ಹುಟ್ಟಿಕೊಳ್ಳಲೂ ಬಹುದು. ಯೋಗದಲ್ಲಿ ಇಂಥ ಅಪಾಯವೇನೂ ಇಲ್ಲ.

‡. ಜ್ಞಾನವನ್ನುಂಟುಮಾಡಿ ಅಜ್ಞಾನದಿಂದಾಗಿರುವ ಸಂಸಾರದ ಭಯವನ್ನು ಅತ್ಯಂತವಾಗಿ ನಾಶಮಾಡಿಬಿಡುತ್ತದೆ.

§. ಇಲ್ಲಿ ಕರ್ಮಯೋಗವನ್ನೊಂದನ್ನೇ ಹೊಗಳುವದಕ್ಕೆ ಪ್ರಾರಂಭವಾಗಿದೆ. ಆದರೂ ಕರ್ಮಯೋಗದಲ್ಲಿರುವ ನಿಶ್ಚಯಾತ್ಮಕವಾದ ಬುದ್ಧಿಯು ಸಾಂಖ್ಯವನ್ನೇ ಅವಲಂಬಿಸಿರುವದು, ಮತ್ತು ಕರ್ಮಯೋಗಕ್ಕೆ ಜ್ಞಾನವೇ ಫಲವಾಗಿರುವದು. ಈ ಕಾರಣಗಳಿಂದ ಮುಂದಿನ ಶ್ಲೋಕವು ನಿಶ್ಚಯಾತ್ಮಕವಾದ ಒಂದೇ ಜ್ಞಾನದ ವಿಷಯವನ್ನು ತಿಳಿಸುವದೆಂದು ಅರ್ಥಮಾಡಿರುತ್ತಾರೆ. ಆಗನೆಯ ಶ್ಲೋಕದ ಭಾಷ್ಯವನ್ನೂ ಟಿಪ್ಪಣವನ್ನೂ ನೋಡಿ.

೪೧. ಎಲೈ ಕುರುನಂದನನೆ, ಇಲ್ಲಿ ನಿಶ್ಚಯರೂಪವಾಗಿರುವ ಒಂದೇ ಒಂದು ಜ್ಞಾನವಿರುವದು. ನಿಶ್ಚಯವಿಲ್ಲದವರ ಜ್ಞಾನಗಳು ಅನೇಕ ಕೊಂಬೆಗಳುಳ್ಳವಾಗಿಯೂ ಅನಂತವಾಗಿಯೂ ಇರುವವು.

[ ಭಾಷ್ಯ ]

ಎಲೈ ಕುರುನಂದನನೆ, ಇಲ್ಲಿ ಎಂದರೆ ಈ ಶ್ರೇಯೋಮಾರ್ಗದಲ್ಲಿ ನಿಶ್ಚಯಸ್ವಭಾವವಾದ ಈ ಒಂದೇ* ಜ್ಞಾನವಿರುವದು. (ಇದು) ಕವಲುಕವಲಾಗಿರುವ ಉಳಿದ ತಪ್ಪುತಿಳಿವುಗಳನ್ನು ಬಾಧಿಸುತ್ತದೆ; ಏಕೆಂದರೆ ಇದು ಸರಿಯಾದ ಪ್ರಮಾಣದಿಂದ† ಉಂಟಾಗಿರುವದು. ಆದರೆ ಉಳಿದ ಬುದ್ಧಿಗಳು ಯಾವವು ಉಂಟೋ —ಯಾವ ಬುದ್ಧಿಗಳು ಕವಲೊಡೆದು ಹಬ್ಬಿದರೆ ಅನಂತವಾಗಿಯೂ ಅಪಾರವಾಗಿಯೂ ಸಂಸಾರವು ನಾಶವಾಗದಂತೆ ಒಂದೇ ಸಮನೆ ಬೆಳೆದು ಹರಡಿಕೊಳ್ಳುವದೊ (ಶಾಸ್ತ್ರ)ಪ್ರಮಾಣದಿಂದುಂಟಾಗುವ ವಿವೇಕಜ್ಞಾನದಿಂದ‡ ಯಾವ ಅನಂತವಾದ ಭೇದಬುದ್ಧಿಗಳು ಹೋಗಿಬಿಟ್ಟರೆ ಸಂಸಾರವೂ ಹೋಗಿಬಿಡುವದೋ— ಆ ಬುದ್ಧಿಗಳು ಬಹಳ ಕವಲುಳ್ಳವಾಗಿರುವವು,§ ಬಹುಪ್ರಕಾರವಾಗಿರುವವು ಎಂದರ್ಥ. ಮತ್ತು ಆ ಬುದ್ಧಿಗಳ ಪ್ರತಿಯೊಂದು ಕವಲೂ ಲೆಕ್ಕವಿಲ್ಲದಷ್ಟು ಕವಲುಗಳಾಗಿ ಒಡೆದುಕೊಂಡಿರುವದು. (ಹೀಗೆ ಕವಲಾಗಿರುವದು) ಯಾರ (ಬುದ್ಧಿಗಳು)? ಎಂದರೆ ನಿಶ್ಚಯಜ್ಞಾನವಿಲ್ಲದವರ, ಎಂದರೆ ಪ್ರಮಾಣದಿಂದ ಉಂಟಾಗುವ ವಿವೇಕಜ್ಞಾನವು ಯಾರಿಗಿಲ್ಲವೊ ಅವರ (ಬುದ್ಧಿಗಳು) ಎಂದು ಅರ್ಥ.

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

---

*. ಸಾಂಖ್ಯಜ್ಞಾನ, ಯೋಗಜ್ಞಾನ— ಎಂದು ಎರಡು ಜ್ಞಾನವಲ್ಲ, ಎರಡೂ ಸೇರಿ ಒಂದೇ ಫಲವುಳ್ಳ ಒಂದೇ ಜ್ಞಾನವಾಗಿವೆ.

†. ವೇದಾಂತವಾಕ್ಯವೆಂಬ ಪ್ರಮಾಣ. ‡. ಪರಮಾರ್ಥಜ್ಞಾನ. §. ಸಂಶಯಜ್ಞಾನಗಳು, ವಿಪರೀತಜ್ಞಾನಗಳು— ಇವು ಲೆಕ್ಕವಿಲ್ಲದಷ್ಟು ಬಗೆಯಾಗಿರುವವು. ಪರಮಾರ್ಥಜ್ಞಾನವು ಒಂದೇ ಬಗೆ. ಅದು ಮಿಕ್ಕ ತಪ್ಪುತಿಳಿವುಗಳನ್ನೆಲ್ಲ ಹೋಗಿಸಿಬಿಡುವದು.

೪೨-೪೪. ವೇದದಲ್ಲಿರುವ* (ಅರ್ಥ)ವಾದಗಳಲ್ಲಿಯೇ ರತರಾಗಿಯೂ, (ಅವುಗಳು ಹೇಳುವದನ್ನು ಬಿಟ್ಟರೆ) ಮತ್ತೇನೂ ಇಲ್ಲವೆನ್ನುವವರಾಗಿಯೂ ಕಾಮಾತ್ಮರಾಗಿಯೂ ಸ್ವರ್ಗದಲ್ಲಿಯೇ ತಾತ್ಪರ್ಯವಿಟ್ಟವರಾಗಿಯೂ ಇರುವ ಅಜ್ಞಾನಿಗಳು ಭೋಗೈಶ್ವರ್ಯಗಳನ್ನು ಪಡೆಯುವದಕ್ಕೆ (ಸಾಧನವೆಂದು) ಬಗೆ ಬಗೆಯಾದ ಕರ್ಮಗಳಿಂದ ಕೂಡಿದ ಯಾವ ಬಣ್ಣನೆಯ ಮಾತನ್ನು ಗಳಹುತ್ತಿರು ವರೊ ಆ ಮಾತಿಗೆ ಮನಸೋತು ಭೋಗೈಶ್ವರ್ಯಗಳಲ್ಲಿಯೆ ಆಸಕ್ತರಾಗಿರುವವ ರಿಗೆ ಅಂತಃಕರಣದಲ್ಲಿ ನಿಶ್ಚಯಾತ್ಮಕವಾದ ಜ್ಞಾನವು (ಎಂದಿಗೂ) ಉಂಟಾಗಲಾರದು

[ಭಾಷ್ಯ]

ಯಾರಿಗೆ ನಿಶ್ಚಯರೂಪವಾದ ಬುದ್ಧಿಯು* ಇರುವದಿಲ್ಲವೋ ಅವರು ಈ ಮುಂದೆ ಹೇಳುವ ಹೂವಿನ ಮಾತನ್ನು [ಪುಷ್ಪಿತಾಂ] ಆಡುತ್ತಿರುವರು, ಹೂ ಬಿಟ್ಟಿರುವ ಮರದಂತೆ ಸೊಗಸಾಗಿ ಕೇಳುವದಕ್ಕೆ (ಮಾತ್ರ) ರಮಣೀಯವಾ ಗಿರುವ ಮಾತನ್ನು- (ನೋಡುವದಕ್ಕೆ) ವಾಕ್ಯದಂತೆ† ತೋರುತ್ತಿರುವದನ್ನು- ಆಡುತ್ತಿರುವರು. ಅವರು ಯಾರೆಂದರೆ ಅಜ್ಞರು, ಎಂದರೆ ಅಲ್ಪಬುದ್ಧಿಯುಳ್ಳ ಅವಿ ವೇಕಿಗಳು ಎಂದರ್ಥ; ವೇದವಾದಗಳಲ್ಲಿಯೇ ರತರಾಗಿರುವರು, ಎಂದರೆ ಬಹು ವಾಗಿ ಅರ್ಥವಾದಗಳನ್ನೂ‡ ಫಲಗಳನ್ನೂ ಸಾಧನಗಳನ್ನೂ ತಿಳಿಸುವ ವೇದವಾಕ್ಯ ಗಳಲ್ಲಿಯೇ ಆಸಕ್ತರಾಗಿರುವವರು; ಎಲೈ ಪಾರ್ಥನೆ, ಇವರು ಸ್ವರ್ಗ, ಪಶು- ಮುಂತಾದ ಫಲಕ್ಕೆ ಸಾಧನವಾದ ಕರ್ಮಗಳನ್ನು ಬಿಟ್ಟರೆ ಬೇರೆಯೇನೂ§ ಇಲ್ಲ ವೆನ್ನುವ ಸ್ವಭಾವದವರು.

*. ಈ ಶ್ಲೋಕಗಳಿಗೆ ಇಲ್ಲಿ ಕೊಟ್ಟಿರುವ ಅಕ್ಷರಾರ್ಥವು ಬೇಗ ಹೊಳೆಯುದೆ ಹೋಗಬ ಹುದು. ಇವುಗಳ ಸರಳವಾದ ಭಾವಾರ್ಥವೇನೆಂದರೆ; ಕೆಲವರು ವೇದದಲ್ಲಿ ಹೇಳಿರುವ ಸ್ವರ್ಗವೇ ಎಲ್ಲಕ್ಕೂ ಹೆಚ್ಚಿನ ಸುಖವೆಂದೂ ಅದಕ್ಕಿಂತ ಹೆಚ್ಚಿನ ಪುರುಷಾರ್ಥವನ್ನು ವೇದದಲ್ಲಿ ಹೇಳಿಲ್ಲವೆಂದೂ ವಾದಿಸುತ್ತಿರುವರು. ಇಂಥವರಿಗೆ ಭೋಗವೂ ಭಾಗ್ಯವೂ ಮುಖ್ಯವಾದ ಧ್ಯೇಯವಾಗಿರುವದರಿಂದ ಇವರು ಅವುಗಳಿಗೆ ಸಾಧನವಾಗಿ ಹೇಳಿರುವ ಕರ್ಮಗಳನ್ನೇ ಮಾಡುತ್ತಲೂ ಅವುಗಳನ್ನು ಕುರಿತ ಮಾತನ್ನೇ ಆಡುತ್ತಲೂ ಇರುವರು. ಇಂಥ ಕರ್ಮಿಗಳಿಗೆ ಈಗ ನಾನು ಹೇಳುವ ಕರ್ಮಯೋಗದಲ್ಲಿ ಬುದ್ಧಿಯು ಹೋಗಲಾರದು.

†. ಯಾವದಾದರೊಂದು ಅರ್ಥವನ್ನು ಬೋಧಿಸುವ ಮಾತುಗಳ ಗುಂಪು ನಿಜವಾದ ವಾಕ್ಯವು. ಅರ್ಥವಿರುವ ಹಾಗೆ ತೋರಿದರೂ ತನಗೆ ಯಾವದೊಂದು ಸರಿಯಾದ ವಿಷಯವೂ ಇಲ್ಲದೆ ಸುಮ್ಮನೆ ಮಾತುಗಳ ಜೋಡುಗಿರಿ ಇದ್ದರೆ ಆ ಗುಂಪಿಗೆ 'ವಾಕ್ಯಾಭಾಸ'- ಎಂದರೆ ವಾಕ್ಯದಂತೆ ಕಾಣುವ ಮಾತು ಗಳ ಗುಂಪು ಎಂದು ಹೆಸರು.

‡. ವಿಧಿಸಿರುವದನ್ನು ಹೊಗಳುವ ವಾಕ್ಯ. §. ಈಶ್ವರನಾಗಲಿ, ನಿರ್ಗುಣಬ್ರಹ್ಮವಾಗಲಿ ಇಲ್ಲ.

ಮತ್ತು ಇವರು ಕಾಮಾತ್ಮರು, ಎಂದರೆ ಕಾಮವೇ ಸ್ವಭಾವವಾಗಿ ಕಾಮದಲ್ಲಿಯೇ ತಾತ್ಪರ್ಯವುಳ್ಳವರಾಗಿರುವವರು ಎಂದರ್ಥ. ಸ್ವರ್ಗದಲ್ಲಿಯೇ ತಾತ್ಪರ್ಯವುಳ್ಳವರು ಎಂದರೆ ಸ್ವರ್ಗವೇ ಪರಮಪುರುಷಾರ್ಥವೆಂದು* ಅದನ್ನೇ ಪ್ರಧಾನವಾಗಿ ಇಟ್ಟುಕೊಂಡಿರುವವರು. ಜನ್ಮಕರ್ಮಫಲಪ್ರದವಾದ– ಕರ್ಮಫಲವೆಂದರೆ ಕರ್ಮದ ಫಲವು. ಜನ್ಮವೆಂಬ ಕರ್ಮಫಲವನ್ನೆ ಕೊಡುವಂಥ†–'ಮಾತನ್ನು ಆಡುತ್ತಿರುವರು' ಎಂದು ಇಲ್ಲಿ ಸೇರಿಸಿಕೊಳ್ಳಬೇಕು. ಕ್ರಿಯಾವಿಶೇಷಗಳಿಂದ ಬಹುವಾಗಿ ಕೂಡಿರುವದಾಗಿಯೂ ಎಂದರೆ ಬೇರೆ ಬೇರೆ ಕ್ರಿಯೆಗಳೇ‡ ಯಾವ ಮಾತಿನಲ್ಲಿ ಬಹಳವಾಗಿರುವವೋ ಅಂಥ ಸ್ವರ್ಗ, ದನಕರುಗಳು, ಮಕ್ಕಳುಮರಿಗಳು ಮುಂತಾದವುಗಳನ್ನು ಬೆಳಗುವದಾಗಿಯೂ ಭೋಗೈಶ್ವರ್ಯವೆಂಬ ಗತಿಯನ್ನು ಕೊಡುವ– ಎಂದರೆ ಭೋಗವೂ ಐಶ್ವರ್ಯವೂ ಸಿಕ್ಕುವದಕ್ಕೆ ಸಾಧನವಾಗಿರುವ; (ಹೀಗಿರುವ) ಕ್ರಿಯಾವಿಶೇಷಗಳನ್ನೇ ಬಹುವಾಗಿ (ಯಾವ ಮಾತು ತಿಳಿಸುವದೋ) ಅಂಥ ಮಾತನ್ನೇ§ ಆಡುತ್ತಾ (ಯಾವ) ಮೂಢರು ಸಂಸಾರದಲ್ಲಿಯೇ ತೊಳಲುತ್ತಿರುವರೋ ಎಂದಭಿಪ್ರಾಯ.

ಹೀಗೆ ಭೋಗದಲ್ಲಿಯೂ ಐಶ್ವರ್ಯದಲ್ಲಿಯೂ ಆಸಕ್ತರಾಗಿ ಭೋಗವನ್ನು ಪಡಬೇಕು, ಐಶ್ವರ್ಯವನ್ನೂ (ಪಡೆಯಬೇಕು) ಎಂದು ಭೋಗೈಶ್ವರ್ಯಗಳಲ್ಲಿಯೇ ಪ್ರೇಮವನ್ನಿಟ್ಟು ಅದೇ ತಾವಾಗಿ– ಈ ಮೇಲೆ ಹೇಳಿದಂಥ ಕ್ರಿಯಾವಿಶೇಷಗಳಿಂದ ಬಹುವಾಗಿ ಕೂಡಿರುವ ಮಾತಿನಿಂದ ಬುದ್ಧಿಯನ್ನು ಕಳೆದುಕೊಂಡು, ವಿವೇಕಜ್ಞಾನವು ಮರೆಯಾಗಿರುವ|| ಆ ಜನರಿಗೆ ನಿಶ್ಚಯಾತ್ಮಕವಾದ ಬುದ್ಧಿಯು

---

*. ಮೋಕ್ಷವೆನ್ನುವ ಬೇರೊಂದು ಹೆಚ್ಚಿನ ಪುರುಷಾರ್ಥವಿಲ್ಲವೆಂದು ಅವರ ಭಾವ.

†. ಕರ್ಮವಿರುವವರೆಗೆ ಜನ್ಮವು ತಪ್ಪಿದ್ದಲ್ಲ. ಬಹುಕಾಲ ಕಳವು ಮಾಡಿ ಬೇಡಿಬಿದ್ದು ಹೊರಕ್ಕೆ ಬಂದವನು ಮತ್ತೆ ವಾಸನೆಯಿಂದ ಕಳವಿನ ಮಾತನ್ನೇ ಆಡಿಕೊಳ್ಳುತ್ತಿರುವನು, ಅದರಿಂದ ತಾನೇ ಮೋಹಿತನಾಗಿ ಮತ್ತೆ ಕಳವನ್ನೇ ಮಾಡುತ್ತಿರುವನು. ಇದರಂತೆ ಕಾಮಿಗಳೂ ಕರ್ಮವನ್ನು ಮಾಡಿ ಸಂಸಾರದಲ್ಲಿ ಬೀಳುತ್ತಿರುವರು ಎಂದರ್ಥ.

‡. ಇಂಥ ಕರ್ಮವನ್ನು ಮಾಡಿದರೆ ಇಂಥ ಫಲವು ಸಿಕ್ಕುವದು ಎಂದು ಕರ್ಮಫಲಗಳ ವಿಚಾರವನ್ನೇ ಅವರು ಮಾತಾಡುತ್ತಿರುವರೇ ಹೊರತು ಕರ್ಮಕ್ಕೆ ಮೀರಿದ ಮೋಕ್ಷವೆಂಬುದನ್ನು ಅವರು ಕಾಣರು.

§. ಕರ್ಮಕಾಂಡಕ್ಕೆ ಸಂಬಂಧಪಟ್ಟ ಮಾತು. ಜ್ಞಾನಕಾಂಡವನ್ನು ಇವರು ಲೆಕ್ಕಿಸುವದಿಲ್ಲವೆಂದು ಭಾವ. ಇದುವರೆಗೆ ಹೇಳಿದ್ದು ಮೀಮಾಂಸಕರ ಮತವಾಗಿದೆ. ಪೀಠಿಕೆಯನ್ನು ನೋಡಿ.

||. ಸಾಧನಫಲಬುದ್ಧಿಯು ಯಾರಿಗೆ ಇರುವದೋ ಅವರಿಗೆ ಯೋಗಬುದ್ಧಿಯು ಗೋಚರವಾಗದು. ಇದಕ್ಕಾಗಿಯೇ ಇಲ್ಲಿ ಕರ್ಮವನ್ನು ನಿಂದಿಸಿರುವದು. ಕಠ (೨–೫) ಮುಂ (೧–೨–೭) ಮುಂತಾದ ಶ್ರುತಿಗಳನ್ನು ನೋಡಿ.

ಅಂತಃಕರಣದಲ್ಲಿ ಉಂಟಾಗಲಾರದು. (ಮೂಲದಲ್ಲಿ ಸಮಾಧಿ ಎಂಬ ಮಾತಿದೆ ಯಷ್ಟೆ.) ಮನುಷ್ಯನ ಉಪಭೋಗಕ್ಕೆ ಎಲ್ಲವೂ ಅಂತಃಕರಣದಲ್ಲಿಡಲ್ಪಡುವದು ರಿಂದ ಅಂತಃಕರಣಕ್ಕೆ ಸಮಾಧಿಯೆಂದು ಹೆಸರು. ಈ (ಅಂತಃಕರಣವೆಂಬ) ಸಮಾಧಿಯಲ್ಲಿ (ಇಂಥ ಜನರಿಗೆ) ಸಾಂಖ್ಯದ ಅಥವಾ ಯೋಗದ ಬುದ್ಧಿಯು ಉಂಟಾಗಲಾರದು ಎಂದರ್ಥ.

ಯಾರು ಹೀಗೆ ವಿವೇಕಬುದ್ಧಿಯಿಲ್ಲದೆ ಕಾಮಾತ್ಮರಾಗಿರುವರೋ ಅಂಥವರಿಗೆ ಆಗುವ ಫಲವನ್ನು ಹೇಳುತ್ತಾನೆ:—

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

೪೫. ವೇದಗಳು ತ್ರೈಗುಣ್ಯದ ವಿಷಯವಾಗಿ ಹೇಳುತ್ತಿರುವವು. ಎಲೈ ಅರ್ಜುನನೆ, (ನೀನು) ನಿಸ್ತ್ರೈಗುಣ್ಯನಾಗು. ದ್ವಂದ್ವಗಳಿಲ್ಲದವನಾಗಿಯೂ ಯಾವಾಗಲೂ ಸತ್ತ್ವಗುಣದಲ್ಲಿಯೇ ಇರುವವನಾಗಿಯೂ ಯೋಗಕ್ಷೇಮ ವಿಲ್ಲದವನಾಗಿಯೂ ಸ್ವತಂತ್ರಮನಸ್ಸುಳ್ಳವನಾಗಿಯೂ (ಇರು.)

[ಭಾಷ್ಯ]

ವೇದಗಳು ತ್ರೈಗುಣ್ಯದ ವಿಷಯವಾಗಿ ಹೇಳುವವು; ಎಂದರೆ ಸಂಸಾರವನ್ನೇ ಪ್ರಕಾಶಿಸುತ್ತಿರುವವು.* ಆದರೆ ಎಲೈ ಅರ್ಜುನನೆ, ನೀನು ನಿಸ್ತ್ರೈಗುಣ್ಯನಾಗು, ಎಂದರೆ ಕಾಮವಿಲ್ಲದವನಾಗಿರು† ಎಂದರ್ಥ. ದ್ವಂದ್ವಗಳಿಲ್ಲದವನಾಗಿರು. ಸುಖದುಃಖಗಳಿಗೆ ಕಾರಣವಾಗಿರುವ (ಪರಸ್ಪರವಾಗಿ) ಪ್ರತಿಪಕ್ಷವಾಗಿರುವ ಪದಾರ್ಥಗಳಿಗೆ ದ್ವಂದ್ವಗಳು ಎಂದು ಹೆಸರು. ಅವುಗಳಿಲ್ಲದವನು ನಿರ್ದ್ವಂದ್ವನು. ಅಂಥವನಾಗಿರು. ನೀನು ಯಾವಾಗಲೂ ಸತ್ತ್ವಗುಣದಲ್ಲಿಯೇ ಇರುವವನಾಗಿರು. ನಿತ್ಯವೂ ಸತ್ತ್ವಗುಣವನ್ನೇ‡ ಆಶ್ರಯಿಸಿರು. ಮತ್ತು ಯೋಗಕ್ಷೇಮಗಳಿಲ್ಲದವನಾಗಿರು. ಇಲ್ಲದ್ದನ್ನು ಸಂಪಾದಿಸಿಕೊಳ್ಳುವದು

---

*. ಮಂತ್ರಬ್ರಾಹ್ಮಣಗಳಲ್ಲಿ ಕರ್ಮಗಳನ್ನೂ ಕರ್ಮಫಲಗಳನ್ನೂ ಹೇಳಿರುತ್ತದೆಯಷ್ಟೆ. ಅದು ಗುಣತ್ರಯದಿಂದ ಬದ್ಧರಾದ ಸಂಸಾರಿಗಳಿಗಾಗಿಯೆ.

†. ಮೂರು ಗುಣಗಳನ್ನು ಮೀರಿರುವದೆಂದರೆ ವಿಷಯಭೋಗದ ಆಸೆಯಿಲ್ಲದಿರುವದೆ. ಇಲ್ಲಿ ಕಾಮವನ್ನು ಗೆಲ್ಲಬೇಕೆಂದು ಉಪದೇಶಿಸಿದೆಯೆ ಹೊರತು ಕರ್ಮವನ್ನು ಬಿಡಬೇಕೆಂದು ಹೇಳಿಲ್ಲ. ಏಕೆಂದರೆ ಫಲಾಸಕ್ತಿಯಿಲ್ಲದೆ ಮಾಡಿದ ಕರ್ಮದಿಂದ ಚಿತ್ತಶುದ್ಧಿಯಾಗುವದೆಂದು ಹೇಳುವದೆ ಯೋಗಮಾರ್ಗದ ಮುಖ್ಯಉದ್ದೇಶ. (ಗೀ ೫–೧೧; ೧೭-೧೧; ೪-೫, ೬ ನೋಡಿ.)

‡. ರಜಸ್ತಮಗಳ ಮಿಶ್ರವಿಲ್ಲದ ಶುದ್ಧಸತ್ತ್ವವನ್ನೇ ಹೊಂದಿರು ಎಂದರ್ಥ. ಏಕೆಂದರೆ ಸತ್ತ್ವವು ಹೆಚ್ಚಿದ ಮೇಲೆಯೆ ಮೂರು ಗುಣಗಳನ್ನೂ ಮೀರಬಹುದು.

ಯೋಗವು, ಸಂಪಾದಿಸಿದ್ದನ್ನು ಕಾಪಾಡಿಕೊಳ್ಳುವದು ಕ್ಷೇಮವು. ಯೋಗ ಕ್ಷೇಮಗಳನ್ನೇ ಪ್ರಧಾನವಾಗಿ ಇಟ್ಟುಕೊಂಡಿರುವವನಿಗೆ ಶ್ರೇಯಸ್ಸಿನಲ್ಲಿ ಪ್ರವೃತ್ತಿಯುಂಟಾಗುವದು ಕಷ್ಟವು. ಆದ್ದರಿಂದ ಯೋಗಕ್ಷೇಮಗಳನ್ನು (ಮುಖ್ಯವಾಗಿ)ಗಣಿಸದವನಾಗಿರು* ಎಂದರ್ಥ. ಸ್ವತಂತ್ರವಾದ ಮನಸ್ಸುಳ್ಳವ ನಾಗಿರು ಎಂದರೆ ಪ್ರಮತ್ತನಾಗದೆ† ಇರು. ಸ್ವಧರ್ಮವನ್ನು ಮಾಡುತ್ತಿರು ವಾಗ ನೀನು (ಅನುಸರಿಸಬೇಕಾದದ್ದು) ಇದೇ ಉಪದೇಶವು.

## ಕರ್ಮಯೋಗದ ಫಲವು

ವೇದದಲ್ಲಿ ಹೇಳಿರುವ ಕರ್ಮಗಳಿಗೆಲ್ಲ ಲೆಕ್ಕವಿಲ್ಲದಷ್ಟು ಫಲಗಳನ್ನು ಹೇಳಿ ದೆಯಷ್ಟೆ; ಅವುಗಳು (ಯಾವ)ವನ್ನೂ ಬಯಸದೆ ಇದ್ದಮೇಲೆ ಅಂಥ (ಕರ್ಮ)ಗ ಗಳನ್ನು ಈಶ್ವರನಿಗೋಸ್ಕರವೆಂದು ಮಾಡುವದಾದರೂ ಏಕೆ? ಎಂದರೆ ಹೇಳು ತ್ತೇನೆ ಕೇಳು:—

**ಯಾವಾನರ್ಥ ಉದಪಾನೇ ಸರ್ವತಃಸಂಪ್ಲುತೋದಕೇ ।**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

೪೬. (ಸಣ್ಣ) ಜಲಾಶಯದಲ್ಲಿ ಎಷ್ಟು ಪ್ರಯೋಜನವಿರುವದೋ ಎಲ್ಲೆ ಲ್ಲಿಯೂ ನೀರು ತುಂಬಿರುವ (ಜಲಾಶಯದಲ್ಲಿ)ಯೂ (ಅಷ್ಟು ಇದ್ದೇ ಇರು ವದು.) ಎಲ್ಲಾ ವೇದಗಳಲ್ಲಿಯೂ (ಎಷ್ಟು ಪ್ರಯೋಜನವಿರುವದೋ) ಅಷ್ಟು (ತತ್ತ್ವ)ವನ್ನು ಬಲ್ಲ ಬ್ರಾಹ್ಮಣನಿಗೂ (ಆಗಿಯೇ ಆಗುವದು).

[ಭಾಷ್ಯ]

ಹೇಗೆ ಲೋಕದಲ್ಲಿ ಭಾವಿ ಕೆರೆ ಮುಂತಾದ (ಬೇರೆ ಬೇರೆ) ಅನೇಕ ಸಣ್ಣ ಸಣ್ಣ ಜಲಾಶಯಗಳಲ್ಲಿ ಎಷ್ಟು ಎಂದರೆ ಎಷ್ಟರ ಮಟ್ಟಿನ ಅರ್ಥವು ಎಂದರೆ ಫಲವು-ಸ್ನಾನಪಾನಗಳೇ ಮುಂತಾದ ಪ್ರಯೋಜನವು– ಆಗುವದೋ‡ ಅಷ್ಟು ಪ್ರಯೋ ಜನವೂ ಎಲ್ಲೆಲ್ಲಿಯೂ ನೀರು ತುಂಬಿರುವ (ಜಲಾಶಯದಲ್ಲಿಯೂ) ಆಗಿ

*. ಈ ವಿಷಯದಲ್ಲಿ ಗೀ. ೯–೨೨ ಈ ಶ್ಲೋಕದ ಭಾಷ್ಯವನ್ನೂ ಅಲ್ಲಿರುವ ಟಿಪ್ಪಣಿಯನ್ನೂ ನೋಡಿ.

†. ಎಚ್ಚರದಿಂದಿರು ; ಕರ್ಮಯೋಗದಿಂದಾಗುವ ಉತ್ತಮಫಲವನ್ನು ಲಕ್ಷ್ಯದಲ್ಲಿಟ್ಟು ಕೊಳ್ಳುವದನ್ನು ಮರೆಯಬೇಡ.

‡. ಎಲ್ಲೆಲ್ಲಿಯೂ ನೀರಿರುವ ದೊಡ್ಡ ಸರೋವರದಲ್ಲಿ ಸಣ್ಣಸಣ್ಣ ಕೆರೆ ಕುಂಟೆ ಮುಂತಾದವುಗ ಳಿಂದ ಆಗುವ ಪ್ರಯೋಜನವೆಲ್ಲ ಆಗುವದು ; ಹೆಚ್ಚಾಗಿಯೂ ಆಗುವದು–ಎಂದು ಅಭಿಪ್ರಾಯ. ಈ ಶ್ಲೋಕಕ್ಕೆ ಬೇರೆ ಬೇರೆ ಅರ್ಥಗಳನ್ನು ವ್ಯಾಖ್ಯಾನಕಾರರು ಮಾಡಿರುತ್ತಾರೆ. ಪರಿಶಿಷ್ಟವನ್ನು ನೋಡಿ.

ಬಿಡುವದೋ, ಎಂದರೆ ಅದರಲ್ಲಿ ಆಗುವ ಪ್ರಯೋಜನದಲ್ಲಿಯೇ ಅಡಕವಾಗಿರು ವದೋ ಎಂದರ್ಥ; ಇದರಂತೆ, ವೇದಗಳಲ್ಲೆಲ್ಲ ಎಂದರೆ ವೇದೋಕ್ತವಾದ ಕರ್ಮ ಗಳಲ್ಲೆಲ್ಲ ಆಗುವ ಕರ್ಮಫಲವೆಷ್ಟೋ ಅಷ್ಟು ಫಲವೂ ತಿಳಿದಿರುವ ಬ್ರಾಹ್ಮಣ ನಿಗೆ, ಎಂದರೆ ಪರಮಾರ್ಥತತ್ತ್ವವನ್ನು ತಿಳಿದಿರುವ ಸಂನ್ಯಾಸಿಗೆ ಆಗುವ ಫಲದಲ್ಲಿ- (ಉದಾಹರಣೆಯು) ಎಲ್ಲೆಲ್ಲಿಯೂ ನೀರಿರುವ ಸ್ಥಳದಂತೆ ಇರುವ ವಿಜ್ಞಾನದ ಫಲದಲ್ಲಿ- ಆಗಿಬಿಡುವದು, ಎಂದರೆ ಅದರಲ್ಲಿಯೇ ಸೇರಿಹೋಗಿರುವದು* ಎಂದರ್ಥ. "[ಹೇಗೆ ಕೃತ† ಎಂಬ ಲೆತ್ತವನ್ನು ಗೆದ್ದುಕೊಂಡವನಿಗೆ ಕೆಳಗಿನ ಲೆತ್ತದ ಗರ ಗಳು ಸೇರಿಕೊಂಡು ಹೋಗುವವೊ ಹಾಗೆ‡] ಪ್ರಜೆಗಳು ಮಾಡುವ ಪುಣ್ಯವೆಲ್ಲ ಆ (ರೈಕ್ವನು) ಅರಿತಿರುವದನ್ನು ಅರಿತುಕೊಂಡವನಿಗೆ ಸೇರಿಹೋಗುವದು" (ಛಾ) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. "ಎಲ್ಲಾ ಕರ್ಮವೂ (ಜ್ಞಾನದಲ್ಲಿ) ಸೇರಿ ಹೋಗುವದು." (೪-೩೩) ಎಂದು (ಭಗವಂತನೂ) ಮುಂದೆ ಹೇಳಿರು ತ್ತಾನೆ. ಆದ್ದರಿಂದ ಜ್ಞಾನನಿಷ್ಠೆಗೆ ತಕ್ಕ ಯೋಗ್ಯತೆ ಬರುವವರೆಗೂ ಕರ್ಮಕ್ಕೆ

---

*. ಮಹಾಜಲಾಶಯವಿದ್ದಲ್ಲಿ ಸಣ್ಣ ಕೆರೆ ಕುಂಟೆ ಮುಂತಾದವುಗಳ ಬಯಕೆ ಬೇಕಾಗ ದಂತೆ (ಕರ್ಮ)ಯೋಗದಿಂದ ಉಂಟಾಗುವ ಜ್ಞಾನವಿರುವ ಕಡೆ ವೇದೋಕ್ತಕರ್ಮಗಳ ಸಣ್ಣ ಸಣ್ಣ, ಪ್ರಯೋಜನಗಳು ಬೇಕಾಗುವದಿಲ್ಲ.

† ಒಂದಾನೊಂದು ಪಗಡೆಯ ಆಟದಲ್ಲಿ 'ಕೃತ' ಎಂದರೆ ನಾಲ್ಕು, 'ತ್ರೇತಾ' ಎಂದರೆ ಮೂರು, 'ದ್ವಾಪರ' ಎಂದರೆ ಎರಡು, 'ಕಲಿ' ಎಂದರೆ ಒಂದು- ಹೀಗೆ ಸಂಜ್ಞೆ ಇರುವದು. ಕೃತ ಎಂಬ ಲೆತ್ತ ಬಿದ್ದರೆ ಬರಿಯ ನಾಲ್ಕೇ ಅಲ್ಲದೆ (೪+೩+೨+೧ = ) ೧೦ ಬಿದ್ದಂತೆ ಲೆಕ್ಕಕ್ಕೆ ತೆಗೆದುಕೊಳ್ಳು ತ್ತಾರೆ. ಕೃತ ಎಂಬ ಲೆತ್ತದ ಗರ ಬಿದ್ದರೆ ಅದರಲ್ಲಿ ತ್ರೇತಾ ಮುಂತಾದವುಗಳ ಪ್ರಯೋಜನವೂ ಹೇಗೆ ಸೇರಿಹೋಗುವದೋ ತ್ರೇತಾ ಮುಂತಾದವು ಬಿದ್ದರೆ ಹೇಗೆ ಅಷ್ಟಷ್ಟೆ ಗೊತ್ತಾದ ಲೆಕ್ಕವೇ ಆಗುವದೋ ಅದರಂತೆ ಜ್ಞಾನಫಲದಲ್ಲಿ ಕರ್ಮಗಳಿಂದ ಆಗುವ ಬೇರೆ ಬೇರೆ ಕ್ಷುದ್ರಫಲಗಳೆಲ್ಲ ಅಡ ಕವಾಗಿರುವವು. ಕರ್ಮಗಳಿಗೆ ಮಾತ್ರ ಅವವುಗಳಿಗೆ ಗೊತ್ತಾದ ಫಲವೇ ಆಗುವದು ಎಂದು ಶ್ರುತಿಯ ತಾತ್ಪರ್ಯ. ಛಾಂದೋಗ್ಯದಲ್ಲಿ ಸಂವರ್ಗವಿದ್ಯೆ ಎಂಬ (೪-೧-೪) ಸಗುಣವಿದ್ಯೆಯ ವಿಚಾರ ದಲ್ಲಿ ಈ ಶ್ರುತಿ ಬಂದಿದೆಯಾದರೂ ಇದು ನಿರ್ಗುಣವಿದ್ಯೆಗೂ ಹೊಂದುತ್ತದೆ: ಈಶ್ವರಾರ್ಪಣಬುದ್ಧಿ ಯಿಂದ ಮಾಡುವ ಕರ್ಮಯೋಗದ ಫಲವನ್ನು ತಿಳಿಸುವದಕ್ಕೆ ಉತ್ತಮದೃಷ್ಟಾಂತವಾಗಿಯೂ ಇದೆ.

‡. ಕಂಸದಲ್ಲಿ ಹಾಕಿರುವ ಭಾಗವು ನಿ|| ಗು|| ಮ|| ಮೈ|| ಪಾಠಗಳಲ್ಲಿಲ್ಲ. ಅರ್ಥ ಕ್ಕೇನೋ ಅವಶ್ಯವಾಗಿದೆ. ರೈಕ್ವನೆಂಬಾತನು ಅರಿತಿರುವದು ಸಂವರ್ಗವಿದ್ಯೆ. ಸಂವರ್ಗವಿದ್ಯೆಯ ಫಲದಲ್ಲಿ ಮಿಕ್ಕ ಸಣ್ಣ ಸಣ್ಣ ಪುಣ್ಯದ ಫಲಗಳು ಅಡಕವಾಗಿರುವವೆಂದು ಈ ಛಾಂದೋಗ್ಯಶ್ರುತಿಯ ಅರ್ಥ.

ಅಧಿಕಾರಿಯಾದವನು ಭಾವಿ ಕೆರೆ ಮುಂತಾದ್ದರಂತೆ ಇರುವ ಕರ್ಮಗಳನ್ನು ಕೂಡ (ಈಶ್ವರಾರ್ಪಣಾಬುದ್ಧಿಯಿಂದ) ಮಾಡುತ್ತಿರಬೇಕು.*

ನಿನ್ನ ವಿಷಯವು (ಹೇಗೆನ್ನುವೆಯೋ ?)

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**

೪೭. ನಿನಗೆ ಕರ್ಮದಲ್ಲಿಯೇ ಅಧಿಕಾರವು, ಫಲಗಳಲ್ಲಿ ಎಂದಿಗೂ ಬೇಡ. ಕರ್ಮಫಲಕ್ಕೆ ಹೇತುವಾಗದೆ ಇರು, ಅಕರ್ಮದಲ್ಲಿಯೂ ನಿನಗೆ ಸಂಗವಾಗದಿರಲಿ.

[ ಭಾಷ್ಯ ]

ನಿನಗೆ ಕರ್ಮದಲ್ಲಿಯೇ ಅಧಿಕಾರವೇ† ಹೊರತು ಜ್ಞಾನನಿಷ್ಠೆಯಲ್ಲಿಲ್ಲ. ಅದರಲ್ಲಿಯೂ ಕರ್ಮವನ್ನು ಮಾಡುವಾಗ ಫಲಗಳಲ್ಲಿ ಎಂದಿಗೂ ಯಾವ ಅವಸ್ಥೆಯಲ್ಲಿಯೂ‡ ಅಧಿಕಾರವು ಬೇಡ, ಕರ್ಮಫಲಗಳಲ್ಲಿ ಆಸೆಯುಂಟಾಗದಿರಲಿ ಎಂದರ್ಥ. ಯಾವಾಗ ಕರ್ಮಫಲದಲ್ಲಿ ನಿನಗೆ ಬಯಕೆಯುಂಟಾಗುವದೋ ಆಗ ನೀನು ಕರ್ಮಫಲಕ್ಕೆ ಹೇತುವಾಗಬೇಕಾಗುವದು, ಹಾಗೆ ಕರ್ಮಫಲ(ಪ್ರಾಪ್ತಿಗೆ) ಕಾರಣನಾಗಬೇಡ. ಏಕೆಂದರೆ ಯಾವಾಗ ಕರ್ಮಫಲದ ಆಸೆಯಿಂದ ಪ್ರೇರಿತನಾಗಿ ಕರ್ಮದಲ್ಲಿ ಪ್ರವರ್ತಿಸುತ್ತಾನೋ ಆಗ ಕರ್ಮದ ಫಲವು ಹುಟ್ಟುವದಕ್ಕೇ§ ಕಾರಣನಾಗಬೇಕಾಗುತ್ತದೆ. 'ಕರ್ಮಫಲವೇ ಬೇಕಿಲ್ಲವಾದ ಮೇಲೆ

*. 'ಭಾವಿ ಕೆರೆ ಮುಂತಾದವುಗಳಂತ ಅಲ್ಪಪ್ರಯೋಜನವುಳ್ಳ' ಎಂಬ ವಿಶೇಷಣದಿಂದ ಸೂಚಿತವಾಗುವದೇನೆಂದರೆ ಜ್ಞಾನದಿಂದ ಆಗುವ ಮಹಾಫಲವನ್ನು ಪಡೆಯಲಾಗದವನು ಅಲ್ಪಫಲದ ಕಾಮ್ಯಕರ್ಮವನ್ನು ಮಾಡಬಹುದು. ಆದರೆ ಈ ಮಹಾಫಲವನ್ನು ಬಯಸುವವನು ನಿಷ್ಕಾಮಕರ್ಮವನ್ನು ಮಾಡಬೇಕು. ಜ್ಞಾನದ ಮಹಾಫಲವನ್ನು ಇಲ್ಲಿ ಹೊಗಳಿರುವದು ಕರ್ಮಯೋಗದಿಂದ ಪರಂಪರೆಯಾಗಿ ಆ ಮಹಾಫಲವನ್ನು ಪಡೆಯಬಹುದೆಂದು ಸೂಚಿಸುವದಕ್ಕೇ ಹೊರತು ಜ್ಞಾನವನ್ನು ತಿಳಿಸುವದಕ್ಕಲ್ಲ. ಏಕೆಂದರೆ ಇದು ಸಾಂಖ್ಯಯೋಗದ ಪ್ರಕರಣವಲ್ಲ, (ಕರ್ಮ)ಯೋಗದ ಪ್ರಕರಣ.

†. ಕರ್ಮಗಳಿಂದ ವಾಸನೆಯು ಹೋದರೆ ಜ್ಞಾನವುಂಟಾಗುವದೆಂದು ಸ್ಮೃತಿ. ಆದ್ದರಿಂದ ಅಪಕ್ವಕಷಾಯನಾದ ನೀನು ಕರ್ಮಕ್ಕೆ ತಕ್ಕವನು. ಈ ಶ್ಲೋಕಕ್ಕೆ ಬಾಲಗಂಗಾಧರತಿಲಕರವರು ಮಾಡಿರುವ ಅರ್ಥವನ್ನೂ ಅವರ ವ್ಯಾಖ್ಯಾನದಲ್ಲಿರುವ ದೋಷವನ್ನೂ ಪೀಠಿಕೆಯಲ್ಲಿ ತಿಳಿಸಿದೆ.

‡. ಕರ್ಮಕಾಲದಲ್ಲಿಯಾಗಲಿ, ಅದಕ್ಕೆ ಮೊದಲಾಗಲಿ ಆಮೇಲೆಯಾಗಲಿ.

§. 'ಕರ್ಮಫಲಸ್ಯೈವ ಜನ್ಮಸೋ ಹೇತುರ್ಭವೇತ್' ಎಂಬಲ್ಲಿ ವ್ಯಧಿಕರಣದ ಅನ್ವಯ ಮಾಡಿಕೊಂಡರೆ ಮೇಲೆ ಹೇಳಿರುವಂತೆ ಅರ್ಥವಾಗುತ್ತದೆ; ಸಮಾನಾಧಿಕರಣವಾಗಿ ಅನ್ವಯಮಾಡಿಕೊಂಡರೆ 'ಕರ್ಮಫಲವಾದ ಜನ್ಮಕ್ಕೆ ಕಾರಣನಾಗಬೇಕಾಗುತ್ತದೆ' ಎಂದು ಅರ್ಥವಾಗುತ್ತದೆ. ಎರಡು ಪಕ್ಷದಲ್ಲಿಯೂ ಕರ್ಮಫಲವೆಂದರೆ ಮತ್ತೆ ಹುಟ್ಟುವದೆ. (೨—೪೩, ೫೧— ಈ ಶ್ಲೋಕಗಳನ್ನು ನೋಡಿ.) 'ಅವನು ಕಾಮಗಳಿಂದ ಮತ್ತೆಮತ್ತೆ ಹುಟ್ಟುತ್ತಾನೆ' ಎಂಬ ಮುಂಡಕ(೩-೨-೨)ಶ್ರುತಿಯನ್ನೂ ನೋಡಿ

ದುಃಖರೂಪವಾದ ಕರ್ಮವೇತಕ್ಕೆ ?– ಎಂದು ಅಕರ್ಮದಲ್ಲಿಯೂ ನಿನಗೆ ಸಂಗವಾಗದೆ ಇರಲಿ, ಎಂದರೆ ಕರ್ಮವನ್ನು ಮಾಡದೆ ಇರುವದರಲ್ಲಿ ಪ್ರೀತಿಯುಂಟಾಗದೆ ಇರಲಿ.

ಕರ್ಮಫಲದಿಂದ ಪ್ರೇರಿತನಾಗಿ ಕರ್ಮವನ್ನು ಮಾಡಕೂಡದಾದರೆ ಮತ್ತೆ ಹೇಗೆ ಮಾಡಬೇಕು ?– ಎಂದರೆ ಹೇಳುತ್ತೇನೆ:—

**ಯೋಗಸ್ಥಃ ಕುರು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಧನಂಜಯ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**

೪೮. ಎಲೈ ಧನಂಜಯನೆ, ಯೋಗದಲ್ಲಿದ್ದುಕೊಂಡು ಸಂಗವನ್ನು ಬಿಟ್ಟು ಸಿದ್ಧಿಯಲ್ಲಿಯೂ ಅಸಿದ್ಧಿಯಲ್ಲಿಯೂ ಸಮನಾಗಿಯೇ ಇದ್ದುಕೊಂಡು, ಕರ್ಮಗಳನ್ನು ಮಾಡು. ಸಮತ್ವವು ಯೋಗವೆನಿಸುವದು.

[ ಭಾಷ್ಯ ]

ಎಲೈ ಧನಂಜಯನೆ, ಯೋಗದಲ್ಲಿದ್ದುಕೊಂಡು ಕೇವಲ ಈಶ್ವರನಿಗಾಗಿಯೇ ಕರ್ಮಗಳನ್ನು ಮಾಡು. [ಅದರಲ್ಲಿಯೂ] ಈಶ್ವರನು ನನ್ನ ವಿಷಯದಲ್ಲಿ ಸಂತುಷ್ಟನಾಗಲಿ ಎಂದು ಸಂಗವನ್ನು* ಬಿಟ್ಟು (ಮಾಡು). ಸಿದ್ಧಿಯಲ್ಲಿಯೂ ಅಸಿದ್ಧಿಯಲ್ಲಿಯೂ ಸಮನಾಗಿಯೇ– ಫಲದ ಆಸೆಯೇ ಇಲ್ಲದೆ ಕರ್ಮವನ್ನು ಮಾಡುತ್ತಿರಲು ಅಂತಃಕರಣಶುದ್ಧಿಯಿಂದ ಹುಟ್ಟಿದ ಜ್ಞಾನವನ್ನು ಪಡೆಯುವದು ಸಿದ್ಧಿಯು; ಅದಕ್ಕೆ ವಿಪರೀತವಾದ (ಅಶುದ್ಧಿ)ಯಿಂದ (ಜ್ಞಾನವನ್ನು ಪಡೆಯದೆ ಇರುವದು) ಅಸಿದ್ಧಿಯು. ಸಿದ್ಧಿ, ಅಸಿದ್ಧಿ– ಎಂಬ ಈ ಎರಡರಲ್ಲಿಯೂ ಸಮನಾಗಿಯೇ– ಇದ್ದುಕೊಂಡು ಕರ್ಮಗಳನ್ನು ಮಾಡು. ಯೋಗದಲ್ಲಿದ್ದುಕೊಂಡು ಕರ್ಮವನ್ನು† ಮಾಡು ಎಂದು ಹೇಳಿದೆಯಷ್ಟೆ, ಈ ಯೋಗವು ಯಾವದು? ಎಂದರೆ ಇದೇ: ಸಿದ್ಧಿ ಅಸಿದ್ಧಿ– ಇವೆರಡರಲ್ಲಿಯೂ‡ (ಮನಸ್ಸಿನಲ್ಲಿ ವಿರುಪೇರಿಲ್ಲದೆ) ಸಮವಾಗಿರುವದೇ ಯೋಗವೆನಿಸುವದು.

---

* ಅಹಂಕಾರದಿಂದಾದ ಆಸಕ್ತಿಯನ್ನು. (೧೮-೬, ೨೩ ಶ್ಲೋಕಗಳನ್ನು ನೋಡಿ.) 'ಈಶ್ವರನು ಸಂತೋಷಹೊಂದಲಿ ಎಂಬ ಸಂಗವನ್ನೂ ಬಿಟ್ಟು' ಎಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ. ಇಲ್ಲಿನ ಭಾಷ್ಯಪಙ್ಕ್ತಿಯು ಇದಕ್ಕನುಗುಣವಾಗಿರುವಂತೆಯೂ ತೋರುತ್ತದೆ. ಆದರೆ ಇದು ಭಾಷ್ಯಕಾರರ ಮತವಾಗಿ ತೋರುವದಿಲ್ಲ. ಮುಂದಿನ ಶ್ಲೋಕದ ಭಾಷ್ಯವನ್ನು ನೋಡಿ.

† 'ಯತ್ರ ಸ್ಥಿತ್ವಾ ಕರ್ಮಕುರ್ವಿತ್ಯುಕ್ತಂ' ಎಂಬ ಮ॥ ಪಾಠವನ್ನು ಇಟ್ಟುಕೊಂಡಿದೆ.

‡ ಸಿದ್ಧಿಯಲ್ಲಿಯೂ ಅಸಿದ್ಧಿಯಲ್ಲಿಯೂ ಸಮನಾಗಿರುವದು ಎಂದರೆ ಸಿದ್ಧಿಯಾಗಲಿ ಬಿಡಲಿ ಕರ್ಮವನ್ನು ಮಾಡುತ್ತಿರುವದೇ ನನ್ನ ಕರ್ತವ್ಯವೆಂದು ತಿಳಿದಿರುವದು.

ಸಮತ್ವಬುದ್ಧಿಯುಳ್ಳವನಾಗಿ ಈಶ್ವರಾರಾಧನೆಗಾಗಿ ಮಾಡುವ ಈ ಕರ್ಮಕ್ಕಿಂತಲೂ,

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

೪೯. ಎಲೈ ಧನಂಜಯನೆ, ಕೀಳಾದ ಕರ್ಮವು ಬುದ್ಧಿಯೋಗಕ್ಕಿಂತಲೂ ದೂರವಾಗಿರುವದು. ಬುದ್ಧಿಯನ್ನೇ ಶರಣುಹೊಂದು. ಫಲವನ್ನೇ ಎಣಿಸುವವರು ಕೃಪಣರು.

[ ಭಾಷ್ಯ ]

ಕೀಳುಕರ್ಮವು ಎಂದರೆ ಫಲವನ್ನು ಬಯಸಿ ಮಾಡುವಾತನ ಕರ್ಮವು ಬುದ್ಧಿಯೋಗ(ಕರ್ಮ)ಕ್ಕಿಂತ* ಎಂದರೆ ಸಮತ್ವಬುದ್ಧಿಯಿಂದ ಕೂಡಿರುವ ಕರ್ಮಕ್ಕಿಂತಲೂ, (ಯೋಗ್ಯತೆಯಲ್ಲಿ) ಬಲು ದೂರವಾಗಿರುವದು. ಏಕೆಂದರೆ ಅದು ಜನ್ಮ, ಮರಣ, ಮುಂತಾದ್ದಕ್ಕೆ ಕಾರಣವಾಗಿರುತ್ತದೆ.† ಎಲೈ ಧನಂಜಯನೆ, ಹೀಗಿರುವದರಿಂದ ಬುದ್ಧಿಯಲ್ಲಿಯೇ– ಎಂದರೆ ಯೋಗವಿಷಯವಾದ ಬುದ್ಧಿಯಲ್ಲಿಯೇ, ಅಥವಾ ಅದು ಬೆಳೆದು ಒಳಿತದ್ದರಿಂದುಂಟಾಗುವ ಸಾಂಖ್ಯಬುದ್ಧಿಯಲ್ಲಿಯೇ‡– ಶರಣವನ್ನು ಬಯಸು, ಇದೇ ಅಭಯವನ್ನು ಹೊಂದುವದಕ್ಕೆ ಕಾರಣವೆಂದು (ಅದನ್ನೇ) ಬೇಡು, ಪರಮಾರ್ಥಜ್ಞಾನವನ್ನೇ ಶರಣುಹೊಂದು ಎಂದರ್ಥ. ಏಕೆಂದರೆ ಕೀಳುಕರ್ಮವನ್ನು ಮಾಡುತ್ತಾ ಫಲವನ್ನೇ ಎಣಿಸಿಕೊಂಡು ಫಲದಿಂದ ಪ್ರೇರಿತರಾಗಿರುವವರು ಕೃಪಣರೆನಿಸುವರು. "ಎಲೌ ಗಾರ್ಗಿಯೆ, ಈ ನಾಶವಿಲ್ಲದ (ಬ್ರಹ್ಮವನ್ನು) ಅರಿಯದೆ ಈ ಲೋಕದಿಂದ ಯಾವನು ಹೊರಟುಹೋಗುವನೋ ಅವನು ಕೃಪಣನು"(ಬೃ) ಎಂಬ ಶ್ರುತಿ§ ಇದಕ್ಕೆ ಪ್ರಮಾಣವು.

---

* ಬುದ್ಧಿಯೋಗಾತ್–ಎಂಬದಕ್ಕೆ ಬುದ್ಧೇರ್ಯೋಗೋ ಯಸ್ಯ ತಸ್ಮಾತ್ (ಕರ್ಮಣ) ಬುದ್ಧಿಯ ಸಂಬಂಧವುಳ್ಳ ಎಂಬ ವಿವರಣೆಯನ್ನು ಇಟ್ಟುಕೊಂಡು 'ಕರ್ಮಯೋಗಕ್ಕಿಂತಲೂ' ಎಂದು ಅರ್ಥವನ್ನು ಮಾಡಿರುತ್ತದೆ. ಇಲ್ಲಿ ಕರ್ಮಯೋಗನೇ ಪ್ರಕೃತವೆಂಬುದನ್ನು ಮರೆಯಬಾರದು.

† ೨-೪೭ ರಲ್ಲಿರುವ ಕರ್ಮಫಲಹೇತು ಎಂಬುದರ ವಿವರಣೆಯಿದು. ಹುಟ್ಟುವದು ಕಷ್ಟಪಡುವದು, ಕರ್ಮದ ಫಲವಾಗಿ ರೋಗ ಭೋಗ ಮುಪ್ಪು ಮುಂತಾದವುಗಳನ್ನು ಅನುಭವಿಸುವದು– ಇವೆಲ್ಲ ಕೀಳುಕರ್ಮದ ಫಲವೆ.

‡ ಈ ಪ್ರಕರಣದಲ್ಲಿ ಬುದ್ಧಿ ಎಂದರೆ ಕರ್ಮಯೋಗಬುದ್ಧಿಯೆಂಬ ಅರ್ಥವನ್ನಾದರೂ ಜ್ಞಾನವೆಂದಾದರೂ ಇಟ್ಟುಕೊಳ್ಳಬಹುದೆಂದು ಭಾವ. (೫೦ನೆಯ ಶ್ಲೋಕದ ಭಾಷ್ಯವನ್ನು ನೋಡಿ.)

§ ಬದುಕಿರುವಾಗಲೇ ಜ್ಞಾನವನ್ನು ಸಂಪಾದಿಸಿದವನೇ ಶ್ರೇಷ್ಠನು– ಎಂದು ಶ್ರುತಿಯ ತಾತ್ಪರ್ಯ. ಜ್ಞಾನವೇ ಕರ್ಮಯೋಗದ ಫಲವಾದ್ದರಿಂದ ಶ್ರುತಿಯನ್ನು ಅದಕ್ಕೂ ಉದಾಹರಿಸಬಹುದಾಗಿದೆ.

ಸಮತ್ವಬುದ್ಧಿಯುಳ್ಳವನಾಗಿ ಸ್ವಧರ್ಮವನ್ನು ಮಾಡಿಕೊಂಡಿರುವವನು ಯಾವ ಫಲವನ್ನು ಪಡೆಯುತ್ತಾನೆಂಬುದನ್ನು ಕೇಳು:—

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥**

೫೦. ಬುದ್ಧಿಯುಳ್ಳಾತನು ಸುಕೃತದುಷ್ಕೃತಗಳೆರಡನ್ನೂ ಇಲ್ಲಿ ಬಿಟ್ಟು ಬಿಡುತ್ತಾನೆ. ಆದ್ದರಿಂದ ಯೋಗಕ್ಕೆ ಪ್ರಯತ್ನಮಾಡು ; ಯೋಗವು ಕರ್ಮಗಳಲ್ಲಿರುವ ಜಾಣತನವು.

[ ಭಾಷ್ಯ ]

ಬುದ್ಧಿಯುಳ್ಳಾತನು, ಎಂದರೆ ಸಮತ್ವವಿಷಯವಾದ ಬುದ್ಧಿಯಿಂದ ಕೂಡಿರುವಾತನು ಇಲ್ಲಿ ಎಂದರೆ ಈ ಲೋಕದಲ್ಲಿಯೇ* ಸುಕೃತದುಷ್ಕೃತಗಳೆರಡನ್ನೂ ಬಿಟ್ಟುಬಿಡುತ್ತಾನೆ, ಎಂದರೆ ಸತ್ತ್ವಶುದ್ಧಿಯನ್ನೂ (ಅದರಿಂದ) ಜ್ಞಾನವನ್ನೂ ಹೊಂದುವದರ ಮೂಲಕ† ಪುಣ್ಯಪಾಪಗಳೆರಡನ್ನೂ ಪರಿತ್ಯಾಗಮಾಡುತ್ತಾನೆ. ಹೀಗಿರುವದರಿಂದ ಸಮತ್ವಬುದ್ಧಿಯೆಂಬ ಯೋಗಕ್ಕೆ ಪ್ರಯತ್ನಮಾಡು. ಯೋಗವೇ ಕರ್ಮಗಳಲ್ಲಿರುವ ಕೌಶಲವು, ಸ್ವಧರ್ಮವೆಂಬ ಕರ್ಮಗಳಲ್ಲಿದ್ದುಕೊಂಡು ಸಿದ್ಧಿಯಾಗಲಿ ಅಸಿದ್ಧಿಯಾಗಲಿ— ಎರಡರಲ್ಲಿಯೂ ಸಮತೆಯುಳ್ಳವನಾಗಿ ಈಶ್ವರನಿಗೆ ತನ್ನ ಮನಸ್ಸನ್ನರ್ಪಿಸಿರುವದೆಂಬ (ಯೋಗವಿದೆಯಷ್ಟೆ), ಅದೇ ಕೌಶಲವು, ಕುಶಲತನವು.‡ ಬಂಧನವನ್ನುಂಟುಮಾಡುವ ಸ್ವಭಾವವುಳ್ಳ ಕರ್ಮಗಳನ್ನೂ ಸಮತ್ವ

---

*. ಬದುಕಿರುವಾಗಲೆ. ಈ ವಿಷಯದಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

†. ತಾನು ಕರ್ತೃತ್ವವಿಲ್ಲದ ಆತ್ಮನೆಂದು ಅರಿತುಕೊಳ್ಳುವದರ ಮೂಲಕ.

‡. ಕರ್ಮಕ್ಕೆ ಫಲವಾಗದೆ ಇರುವದಿಲ್ಲವೆಂಬುದು ನಿಯಮವು. ಬಂಧನರೂಪವಾದ ಫಲವನ್ನು ಕೊಡುವ ಸ್ವಭಾವವುಳ್ಳ ಕರ್ಮವನ್ನು ಮುಕ್ತಿಗೆ ಕಾರಣವಾಗಿ ಮಾಡಿಕೊಳ್ಳುವದೇ ಜಾಣತನವೆಂದರ್ಥ. 'ಕುಶಲ' ಎಂಬ ಮಾತನ್ನು ಪುಣ್ಯಪಾಪಬಂಧಗಳಿಲ್ಲದವನೆಂಬ ಅರ್ಥದಲ್ಲಿ ಯೋಗಶಾಸ್ತ್ರಕಾರರು ಉಪಯೋಗಿಸುವ ರೂಢಿಯಿದೆ. (೩-೨೭) ಯೋಗಭಾಷ್ಯವನ್ನು ನೋಡಿ. 'ಯೋಗಃ ಕರ್ಮಸು ಕೌಶಲಮ್' ಎಂಬುದು ಯೋಗದ ಲಕ್ಷಣವೆಂದು ಕೆಲವರು ಭಾವಿಸುತ್ತಾರೆ. ಆಗ ಯೋಗವೆಂದರೆ ಕರ್ಮಗಳನ್ನು ಮಾಡುವ ಜಾಣತನವು ಎಂದು ಅರ್ಥವಾಗುತ್ತದೆ. ಈ ಜಾಣತನವು ಯಾವದು? ಎಂದರೆ ವಿಶೇಷಲಕ್ಷಣವನ್ನು ಕೊಡಬೇಕಾಗುವದು ; ಆದ್ದರಿಂದ 'ಸಮತ್ವವೇ ಯೋಗವು' ಎಂಬುದೇ ಲಕ್ಷಣ, ಯೋಗವು ಕರ್ಮಗಳನ್ನು ಮಾಡುವ ಜಾಣತನವು— ಎಂಬುದು ಅದರ ಹೊಗಳಿಕೆ— ಎಂಬ ಭಾಷ್ಯಕಾರರ ಮತವೇ ಸರಿಯಾಗಿ ತೋರುತ್ತದೆ

ಬುದ್ಧಿಯಿಂದ (ಅವುಗಳ) ಸ್ವಭಾವವನ್ನು ಬಿಡಿಸುವದೆಂಬುದು ಜಾಣತನವಲ್ಲವೆ? ಆದ್ದರಿಂದ ನೀನು ಸಮತ್ವಬುದ್ಧಿಯುಳ್ಳವನಾಗು.

ಏಕೆಂದರೆ,

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬನ್ಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಮ್ ॥ ೫೧ ॥**

೫೧. ಏಕೆಂದರೆ ಬುದ್ಧಿಯುಳ್ಳ ಪಂಡಿತರು ಕರ್ಮದಿಂದ ಆಗುವ ಫಲವನ್ನು ಬಿಟ್ಟವರಾಗಿ, ಜನ್ಮವೆಂಬ ಬಂಧದಿಂದ ಬಿಡುಗಡೆ ಹೊಂದಿ ನಿರ್ದುಷ್ಟವಾದ ಸ್ಥಾನವನ್ನು ಪಡೆಯುತ್ತಾರೆ.

[ಭಾಷ್ಯ]

'ಕರ್ಮಜಂ ಫಲಂ ತ್ಯಕ್ತ್ವಾ' ಎಂದು ಆಚೆ ಇರುವ ಮಾತಿಗೆ ಸಂಬಂಧ ಮಾಡಿಕೊಳ್ಳಬೇಕು. (ತನಗೆ) ಬೇಕಾದ* ಅಥವಾ ಬೇಡವಾದ ದೇಹವನ್ನು ಹೊಂದುವದೇ ಕರ್ಮದಿಂದಾಗುವ ಫಲವು. (ಹೀಗೆ) ಕರ್ಮಗಳಿಂದಾಗುವ ಫಲವನ್ನು ಬಿಟ್ಟು ಬುದ್ಧಿಯುಳ್ಳವರು ಎಂದರೆ ಸಮತ್ವಬುದ್ಧಿಯುಳ್ಳವರು ಜ್ಞಾನಿಗಳಾಗಿ ಜನ್ಮಬಂಧದಿಂದ ಮುಕ್ತರಾಗಿ, ಎಂದರೆ ಬದುಕಿರುವಾಗಲೇ† ಜನ್ಮವೆಂಬ ಬಂಧವನ್ನು ಬಿಡುಗಡೆ ಮಾಡಿಕೊಂಡು, ಅನಾಮಯವಾದ ಎಂದರೆ ಯಾವ ಉಪದ್ರವಗಳೂ ಇಲ್ಲದ ಮೋಕ್ಷವೆಂಬ ಹೆಸರುಳ್ಳ ವಿಷ್ಣುವಿನ‡ ಪರಮಸ್ಥಾನವನ್ನು ಪಡೆಯುತ್ತಾರೆ ಎಂದರ್ಥ.

---

*. ಜನರಿಗೆ ದೇವಮನುಷ್ಯಾದಿದೇಹಗಳು ಬೇಕು; ಮೃಗಜಂತುಗಳ ಅಥವಾ ಮರಗಿಡಗಳ ದೇಹಗಳು ಬೇಡ. ಪುಣ್ಯದಿಂದ ಬೇಕಾದ ಜನ್ಮವೂ ಪಾಪದಿಂದ ಬೇಡವಾದ ಜನ್ಮವೂ ಆಗುವವು. ಇದನ್ನು ಕರ್ಮವಿಪಾಕವೆಂದು ಕರೆಯುತ್ತಾರೆ.

†. ಜನ್ಮಬಂಧವನ್ನು ಬಿಟ್ಟು ಎಂದರೆ ಶರೀರವನ್ನು ಬಿಟ್ಟು ಎಂದು ಅರ್ಥವಾಗುತ್ತದೆ. ಜ್ಞಾನಿಯ ದೃಷ್ಟಿಯಿಂದ ಶರೀರವೆಂಬುದೇ ಇಲ್ಲ ; ಈ ಜ್ಞಾನವನ್ನು ಪಡೆದಿರುವದೇ ಅವನಿಗೆ ಬಂಧದ ಬಿಡುಗಡೆ.

‡. 'ಪದಂ' ಎಂಬ ಮಾತಿನಲ್ಲಿ 'ತದ್ವಿಷ್ಣೋಃ ಪರಮಂ ಪದಂ'– ಎಂಬ ಶ್ರುತಿಯು ಸೂಚಿತವಾಗಿದೆ— ಎಂದು ಭಾವ. ಇಲ್ಲಿ 'ಗಚ್ಛನ್ತಿ' (ಹೋಗುತ್ತಾರೆ) ಎಂಬ ಮಾತು ಇರುವದರಿಂದ ಇದಕ್ಕೆ ಅಕ್ಷರಾರ್ಥವನ್ನೆ ಕೆಲವರು ತೆಗೆದುಕೊಂಡು 'ಮೊದಲು ಜೀವನ್ಮುಕ್ತರಾಗಿದ್ದು ಆಮೇಲೆ ವಿದೇಹಕೈವಲ್ಯವನ್ನು ಪಡೆಯುತ್ತಾರೆ' ಎಂದು ಈ ಭಾಷ್ಯವಾಕ್ಯಕ್ಕೆ ಅರ್ಥಮಾಡಿರುತ್ತಾರೆ; ಆದರೆ ವಿದೇಹಮುಕ್ತಿಯು ಗೌಣವೇ ಹೊರತು ಮುಖ್ಯವಲ್ಲವೆಂಬುದನ್ನು 'ಬದುಕಿರುವಾಗಲೇ' ಎಂಬ ಮಾತಿನಲ್ಲಿ ಭಾಷ್ಯಕಾರರು ಸೂಚಿಸಿರುತ್ತಾರೆ. 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಶ್ರುತಿಯನ್ನು ವಿವರಿಸುವಾಗ ಬೃಹದಾರಣ್ಯಕಭಾಷ್ಯದಲ್ಲಿಯೂ ಸ್ಪಷ್ಟವಾಗಿ ಹೀಗೆಂದೇ ಹೇಳಿರುತ್ತಾರೆ.

ಅಥವಾ* ಕರ್ಮಯೋಗದಿಂದಾದ ಸತ್ತ್ವಶುದ್ಧಿಯಿಂದುಂಟಾಗುವ ಪರಮಾರ್ಥ ದರ್ಶನವೆಂಬ,– (ದೃಷ್ಟಾಂತದಲ್ಲಿ ಹೇಳಿದ) ಎಲ್ಲೆಲ್ಲಿಯೂ ನೀರಿರುವ ಜಲಾಶಯ ದಂತಿರುವ,– ಜ್ಞಾನವನ್ನೇ 'ಬುದ್ಧಿಯೋಗಾದ್ಧನಂಜಯ' (೨–೪೯) ಎಂಬುದ ರಿಂದ ಹಿಡಿದು (ಇಲ್ಲಿಯವರೆಗೂ) ತಿಳಿಸಿರುತ್ತದೆ (ಎಂದೂ ಅರ್ಥಮಾಡಬಹುದು); ಏಕೆಂದರೆ ಪುಣ್ಯಪಾಪಗಳನ್ನು ಕಳೆದುಕೊಳ್ಳುವದೇ ಮುಂತಾದ್ದಕ್ಕೆ (ಆ ಬುದ್ಧಿ ಯು) ನೇರಾಗಿ† ಕಾರಣವಾಗಿರುವದೆಂದು ಇಲ್ಲಿ ಹೇಳಿದೆ.

ಯೋಗಾನುಷ್ಠಾನದಿಂದ ಸತ್ತ್ವಶುದ್ಧಿಯಾಗಲಾಗಿ ಹುಟ್ಟುವ ಈ ಬುದ್ಧಿಯು ಯಾವಾಗ ಸಿಕ್ಕುವದೆಂದರೆ ಹೇಳುತ್ತೇನೆ:—

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

೫೨. ಯಾವಾಗ ನಿನ್ನ ಬುದ್ಧಿಯು ಮೋಹದ ಕಲ್ಮಷವನ್ನು ಮೀರು ವದೋ ಆಗ ಮುಂದೆ ಕೇಳಬೇಕಾದ್ದರ ವಿಷಯದಲ್ಲಿಯೂ ಹಿಂದೆ ಕೇಳಿದ್ದರ ವಿಷ ಯದಲ್ಲಿಯೂ ಬೇಸರವನ್ನು ಪಡೆಯುತ್ತೀಯೆ.

---

*. ೪೯ನೆಯ ಶ್ಲೋಕದ ಭಾಷ್ಯದಲ್ಲಿ 'ಬುದ್ಧೌ ಶರಣಮನ್ವಿಚ್ಛ' ಎಂಬುದನ್ನು ವಿವರಿಸು ವಾಗ ಬುದ್ಧಿಯೆಂದರೆ ಸಮತ್ವಬುದ್ಧಿಯೆಂದಾದರೂ ಸಾಂಖ್ಯಬುದ್ಧಿಯೆಂದಾದರೂ ಅರ್ಥವನ್ನು ಮಾಡಿಕೊಳ್ಳಬಹುದೆಂದು ಹೇಳಿತ್ತು. ಸಮತ್ವಬುದ್ಧಿಯೆಂಬ ಅರ್ಥವನ್ನು ಇಟ್ಟುಕೊಂಡು ಇದು ವರೆಗೆ ವ್ಯಾಖ್ಯಾನಮಾಡಿರುತ್ತದೆ. ಸಾಂಖ್ಯಬುದ್ಧಿಯೆಂಬ ಅರ್ಥವನ್ನು ಇಟ್ಟುಕೊಂಡರೂ ೪೯, ೫೦, ೫೧ನೆಯ ಶ್ಲೋಕಗಳು ಸಮಂಜಸವಾಗುವವು– ಎಂದು ತಾತ್ಪರ್ಯ. ಈ ಅರ್ಥದ ಪ್ರಕಾರ ಈ ಶ್ಲೋಕಗಳ ಭಾವಾರ್ಥವು ಹೇಗೆ ಆಗುವದೆಂದರೆ– (೪೯) ಕೀಳಾದ ಕರ್ಮವು ಸಾಂ ಖ್ಯವೆಂಬ ಜ್ಞಾನಯೋಗಕ್ಕಿಂತಲೂ ಬಹು ದೂರದಲ್ಲಿರುವದು; ಆದ್ದರಿಂದ ಈ ಸಾಂಖ್ಯಬುದ್ಧಿ ಯನ್ನೆ ಶರಣುಹೊಂದು. ಫಲವನ್ನು ಕೊಡುವದಕ್ಕೆ ಹೇತುವಾಗಿ ಕರ್ಮವನ್ನು ಮಾಡುವವರು ಕೃಪ ಣರು. (೫೦) ಸಾಂಖ್ಯಬುದ್ಧಿಯುಳ್ಳಾತನು ಸುಕೃತದುಷ್ಕೃತಗಳೆರಡನ್ನೂ ಮೀರಿರುತ್ತಾನೆ; ಆದ್ದ ರಿಂದ ಈ ಸಾಂಖ್ಯಯೋಗದಲ್ಲಿಯೇ ಮನಸ್ಸಿಡು. (೫೧) ಸಾಂಖ್ಯಬುದ್ಧಿಯುಳ್ಳವರು ಕರ್ಮಫಲ ವನ್ನು ಬಿಟ್ಟು ಜನ್ಮವೆಂಬ ಬಂಧದಿಂದ ಬಿಡುಗಡೆಯಾಗಿ ನಿರುಪದ್ರವವಾದ ಕೈವಲ್ಯವನ್ನು ಪಡೆಯುವರು.

ಈ ಅರ್ಥವನ್ನು ಮಾಡುವಾಗ – 'ಕರ್ಮಯೋಗದಿಂದ ಸಾಂಖ್ಯಬುದ್ಧಿಯು ದೊರೆತು ಇಂಥ ಉತ್ತಮಫಲವು ದೊರಕುವದಾದ್ದರಿಂದ ಕರ್ಮಯೋಗವು ನಿನಗೆ ಅವಶ್ಯಕ' ಎಂದು ಈ ಶ್ಲೋಕಗಳಿಗೆ ತಾತ್ಪರ್ಯವನ್ನು ಕಲ್ಪಿಸಬೇಕು.

†. ಸಮತ್ವಬುದ್ಧಿಯೆಂಬ ಅರ್ಥವನ್ನಿಟ್ಟುಕೊಂಡಾಗ 'ಜ್ಞಾನದ ಮೂಲಕ ಪುಣ್ಯಪಾಪ ಗಳನ್ನು ಕಳೆದುಕೊಳ್ಳುತ್ತಾನೆ' ಎಂದು ೫೦ನೆಯ ಶ್ಲೋಕಕ್ಕೆ ಅರ್ಥಮಾಡಬೇಕಾಗಿತ್ತು; ಈ ಎರಡನೆಯ ಅರ್ಥದಲ್ಲಿ ನೇರಾಗಿಯೇ ಕಳೆದುಕೊಳ್ಳುತ್ತಾನೆ ಎಂದು ಅರ್ಥಮಾಡಬಹುದು.

[ಭಾಷ್ಯ]

ಮೋಹದ ಕಲ್ಮಷವನ್ನು, ಎಂದರೆ ಆತ್ಮಾನಾತ್ಮಗಳ ವಿವೇಕಜ್ಞಾನವನ್ನು ಕದಡಿ ವಿಷಯದ ಕಡೆಗೇ ಅಂತಃಕರಣವು ಹರಿಯುವಂತೆ ಮಾಡುವ ಮೋಹಾತ್ಮಕವಾದ ಅವಿವೇಕವೆಂಬ ಕಾಲುಷ್ಯವನ್ನು, ನಿನ್ನ ಬುದ್ಧಿಯು ಯಾವಾಗ, ಯಾವ ಕಾಲದಲ್ಲಿ, ವಿಶಾರುವದೋ ಎಂದರೆ ಅದರ ಆಚೆಗೆ ಹೋಗಿ ಬಹು ಶುದ್ಧವಾದ ಸ್ವರೂಪವನ್ನು* ಹೊಂದುವದೋ ಎಂದರ್ಥ. ಆಗ, ಆ ಕಾಲದಲ್ಲಿ, ಮುಂದೆ ಕೇಳಬೇಕಾದದ್ದು ಮತ್ತು ಹಿಂದೆ ಕೇಳಿದ್ದು– ಇವೆರಡರ ವಿಷಯದಲ್ಲಿಯೂ ನಿನಗೆ ಬೇಸರವುಂಟಾಗುವದು, (ಇವೆರಡೂ) ಬೇಕಿಲ್ಲವಾಗುವದು.† ಆಗ ಮುಂದೆ ಕೇಳಬೇಕೆಂಬದೂ ಹಿಂದೆ ಕೇಳಿದ್ದೂ ನಿಷ್ಫಲವಾಗುವದೆಂದು‡ ಭಾವ.

(ಹೀಗೆ) ಮೋಹವೆಂಬ ಕಲ್ಮಷವನ್ನು ಮೀರಿ ಆತ್ಮವಿಷಯವಾದ ವಿವೇಕವನ್ನು ಪಡೆದು ಕರ್ಮಯೋಗದ ಫಲವಾದ ಪರಮಾರ್ಥಯೋಗವನ್ನು ಯಾವಾಗ ಪಡೆಯುವೆಯೆನ್ನುವೆಯೊ? ಅದನ್ನು ಕೇಳು:—

**ಶ್ರುತಿ ವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

೫೩. ಶ್ರುತಿಗಳಿಂದ ವಿರುದ್ಧವಾದ ತಿಳಿವಳಿಕೆಯುಳ್ಳದ್ದಾಗಿರುವ ನಿನ್ನ ಬುದ್ಧಿಯು ಸಮಾಧಿಯಲ್ಲಿಯೇ ನಿಶ್ಚಲವಾಗಿ ಅಲುಗಾಡದೆ ಯಾವಾಗ ನಿಲ್ಲುವದೋ ಆಗ (ಈ) ಯೋಗವನ್ನು ಪಡೆಯುತ್ತೀಯೆ.

[ಭಾಷ್ಯ]

ಶ್ರುತಿಗಳಿಂದ ವಿರುದ್ಧವಾದ ತಿಳಿವಳಿಕೆಯುಳ್ಳದ್ದಾಗಿರುವ ಎಂದರೆ ಅನೇಕವಿಧವಾದ ಸಾಧ್ಯಸಾಧನಸಂಬಂಧವನ್ನು§ ತೋರಿಸುವಂಥ ಶ್ರುತಿಗಳನ್ನು ಕೇಳಿಕೇಳಿ॥

---

*. ವಿಂಗಡಿಸಿ ತಿಳಿದುಕೊಳ್ಳುವ ಯೋಗ್ಯತೆಯನ್ನು. †. ವಿವೇಕವಿಲ್ಲದ ಬುದ್ಧಿಯು ಕರ್ಮಫಲವಿಷಯವಾದ ಶಾಸ್ತ್ರವನ್ನು ಹಿಂದೆ ಬಹಳವಾಗಿ ಕೇಳಿದ್ದರೂ ಇನ್ನೂ ಕೇಳುವದಕ್ಕೆ ತವಕಿಸುತ್ತಿರುವದು. ಕರ್ಮಯೋಗದಿಂದಾದ ಜ್ಞಾನವು ಅಳವಟ್ಟರೆ ಫಲಶ್ರುತಿಯು ರುಚಿಸುವದಿಲ್ಲ.

‡. ತತ್ತ್ವಜ್ಞಾನವೇ ಶಾಸ್ತ್ರಕ್ಕೆಲ್ಲ ಫಲವಾದ್ದರಿಂದ ಆಮೇಲೆ ಫಲವಿಷಯಕವಾದ ಶಾಸ್ತ್ರವನ್ನು ಕೇಳಬೇಕಾದ್ದಿರುವದಿಲ್ಲ ಎಂದು ಭಾವ. ಇಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ. §. ಸಾಧ್ಯವು ಸ್ವರ್ಗಾದಿಗಳು, ಸಾಧನವು ಜ್ಯೋತಿಷ್ಟೋಮಾದಿಗಳು.

||. ಇದರ ಮುಂದೆ 'ಪ್ರವೃತ್ತಿನಿವೃತ್ತಿಲಕ್ಷಣೈಃ' ಎಂಬ ಮಾತುಗಳು ಮ॥ ಮೈ॥ ಕೋಶಗಳಲ್ಲಿವೆ. ಇವನ್ನು ಸೇರಿಸಿಕೊಂಡಾಗ ಪ್ರವೃತ್ತಿಯು ಸರಿಯೋ ನಿವೃತ್ತಿಯು ಸರಿಯೋ ಎಂಬ ಸಂದೇಹವುಂಟಾದರೆ ಅದು ಪರಿಹಾರವಾಗುವ ಬಗೆಯನ್ನು ಹೇಳುವದಕ್ಕೆ ಶ್ಲೋಕವು ಬಂದಂತೆ ಆಗುತ್ತದೆ. ಈ ವಾಕ್ಯವು ಇಲ್ಲದ ಪಾಠವೇ ಸರಿಯೆಂದು ತೋರುವದು.

ಬಗೆಬಗೆಯಾದ ತಿಳಿವಳಿಕೆಯುಳ್ಳದ್ದಾಗಿ ವಿಕ್ಷಿಪ್ತವಾಗಿರುವ ನಿನ್ನ ಬುದ್ಧಿಯು ಯಾವಾಗ ನಿಶ್ಚಲವಾಗಿ ನಿಲ್ಲುವದೋ ಎಂದರೆ ವಿಕ್ಷೇಪವೆಂಬ* ಅಲುಗಾಟ ವಿಲ್ಲದೆ ಯಾವ ಕಾಲದಲ್ಲಿ ಸ್ಥಿರವಾಗುವದೋ (ಯಾವಾಗ) ನಿನ್ನ ಬುದ್ಧಿಯು ಸಮಾಧಿಯಲ್ಲಿ ಅಚಲವಾಗುವದೋ– ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಬೇಕಾ ಗಿರುವದರಿಂದ ಅವನಿಗೆ 'ಸಮಾಧಿ' ಎಂದು ಹೆಸರು. (ಆ ಆತ್ಮನಲ್ಲಿ ಯಾವಾಗ) ಅಂತಃಕರಣವು– ಅಲ್ಲಿಯೂ ವಿಕಲ್ಪವೇನೂ† ಇಲ್ಲದೆ (ಇರುವದೋ) ಎಂದಭಿ ಪ್ರಾಯ; ಆಗ ಯೋಗವನ್ನು ಎಂದರೆ ವಿವೇಕಪ್ರಜ್ಞೆಯೆಂಬ ಸಮಾಧಿಯನ್ನು‡ ಹೊಂದುತ್ತೀಯೆ.

## ಸ್ಥಿತಪ್ರಜ್ಞನ ಲಕ್ಷಣ

**ಅರ್ಜುನ ಉವಾಚ:—**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪ ॥**

೫೪. ಅರ್ಜುನನು ಕೇಳಿದನೇನೆಂದರೆ:— ಎಲೈ ಕೇಶವನೆ, ಸಮಾಧಿಯಲ್ಲಿ ರುವ ಸ್ಥಿತಪ್ರಜ್ಞನ ಭಾಷೆ ಯಾವದು? ಸ್ಥಿತಪ್ರಜ್ಞನು ಹೇಗೆ ಮಾತಾಡುವನು, ಹೇಗೆ ಕೂತಿರುವನು, ಹೇಗೆ ಓಡಾಡುವನು?

[ಭಾಷ್ಯ]

(ಇಲ್ಲಿ) ಪ್ರಶ್ನೆ ಮಾಡುವದಕ್ಕೆ ಅವಕಾಶವು ಸಿಕ್ಕಿದ್ದರಿಂದ ಸಮಾಧಿಪ್ರಜ್ಞೆ ಯನ್ನು ಪಡೆದಾತನ ಲಕ್ಷಣವನ್ನು ತಿಳಿದುಕೊಳ್ಳಬೇಕೆಂದು ಅರ್ಜುನನು ಕೇಳಿ ದ್ದೇನೆಂದರೆ:—

ಎಲೈ ಕೇಶವನೆ, ಸ್ಥಿತಪ್ರಜ್ಞನ ಭಾಷೆ ಯಾವದು? ನಾನೇ ಪರಬ್ರಹ್ಮವು ಎಂದು ಯಾರ ಪ್ರಜ್ಞೆಯು ನಿಲುಗಡೆಯನ್ನು ಹೊಂದಿರುವದೋ ಅವನು ಸ್ಥಿತ ಪ್ರಜ್ಞನು; ಅವನ ಭಾಷೆ ಯಾವದು? ಆತನ ಭಾಷಣವು, ಮಾತು, (ಯಾವದು)? ಎಂದರೆ ಸಮಾಧಿಯಲ್ಲಿರುವ ಈತನು ಮತ್ತೊಬ್ಬರಿಂದ ಏನೆಂದು ಹೇಳಿಸಿಕೊಳ್ಳು

*. ಮಲ (ಮಂಕು), ವಿಕ್ಷೇಪ (ಅಲುಗಾಟ)– ಎಂಬ ಅಂತಃಕರಣದಲ್ಲಿರುವ ಎರಡು ದೋಷಗಳ ನಿವೃತ್ತಿಯನ್ನು ೫೨, ೫೩ನೆಯ ಶ್ಲೋಕಗಳಲ್ಲಿ ಹೇಳಿದೆ.

†. ಹಾಗೆ, ಹೀಗೆ– ಎಂದು ಕಲ್ಪಿಸುವದು ವಿಕಲ್ಪವು; ಆತ್ಮವಸ್ತು ವಿಕಲ್ಪಕ್ಕೆ ವಿಷಯವಲ್ಲ.

‡. ಚಿತ್ತವನ್ನು ಆತ್ಮನಲ್ಲಿ ನಿಲ್ಲಿಸಿದ ಸ್ಥಿತಿ, ಆತ್ಮಜ್ಞಾನ. ಇಲ್ಲಿ ಆರನೆಯ ಅಧ್ಯಾಯದ ಸಮಾಧಿಯನ್ನೂ ಅದರ ಮುಂದೆ ತಿಳಿಸುವ ಜ್ಞಾನವನ್ನೂ ಸೂಚಿಸಿರುತ್ತದೆ.

ತ್ತಾನೆ?* ಈ ಸ್ಥಿತಪ್ರಜ್ಞನು ತಾನಾದರೂ ಏನು ಹೇಳುವನು?† ಹೇಗೆ ಕೂತಿರುವನು, ಹೇಗೆ ಓಡಾಡುವನು? ಎಂದರೆ ಅವನ ಇರವು, ನಡೆ– ಹೇಗಿರುವವು? ಎಂದರ್ಥ. ಈ ಶ್ಲೋಕದಲ್ಲಿ ಸ್ಥಿತಪ್ರಜ್ಞನ ಲಕ್ಷಣವನ್ನು ಕೇಳಿರುತ್ತಾನೆ.

ಯಾವಾತನು ಮೊದಲಿನಿಂದಲೇ‡ ಕರ್ಮಗಳನ್ನು ಸಂನ್ಯಾಸಮಾಡಿ ಜ್ಞಾನಯೋಗದ ನಿಷ್ಠೆಯಲ್ಲಿಯೇ ಪ್ರವರ್ತಿಸಿರುವನೋ (ಆ ಸ್ಥಿತಪ್ರಜ್ಞ), ಯಾವಾತನು ಕರ್ಮಯೋಗದಲ್ಲಿ ಪ್ರವರ್ತಿಸಿರುವನೋ, (ಆ ಕರ್ಮಯೋಗಿ)– ಇವರಿಬ್ಬರಲ್ಲಿ ಸ್ಥಿತಪ್ರಜ್ಞನ ಲಕ್ಷಣವನ್ನೂ§ (ಕರ್ಮಯೋಗಿಗೆ) ಸಾಧನವನ್ನೂ "ಪ್ರಜಹಾತಿ" (೨–೫೫) ಎಂಬುದರಿಂದ (ಈ) ಅಧ್ಯಾಯವು ಪೂರ್ತಿಯಾಗುವವರೆಗೂ ಉಪದೇಶಮಾಡಿರುತ್ತದೆ. ಅಧ್ಯಾತ್ಮಶಾಸ್ತ್ರದಲ್ಲೆಲ್ಲ ಯಾವಯಾವುವು ಕೃತಾರ್ಥನಾದವನ ಲಕ್ಷಣಗಳೋ ಅವೇ (ಮುಮುಕ್ಷುಗಳಿಗೆ) ಸಾಧನಗಳಾಗಿ ಉಪದಿಷ್ಟವಾಗಿರುವವು; ಏಕೆಂದರೆ ಅವು ಪ್ರಯತ್ನದಿಂದ ಸಾಧಿಸಿಕೊಳ್ಳತಕ್ಕವುಗಳಾಗಿರುತ್ತವೆ. ಯಾವವು (ಹೀಗೆ) ಯತ್ನದಿಂದ ಸಾಧಿಸಿಕೊಳ್ಳತಕ್ಕವುಗಳೂ (ಕೃತಾರ್ಥನಾದವನ) ಲಕ್ಷಣಗಳೂ ಆಗಿರುವವೋ ಅಂಥವುಗಳನ್ನು|| ಶ್ರೀಭಗವಂತನು ಹೇಳಿರುತ್ತಾನೆ:–

**ಶ್ರೀಭಗವಾನುವಾಚ:—**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ || ೫೫ ||**

೫೫. ಎಲೈ ಪಾರ್ಥನೆ, ಮನಸ್ಸಿನಲ್ಲಿರುವ ಎಲ್ಲಾ ಕಾಮಗಳನ್ನೂ ಬಿಟ್ಟು ಯಾವಾಗ ಆತ್ಮನಲ್ಲಿಯೇ ತನ್ನಿಂದ ತೃಪ್ತಿಯನ್ನು ಹೊಂದಿರುವನೋ ಆಗ ಸ್ಥಿತಪ್ರಜ್ಞನೆನಿಸುವನು.

[ಭಾಷ್ಯ]

ಎಲೈ ಪಾರ್ಥನೆ, ಮನೋಗತವಾದ ಕಾಮಗಳನ್ನೆಲ್ಲ ಎಂದರೆ ಹೃದಯದಲ್ಲಿ** ಹೊಕ್ಕಿರುವ ಎಲ್ಲಾ ಬಗೆಯ ಇಚ್ಛೆಗಳನ್ನೂ ಯಾವಾಗ ಬಿಟ್ಟು

*. ಮಿಕ್ಕವರ ದೃಷ್ಟಿಯಲ್ಲಿ ಸ್ಥಿತಪ್ರಜ್ಞನು ಹೇಗಿರುವನು? ಇದು ಬಹುಮುಖ್ಯವಾದ ಪ್ರಶ್ನ. ಏಕೆಂದರೆ ಸ್ಥಿತಪ್ರಜ್ಞನನ್ನು ಅನುಕರಿಸುವದೇ ಮುಮುಕ್ಷುವಿಗೆ ಬೇಕಾದ ಸಾಧನವು.

†. ಪ್ರಪಂಚವ್ಯವಹಾರದ ವಿಷಯದಲ್ಲಿ ಸ್ಥಿತಪ್ರಜ್ಞನ ದೃಷ್ಟಿ ಹೇಗಿರುವದು? ಸ್ಥಿತಪ್ರಜ್ಞ, ಭಕ್ತ, ತ್ರಿಗುಣಾತೀತ– ಎಂಬ ಹೆಸರುಗಳಿಂದ ಗೀತೆಯು ಬೇರೆ ಬೇರೆ ಕಡೆಯಲ್ಲಿ ವರ್ಣಿತವಾಗಿರುವದು ಒಂದೇ ಅವಸ್ಥೆ. ಇದನ್ನು ಕುರಿತು ಪೀಠಿಕೆಯಲ್ಲಿ ವಿವೇಚನೆಮಾಡಿರುತ್ತದೆ.

‡. ಬ್ರಹ್ಮಚರ್ಯದಿಂದಲೆ.

§. ಜ್ಞಾನಿಗೆ ಲಕ್ಷಣವಾಗಿರುವದೇ ಕರ್ಮಯೋಗಿಗೆ ಸಾಧನವೆಂದು ಭಾವ.

||. ಅಂಥ ಜ್ಞಾನಸಾಧನಗಳನ್ನು.

**. ಆತ್ಮನಲ್ಲಿಯೇ ಕಾಮವಿರುವದೆಂದು ಹೇಳುವ ವೈಶೇಷಿಕರ ಮತ್ತು ಕೆಲವು ವೇದಾಂತಿಗಳ ಮತವು ಸಿದ್ಧಾಂತಸಮ್ಮತವಲ್ಲ.

ಬಿಡುತ್ತಾನೋ, ಸಂಪೂರ್ಣವಾಗಿಯೂ* ತ್ಯಾಗಮಾಡಿಬಿಡುತ್ತಾನೋ— (ಎಂದರ್ಥ.) ಕಾಮಗಳನ್ನೆಲ್ಲ ಬಿಟ್ಟುಬಿಟ್ಟರೆ ತೃಪ್ತಿಗೆ ಕಾರಣವಿಲ್ಲವಾದ್ದರಿಂದ ಶರೀರವನ್ನು ಧರಿಸುವದಕ್ಕೆ ಕಾರಣವಾದ (ಪ್ರಾರಬ್ಧಕರ್ಮವು) ಇನ್ನೂ ಉಳಿದಿದ್ದರೆ ಹುಚ್ಚನಂತೆಯೂ ಮದ ಹತ್ತಿದವನಂತೆಯೂ ಪ್ರವರ್ತಿಸಬೇಕಾಗುವದಲ್ಲ? ಎಂದರೆ ಇದಕ್ಕೆ (ಪರಿಹಾರವನ್ನು) ಹೇಳುತ್ತಾನೆ: ಆತ್ಮನಲ್ಲಿಯೇ ಎಂದರೆ ಪ್ರತ್ಯಗಾತ್ಮಸ್ವರೂಪದಲ್ಲಿಯೇ† ಆತ್ಮನಿಂದ ಎಂದರೆ ತನ್ನಿಂದಲೇ- ಹೊರಗಿನ ವಸ್ತುವನ್ನು ಪಡೆದುಕೊಳ್ಳುವ ಅಪೇಕ್ಷೆಯಿಲ್ಲದೆಯೇ‡- ಯಾವಾಗ ತೃಪ್ತನಾಗಿರುವನೊ ಎಂದರೆ ಪರಮಾರ್ಥವನ್ನು ಕಂಡುಕೊಂಡದ್ದೆಂಬ ಅಮೃತರಸವು§ ಸಿಕ್ಕಿರುವದರಿಂದ ಉಳಿದದ್ದೇನೂ (ತನಗೆ) ಬೇಡವೆಂಬ ಭಾವವನ್ನು (ಯಾವಾಗ) ಹೊಂದಿರುವನೋ, ಆಗ ಸ್ಥಿತಪ್ರಜ್ಞನೆನಿಸುವನು, ಆತ್ಮಾನಾತ್ಮವಿವೇಕದಿಂದ ಉಂಟಾದ ಪ್ರಜ್ಞೆಯು ನಿಲುಗಡೆಯುಳ್ಳ ಜ್ಞಾನಿಯೆನಿಸುವನು. ಮಕ್ಕಳು, ಹಣ, ಲೋಕ- ಎಂಬ (ಮೂರು) ಬಯಕೆಗಳನ್ನೂ|| ತ್ಯಜಿಸಿ ಸಂನ್ಯಾಸಿಯಾಗಿ ಆತ್ಮಾರಾಮನಾಗಿ** ಆತ್ಮಕ್ರೀಡನಾಗಿರುವಾತನೇ ಸ್ಥಿತಪ್ರಜ್ಞನು- ಎಂದರ್ಥ.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

೫೬. ದುಃಖಗಳಲ್ಲಿ ಮನಸ್ಸಿನ ಉದ್ವೇಗವಿಲ್ಲದವನೂ ಸುಖಗಳಲ್ಲಿ ಆಸೆಯಿಲ್ಲದವನೂ ರಾಗಭಯಕ್ರೋಧಗಳಿಲ್ಲದವನೂ ಆಗಿರುವಾತನು ಸ್ಥಿತಪ್ರಜ್ಞನೆನಿಸುವನು.

---

*. ಕೆಲವು ಉತ್ತಮವಾದ ಇಚ್ಛೆಗಳು ಉಳಿದುಕೊಳ್ಳುವವೆಂದು ಮತಾಂತರದವರ ಅಭಿಪ್ರಾಯವಿದೆ. ಪರಿಶಿಷ್ಟವನ್ನು ನೋಡಿ.

†. ಈ ಸ್ವರೂಪವು ಪರಮಾತ್ಮಸ್ವರೂಪವೆ. ಈ ರಹಸ್ಯವನ್ನು ಅರಿಯದೆ ಮತಾಂತರದವರು ಇಲ್ಲಿಯೂ ಆಕ್ಷೇಪಿಸಿರುತ್ತಾರೆ. ಪರಿಶಿಷ್ಟವನ್ನು ನೋಡಿ.

‡. ಮಕ್ಕಳು ಮರಿ ಮುಂತಾದ ಇಷ್ಟಾರ್ಥವು ದೊರಕಿದರೆ ಲೌಕಿಕರಿಗೆ ಚಿತ್ತವೃತ್ತಿಯು ಸ್ವಲ್ಪಹೊತ್ತು ಚಾಂಚಲ್ಯವನ್ನು ಕಳೆದುಕೊಂಡು ಪ್ರಸನ್ನವಾಗಿರುವದು. ಆಗ ಅವರ ಸ್ವರೂಪವಾದ ಆತ್ಮದ ಆನಂದವು ಹೊರತೋರುವದು. ಇದನ್ನೇ ವಿಷಯಾನಂದವೆನ್ನುತ್ತಾರೆ. ಸ್ಥಿತಪ್ರಜ್ಞನಿಗೆ ಹೀಗೆ ಹೊರಗಿನ ವಿಷಯವು ದೊರೆತು ಚಿತ್ತವೃತ್ತಿಯು ಸ್ವಸ್ಥವಾಗಬೇಕಾದ ಅವಶ್ಯಕತೆಯಿರುವದಿಲ್ಲ; ಅದು ಯಾವಾಗಲೂ ಸ್ವಸ್ಥವಾಗಿಯೇ ಇರುವದು.

§. 'ರಸವನ್ನು ಪಡೆಯುವದರಿಂದಲೆ ಆನಂದದಿಂದಿರುತ್ತಾನೆ' ಎಂಬ ತೈತ್ತಿರೀಯ(೨-೭) ಶ್ರುತಿಯ ಸೂಚನೆ.

||. ಬೃಹದಾರಣ್ಯಕ(೪-೫-೧)ದ ಸೂಚನೆ. **. ಛಾಂದೋಗ್ಯ(೭-೨೫-೨)ದ ಸೂಚನೆ.

[ಭಾಷ್ಯ]

ಮತ್ತು ಯಾವನು– ಆಧ್ಯಾತ್ಮಿಕವೇ* ಮುಂತಾದ ದುಃಖಗಳು ಬಂದಾಗ ಮನಸ್ಸಿನ ಉದ್ವೇಗವಿಲ್ಲದವನಾಗಿಯೂ ಎಂದರೆ ಮನಸ್ಸು ಕಳವಳಪಡದವನಾಗಿಯೂ, ಮತ್ತು ಸುಖಗಳು ಬಂದರೆ ಅವುಗಳಲ್ಲಿ ಆಸೆ ಇಲ್ಲದವನಾಗಿಯೂ ಬಯಕೆಯಿಲ್ಲದವನಾಗಿಯೂ ಇರುವನೋ– ಎಂದರೆ ಕಟ್ಟಿಗೆ ಮುಂತಾದ್ದನ್ನು ಹಾಕಿದರೆ ಬೆಂಕಿಯು ಹೆಚ್ಚುವಂತೆ (ಯಾವನ ಬಯಕೆಯು) ಸುಖಗಳಿಂದ ಹೆಚ್ಚುವದಿಲ್ಲವೋ ಅಂಥ ವಿಗತಸ್ಪೃಹನೂ, ರಾಗಭಯಕ್ರೋಧಗಳಿಲ್ಲದವನೂ ಎಂದರೆ ಅನುರಾಗವಾಗಲಿ ಹೆದರಿಕೆಯಾಗಲಿ ಸಿಟ್ಟಾಗಲಿ ಇಲ್ಲದಿರುವಾತನೂ ಆಗಿರುವ, ಮುನಿಯಾದ ಸಂನ್ಯಾಸಿಯು, † ಸ್ಥಿತಪ್ರಜ್ಞನೆನಿಸಿಕೊಳ್ಳುವನು.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನನ್ದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

೫೭. ಯಾವಾತನು ಎತರಲ್ಲಿಯೂ ಆಸಕ್ತಿಯಿಲ್ಲದೆ ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಆಯಾ ವಿಷಯವು ಬಂದಾಗ ಸಂತೋಷವನ್ನೂ ಪಡದೆ ದ್ವೇಷವನ್ನೂ ಮಾಡದೆ ಇರುವನೋ ಆತನ ಪ್ರಜ್ಞೆಯು ನಿಲುಗಡೆಗೆ ಬಂದಿರುವದು.

[ಭಾಷ್ಯ]

ಮತ್ತು ಯಾವ ಮುನಿಯು ಎತರಲ್ಲಿಯೂ ಎಂದರೆ, ದೇಹ ಪ್ರಾಣ ಮುಂತಾದ ಯಾವದರಲ್ಲಿಯೂ ಅನಭಿಸ್ನೇಹನಾಗಿರುವನೋ ಎಂದರೆ ಹೆಚ್ಚಿನ ಸ್ನೇಹವಿಲ್ಲದವನಾಗಿರುವನೋ, ಆಯಾ ಶುಭಾಶುಭಗಳನ್ನು ಹೊಂದಿದಾಗ ಎಂದರೆ ಒಳ್ಳೆಯದೋ ಕೆಟ್ಟದೋ ಪ್ರಾಪ್ತವಾಗಿರುವಾಗ ಸಂತೋಷವನ್ನೂ ಪಡದೆ ದ್ವೇಷವನ್ನೂ ಮಾಡದೆ ಇರುವನೋ, ಒಳ್ಳೆಯದು ಬಂದರೆ ಹಿಗ್ಗದೆಯೂ ಕೆಟ್ಟದು ಬಂದರೆ ಅದನ್ನು ದ್ವೇಷಿಸದೆಯೂ ಇರುವನೋ ಎಂದರ್ಥ; ಆತನ ಪ್ರಜ್ಞೆಯು ಎಂದರೆ ಹೀಗೆ ಹರ್ಷವಾಗಲಿ ವಿಷಾದವಾಗಲಿ ಇಲ್ಲದವನಿಗೆ ವಿವೇಕದಿಂದ ಹುಟ್ಟಿರುವ ಪ್ರಜ್ಞೆಯು ನಿಲುಗಡೆಗೆ ಬಂದಿರುವದು.

**ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮**

---

*. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ- ಎಂದು ದುಃಖಗಳು ಮೂರು ಬಗೆ. ಆಧ್ಯಾತ್ಮಿಕವೆಂದರೆ ದೇಹದಲ್ಲಾಗುವ ದುಃಖ, ಆಧಿಭೌತಿಕವೆಂದರೆ ಹೊರಗಿನ ಪ್ರಾಣಿಗಳಿಂದಾಗುವದು, ಆಧಿದೈವಿಕವೆಂದರೆ ಆಕಸ್ಮಿಕವಾದ ಸಿಡಿಲು ಮುಂತಾದವುಗಳಿಂದಾಗುವದು.

†. ಇಲ್ಲಿ 'ತದಾ' ಎಂಬ ಮಾತು ಎಲ್ಲಾ ಕೋಶಗಳಲ್ಲಿಯೂ ಇದೆ. ಆದರೆ ಆ ಮಾತಿಗೆ ಇಲ್ಲಿ ಪ್ರಯೋಜನವೇನೂ ಇಲ್ಲದ್ದರಿಂದ ಅವಶ್ಯವೆಂದು ತೋರುವದಿಲ್ಲ.

೫೮. ಆಮೆಯು ತನ್ನ ಕಾಲುಗಳನ್ನು ಎಲ್ಲಾ ಕಡೆಯಿಂದಲೂ ಎಳೆದು ಕೊಳ್ಳುವಂತೆ, ಯಾವಾಗ ಈತನು ತನ್ನ ಇಂದ್ರಿಯಗಳನ್ನು ಇಂದ್ರಿಯಾರ್ಥ ಗಳಿಂದ (ಈಚೆಗೆ) ಎಳೆದುಕೊಳ್ಳುತ್ತಾನೋ (ಆಗ) ಇವನ ಪ್ರಜ್ಞೆಯು ನಿಲು ಗಡೆಗೆ ಬರುವದು.

[ಭಾಷ್ಯ]

ಮತ್ತು ಜ್ಞಾನನಿಷ್ಠೆಯಲ್ಲಿ ಪ್ರವರ್ತಿಸಿರುವ ಈ ಯತಿಯು, ಕೂರ್ಮವು ತನ್ನ ಅಂಗಗಳನ್ನು ಎಳೆದುಕೊಳ್ಳುವಂತೆ, ಎಂದರೆ ಹೇಗೆ ಆಮೆಯು ಹೆದರಿಕೆ ಯಿಂದ ತನ್ನ ಕಾಲುಗಳನ್ನು ಎಲ್ಲಾ ಕಡೆಯಿಂದಲೂ ಒಳಸರಿಸಿಕೊಳ್ಳುವದೋ, ಹಾಗೆ ಜ್ಞಾನನಿಷ್ಠನಾಗಿ ಇಂದ್ರಿಯಗಳನ್ನು ಇಂದ್ರಿಯಾರ್ಥಗಳಿಂದ ಎಂದರೆ ಎಲ್ಲಾ ವಿಷಯಗಳಿಂದಲೂ ಯಾವಾಗ ಒಳಸರಿಸಿಕೊಳ್ಳುತ್ತಾನೋ (ಆಗ) 'ಆತನ ಪ್ರಜ್ಞೆಯು ನಿಲುಗಡೆಗೆ ಬಂದಿರುವದು'. (ಈ) ವಾಕ್ಯದ ಅರ್ಥವನ್ನು ಹಿಂದಿನ (ಶ್ಲೋಕದ ಭಾಷ್ಯದಲ್ಲಿಯೇ) ಹೇಳಿರುತ್ತದೆ.

ವಿಷಯಗಳನ್ನು ಅನುಭವಿಸದೆ ಇರುವ ರೋಗಿಗೂ ಇಂದ್ರಿಯಗಳು ಆಮೆಯ ಕಾಲುಗಳ ಹಾಗೆ ಒಳಸರಿದುಕೊಳ್ಳುತ್ತವೆ; ಆದರೆ ಅವುಗಳಲ್ಲಿರುವ ಆಸೆಯು ಹೋಗಿರುವದಿಲ್ಲ. ಅದು ಹೋಗುವದು ಹೇಗೆ? ಎಂದರೆ ಹೇಳು ತ್ತೇನೆ:—

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

೫೯. ನಿರಾಹಾರನಾದ ದೇಹಿಯನ್ನು ಬಿಟ್ಟು ವಿಷಯಗಳು ಹೊರಟು ಹೋಗುವವು, ರಸವು ಮಾತ್ರ ಹೋಗುವದಿಲ್ಲ. ಪರವಸ್ತುವನ್ನು ಕಂಡರೆ ಈತನ ರಸವೂ ಹೋಗಿಬಿಡುವದು.

[ಭಾಷ್ಯ]

ನಿರಾಹಾರನಾದವನಿಗೆ ಎಂದರೆ ವಿಷಯಗಳನ್ನು ಭೋಗಿಸದೆ ಹೆಚ್ಚಿನ ತಪ ಸ್ಸಿನಲ್ಲಿರುವ ದೇಹಾಭಿಮಾನಿಯಾದ ಮೂರ್ಖನಿಗೆ ಕೂಡ ವಿಷಯಗಳು ಹಿಂತಿರು ಗುತ್ತವೆ. (ಇಲ್ಲಿ) ಉಪಲಕ್ಷಣದಿಂದ ಇಂದ್ರಿಯಗಳನ್ನು ವಿಷಯಗಳೆಂದು* ಕರೆದಿರುತ್ತದೆ. (ಆದ್ದರಿಂದ ವಿಷಯಗಳು ಹಿಂತಿರುಗುತ್ತವೆ ಎಂದರೆ ಇಂದ್ರಿಯ

* ಇಂದ್ರಿಯಗಳನ್ನು ಒಳಕ್ಕೆ ಎಳೆದುಕೊಳ್ಳುವದೇ ಇಲ್ಲಿ ವ್ಯಕ್ತವಾಗಿದೆ. ಆದ್ದರಿಂದ ವಿಷಯಗಳು ಎಂದರೆ ವಿಷಯಗಳುಳ್ಳ ಇಂದ್ರಿಯಗಳು ಎಂದು ಅರ್ಥಮಾಡಬೇಕು. 'ದೊಣ್ಣೆಗಳು ಬಂದವು' ಎಂದರೆ ದೊಣ್ಣೆಗಳನ್ನು ಹಿಡಿದವರು ಬಂದರು ಎಂಬಂತೆಯೆ ಇದು. ಇಲ್ಲಿ 'ಅಥವಾ ವಿಷಯಾ ಏವ' ಎಂಬುದು ಮ॥ ವ್ಯಾ॥ ಪಾಠಗಳಲ್ಲಿಲ್ಲ, ಬೇಕೂ ಇಲ್ಲ.

ಗಳು ಹಿಂತಿರುಗುತ್ತವೆ ಎಂದರ್ಥ. ಆದರೆ ರಸವು ಮಾತ್ರ ಹೋಗಿರುವದಿಲ್ಲ. ವಿಷಯುಗಳಲ್ಲಿರುವ ರಾಗವೊಂದನ್ನು ಬಿಟ್ಟು (ಬರಿಯ ಇಂದ್ರಿಯಗಳೇ ಹಿಂತಿರುಗಿರುವವು.) 'ಸ್ವರಸವಾಗಿ ಪ್ರವರ್ತಿಸಿರುವನು', 'ರಸಿಕನು', 'ರಸಜ್ಞನು'-ಮುಂತಾದ ಪ್ರಯೋಗಗಳು ಕಂಡುಬಂದಿರುವದರಿಂದ 'ರಸ' ಎಂಬ ಶಬ್ದಕ್ಕೆ ರಾಗ ಎಂಬ ಅರ್ಥವು ಪ್ರಸಿದ್ಧವಾಗಿರುವದು. ಹೀಗೆ ಸೂಕ್ಷ್ಮರೂಪವುಳ್ಳದ್ದಾಗಿಯೂ ಮನಸ್ಸನ್ನು ರಂಜಿಸುತ್ತಿರುವದಾಗಿಯೂ ಇರುವ ಈ ರಸವು ಕೂಡ ಈ ಯತಿಗೆ ಪರವಸ್ತುವನ್ನು ಕಂಡರೆ ಎಂದರೆ ಪರಮಾರ್ಥತತ್ತ್ವವಾದ ಬ್ರಹ್ಮವನ್ನು ಕಂಡು, 'ನಾನೇ ಅದು' ಎಂದು ಅರಿತುಕೊಂಡು ಇರುವದಾದರೆ ಹಿಂತಿರುಗಿಬಿಡುವದು; ವಿಷಯಜ್ಞಾನವು ನಿರ್ಬೀಜವಾಗಿ* ಬಿಡುವದು– ಎಂದರ್ಥ. ಸರಿಯಾದ ಜ್ಞಾನವುಂಟಾಗದೆ ರಸವು ನಾಶವಾಗದು ; ಆದ್ದರಿಂದ ಸಮ್ಯಗ್ದರ್ಶನರೂಪವಾದ ಪ್ರಜ್ಞೆಯನ್ನು ಸ್ಥಿರಪಡಿಸಿಕೊಳ್ಳಬೇಕೆಂದು ಅಭಿಪ್ರಾಯವು.

ಸರಿಯಾದ ಜ್ಞಾನವೆಂಬ ಪ್ರಜ್ಞೆಯನ್ನು ನೆಲೆಗೊಳಿಸಿಕೊಳ್ಳಬೇಕೆಂಬಾತನು, ಮೊದಲು ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಳ್ಳಬೇಕು. ಏಕೆಂದರೆ ಅವುಗಳನ್ನು ವಶಪಡಿಸಿಟ್ಟುಕೊಳ್ಳದಿದ್ದರೆ ದೋಷವುಂಟು ಎಂದು ಹೇಳುತ್ತಾನೆ:—

**ಯತತೋಽಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ ।**
**ಇನ್ದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥ ೬೦ ॥**

೬೦. ಎಲೈ ಕುಂತಿಯ ಕುಮಾರನೆ, ವ್ಯಥೆಗೊಳಿಸುವ ಸ್ವಭಾವವುಳ್ಳ ಇಂದ್ರಿಯಗಳು ಪ್ರಯತ್ನಮಾಡುತ್ತಿರುವ ಜ್ಞಾನಿಯಾದ ಪುರುಷನ ಮನಸ್ಸನ್ನು ಕೂಡ ಬಲಾತ್ಕಾರವಾಗಿ ಅಪಹರಿಸುವವು.

[ಭಾಷ್ಯ]

ಎಲೈ ಕುಂತೀಕುಮಾರನೆ, ಪ್ರಯತ್ನಮಾಡುತ್ತಿರುವ ಜಾಣನಾದ ಪುರುಷನ ಮನಸ್ಸನ್ನು ಕೂಡ ['ಅಪಿ' ಶಬ್ದವನ್ನು ದೂರ ಇರುವ 'ವಿಪಶ್ಚಿತಃ'† ಎಂಬ ಶಬ್ದಕ್ಕೆ ಸಂಬಂಧಪಡಿಸಿಕೊಳ್ಳಬೇಕು ] ಪ್ರಮಾಥಿಗಳಾದ ಎಂದರೆ ಕಡೆದುಹಾಕುವ ಸ್ವಭಾವವುಳ್ಳ ಇಂದ್ರಿಯಗಳು ವಿಷಯದ ಕಡೆಗೆ ತಿರುಗಿರುವ ಮನುಷ್ಯನನ್ನು ಕಳವಳಪಡಿಸಿ ಏನೂ ತೋಚದಂತೆ ಮಾಡುವವು. ಹಾಗೆ ಏನೂ ತೋಚ

---

*. ಅವಿದ್ಯೆಯಿಂದಾಗಿರುವ ವಾಸನೆಯು ಇಲ್ಲದಂತಾಗುವದು ಎಂದರ್ಥ. ವಿಷಯಸೇವೆಯನ್ನು ಬಿಟ್ಟರೂ ಅಜ್ಞರು ಅದರ ಯೋಚನೆಯನ್ನು ಮಾಡುತ್ತಲೇ ಇರುವರು. ಇದೇ ರಾಗಕ್ಕೆ ಬೀಜವು. ಜ್ಞಾನಿಗಳಿಗೆ ಈ ಬೀಜರೂಪವಾದ ವಾಸನೆ ಇರುವದಿಲ್ಲ.

†. ವಿದ್ವಾಂಸರಿಗೇ ಹೀಗಾಗುವಾಗ ಸಾಮಾನ್ಯರ ಪಾಡೇನು? ಎಂಬ ಅರ್ಥಸ್ವಾರಸ್ಯವು 'ವಿಪಶ್ಚಿತೋಽಪಿ' ಎಂಬ ಅನ್ವಯದಿಂದ ಬರುತ್ತದೆ.

ದಂತೆ ಮಾಡಿದ ಬಳಿಕ, ವಿವೇಕವಿಜ್ಞಾನದಿಂದ ಕೂಡಿ ಪ್ರಕಾಶವಾಗಿ ತಾನು ನೋಡುತ್ತಿರುವ ಹಾಗೆಯೇ ಮನಸ್ಸನ್ನು ಅಪಹರಿಸಿಬಿಡುವವು.

ಹೀಗಿರುವದರಿಂದ—

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇನ್ದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

೬೧. ಅವುಗಳನ್ನೆಲ್ಲ ಬಿಗಿಹಿಡಿದುಕೊಂಡು ನನ್ನಲ್ಲಿಯೇ ತಾತ್ಪರ್ಯವುಳ್ಳವನಾಗಿ ಯುಕ್ತನಾಗಿರಬೇಕು. ಯಾವಾತನಿಗೆ ಇಂದ್ರಿಯಗಳು ವಶದಲ್ಲಿರುವವೋ ಅವನ ಪ್ರಜ್ಞೆಯು ನಿಲುಗಡೆಯನ್ನು ಹೊಂದಿರುವದು.

[ಭಾಷ್ಯ]

ಅವುಗಳನ್ನೆಲ್ಲ ಸಂಯಮನಮಾಡಿಕೊಂಡು ಎಂದರೆ ವಶಪಡಿಸಿಕೊಂಡು ನನ್ನಲ್ಲಿಯೇ ತಾತ್ಪರ್ಯವುಳ್ಳವನಾಗಿ–ಎಲ್ಲರಿಗೂ ಪ್ರತ್ಯಗಾತ್ಮನಾಗಿರುವ* ವಾಸುದೇವನಾದ ನನ್ನನ್ನೇ ಹೆಚ್ಚೆಂದು, ಅವನಿಗಿಂತ ನಾನು ಬೇರೆಯಲ್ಲವೆಂದು, ತಿಳಿದವನಾಗಿ– ಯುಕ್ತನಾಗಿರಬೇಕು; ಮನಃಸಮಾಧಿಯುಳ್ಳವನಾಗಿರಬೇಕು † ಎಂದರ್ಥ. ಹೀಗಿರುವ ಯಾವ ಯತಿಗೆ ಅಭ್ಯಾಸದಿಂದ‡ ಇಂದ್ರಿಯಗಳು ವಶವಾಗಿರುವವೋ ಅವನ ಪ್ರಜ್ಞೆಯು ನಿಲುಗಡೆಯನ್ನು ಹೊಂದಿರುವದು.

ಇನ್ನು (ಇಂದ್ರಿಯಗಳಿಗೆ) ಸೋಲುವವನಿಗೆ ಅನರ್ಥಕ್ಕೆಲ್ಲ ಇಂಥದೆ ಮೂಲವೆಂದು ಹೇಳುತ್ತಾನೆ:—

**ಧ್ಯಾಯತೋ ವಿಷಯಾನ್ ಪುಂಸಃ ಸಙ್ಗಸ್ತೇಷೂಪಜಾಯತೇ ।**
**ಸಙ್ಗಾತ್ಸಞ್ಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ॥**

೬೨. ವಿಷಯಗಳನ್ನೇ ಧ್ಯಾನಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಸಂಗವುಂಟಾಗುತ್ತದೆ. ಸಂಗದಿಂದ ಕಾಮವುಂಟಾಗುತ್ತದೆ; ಕಾಮದಿಂದ ಕ್ರೋಧವುಂಟಾಗುತ್ತದೆ.

[ಭಾಷ್ಯ]

ಶಬ್ದವೇ ಮುಂತಾದ ಬೇರೆ ಬೇರೆ ವಿಷಯಗಳನ್ನು ಧ್ಯಾನಿಸುತ್ತಿರುವ ಎಂದರೆ (ಅವುಗಳನ್ನೆ) ಯೋಚಿಸುತ್ತಿರುವ ಪುರುಷನಿಗೆ ಸಂಗವುಂಟಾಗುತ್ತದೆ,

*. ಮತ್ಪರಃ ಎಂದರೆ 'ಭಗವಂತನಾದ ನಾನೇ ಹೆಚ್ಚೆಂದು ತಿಳಿದು' ಎಂದು ಅರ್ಥವಾಗುತ್ತದೆ. ಆದರೆ ಇದು ಸ್ಥಿತಪ್ರಜ್ಞನಾದ ಜ್ಞಾನಿಯ ಲಕ್ಷಣದ ಪ್ರಕರಣವಾದ್ದರಿಂದ 'ಆತ್ಮಕ್ಕಿಂತ ಯಾವದೂ ಹೆಚ್ಚಿಲ್ಲವೆಂದು' ಎಂಬ ಅರ್ಥಮಾಡಿರುತ್ತದೆ. ಅಕ್ಷರಾರ್ಥವನ್ನು ಕರ್ಮಯೋಗಿಗೆ ಅನ್ವಯಿಸಿಕೊಳ್ಳಬೇಕು.

†. ಆತ್ಮನಲ್ಲಿ ನಟ್ಟ ಮನಸ್ಸುಳ್ಳವನಾಗಿ.

‡. ವಿಷಯಗಳಲ್ಲಿ ವೈರಾಗ್ಯವುಳ್ಳವನಾಗಿ ಆತ್ಮನಲ್ಲಿಯೇ ಮನಸ್ಸಿಡುವ ಅಭ್ಯಾಸದಿಂದ.

ಎಂದರೆ ಆಸಕ್ತಿಯಾಗುತ್ತದೆ, ಆ ವಿಷಯಗಳಲ್ಲಿ ಪ್ರೀತಿಯುಂಟಾಗುತ್ತದೆ (ಎಂದರ್ಥ). ಸಂಗದಿಂದ ಕಾಮವುಂಟಾಗುತ್ತದೆ ; (ಆ) ಪ್ರೀತಿಯಿಂದ ಅವುಗಳಲ್ಲಿ ಇಚ್ಛೆಯುಂಟಾಗುತ್ತದೆ (ಎಂದಭಿಪ್ರಾಯ). ಆ ಕಾಮಕ್ಕೆ ಏನಾದರೂ ಕಾರಣದಿಂದ ಅಡ್ಡಿಯಾದರೆ ಅದರಿಂದ ಕ್ರೋಧವು ಹುಟ್ಟುತ್ತದೆ.

**ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥೬೩॥**

೬೩. ಕ್ರೋಧದಿಂದ ಸಂಮೋಹವಾಗುವದು. ಸಂಮೋಹದಿಂದ ಸ್ಮೃತಿಯ ಜಾರಿಹೋಗುವಿಕೆಯೂ, ಈ ಸ್ಮೃತಿಯ ಭ್ರಂಶದಿಂದ ಬುದ್ಧಿನಾಶವೂ (ಆಗುವವು). ಬುದ್ಧಿಯ ನಾಶದಿಂದ ನಾಶವಾಗಿ ಹೋಗುತ್ತಾನೆ.

[ಭಾಷ್ಯ]

ಕ್ರೋಧದಿಂದ ಸಮ್ಮೋಹವಾಗುವದು, ಎಂದರೆ ಮಾಡಬಹುದಾದದ್ದು, ಮಾಡಬಾರದ್ದು- ಇವುಗಳ ವಿವೇಕವೇ ಇಲ್ಲದಂತಾಗುವದು. ಏಕೆಂದರೆ ಸಿಟ್ಟು ಬಂದವನು ಹೆಚ್ಚಿನ ಸಮ್ಮೋಹದಿಂದ ಗುರುವನ್ನು* ಕೂಡ ಬಯ್ಯುವದಕ್ಕೆ ಹೋಗುತ್ತಾನೆ. (ಈ) ಸಮ್ಮೋಹದಿಂದ ಸ್ಮೃತಿಯ ಭ್ರಂಶವಾಗುವದ , ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಆಗಿದ್ದ ಉಪದೇಶದಿಂದಾದ ಸಂಸ್ಕಾರದಿಂದ ಹುಟ್ಟುವ ಸ್ಮೃತಿಯು ಭ್ರಂಶವಾಗುವದು, ಎಂದರೆ ಈ ಸ್ಮೃತಿಯು ಹುಟ್ಟಬೇಕಾದ ಕಾರಣವಿದ್ದರೂ† ಅದು ಹುಟ್ಟದೆ ಹೋಗುವದು. ಈ ಸ್ಮೃತಿಭ್ರಂಶದಿಂದ ಬುದ್ಧಿನಾಶವಾಗುವದು. ಇದು ಮಾಡತಕ್ಕದ್ದು, ಇದು ಮಾಡತಕ್ಕದ್ದಲ್ಲ- ಎಂಬ ವಿವೇಕಕ್ಕೆ ತಕ್ಕ ಯೋಗ್ಯತೆ ಇಲ್ಲದೆ ಇರುವದೇ ಅಂತಃಕರಣರೂಪವಾದ ಬುದ್ಧಿಯ ನಾಶವೆನಿಸುವದು. ಬುದ್ಧಿಯ ನಾಶದಿಂದ (ತಾನೆ) ನಾಶವಾಗುತ್ತಾನೆ. ಎಲ್ಲಿಯವರೆಗೆ ತನ್ನ ಅಂತಃಕರಣವು ಕಾರ್ಯಾಕಾರ್ಯವಿಷಯಗಳನ್ನು ವಿಂಗಡಿಸಿ ತಿಳಿಯುವದಕ್ಕೆ ಯೋಗ್ಯವಾಗಿರುವದೋ ಅಲ್ಲಿಯವರೆಗೇ ಮನುಷ್ಯನಾಗಿರುವನು, ಅದು ಅಯೋಗ್ಯವಾದರೆ ಮನುಷ್ಯನು ನಾಶಹೊಂದಿದವನೇ ಆಗುವನು. ಆದ್ದರಿಂದ ಆ ಅಂತಃಕರಣವೆಂಬ ಬುದ್ಧಿಯು ನಾಶದಿಂದ ನಾಶವಾಗುವನು, ಎಂದರೆ ಪುರುಷಾರ್ಥವನ್ನು ಪಡೆಯಲು ಯೋಗ್ಯನಲ್ಲದೆ ಹೋಗುವನು ಎಂದರ್ಥ.

---

*. ಗೌತಮಸ್ಮೃತಿಯ ಸೂಚನೆ.

†. ಇದನ್ನು ಮಾಡಬೇಕೋ ಬಿಡಬೇಕೋ ಎಂಬ ಸಂದೇಹ ಬಂದಾಗ ಶಾಸ್ತ್ರಶ್ರವಣವನ್ನೂ ಗುರುಶುಶ್ರೂಷೆಯನ್ನೂ ಮಾಡಿರುವವನಿಗೆ ಹೀಗೆಯೇ ನಡೆದುಕೊಳ್ಳಬೇಕೆಂಬ ವಿವೇಕವು ಹುಟ್ಟಬೇಕಷ್ಟೆ, ಸಿಟ್ಟಿನಿಂದ ಇದು ಹುಟ್ಟದೆ ಹೋಗುವದು.

ಅನರ್ಥಕ್ಕೆಲ್ಲ ಮೂಲವಾದ ವಿಷಯಗಳ ಧ್ಯಾನವನ್ನು ಹೇಳಿದ್ದಾಯಿತು. ಈಗ ಮೋಕ್ಷಕಾರಣವು ಯಾವದೆಂಬುದನ್ನು ಹೇಳುತ್ತಾನೆ:—

**ರಾಗದ್ವೇಷವಿಯುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

೬೪. ರಾಗದ್ವೇಷಗಳಿಲ್ಲದೆ ತನ್ನ ವಶವಾಗಿರುವ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುವ ವಿಧೇಯಾತ್ಮನು ಪ್ರಸಾದವನ್ನು ಪಡೆಯುವನು.

[ಭಾಷ್ಯ]

ರಾಗದ್ವೇಷ- ಇವೆರಡರಿಂದ ಕೂಡಿ ಪ್ರವರ್ತಿಸುವದೇ ಇಂದ್ರಿಯಗಳಿಗೆ ಸ್ವಭಾವವು. ಆದರೆ ಯಾವ ಮುಮುಕ್ಷುವಾದವನು ಅ (ರಾಗದ್ವೇಷಗಳೆ) ರಡೂ ಇಲ್ಲದೆ, ಶ್ರೋತ್ರವೇ ಮುಂತಾದ ಇಂದ್ರಿಯಗಳಿಂದ ವಿಷಯಗಳನ್ನು- ಎಂದರೆ ದೇಹವು ಇರುವದಕ್ಕೆ ಅವಶ್ಯವಾಗಿ ಬೇಕಾಗಿರುವ, ಕೈಬಿಡುವದಕ್ಕಾಗದಷ್ಟು* ವಿಷಯಗಳನ್ನು- ತನ್ನ ವಶವಾಗಿರುವ† ಇಂದ್ರಿಯಗಳಿಂದ ಅನುಭವಿಸುತ್ತಾ ವಿಧೇಯಾತ್ಮನಾಗಿರುವನೋ, ಎಂದರೆ ತನ್ನ ಇಚ್ಛೆಯಂತೆ ವರ್ತಿಸುವ ಅಂತಃಕರಣವುಳ್ಳವನಾಗಿರುವನೋ ಅಂಥವನು ಪ್ರಸಾದವನ್ನು ಪಡೆಯುವನು. ಪ್ರಸಾದವೆಂದರೆ ಪ್ರಸನ್ನತೆಯು, ಸ್ವಸ್ಥವಾಗಿರುವದು.

(ಈ) ಪ್ರಸಾದವು ಪ್ರಾಪ್ತವಾದರೆ ಏನಾಗುವದು ? ಎಂದರೆ ಹೇಳುತ್ತಾನೆ:—

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

೬೫. ಪ್ರಸಾದವುಂಟಾದರೆ ಈತನ ಸರ್ವದುಃಖಗಳ ನಾಶವೂ ಉಂಟಾಗುತ್ತದೆ. ಪ್ರಸನ್ನವಾದ ಚಿತ್ತವುಳ್ಳವನಿಗೆ ಬೇಗನೆ ಬುದ್ಧಿಯು ನಿಲುಗಡೆಗೆ ಬರುತ್ತದೆ.

[ಭಾಷ್ಯ]

ಪ್ರಸನ್ನತೆಯುಂಟಾದರೆ ಆಧ್ಯಾತ್ಮಿಕವೇ ಮುಂತಾದ ಎಲ್ಲಾ ದುಃಖಗಳೂ, ಈ ಯತಿಗೆ ಹಾನಿಯಾಗುವವು ಎಂದರೆ ನಾಶವಾಗುವವೆಂದರ್ಥ. ಮತ್ತು

*. ಬದುಕಿರುವ ಮಟ್ಟಿಗೆ ಅವಶ್ಯವಾಗಿ ಬೇಕಾದಷ್ಟು ವಿಷಯಗಳನ್ನು ಅನುಭವಿಸುವದು, ವಿಷಯಗಳಿಂದ ಸುಖವಾಗಲೆಂದು ಅವುಗಳನ್ನು ಹುಡುಕಿಕೊಂಡು ಹೊರಡುವದು- ಹೀಗೆ ವಿಷಯಾನುಭವವು ಎರಡು ಬಗೆ. ಮುಮುಕ್ಷುವಾದವನು ತಾನು ಬದುಕಿರುವದಕ್ಕೆ ತೀರ ಅಗತ್ಯವಾಗಿರುವಷ್ಟು ವಿಷಯಗಳನ್ನು ಮಾತ್ರ ಸ್ವೀಕರಿಸುವನೆ ಹೊರತು ಹೆಚ್ಚಿಗೆ ಅವುಗಳಲ್ಲಿ ತೊಡಗಿರುವದಿಲ್ಲ.

†. ತನ್ನ ಇಷ್ಟವಿದ್ದಾಗ ಮಾತ್ರ ವಿಷಯಗಳನ್ನು ಅನುಭವಿಸಬೇಕೇ ಹೊರತು ವಿಷಯಗಳು ಕಣ್ಣಿಗೆ ಬಿದ್ದ ಮಾತ್ರದಿಂದ ಮನಸ್ಸೂ ಇಂದ್ರಿಯಗಳೂ ಅವುಗಳಿಗೆ ಜೋಲಬಾರದು. ಇದು ಸ್ಥಿತಪ್ರಜ್ಞನ ಸ್ವರೂಪವು.

ಪ್ರಸನ್ನಚಿತ್ತನಾದವನಿಗೆ ಎಂದರೆ ಅಂತಃಕರಣವು ಸ್ವಸ್ಥವಾಗಿರುವಾತನಿಗೆ* ಬೇಗನೆ ಬುದ್ಧಿಯು ನಿಲುಗಡೆಗೆ ಬರುವದು. [ಮೂಲದಲ್ಲಿರುವ ಪರ್ಯವತಿಷ್ಠತೇ ಎಂಬ ಮಾತಿಗೆ ಪರಿ- ಎಲ್ಲಾ ಕಡೆಯಲ್ಲಿಯೂ, ಅವತಿಷ್ಠತೇ- ಆಕಾಶದಂತೆ ಹಬ್ಬಿ ನಿಂತುಕೊಂಡುಬಿಡುವದು- ಎಂದು ಅರ್ಥ.] ಆತ್ಮಸ್ವರೂಪವಾಗಿಯೇ ಅಲುಗಾಡದೆ ಇದ್ದು ಬಿಡುವದು ಎಂದು ಅರ್ಥ.

ಹೀಗೆ ಪ್ರಸನ್ನಚಿತ್ತನಾಗಿ ಬುದ್ಧಿಯು ನಿಲುಗಡೆಗೆ ಬಂದವನು ಕೃತಕೃತ್ಯನಾಗುವನಾದ್ದರಿಂದ ಶಾಸ್ತ್ರಕ್ಕೆ ವಿರುದ್ಧವಲ್ಲದೆಯೂ ಬಿಡುವದಕ್ಕೆ ಬರುವ ಹಾಗಿಲ್ಲದೆಯೂ ಇರುವ ವಿಷಯಗಳನ್ನೇ ರಾಗದ್ವೇಷಗಳಿಲ್ಲದ ಇಂದ್ರಿಯಗಳಿಂದ ವ್ಯವಹರಿಸಬೇಕು- ಎಂಬುದು ವಾಕ್ಯದ (ಒಟ್ಟು) ಅರ್ಥವು.

ಈ ಪ್ರಸನ್ನತೆಯನ್ನು ಹೊಗಳುತ್ತಾನೆ:—

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ॥ ೬೬ ॥**

೬೬. ಯೋಗವಿಲ್ಲದವನಿಗೆ ಬುದ್ಧಿಯಿಲ್ಲ; ಯೋಗವಿಲ್ಲದವನಿಗೆ ಭಾವನೆಯೂ ಇಲ್ಲ; ಭಾವನೆಯನ್ನು ಮಾಡದಾತನಿಗೆ ಶಾಂತಿಯಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು?

[ಭಾಷ್ಯ]

ಯೋಗವಿಲ್ಲದವನಿಗೆ ಎಂದರೆ ಅಂತಃಕರಣವನ್ನು ಸಮಾಧಿಯಲ್ಲಿರಿಸಿಕೊಳ್ಳದಾತನಿಗೆ ಆತ್ಮಸ್ವರೂಪದ ವಿಷಯವಾದ ಬುದ್ಧಿಯಿರಲಾರದು. ಯೋಗವಿಲ್ಲದವನಿಗೆ ಭಾವನೆಯೂ ಎಂದರೆ ಆತ್ಮಜ್ಞಾನವನ್ನುಂಟುಮಾಡಿಕೊಳ್ಳಬೇಕೆಂಬ ಹೆಚ್ಚಿನ ಆಸಕ್ತಿಯೂ ಉಂಟಾಗಲಾರದು. ಆತ್ಮಜ್ಞಾನದಲ್ಲಿ ಭಾವನೆಯಿಲ್ಲದಾತನಿಗೆ ಎಂದರೆ ಹೆಚ್ಚಿನ ಆದರವನ್ನು ಮಾಡಿಕೊಳ್ಳದವನಿಗೆ ಶಾಂತಿಯುಂಟಾಗಲಾರದು, ಮನಃಸಮಾಧಾನವಾಗಲಾರದು. ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು? ವಿಷಯವನ್ನು ಸೇವಿಸಬೇಕೆಂಬ ಬಯಕೆಯನ್ನು ಬಿಟ್ಟು ಹಿಂತಿರುಗುವದೇ ಇಂದ್ರಿಯಗಳಿಗೆ ಸುಖವೇ ಹೊರತು ವಿಷಯಗಳಿಗಾಗಿ ಹಂಬಲಿಸುವದಲ್ಲ. ಅದು ದುಃಖವೇ ಆಗಿರುವದು. ಎಲ್ಲಿ ಹಂಬಲಿಕೆಯಿರುವದೋ ಅಲ್ಲಿ ಸುಖದ ವಾಸನೆ ಕೂಡ ಇರುವದಿಲ್ಲ- ಎಂದರ್ಥವು.

ಯೋಗವಿಲ್ಲದವನಿಗೆ† ಜ್ಞಾನವುಂಟಾಗಲಾರದೆಂಬುದು ಏಕೆ?- ಎಂದರೆ ಹೇಳುತ್ತಾನೆ:—

---

*. 'ಶುದ್ಧಾನ್ತಃಕರಣಸ್ಯ' (ಮ॥ ಮೈ॥) ಸ್ವಚ್ಛಾನ್ತಃಕರಣಸ್ಯ (ಗು॥)- ಎಂಬ ಪಾಠಭೇದಗಳಿಗೂ ಇದೇ ತಾತ್ಪರ್ಯವಾಗುವದು. †. ಚಿತ್ತಸ್ವಾಸ್ಥ್ಯವಿಲ್ಲದವನಿಗೆ.

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ॥ ೬೭ ॥**

೬೭. ಸಂಚರಿಸುತ್ತಿರುವ ಇಂದ್ರಿಯಗಳ ಹಿಂದೆಯೆ ಮನಸ್ಸನ್ನು ಬಿಡುವದಾದರೆ, ನೀರಿನಲ್ಲಿರುವ ಹಡಗನ್ನು ಗಾಳಿಯು ಒಯ್ಯುವಂತೆ ಈತನ ಪ್ರಜ್ಞೆಯನ್ನು ಅದು ಒಯ್ದು ಬಿಡುವದು.

ಏಕೆಂದರೆ— ಸಂಚರಿಸುವ ಇಂದ್ರಿಯಗಳ ಎಂದರೆ ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಇಂದ್ರಿಯಗಳ ಹಿಂದೆಯೇ ಮನಸ್ಸು ಹೋಗುವದಾದರೆ, ಆ ಇಂದ್ರಿಯವಿಷಯಗಳನ್ನು ವಿಕಲ್ಪಿಸುತ್ತಾ* ಹೊರಟಿರುವ ಮನಸ್ಸು ಈ ಯತಿಯ, ಆತ್ಮಾನಾತ್ಮವಿವೇಕದಿಂದುಂಟಾಗುವ ಪ್ರಜ್ಞೆಯನ್ನು ನಾಶಮಾಡುವದು. ಅದು ಹೇಗೆ? ಎಂದರೆ— ನೀರಿನಲ್ಲಿರುವ ಹಡಗನ್ನು ಗಾಳಿಯು ಒಯ್ಯುವಂತೆ— ಗಾಳಿಯು ನೀರಿನಲ್ಲಿ ಹೋಗುವವರ† ಹಡಗನ್ನು ಮಾರ್ಗದಿಂದ ಹೊತ್ತುಕೊಂಡು ಹೋಗಿ ಅದನ್ನು ತಪ್ಪುಮಾರ್ಗದಲ್ಲಿ ಹೇಗೆ ಬಿಟ್ಟು ಬಿಡುವದೋ, ಇದರಂತೆ— ಆತ್ಮವಿಷಯವಾದ ಪ್ರಜ್ಞೆಯನ್ನು ಅಪಹರಿಸಿ ವಿಷಯಗಳ ವಿಷಯವಾಗಿಯೇ ಇರುವಂತೆ ಮಾಡುತ್ತದೆ.

'ಪ್ರಯತ್ನಮಾಡಿದ (ಜ್ಞಾನಿಯ ಮನಸ್ಸನ್ನೂ ಇಂದ್ರಿಯಗಳು ಅಪಹರಿಸುತ್ತವೆ)' (೨—೬೦) ಎಂದು ಹೇಳಿದ್ದ ವಿಷಯಕ್ಕೆ ಅನೇಕ ಯುಕ್ತಿಗಳನ್ನು ಕೊಟ್ಟು ಅದನ್ನು ತಿಳಿಸಿ ಈಗ (ಅದನ್ನು) ಉಪಸಂಹಾರಮಾಡುತ್ತಾನೆ:—

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮**

೬೮. ಆದ್ದರಿಂದ, ಎಲೈ ಮಹಾಬಾಹುವೆ, ಯಾವಾತನ ಇಂದ್ರಿಯಗಳು ಇಂದ್ರಿಯಾರ್ಥಗಳಿಂದ ಸರ್ವಪ್ರಕಾರದಿಂದಲೂ ಹಿಡಿದೆಳೆಯಲ್ಪಟ್ಟಿರುವವೋ ಆತನ ಪ್ರಜ್ಞೆಯು ನಿಲುಗಡೆಗೆ ಬಂದಿರುವದು.

ಆದ್ದರಿಂದ ಎಂದರೆ, ಇಂದ್ರಿಯಗಳನ್ನು (ವಿಷಯಗಳಲ್ಲಿಯೇ) ಪ್ರವರ್ತಿಸುತ್ತಿದ್ದರೆ ದೋಷವುಂಟೆಂದು ತೋರಿಸಿಕೊಟ್ಟಿರುವದರಿಂದ, ಎಲೈ ಮಹಾಬಾಹುವೆ, ಯಾವ ಯತಿಯ ಇಂದ್ರಿಯಗಳು, ಸರ್ವಪ್ರಕಾರದಿಂದಲೂ ಎಂದರೆ ಮನಸ್ಸೇ‡

---

*. ಇದು, ಅದು— ಎಂದು ಕಲ್ಪಿಸಿಕೊಳ್ಳುತ್ತಾ. †. ಸಾಂಯಾತ್ರಿಕಾಣಾಂ (ಸಮುದ್ರದಲ್ಲಿ ಪ್ರಯಾಣಮಾಡುವವರ) ಎಂಬ ಮಾತು ಮ॥ ಮೈ॥ ಪಾಠಗಳಲ್ಲಿ ಹೆಚ್ಚಾಗಿದೆ.

‡. ಮಾನಸಿಕ, ವಾಚಿಕ, ಕಾಯಿಕ— ಎಂಬ ಮೂರು ರೀತಿಯಾಗಿ ವಿಷಯಗಳಲ್ಲಿ ಪ್ರವೃತ್ತಿಯಾಗುತ್ತಿರುವದು.

ಮುಂತಾದ ಎಲ್ಲಾ ರೀತಿಯಿಂದಲೂ, ಶಬ್ದಾದಿವಿಷಯಗಳಿಂದ ಹಿಂದಕ್ಕೆ ಜಗ್ಗಿ ಹಿಡಿಯಲ್ಪಟ್ಟಿರುವವೊ ಆತನ ಪ್ರಜ್ಞೆಯು ನಿಲುಗಡೆಗೆ ಬಂದಿರುವದು.

ಈ ಲೌಕಿಕ, ವೈದಿಕ— ಎಂಬ* (ಎರಡು ಬಗೆಯ) ವ್ಯವಹಾರವೂ ಅವಿದ್ಯಾಕಾರ್ಯವಾದ್ದರಿಂದ ವಿವೇಕಜ್ಞಾನವುಂಟಾಗಿರುವ ಸ್ಥಿತಪ್ರಜ್ಞನಿಗೆ ಅವಿದ್ಯೆಯು† ಹೋಗುತ್ತಲೂ ತಾನೂ ಹೋಗಿಬಿಡುತ್ತದೆ. ಅವಿದ್ಯೆಯು ವಿದ್ಯೆಗೆ ವಿರೋಧವಾಗಿರುವದರಿಂದ ಹೋಗಿಬಿಡುತ್ತದೆ. ಈ ವಿಷಯವನ್ನು ಸ್ಪಷ್ಟಗೊಳಿಸುವದಕ್ಕಾಗಿ (ಭಗವಂತನು) ಹೇಳುತ್ತಾನೇನೆಂದರೆ:—

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥**

೬೯. ಪ್ರಾಣಿಗಳಿಗೆಲ್ಲ ರಾತ್ರಿಯಾಗಿರುವದು ಯಾವದೋ ಅದರಲ್ಲಿ ಸಂಯಮಿಯಾದವನು ಎಚ್ಚರದಿಂದಿರುವನು; ಯಾವದರಲ್ಲಿ (ಎಲ್ಲಾ) ಪ್ರಾಣಿಗಳೂ ಎಚ್ಚರವಾಗಿರುವವೋ ಅದು ನೋಡುತ್ತಿರುವ ಮುನಿಗೆ ರಾತ್ರಿಯಾಗಿರುವದು.

[ ಭಾಷ್ಯ ]

ಎಲ್ಲಾ ಪ್ರಾಣಿಗಳಿಗೂ ಯಾವದು ರಾತ್ರಿಯಾಗಿರುವದೋ, ಮಬ್ಬಿನ ಸ್ವಭಾವವಾಗಿರುವದರಿಂದ (ಯಾವ ಪದಾರ್ಥಗಳನ್ನೂ ವಿಂಗಡಿಸಿ ತಿಳಿಯಗೊಡಿಸದೆ) ರಾತ್ರಿಯಂತೆ ಇರುವದೋ— ಅದು ಯಾವದು ? ಎಂದರೆ ಸ್ಥಿತಪ್ರಜ್ಞನ ವಿಷಯವಾದ ಪರಮಾರ್ಥತತ್ತ್ವವು. ಹೇಗೆ ಉಳಿದವರಿಗೆ ಹಗಲೇ ಆಗಿದ್ದರೂ ರಾತ್ರಿಯಲ್ಲಿ ತಿರುಗುವ (ರಾಕ್ಷಸಾದಿಗಳಿಗೆ ಅದೇ) ಕತ್ತಲೆಯಾಗಿರುವದೋ, ಅದರಂತೆ ರಾತ್ರಿಯಲ್ಲಿ ತಿರುಗುವ (ಪ್ರಾಣಿಗಳ)ಂತೆ ಇರುವ ಅಜ್ಞರಾದ ಜೀವರುಗಳಿಗೆಲ್ಲ ಪರಮಾರ್ಥತತ್ತ್ವವು ಕತ್ತಲೆಯು, ಎಂದರೆ ಕತ್ತಲೆಯಂತಿರುವದು; ಏಕೆಂದರೆ ಅವರ ಕಡೆಗೆ ಜ್ಞಾನವಿಲ್ಲದಿರುವವರಿಗೆ ಅದು ಗೋಚರವಾಗುವದಿಲ್ಲ— ಅಂಥ ಪರಮಾರ್ಥತತ್ತ್ವವೆಂಬ ಅಜ್ಞಾನಿಗಳ ರಾತ್ರಿಯಲ್ಲಿ‡ ಸಂಯಮಿಯು ಎಂದರೆ ಇಂದ್ರಿಯಗಳನ್ನು ಜಯಿಸಿದ ಯೋಗಿಯು ಎಚ್ಚರವಾಗಿಯೇ ಇದ್ದುಕೊಂಡಿರುವನು ಎಂದರ್ಥ. ಯಾವ ಗ್ರಾಹ್ಯಗ್ರಾಹಕಭೇದವೆಂಬ ಅವಿದ್ಯಾರಾತ್ರಿಯಲ್ಲಿ§ ಪ್ರಾಣಿಗಳು ಎಚ್ಚತ್ತಿರುವವೋ, ಎಂದರೆ ರಾತ್ರಿಯಲ್ಲಿ ಮಲಗಿ ನಿದ್ರಿ

*. ಸಾಧ್ಯಸಾಧನರೂಪವಾದ ಶಾಸ್ತ್ರವ್ಯವಹಾರ.

†. ತಪ್ಪು ತಿಳಿವು, ಆತ್ಮಾನಾತ್ಮಗಳನ್ನು ಬೆರಸಿ ತಿಳಿಯುವದು.

‡. 'ಅಜ್ಞಾನಿ ನಿಶಾಯಾಂ' ಎಂಬ ಪಾಠವಿದ್ದರೆ ಹೆಚ್ಚು ಒಪ್ಪುತ್ತದೆ ಕೋಶಗಳಲ್ಲಿ ಬಹಳ ಪಾಠಭೇದವಿದೆ. §. ಅವಿದ್ಯಾನಿಶಾಯಾಂ— ಎಂಬ ಪಾಠವನ್ನು ಅಂಗೀಕರಿಸಿದೆ. ಇಲ್ಲಿಯೂ 'ನಿಶಾ' ಎಂಬುದರ ಬದಲು ನಿದ್ರಾ— ಎಂಬ ಪಾಠವು ಕೋಶಗಳಲ್ಲಿ ಕಂಡುಬರುತ್ತದೆ.

ಸುತ್ತಾ, ಕನಸುಕಾಣುವವರ ಹಾಗೆ, ತಾವು ನಿದ್ರಿಸುತ್ತಿದ್ದರೂ* ಎಚ್ಚರವಾಗಿರುವವು ಎನ್ನಲ್ಪಡುವವೋ, ಅದು ಪರಮಾರ್ಥತತ್ತ್ವವನ್ನು ಕಂಡಿರುವ ಮುನಿಗೆ ರಾತ್ರಿಯೇ (ಆಗಿರುವದು); ಏಕೆಂದರೆ ಅದು ಅಜ್ಞಾನದ ರೂಪವಾಗಿರುತ್ತದೆ.

ಹೀಗಿರುವದರಿಂದ ಕರ್ಮಗಳನ್ನೆಲ್ಲ ಅವಿದ್ಯಾವಸ್ಥೆಯಲ್ಲಿರುವಾತನಿಗೇ ವಿಧಿಸಿರುತ್ತದೆಯೇ ಹೊರತು ವಿದ್ಯಾವಸ್ಥೆಯಲ್ಲಿರುವವನಿಗೆ ವಿಧಿಸಿರುವದಿಲ್ಲ. ಏಕೆಂದರೆ ಜ್ಞಾನವು ಉಂಟಾದರೆ, ಸೂರ್ಯೋದಯವಾಗುತ್ತಲೂ ರಾತ್ರಿಯ ಕತ್ತಲೆಯು ನಾಶವಾಗುವಂತೆ, ಅವಿದ್ಯೆಯು ನಾಶವಾಗಿ ಬಿಡುತ್ತದೆ. ವಿದ್ಯೆಯು ಹುಟ್ಟುವದಕ್ಕೆ ಮೊದಲು ಅವಿದ್ಯೆಯು ಕ್ರಿಯಾಕಾರಕಫಲಗಳೆಂಬ ಭೇದರೂಪವಾಗಿ ಪ್ರಮಾಣವೆಂದೇ ಬುದ್ಧಿಗೆ ತೋರುವದರಿಂದ ಎಲ್ಲಾ ಬಗೆಯ ಕರ್ಮಗಳಿಗೂ ಕಾರಣವಾಗುತ್ತದೆ. ಇದು ಅಪ್ರಮಾಣವೆಂದು ಬುದ್ಧಿಗೆ ತೋರಿದ ಮೇಲೆ ಅದು ಕರ್ಮಕ್ಕೆ ಕಾರಣವಾಗಲಾರದು. ಏಕೆಂದರೆ ಕರ್ತೃವಾದವನು 'ವೇದವು ಪ್ರಮಾಣವು, ಅದು ವಿಧಿಸಿರುವ ಕರ್ಮವನ್ನು ನಾನು ಮಾಡಬೇಕು'– ಎಂದು ಕರ್ಮದಲ್ಲಿ ಪ್ರವರ್ತಿಸುತ್ತಾನೆಯೇ ಹೊರತು, ಇದೆಲ್ಲವೂ† (ದೃಷ್ಟಾಂತದ) ರಾತ್ರಿಯ ಹಾಗೆ ಬರಿಯ ಅವಿದ್ಯೆಯೇ ಎಂದು (ತಿಳಿದ ಮೇಲೆ ಪ್ರವರ್ತಿಸುವದಿಲ್ಲ). ಆದರೆ ಯಾವನಿಗೆ ಈ ಭೇದಸಮೂಹವೆಲ್ಲವೂ ರಾತ್ರಿಯಂತೆ ಅವಿದ್ಯಾಮಾತ್ರವು– ಎಂಬ ಜ್ಞಾನವಾಗುವದೋ ಅಂಥ ಆತ್ಮಜ್ಞಾನಿಗೆ ಸರ್ವಕರ್ಮಗಳನ್ನೂ ಸಂನ್ಯಾಸ ಮಾಡುವದರಲ್ಲಿಯೇ ಅಧಿಕಾರವೇ ಹೊರತು ಪ್ರವೃತ್ತಿಯಲ್ಲಿ ಅಧಿಕಾರವಿಲ್ಲ. ಆದ್ದರಿಂದಲೆ ಮುಂದೆ "ತದ್ಬುದ್ಧಯಸ್ತದಾತ್ಮಾನಃ" (೫–೧೭) ಮುಂತಾದ ಶ್ಲೋಕದಲ್ಲಿ ಆ (ಜ್ಞಾನಿಗೆ) ಜ್ಞಾನನಿಷ್ಠೆಯಲ್ಲಿಯೇ ಅಧಿಕಾರವನ್ನು ತಿಳಿಸಿರುತ್ತದೆ.

(ಆಕ್ಷೇಪ) ಪ್ರವರ್ತಿಸುವದಕ್ಕೆ ಬೇಕಾದ ಪ್ರಮಾಣವಿಲ್ಲದಿದ್ದರೆ ಅಲ್ಲಿಯೂ‡ ಪ್ರವೃತ್ತಿಯುಂಟಾಗಲಾರದಲ್ಲ?

(ಪರಿಹಾರ) ಹಾಗಲ್ಲ. ಏಕೆಂದರೆ ಆತ್ಮಜ್ಞಾನಕ್ಕೆ ತನ್ನ ಆತ್ಮವೇ ವಿಷಯವಾಗಿರುತ್ತದೆ. ಆತ್ಮನು ತನ್ನ ಸ್ವರೂಪದಲ್ಲಿರುವದಕ್ಕೆ ಪ್ರವರ್ತಕಪ್ರಮಾಣದ ಅಪೇಕ್ಷೆಯಿರುವದಿಲ್ಲ, ಏಕೆಂದರೆ (ಆತ್ಮವು) ತನ್ನ ಸ್ವರೂಪವೇ ಆಗಿರುತ್ತದೆ. ಇದಲ್ಲದೆ ಸರ್ವಪ್ರಮಾಣಗಳೂ ಪ್ರಮಾಣವೆನಿಸಿರುವದು ಅಲ್ಲಿಯವರೆಗೇ. ಆತ್ಮ

*. ಕನಸಿನಲ್ಲಿ ನಿದ್ರಿಸುತ್ತಿರುವವರು ತಾವು ಎಚ್ಚತ್ತಿರುವೆವೆಂದೇ ಭಾವಿಸುವಂತೆ, ಅಜ್ಞರು ತಾವು ಸರಿಯಾದ ಜ್ಞಾನದಿಂದ ವ್ಯವಹರಿಸುತ್ತಿದ್ದೇವೆಂದೇ ತಿಳಿದಿರುವರು.

†. ಕ್ರಿಯಾ, ಕಾರಕ, ಫಲ– ಇವು. 'ನಾನು ಕರ್ತೃ, ಇದು ಕರ್ಮ, ಇದರಿಂದ ಇಂಥ ಫಲವನ್ನು ಪಡೆಯಬೇಕು'– ಎಂಬ ಬುದ್ಧಿಯಿಲ್ಲದೆ ಕರ್ಮವಾಗಲಾರದು.

‡. ಜ್ಞಾನನಿಷ್ಠೆಯಲ್ಲಿಯೂ.

ಸ್ವರೂಪವನ್ನು ತಿಳಿದ ಮೇಲೂ ಪ್ರಮಾಣ, ಪ್ರಮೇಯ- ಎಂಬ ವ್ಯವಹಾರವು ಸಂಭವಿಸುವದಿಲ್ಲ; ಏಕೆಂದರೆ ಅಂತ್ಯಪ್ರಮಾಣವಾದ* (ಶಾಸ್ತ್ರವು) ಆತ್ಮನಲ್ಲಿರುವ ಪ್ರಮಾತೃತ್ವವನ್ನೇ ಹೋಗಲಾಡಿಸಿ ಬಿಡುತ್ತದೆ. ಹಾಗೆ ನಿವೃತ್ತಿಮಾಡುವದರಿಂದಲೇ, ಸ್ವಪ್ನಕಾಲದ ಪ್ರಮಾಣವು ಎಚ್ಚರವಾಗುತ್ತಲೂ ಅಪ್ರಮಾಣವಾಗಿ ಬಿಡುವಂತೆ,† (ತಾನೂ) ಅಪ್ರಮಾಣವಾಗಿಬಿಡುವದು. ಇದಲ್ಲದೆ ಲೋಕದಲ್ಲಿ ವಸ್ತುವನ್ನು ತಿಳಿಯುವದಕ್ಕೆ ಪ್ರಮಾಣವು ಪ್ರವರ್ತಕವಾಗಿರುವದೂ‡ ಕಂಡುಬಂದಿರುವದಿಲ್ಲ.

ಆದ್ದರಿಂದ ಆತ್ಮಜ್ಞಾನಿಗೆ ಕರ್ಮದಲ್ಲಿ ಅಧಿಕಾರವಿಲ್ಲವೆಂದು ಸಿದ್ಧವಾಯಿತು.

## ಜ್ಞಾನನಿಷ್ಠೆಯಿಂದಲೇ ಮುಕ್ತಿ

ಬಯಕೆಗಳನ್ನು ಬಿಟ್ಟು ಜ್ಞಾನಿಯಾಗಿರುವ ಸ್ಥಿತಪ್ರಜ್ಞನೆಂಬ ಯತಿಗೇ ಮೋಕ್ಷವು ಸಿಕ್ಕುವದೇ ಹೊರತು ಸಂನ್ಯಾಸಿಯಲ್ಲದವನಿಗೂ ಕಾಮಗಳನ್ನು ಬಯಸುತ್ತಿರುವಾತನಿಗೂ ಸಿಕ್ಕುವದಿಲ್ಲ- ಎಂಬ ವಿಷಯವನ್ನು ದೃಷ್ಟಾಂತದಿಂದ ತಿಳಿಸುವದಕ್ಕಾಗಿ ಭಗವಂತನು (ಮುಂದಿನ ಮಾತನ್ನು) ಹೇಳಿರುತ್ತಾನೆ:—

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ　　॥ ೭೦ ॥**

೭೦. ನೀರು ತುಂಬುತ್ತಿದ್ದರೂ ಅಲ್ಲಾಡದೆ ನಿಂತಿರುವ ಸಮುದ್ರವನ್ನು ಹೇಗೆ ನದಿಗಳು ಪ್ರವೇಶಿಸುವವೋ, ಹಾಗೆ ಕಾಮಗಳೆಲ್ಲವೂ ಯಾವಾತನನ್ನು

---

*. ಶಾಸ್ತ್ರವು ಪ್ರಮಾಣವ್ಯವಹಾರವನ್ನೇ ಸುಳ್ಳೆಂದು ತಿಳಿಸಿಬಿಡುವದರಿಂದ ಇದಕ್ಕೆ ಅಂತ್ಯಪ್ರಮಾಣವೆಂದು ಹೆಸರು.

†. ಕನಸು ಹೋಗಿ ಎಚ್ಚರ ಬರುವಂತೆ, ಪ್ರಮಾಣಭೂಮಿಕೆಯು ಹೋಗಿ ಬೇರೊಂದು ಅವಸ್ಥೆಯು ಬರುವದೆಂದು ಭಾವಿಸಬಾರದು. ಕನಸು ಎಚ್ಚರದ ಜ್ಞಾನದಿಂದ ಸುಳ್ಳಾಗುವಂತೆ ಪ್ರಮಾಣಬುದ್ಧಿಯು ಶಾಸ್ತ್ರದಿಂದುಂಟಾದ ಜ್ಞಾನದಿಂದ ಸುಳ್ಳಾಗುವದೆಂದು ತಿಳಿಯಬೇಕು.

‡. ಜ್ಞಾನವು ಪ್ರಮಾಣದಿಂದ ವಸ್ತ್ವನುಸಾರವಾಗಿ ಆಗುತದು; ಆದರೆ ಜ್ಞಾನವನ್ನು ಮಾಡಿಕೊಳ್ಳೆಂದು ಪ್ರಮಾಣವು ನಮ್ಮನ್ನು ಪ್ರೇರಿಸುವದಿಲ್ಲ. ಆದ್ದರಿಂದ ಜ್ಞಾನವಾಗುವದಕ್ಕೆ ಪ್ರವರ್ತಕಪ್ರಮಾಣವಿರಬೇಕೆಂದು ಪೂರ್ವಪಕ್ಷಿ ಹೇಳಿದ್ದು ಸರಿಯಲ್ಲ.

ಪ್ರವೇಶಿಸುತ್ತಿರುವವೋ ಅವನಿಗೆ ಶಾಂತಿಯು ಸಿಕ್ಕುವದೇ ಹೊರತು ಕಾಮಗಳನ್ನು ಬಯಸುತ್ತಿರುವವನಿಗೆ ಸಿಕ್ಕಲಾರದು.

[ಭಾಷ್ಯ]

ನೀರು ಬಂದು ತುಂಬುತ್ತಿದ್ದರೂ ಅಚಲವಾದ ಪ್ರತಿಷ್ಠೆಯುಳ್ಳದ್ದಾಗಿ ಎಂದರೆ (ಅತ್ತಿತ್ತ) ಅಲ್ಲಾಡದೆ (ತನ್ನ ಮೇರೆಯಲ್ಲಿಯೆ) ಇರುತ್ತಿರುವ ಸಮುದ್ರವನ್ನು ಎಲ್ಲಾ ಕಡೆಯಿಂದಲೂ ಹರಿದು ಬರುತ್ತಿರುವ (ನದಿಗಳ) ನೀರು ಹೇಗೆ ಪ್ರವೇಶಿಸುತ್ತಿರುವದೋ (ಆದರೂ) ಅದು ತಾನು ಇದ್ದಂತೆಯೇ ಯಾವ ವಿಕಾರವೂ ಇಲ್ಲದೆ ಇರುವದೋ, ಅದರಂತೆ ವಿಷಯಗಳು ಹತ್ತಿರದಲ್ಲಿರುವಾಗ ಕೂಡ ಕಾಮಗಳು ಎಂದರೆ ಆಯಾ ಇಚ್ಛೆಗಳು ಎಲ್ಲಾ ಕಡೆಯಿಂದಲೂ ಸಮುದ್ರವನ್ನು ಹೊಗುವ ನದಿಗಳಂತೆ ಯಾವ ಪುರುಷನನ್ನು ವಿಕಾರಗೊಳಿಸದೆ ಪ್ರವೇಶಿಸುವವೋ, ಎಲ್ಲವೂ (ಯಾವನ) ಆತ್ಮನಲ್ಲಿಯೇ ಅಡಗುವವೇ ಹೊರತು (ಅವನನ್ನು) ತಮ್ಮ ವಶಪಡಿಸಿಕೊಳ್ಳುವದಿಲ್ಲವೋ, ಅವನೇ ಶಾಂತಿಯನ್ನು ಹೊಂದುವನು, ಮೋಕ್ಷವನ್ನು ಪಡೆಯುತ್ತಾನೆ. ಇಂಥ ಕಾಮಕಾಮಿಯಾದವನು ಹೊಂದಲಾರನು. ಕಾಮಗಳೆಂದರೆ ವಿಷಯಗಳು; ಅವುಗಳನ್ನೆ ಬಯಸುತ್ತಿರುವ ಸ್ವಭಾವವುಳ್ಳವನು ಕಾಮಕಾಮಿಯು. (ಅಂಥವನಿಗೆ ಮೋಕ್ಷವು ಸಿಕ್ಕಲಾರದು) ಎಂದರ್ಥ.

ಹೀಗಿರುದವರಿಂದ,

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾನ್ತಿಮಧಿಗಚ್ಛತಿ ॥ ೭೧ ॥**

೭೧. ಯಾವ ಪುರುಷನು ಕಾಮಗಳನ್ನೆಲ್ಲ ಬಿಟ್ಟು ನಿಸ್ಪೃಹನಾಗಿ ಸಂಚರಿಸುತ್ತಿರುವನೋ, ಮಮಕಾರವಾಗಲಿ ಅಹಂಕಾರವಾಗಲಿ ಇಲ್ಲದಿರುವನೋ ಅವನಿಗೆ ಶಾಂತಿಯು ಸಿಕ್ಕುವದು.

[ಭಾಷ್ಯ]

ಯಾವ ಸಂನ್ಯಾಸಿಯಾದ ಪುರುಷನು ಕಾಮಗಳನ್ನೆಲ್ಲ ಒಂದೂ ಬಿಡದಂತೆ ಪೂರ್ಣವಾಗಿ ಪರಿತ್ಯಜಿಸಿ ಸಂಚರಿಸುತ್ತಿರುವನೋ ಎಂದರೆ ಬದುಕಿರುವದಕ್ಕೆ* ಬೇಕಾಗುವಷ್ಟು ವ್ಯಾಪಾರಗಳಿಂದ ಕೂಡಿ ನಡೆಯುತ್ತಿರುವನೋ ಎಂದರ್ಥ. ಶರೀರವು ಬದುಕಿರಬೇಕೆಂದು ಮಾಡುವ ಕೆಲಸದಲ್ಲಿ ಕೂಡ ಯಾವನು ನಿಸ್ಪೃಹನಾಗಿರುವನೋ, ಯಾವನಿಗೆ ಅದರ ಆಸೆಯೂ ಬಿಟ್ಟು ಹೋಗಿರುವದೋ, (ಯಾವನು) ನಿರ್ಮಮನಾಗಿಯೂ ಎಂದರೆ ಶರೀರವು ಬದುಕಿರುವದಕ್ಕೆ ಬೇಕಾದಷ್ಟು ವಸ್ತುವಿನಲ್ಲಿ ಕೂಡ 'ಇದು ನನ್ನದು'– ಎಂಬ ಅಭಿಮಾನವಿಲ್ಲದವನಾಗಿಯೂ,

---

*. ಗೀ|| ೪-೨೧ನೆಯ ಶ್ಲೋಕವನ್ನು ನೋಡಿ.

ನಿರಹಂಕಾರನಾಗಿಯೂ ಎಂದರೆ ತಾನು ಜ್ಞಾನಿ ಎಂಬುದೇ ಮುಂತಾದ ಕಾರಣ ದಿಂದ ತನ್ನಲ್ಲಿ ತಾನು ಹಿಗ್ಗದೆಯೂ- ಇರುವವನೋ ಎಂದರ್ಥ. ಇಂಥ ಸ್ಥಿತ ಪ್ರಜ್ಞನಾದ ಬ್ರಹ್ಮಜ್ಞಾನಿಯು ಶಾಂತಿಯನ್ನು ಹೊಂದುತ್ತಾನೆ; ಎಂದರೆ ಸಂಸಾರದ ಸರ್ವದುಃಖಗಳೂ ನಾಶವಾಗುವ ನಿರ್ವಾಣವೆಂಬ* (ಶಾಂತಿಯನ್ನು) ಪಡೆಯುತ್ತಾನೆ. (ಅವನು) ಬ್ರಹ್ಮಸ್ವರೂಪನೇ ಆಗುತ್ತಾನೆ- ಎಂದರ್ಥ.

ಈ ಜ್ಞಾನನಿಷ್ಠೆಯನ್ನು ಈಗ ಹೊಗಳುತ್ತಾನೆ:—

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

೭೨. ಎಲೈ ಪಾರ್ಥನೆ, ಇದು ಬ್ರಾಹ್ಮಸ್ಥಿತಿಯು. ಇದನ್ನು ಪಡೆದ ವನು ಮೋಹವನ್ನು ಹೊಂದುವದಿಲ್ಲ. ಈ ಸ್ಥಿತಿಯಲ್ಲಿ ಅಂತಕಾಲದಲ್ಲಿ (ಮಾತ್ರ ಇದ್ದರೂ) ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆ.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಸಾಂಖ್ಯಯೋಗೋ** ನಾಮ
ದ್ವಿತೀಯೋಽಧ್ಯಾಯಃ

---

[ಭಾಷ್ಯ]

ಈ ಮೇಲೆ ಹೇಳಿರುವದು ಬ್ರಾಹ್ಮಸ್ಥಿತಿಯು, ಎಂದರೆ ಬ್ರಹ್ಮದಲ್ಲಿಯೇ ಇರುವ ಸ್ಥಿತಿಯು; ಸರ್ವಕರ್ಮವನ್ನೂ ಸಂನ್ಯಾಸಮಾಡಿ† ಬ್ರಹ್ಮರೂಪವಾಗಿಯೇ ಇರುವ ಸ್ಥಿತಿ ಎಂದಭಿಪ್ರಾಯ. ಎಲೈ ಪಾರ್ಥನೆ, ಈ ಸ್ಥಿತಿಯನ್ನು ಪಡೆದವನು ಮೋಹವನ್ನು ಹೊಂದುವದಿಲ್ಲ. ಈ ಮೇಲೆ ಹೇಳಿದ ಬ್ರಹ್ಮಸ್ಥಿತಿಯಲ್ಲಿ ಅಂತ ಕಾಲದಲ್ಲಿ, ಕೊನೆಯ ವಯಸ್ಸಿನಲ್ಲಿ‡ ಇದ್ದರೆ ಕೂಡ ಬ್ರಹ್ಮನಿರ್ವಾಣವನ್ನು

---

*. ನಿರ್ವಾಣವೆಂದರೆ ಸರ್ವದುಃಖಗಳ ನಾಶವು.

†. ಅಕರ್ತೃಜ್ಞಾನವನ್ನು ಸಂಪಾದಿಸಿ.

‡. ಅನೇಕ ವ್ಯಾಖ್ಯಾನಕಾರರು ಮರಣಕಾಲದಲ್ಲಿ ಎಂದು ವಿವರಿಸಿರುತ್ತಾರೆ. ಆದರೆ ಇದು ಉಪಾಸನಾಪ್ರಕರಣವಲ್ಲವಾದ್ದರಿಂದ ಆ ಅರ್ಥವು ಬೇಕಿಲ್ಲ. ಒಂದು ವೇಳೆ ತೆಗೆದುಕೊಂಡರೆ ಕರ್ಮಯೋಗಿಗೆ ಅದನ್ನು ಹೊಂದಿಸಬೇಕು. ಪೀಠಿಕೆಯನ್ನು ನೋಡಿ.

ಹೊಂದುತ್ತಾನೆ, ಬ್ರಹ್ಮಾನಂದವೆಂಬ ಮೋಕ್ಷವನ್ನು ಹೊಂದುತ್ತಾನೆ. ಬ್ರಹ್ಮಚರ್ಯಾಶ್ರಮದಿಂದಲೇ ಸಂನ್ಯಾಸಮಾಡಿ* ಬದುಕಿರುವವರೆಗೂ ಬ್ರಹ್ಮದಲ್ಲಿಯೇ ಇರುವಾತನು ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆಂದು† ಹೇಳತಕ್ಕದ್ದೇನಿದೆ?

---

*. ಯಾವಾಗಲೂ ಬ್ರಹ್ಮನಾಗಿಯೇ ಇರುವದರಿಂದ ಹೊಸದಾಗಿ ಬ್ರಹ್ಮವನ್ನು ಪಡೆಯುತ್ತಾನೆ' ಎಂಬುದಕ್ಕೆ ಅರ್ಥವೇನೂ ಇಲ್ಲ. ಯಾವಾಗ ಜ್ಞಾನವಾದರೆ ಆಗ ನಿತ್ಯಮುಕ್ತವಾದ ತನ್ನ ಸ್ವರೂಪವನ್ನು ಕಂಡುಕೊಳ್ಳುತ್ತಾನೆ– ಎಂಬುದೇ ಇಲ್ಲಿ ತಾತ್ಪರ್ಯ. ಜ್ಞಾನವು ಇಂಥ ಪುರುಷಾರ್ಥವನ್ನು ಕೊಡುವದಾದ್ದರಿಂದ ಅದನ್ನು ಪಡೆಯುವದಕ್ಕೆ ಯತ್ನಿಸಬೇಕೆಂದು ಪ್ರಕರಣದ ಅರ್ಥವು.

†. ಜ್ಞಾನನಿಷ್ಠೆಯನ್ನು ಹೊಂದಿ ಎಂದರ್ಥ. ಬ್ರಹ್ಮಚರ್ಯಾಶ್ರಮದಲ್ಲಿರುವಾಗಲೆ ಜ್ಞಾನವಾದವನು ಮತ್ತೆ ಗೃಹಸ್ಥಾಶ್ರಮವನ್ನು ಹೊಂದುವ ಸಂಭವವು ಇರುವದಿಲ್ಲವಾದ್ದರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಎಂಬ ಅರ್ಥವನ್ನು ಮಾಡಬಹುದು.

# ಎರಡನೆಯ ಅಧ್ಯಾಯದ ಸಾರ

೧–೧೦. ಅರ್ಜುನನು ಶ್ರೀಕೃಷ್ಣನ ಪ್ರೋತ್ಸಾಹಕವಾಕ್ಯಗಳನ್ನೂ ಕೇಳದೆ "ಗುರುಗಳನ್ನೂ ಹಿರಿಯರನ್ನೂ ಯುದ್ಧದಲ್ಲಿ ಕೊಲ್ಲುವದು ಹೇಗೆ ಧರ್ಮವಾದೀತು? ಆದ್ದರಿಂದ ಯುದ್ಧಮಾಡುವದಕ್ಕೆ ನನಗೆ ಮನಸ್ಸೊಪ್ಪದೆ ಇದೆ. ನಿಜವಾದ ತತ್ತ್ವವನ್ನು ನನಗೆ ಬೋಧಿಸು"– ಎಂದು ಬೇಡಿಕೊಳ್ಳಲು ಭಗವಂತನು ಹೇಳಿದನೇನೆಂದರೆ:—

೧೧–೨೫. ಎಲೈ ಅರ್ಜುನನೆ, ಪರಮಾರ್ಥವಾದ ಆತ್ಮತತ್ತ್ವವನ್ನು ತಿಳಿಯದ್ದರಿಂದ ನಿನಗೆ ಈ ಶೋಕಮೋಹಗಳುಂಟಾಗಿರುತ್ತವೆ. ಆತ್ಮನು ನಿತ್ಯನೂ ನಿರ್ವಿಕಾರಿಯೂ ಆಗಿರುತ್ತಾನೆ. ಆದ್ದರಿಂದ ಭೀಷ್ಮಾದಿಗಳ ಆತ್ಮವು ನಾಶವಾದೀತೆಂಬ ಶೋಕಕ್ಕೆ ಕಾರಣವಿಲ್ಲ; ಬದುಕಿರುವಾಗ ಜೀವರುಗಳಿಗೆ ಶೀತೋಷ್ಣಗಳೇ ಮುಂತಾದ ದ್ವಂದ್ವಗಳು ಸುಖದುಃಖವನ್ನು ಕೊಡುವದುಂಟಾದರೂ ಅವು ತೋರಿ ಹಾರುವ ಅನಿತ್ಯವಸ್ತುಗಳಾಗಿವೆಯಾದ್ದರಿಂದ ಅವುಗಳನ್ನು ಕುರಿತೂ ದುಃಖಿಸುವದಕ್ಕೆ ಕಾರಣವಿಲ್ಲ. ನಿಜವಾಗಿರುವದು ನಾಶವಾಗಲಾರದು, ಇಲ್ಲದ್ದು ಹುಟ್ಟಲಾರದು– ಎಂಬ ತತ್ತ್ವವನ್ನು ತಿಳಿದವನು ಏತಕ್ಕೆ ಶೋಕಿಸುವನು? ಆತ್ಮನು ಸತ್ಯಸ್ವರೂಪನಾದ್ದರಿಂದ ಅವನಿಗೆ ನಾಶವಿಲ್ಲವೆಂದೂ ದೇಹಾದಿಗಳು ಅಸತ್ಯಪದಾರ್ಥಗಳಾದ್ದರಿಂದ ಅವು ನಾಶವಾಗುವದು ಸ್ವಾಭಾವಿಕವೆಂದೂ ತಿಳಿಯುವನಾಗು. ಇದಲ್ಲದೆ ಆತ್ಮಸ್ವರೂಪದ ದೃಷ್ಟಿಯಿಂದ ನೋಡಿದರೆ, ನಿನ್ನಲ್ಲಿ ಕರ್ತೃತ್ವವಿಲ್ಲ, ಭೀಷ್ಮಾದಿಗಳು ವಧ್ಯರೂ ಅಲ್ಲ. ಆತ್ಮನಲ್ಲಿ ಜನನಮರಣಾದಿವಿಕಾರಗಳು ಯಾವವೂ ಇಲ್ಲವೆಂದು ತಿಳಿದಾತನು ತಾನೂ ಆತ್ಮವೇ ಆಗಿರುವದರಿಂದ ಅವನು ಕೊಲ್ಲುತ್ತೇನೆಂದಾಗಲಿ ಕೊಲ್ಲಿಸಿಕೊಂಡು ಸಾಯುತ್ತೇನೆಂದಾಗಲಿ ತಿಳಿಯುವದು ತಪ್ಪಾಗುತ್ತದೆ. ಬಟ್ಟೆಗಳು ಹಳೆಯವಾಗಿ ನಾವು ಅವುಗಳನ್ನು ತೆಗೆದುಹಾಕಿದರೆ, ನಾವೇ ಜೀರ್ಣರಾದೆವೆಂದು ತಿಳಿಯುವದು ತಪ್ಪಲ್ಲವೆ? ಈ ದೃಷ್ಟಾಂತದಲ್ಲಿ ಹೇಗೆ ನಾವು ಯಾವ ಮಾರ್ಪಾಡೂ ಇಲ್ಲದೆ ಇದ್ದಂತೆಯೇ ಇರುವೆವೊ, ಇದರಂತೆ ದೇಹವು ಮಾರ್ಪಾಡುಗಳನ್ನು ಹೊಂದಿದರೂ ಆತ್ಮದಲ್ಲಿ ಯಾವ ವಿಕಾರವೂ ಆಗುವದಿಲ್ಲ. ಆದ್ದರಿಂದ ಕತ್ತರಿಸುವದಕ್ಕಾಗಲಿ ಸುಡುವದಕ್ಕಾಗಲಿ ನೆನೆಸುವದಕ್ಕಾಗಲಿ ಒಣಗಿಸುವದಕ್ಕಾಗಲಿ ಅಥವಾ ಮತ್ತೆ ಹೇಗಾದರೂ ವಿಕಾರಗೊಳಿಸುವದಕ್ಕಾಗಲಿ ಆಗದೆ ಇರುವ ಈ ಆತ್ಮನ ವಿಷಯದಲ್ಲಿ ನೀನು ಶೋಕಿಸಬಾರದು.

೨೬–೩೦. ಒಂದು ವೇಳೆ ಆತ್ಮನು ಶರೀರದ ಜೊತೆಯಲ್ಲಿಯೇ ಹುಟ್ಟಿ ಅದರ ಜೊತೆಯಲ್ಲಿಯೇ ಸಾಯುವನೆಂದು ನೀನು ಸಾಮಾನ್ಯಜನರಂತೆಯೆ ಭಾವಿಸಿದ್ದರೂ ಇಲ್ಲಿ ಶೋಕಕ್ಕೆ ಕಾರಣವಿಲ್ಲ. ಹುಟ್ಟಿ ಸಾಯುವದೇ ಆತ್ಮನ ಸ್ವಭಾವ

ವಾದರೆ ಅದಕ್ಕಾಗಿ ಶೋಕಪಡುವದೇಕೆ? ಆದರೆ ವಸ್ತುಸ್ಥಿತಿಯು ಹೀಗಿಲ್ಲ; ಎಂದೆಂದಿಗೂ ಆತ್ಮನು ಅವಧ್ಯನಾಗಿರುತ್ತಾನೆ. ಆದ್ದರಿಂದ ನೀನು ಶೋಕಿಸುವ ದಕ್ಕೆ ಕಾರಣವಿಲ್ಲ.

೩೧–೩೮. ನಿನಗೆ ಯುದ್ಧವು ಧರ್ಮವೂ ಆಗಿದೆ. ಗೆದ್ದರೆ ರಾಜ್ಯವೇ ಕೈಸೇರುತ್ತದೆ, ಸೋತು ಸತ್ತರೆ ಇದರಿಂದ ವೀರಸ್ವರ್ಗವೇ ದೊರೆಯುತ್ತದೆ. ಇದನ್ನು ಮಾಡದೆ ಇದ್ದರೆ ಮಾತ್ರ ನಿನಗೆ ಅಪಯಶಸ್ಸು ಬರುತ್ತದೆ, ಸ್ವಧರ್ಮವನ್ನು ಕೈ ಬಿಟ್ಟ ಪಾಪವೂ ಬಂದು ಗಂಟುಬೀಳುತ್ತದೆ. ಸುಖದುಃಖಗಳನ್ನೂ ಲಾಭಾಲಾಭ ಗಳನ್ನೂ ಜಯಾಪಜಯಗಳನ್ನೂ ಲಕ್ಷ್ಯದಲ್ಲಿಟ್ಟು ಶೋಕಿಸುತ್ತಾ ಕೂಡುವದು ನಿನಗೆ ಯುದ್ಧವು ಸ್ವಧರ್ಮವೆಂಬ ದೃಷ್ಟಿಯಿಂದಲೇ ಸರಿಯಾಗಿಲ್ಲ; ಇನ್ನು ಪರ ಮಾರ್ಥದೃಷ್ಟಿಯಿಂದ ಇದು ಸರಿಯಲ್ಲವೆಂದು ಹೇಳಬೇಕೆ?

೩೯–೪೫. ಇದುವರೆಗೆ ಸಾಂಖ್ಯದೃಷ್ಟಿಯಿಂದ ಮಾತಾಡಿದೆನು. ಈಗ ಇದಕ್ಕೆ ಸಾಧನವಾದ ಕರ್ಮಯೋಗದೃಷ್ಟಿಯಿಂದ ಹೇಳುತ್ತೇನೆ, ಕೇಳು. ಈ ಕರ್ಮಯೋಗವು ಕರ್ಮಬಂಧವನ್ನೆ ಕಡಿದು ಹಾಕುವದು. ಇದರಲ್ಲಿ ಮಾಡಿದ್ದಕ್ಕೆ ಒಳ್ಳೆಯ ಫಲವು ತಪ್ಪಿದ್ದಲ್ಲ, ಕೆಟ್ಟ ಫಲದ ಸುಳಿವಿಲ್ಲ; ಎಳ್ಳಷ್ಟು ಇದನ್ನು ಆಚರಿ ಸಿದರೂ ಕ್ರಮಕ್ರಮವಾಗಿ ಸಂಸಾರಭಯವನ್ನೇ ತಪ್ಪಿಸುವದು. ಆದರೆ ಕಾಮ್ಯ ಕರ್ಮಗಳನ್ನೇ ಹೊಗಳುತ್ತಾ ಸ್ವರ್ಗವೇ ಪರಮಪುರುಷಾರ್ಥವೆಂದು ಯಾರು ನಂಬಿರುವರೋ ಅವರಿಗೆ ಈ ಯೋಗದ ನಿಶ್ಚಯಬುದ್ಧಿಯು ದಕ್ಕುವದಿಲ್ಲ. ಸಿದ್ಧಿ ಯಾಗಲಿ ಆಗದಿರಲಿ, ಬುದ್ಧಿಯನ್ನು ಸಮವಾಗಿಟ್ಟುಕೊಂಡು ಕರ್ಮವನ್ನಾಚರಿ ಸುವದೇ ಈ ಯೋಗದಲ್ಲಿರುವ ಜಾಣತನವು. ಯಾವ ವಿಹಿತಕರ್ಮವನ್ನೇ ಆಗಲಿ, ಅದರ ಫಲವೇನು– ಎಂದು ವಿಚಾರಿಸದೆ ಸಮತ್ವಬುದ್ಧಿಯಿಂದ ಮಾಡು ತ್ತಿರಬೇಕು. ನೀನೂ ನಿನಗೆ ವಿಹಿತವಾಗಿರುವ ಧರ್ಮಯುದ್ಧವನ್ನು ಹೀಗೆ ಮಾಡು.

೪೬–೫೩. ಹೀಗೆ ಕರ್ಮಯೋಗವನ್ನು ಮಾಡುವದರಿಂದ ಕಾಮ್ಯಕರ್ಮ ವನ್ನು ಮಾಡುವವರಿಗಿಂತ ಉತ್ತಮಫಲವನ್ನು ಪಡೆಯಬಹುದು. ಹೇಗೆಂದರೆ ಕರ್ಮಯೋಗವನ್ನು ಮಾಡುವವರು ಧರ್ಮಾಧರ್ಮಗಳನ್ನೂ ಕೂಡ ಮೀರಿ ಸಾಂಖ್ಯಬುದ್ಧಿಯನ್ನು ಪಡೆಯುವದರ ಮೂಲಕ ಜನ್ಮಬಂಧದಿಂದಲೂ ಬಿಡುಗಡೆ ಯಾಗಿ ಪರಮಾತ್ಮನ ಸ್ಥಾನವನ್ನೇ ಸೇರುವರು. ಅದು ಹೇಗೆಂದರೆ ಕರ್ಮಯೋ ಗದಿಂದ ಬುದ್ಧಿಯಲ್ಲಿರುವ ಕಲ್ಮಷವೂ ಚಾಂಚಲ್ಯವೂ ಹೋಗಿಬಿಡುವದರಿಂದ ಆ ಬುದ್ಧಿಯಲ್ಲಿ ಆತ್ಮಾನಾತ್ಮವಿವೇಕದಿಂದ ಉಂಟಾಗುವ ಉತ್ಕೃಷ್ಟವಾದ ಜ್ಞಾನವು ನಿಲುಗಡೆಗೆ ಬರುವದು. ಹೀಗೆ ಜ್ಞಾನವು ಸ್ಥಿರವಾದಂಥವನಿಗೆ ಸ್ಥಿತಪ್ರಜ್ಞ ನೆಂದು ಹೆಸರು.

೫೪–೭೯. ಸ್ಥಿತಪ್ರಜ್ಞನ ಸ್ವಭಾವವನ್ನೂ ವ್ಯವಹಾರವನ್ನೂ ತಿಳಿಸುತ್ತೇನೆ ಕೇಳು: (೧) ಅವನು ಸಕಲಕಾಮಗಳನ್ನೂ ದೂರಮಾಡಿ ಆತ್ಮಸ್ವರೂಪದಿಂದಲೇ ತೃಪ್ತಿಯನ್ನು ಪಡೆದಿರುತ್ತಾನೆ. (೨) ಅವನು ಸುಖವಾದರೆ ಹಿಗ್ಗುವದಿಲ್ಲ, ದುಃಖವಾದರೆ ತಗ್ಗುವದಿಲ್ಲ. (೩) ಅವನಲ್ಲಿ ರಾಗದ್ವೇಷಗಳಿರುವದಿಲ್ಲ. (೪) ಅವನು ಇಂದ್ರಿಯಗಳನ್ನೆಲ್ಲ ಉಪಸಂಹರಿಸಿಕೊಂಡು ಆತ್ಮನಿಷ್ಠನಾಗಿಯೇ ಇರುವನು. (೫) ಲೌಕಿಕರ ವ್ಯವಹಾರದ ಪ್ರಪಂಚವನ್ನು ಅವನು ಅರಿಯನು, ಅವನು ಅರಿತಿರುವ ಪರಮಾರ್ಥತತ್ತ್ವವನ್ನು ಲೌಕಿಕರು ಅರಿಯರು.

೭೦–೭೨. ಗಂಗಾದಿನದಿಗಳು ಒಂದೇ ಸಮನೆ ಬಂದು ನೀರು ತುಂಬುತ್ತಿದ್ದರೂ ಮೇರೆದಪ್ಪದೆ ತನ್ನ ಸ್ವರೂಪದಲ್ಲಿಯೇ ಇರುವ ಸಾಗರದ ಹಾಗೆ ಯಾವ ವಿಷಯಭೋಗದಿಂದಲೂ ಉಬ್ಬದೆ, ಶರೀರಯಾತ್ರೆಗೆ ಬೇಕಾದಷ್ಟು ವಿಷಯಗಳನ್ನು ನಿಸ್ಪೃಹನಾಗಿ ನನ್ನದೆಂಬ ಅಭಿಮಾನವು ಕೂಡ ಇಲ್ಲದೆ ಅನುಭವಿಸುತ್ತಿರುವ ನಿರಹಂಕಾರಿಯಾದ ಈ ಸ್ಥಿತಪ್ರಜ್ಞನೇ ಕೈವಲ್ಯಕ್ಕೆ ಪಾತ್ರನಾಗಿರುವನು. ಈ ಸ್ಥಿತಿಯನ್ನು ಯಾವನು ಯಾವಾಗ ಪಡೆದರೆ ಆಗಲೇ ಶೋಕಮೋಹಗಳು ಹೋಗಿಬಿಡುವವು, ಬ್ರಹ್ಮಾನಂದವು ಪ್ರಾಪ್ತವಾಗುವದು.

---

# ಮೂರನೆಯ ಅಧ್ಯಾಯ

(ಕರ್ಮಯೋಗ)

## ಅಧ್ಯಾಯದ ಸಂಬಂಧ

ಸಾಂಖ್ಯಬುದ್ಧಿ, ಯೋಗಬುದ್ಧಿ - ಎಂಬ ಹೆಸರಿನಿಂದ ಪ್ರವೃತ್ತಿನಿವೃತ್ತಿಗಳಿಗೆ ಸಂಬಂಧಪಟ್ಟವುಗಳಾದ ಎರಡು ಬುದ್ಧಿಗಳು ಈ ಶಾಸ್ತ್ರದ ವಿಷಯವೆಂದು ಭಗವಂತನಿಂದ ಹಿಂದೆ ತೋರಿಸಲ್ಪಟ್ಟಿರುತ್ತದೆಯಷ್ಟೆ. ಇವುಗಳಲ್ಲಿ 'ಪ್ರಜಹಾತಿ ಯದಾ ಕಾಮಾನ್' (೨-೫೫) ಎಂಬ ಶ್ಲೋಕದಿಂದ ಎರಡನೆಯ ಅಧ್ಯಾಯವು ಮುಗಿಯುವವರೆಗೂ ಸಾಂಖ್ಯಬುದ್ಧಿಯನ್ನಾಶ್ರಯಿಸಿರುವವರಿಗೆ ಸಂನ್ಯಾಸವೇ ಕರ್ತವ್ಯವೆಂದು ಹೇಳಿ ಅದರಿಂದಲೇ ಅವರಿಗೆ ಮುಕ್ತಿಯಾಗುವದೆಂದು 'ಏಷಾ ಬ್ರಾಹ್ಮೀ ಸ್ಥಿತಿಃ' (೨-೭೨) ಎಂಬ ಶ್ಲೋಕದಲ್ಲಿ ಹೇಳಿರುತ್ತಾನೆ. ಅರ್ಜುನನಾದರೋ ಯೋಗಬುದ್ಧಿಯನ್ನು ಆಶ್ರಯಿಸಿ ಕರ್ಮವನ್ನೆ ಮಾಡಬೇಕೆಂದು 'ಕರ್ಮಣ್ಯೇವಾಧಿಕಾರಸ್ತೇ......ಮಾ ತೇ ಸಙ್ಗೋಽಸ್ತ್ವಕರ್ಮಣಿ' (೨-೪೭) ಎಂಬಲ್ಲಿ ಹೇಳಿರುತ್ತಾನೆ; ಆದರೆ ಅದರಿಂದಲೇ ಮುಕ್ತಿಯಾಗುವದೆಂದು ಮಾತ್ರ ಅವನಿಗೆ ಹೇಳಲಿಲ್ಲ. ಇದನ್ನು ಕಂಡು ಮನಸ್ಸಿನಲ್ಲಿ ಕಳವಳಗೊಂಡ ಅರ್ಜುನನು ಈ ಮುಂದಿನ ಪ್ರಶ್ನೆಯನ್ನು (೩- ೧, ೨) ಕೇಳಿರುತ್ತಾನೆ.

ಮೇಲೆ ನಾವು ಹೇಳಿರುವಂತೆ ಎಂಗಡಿಸಿಕೊಂಡು ವಿಷಯಗಳನ್ನು ಗೀತಾಶಾಸ್ತ್ರವು ಹೇಳುತ್ತದೆಯೆಂಬವರ ಪಕ್ಷದಲ್ಲಿ ಸದ್ಗತಿಯನ್ನು ಬಯಸುತ್ತಿರುವ ಭಕ್ತನಾದ ನನಗೆ ನೇರಾಗಿ ಮುಕ್ತಿಯನ್ನು ಪಡೆಯುವದಕ್ಕೆ ಸಾಧನವಾಗಿರುವ ಸಾಂಖ್ಯಬುದ್ಧಿಯ ನಿಷ್ಠೆಯನ್ನು ಹೇಳಿ, ಅನೇಕ ಅನರ್ಥಗಳಿಂದ ಕೂಡಿರುವದೆಂದು ಗೊತ್ತಾಗಿರುವದಾಗಿಯೂ ಕೊನೆಗಾದರೂ ಮುಕ್ತಿಯನ್ನು ಕೊಡುವದೆಂಬ ನಿಯಮವಿಲ್ಲದ್ದಾಗಿಯೂ ಇರುವ ಕರ್ಮದಲ್ಲಿ ನನ್ನನ್ನು ಏತಕ್ಕೆ ಭಗವಂತನು ನಿಯಮಿಸುತ್ತಿರಬಹುದು ? ಎಂದು- ಅರ್ಜುನನು ಕಳವಳಗೊಳ್ಳುವದು ಯುಕ್ತವಾಗಿಯೇ ಇರುತ್ತದೆ. 'ಕರ್ಮಕ್ಕಿಂತ ಜ್ಞಾನವು ಹೆಚ್ಚಾಗಿದ್ದರೆ' ಎಂದು ಮುಂತಾಗಿ (೩-೧) ಅವನು ಕೇಳಿರುವ ಪ್ರಶ್ನೆಯೂ ಯುಕ್ತವಾಗಿರುತ್ತದೆ; ಭಗವಂತನು ಈ ಪ್ರಶ್ನೆಗೆ ಹೇಳಿರುವ ಉತ್ತರದ ವಾಕ್ಯವೂ ಯುಕ್ತವಾಗಿರುತ್ತದೆ.

ಆದರೆ, ಅರ್ಜುನನು ಇಲ್ಲಿ ಕೇಳಿರುವ ಪ್ರಶ್ನೆಗೆ ಕೆಲವರು ಬೇರೊಂದು ಅರ್ಥವನ್ನು ಕಲ್ಪಿಸಿ ಭಗವಂತನ ಉತ್ತರವನ್ನು ಅದಕ್ಕೆ ವಿರುದ್ಧವಾಗಿರುವಂತೆ ವಿವರಿಸಿರುತ್ತಾರೆ; ಮತ್ತು ಹಿಂದೆ ಪೀಠಿಕೆಯಲ್ಲಿ ಗೀತೆಯ ತಾತ್ಪರ್ಯವೆಂದು

ತಾವು ಹೇಳಿರುವವಕ್ಕೇ ಪ್ರತಿಕೂಲವಾಗುವಂತೆ ಇಲ್ಲಿರುವ ಪ್ರಶ್ನೋತ್ತರಗಳಿಗೆ ಅರ್ಥವನ್ನು ಹೇಳಿರುತ್ತಾರೆ. ಅದು ಹೇಗೆಂದರೆ- 'ಎಲ್ಲಾ ಆಶ್ರಮದವರೂ ಜ್ಞಾನಕರ್ಮಗಳನ್ನು ಜೊತೆಯಲ್ಲಿ ಅನುಷ್ಠಾನ ಮಾಡಬೇಕೆಂಬುದೇ ಗೀತಾ ಶಾಸ್ತ್ರದಲ್ಲಿ ಗೊತ್ತಾಗಿರುವ ವಿಷಯವು '- ಎಂದು ತಮ್ಮ ಪೀಠಿಕೆಯಲ್ಲಿ ಹೇಳಿರುತ್ತಾರೆ ; ಬದುಕಿರುವವರೆಗೆ ಮಾಡುತ್ತಲೆ ಇರಬೇಕೆಂದು ಶ್ರುತಿಗಳಲ್ಲಿ ವಿಧಿಸಿರುವ ಕರ್ಮಗಳನ್ನು ಬಿಟ್ಟು ಬರಿಯ ಜ್ಞಾನವನ್ನೆ ಅನುಸರಿಸುವದರಿಂದ ಮೋಕ್ಷವನ್ನು ಹೊಂದಬಹುದೆಂಬುದನ್ನು ಪೂರ್ಣವಾಗಿ ತಿರಸ್ಕರಿಸಿರುತ್ತದೆ ಯೆಂದೂ ಬಿಚ್ಚಿ ಹೇಳಿರುತ್ತಾರೆ. ಆದರೆ ಈ ಅಧ್ಯಾಯದಲ್ಲಿಯೋ ಎಂದರೆ ಮುಮುಕ್ಷುವು ಯಾವ ಆಶ್ರಮದಲ್ಲಿಯಾದರೂ ಇರಬಹುದೆಂದು * [ಆಶ್ರಮ ವಿಕಲ್ಪಂ] ತಿಳಿಸಿ, ಬದುಕಿರುವವರೆಗೆ ಮಾಡುತ್ತಲೆ ಇರಬೇಕೆಂದು ಶ್ರುತಿಗಳಲ್ಲಿ ವಿಧಿಸಿರುವ ಆ ಕರ್ಮಗಳನ್ನೇ ಬಿಡಬಹುದೆಂದು ಹೇಳಿದ್ದಾರೆ. ಇಂಥ ವಿರುದ್ಧ ವಾದ ವಿಷಯವನ್ನು ಅರ್ಜುನನಿಗೆ ಭಗವಂತನು ಹೇಳುವದು ಹೇಗೆ ? ಕೇಳುವ ಅರ್ಜುನನಿಗೆ ವಿರುದ್ಧವಾದ ಈ ವಿಷಯವು ಗೊತ್ತಾಗುವದು ತಾನೆ ಹೇಗೆ ?

"ಶ್ರೌತಕರ್ಮಗಳನ್ನು ಬಿಟ್ಟು ಬರಿಯ ಜ್ಞಾನವನ್ನನುಸರಿಸುವದರಿಂದ ಮೋಕ್ಷವಾಗುವದಿಲ್ಲವೆಂದು ಹೇಳಿದ್ದು ಗೃಹಸ್ಥರಿಗೇ ಹೊರತು ಬೇರೆ ಆಶ್ರಮದವರಿಗಲ್ಲ" ಎಂದು ಈ ವ್ಯಾಖ್ಯಾನಕಾರರು ಒಂದು ವೇಳೆ ಹೇಳಬಹುದು. ಆದರೆ ಆಗಲೂ ಹಿಂದೆ ಹೇಳಿದ್ದಕ್ಕೂ ಈಗ ಹೇಳಿದ್ದಕ್ಕೂ ವಿರೋಧವೇ ಆಗುವದು. ಹೇಗೆಂದರೆ, ಎಲ್ಲಾ ಆಶ್ರಮದವರೂ ಜ್ಞಾನಕರ್ಮಗಳನ್ನು ಒಟ್ಟಿಗೆ ಅನುಷ್ಠಾನಮಾಡಬೇಕೆಂಬುದೇ ಗೀತಾಶಾಸ್ತ್ರದಲ್ಲಿ ಗೊತ್ತುಪಡಿಸಿರುವ ವಿಷಯವು- ಎಂದು ಮೊದಲು ಹೇಳಿ ಈಗ ಅದಕ್ಕೆ ವಿರುದ್ಧವಾಗಿ, ಗೃಹಸ್ಥನನ್ನು ಬಿಟ್ಟು ಮಿಕ್ಕ ಆಶ್ರಮದವರಿಗೆ ಬರಿಯ ಜ್ಞಾನದಿಂದಲೇ ಮೋಕ್ಷವಾಗುವದೆಂದು ಹೇಳುವದು ಹೇಗಾದೀತು ?

ಇದಕ್ಕೆ ಈ ವೃತ್ತಿಕಾರರು "ಶ್ರೌತಕರ್ಮವನ್ನು ಲಕ್ಷ್ಯದಲ್ಲಿಟ್ಟು ಈ ಮಾತನ್ನು ಹೇಳಿರುತ್ತದೆ; ಶ್ರೌತಕರ್ಮವಿಲ್ಲದ ಬರಿಯ ಜ್ಞಾನದಿಂದ ಗೃಹಸ್ಥರಿಗೆ ಮೋಕ್ಷವಾಗುವದಿಲ್ಲವೆಂಬುದೇ ನಮ್ಮ ಅಭಿಪ್ರಾಯವು. ಗೃಹಸ್ಥರಿಗೆ ಸ್ಮಾರ್ತಕರ್ಮವು ಉಂಟಾದರೂ ಅದು ಇಲ್ಲದಿದ್ದರೆ ಹೇಗೋ ಹಾಗೆ ಅದನ್ನು

---

* ಯಾವ ಆಶ್ರಮವನ್ನು ಯಾವಾಗ ಬೇಕಾದರೂ ಸ್ವೀಕರಿಸಬಹುದೆಂಬುದು ಆಶ್ರಮವಿಕಲ್ಪವು ; ಮೊದಲು ಅಧ್ಯಯನವನ್ನು ಮಾಡಿ ಆಮೇಲೆ ಗೃಹಸ್ಥನಾಗಿ ಯಜ್ಞಾದಿಗಳನ್ನು ಮಾಡಿ ಮಕ್ಕಳನ್ನು ಸ್ವಕಾರ್ಯಕ್ಕೆ ನಿಯಮಿಸಿ ಮುಂದೆ ಸಂನ್ಯಾಸವನ್ನು ಗ್ರಹಿಸಬೇಕೆಂಬುದು ಆಶ್ರಮಸಮುಚ್ಚಯ.

ಲೆಕ್ಕಕ್ಕೆ * ತೆಗೆದುಕೊಳ್ಳದೆಯೇ 'ಬರಿಯ' ಜ್ಞಾನದಿಂದ ಎಂಬ ಮಾತನ್ನು ಉಪಯೋಗಿಸಿರುತ್ತೇವೆ" ಎಂದು ಹೇಳಬಹುದು. ಆದರೆ ಇದೂ ವಿರುದ್ಧವಾದದ್ದೇ. ಹೇಗೆಂದರೆ, ಸ್ಮಾರ್ತಕರ್ಮದೊಡಗೂಡಿದ ಜ್ಞಾನದಿಂದ ಮೋಕ್ಷವಾಗುವದಿಲ್ಲವೆಂಬುದು ಗೃಹಸ್ಥನಿಗೊಬ್ಬನಿಗೇ ಹೊರತು ಮಿಕ್ಕ ಆಶ್ರಮದವರಿಗಲ್ಲವೆಂಬುದನ್ನು ವಿವೇಕಿಗಳಾದವರು ಹೇಗೆ ನಿರ್ಣಯಿಸಬೇಕು ? ಇದಲ್ಲದೆ, ಬರಿಯ ಸ್ಮಾರ್ತಕರ್ಮಗಳು ಜ್ಞಾನದೊಡನೆ ಸೇರಿ ಸಂನ್ಯಾಸಿಗಳಿಗೆ ಮೋಕ್ಷವನ್ನು ಕೊಡಬಹುದಾದರೆ ಗೃಹಸ್ಥನಿಗೂ ಸ್ಮಾರ್ತಕರ್ಮದ ಸೇರುವೆಯೇ ಸಾಕಾಗಬಹುದಲ್ಲ, ಶ್ರೌತಕರ್ಮಗಳೂ ಸೇರಬೇಕಾದದ್ದೇನು ? ಹಾಗಲ್ಲದೆ ಗೃಹಸ್ಥನಿಗೆ ಮಾತ್ರ ಶ್ರೌತಕರ್ಮಗಳೂ ಸ್ಮಾರ್ತಕರ್ಮಗಳೂ ಸೇರಿದರೇ ಮೋಕ್ಷವಾಗುವದೆಂದೂ ಸಂನ್ಯಾಸಿಗಳಿಗಾದರೆ ಬರಿಯ ಸ್ಮಾರ್ತಕರ್ಮಗಳಿಂದೊಡಗೂಡಿದ ಜ್ಞಾನದಿಂದಲೇ ಮೋಕ್ಷವಾಗುವದೆಂದೂ ಹೇಳುವ ಪಕ್ಷದಲ್ಲಿ ಗೃಹಸ್ಥನಿಗೇ ಹೆಚ್ಚಿನ ಆಯಾಸವಾಗುವದು ; ಶ್ರೌತ, ಸ್ಮಾರ್ತ – ಎಂಬ ಬಹುದುಃಖ † ರೂಪವಾದ ಕರ್ಮವನ್ನೆಲ್ಲ ಅವನೊಬ್ಬನ ತಲೆಯ ಮೇಲೆಯೇ ಹೊರಿಸಿದಂತಾಗುವದು. "ಹಾಗಾದರೆ ಗೃಹಸ್ಥನಿಗೆ ಹೀಗೆ ಹೆಚ್ಚಿನ ಆಯಾಸವಾಗುವ ಕಾರಣ ಅವನಿಗೊಬ್ಬನಿಗೇ ಮೋಕ್ಷವಾದೀತೇ ಹೊರತು ಮಿಕ್ಕ ‡ ಆಶ್ರಮದಲ್ಲಿರುವವರಿಗೆ ಶ್ರೌತನಿತ್ಯಕರ್ಮಗಳು ಇಲ್ಲದ್ದರಿಂದ ಮೋಕ್ಷವಾಗಲಾರದು, ಎನ್ನೋಣ "– ಎಂದರೆ ಅದೂ ಸರಿಯಾಗುವದಿಲ್ಲ. ಏಕೆಂದರೆ, ಎಲ್ಲಾ

---

* ಗೃಹಸ್ಥನಾದವನು ಶ್ರುತಿಯಲ್ಲಿ ವಿಹಿತವಾಗಿರಬಹುದಾದ ಕರ್ಮವನ್ನು ಮಾಡಲೇಬೇಕೆಂಬುದು ನಮ್ಮ ಅಭಿಪ್ರಾಯವೇ ಹೊರತು ಮಿಕ್ಕವರಿಗಾದರೂ ಬರಿಯ ಜ್ಞಾನದಿಂದ ಮೋಕ್ಷವಾಗುವದೆಂಬುದಲ್ಲ. ಎಲ್ಲರಿಗೂ ಸ್ಮಾರ್ತಕರ್ಮವು ಅವಶ್ಯ, ಗೃಹಸ್ಥನಿಗೆ ಶ್ರೌತಕರ್ಮವೂ ಬೇಕು. ಕರ್ಮವಿಲ್ಲದೆ ಯಾರಿಗೂ ಮೋಕ್ಷವಿಲ್ಲ.– ಎಂಬುದು ಪೂರ್ವಪಕ್ಷಿಯ ಭಾವ.

† ಕರ್ಮವನ್ನು ಮಾಡುವ ಕರ್ತೃತ್ವವೇ ದುಃಖರೂಪವಾಗಿರುವದು. ಹೀಗಿರುವಲ್ಲಿ ಶಾಸ್ತ್ರವು ಶ್ರೌತಸ್ಮಾರ್ತಕರ್ಮಗಳೆರಡನ್ನೂ ಗೃಹಸ್ಥನು ಮಾಡಲೇಬೇಕೆಂದು ವಿಧಿಸಿದರೆ ಹೆಚ್ಚಿನ ದುಃಖವನ್ನೇ ವಿಧಾಯಕವಾಡಿದಂತೆ ಆಗುವದು. ಆಗ ಶಾಸ್ತ್ರಕ್ಕೆ ಪ್ರಾಮಾಣ್ಯವೇ ಹೋಗುವದು. ಏಕೆಂದರೆ ಪುರುಷಾರ್ಥವನ್ನು ತಿಳಿಸುವದೇ ಶಾಸ್ತ್ರದ ಪ್ರಾಮಾಣ್ಯಕ್ಕೆ ಕಾರಣವೆಂದು ಕರ್ಮಕಾಂಡದವರ ಅಭಿಪ್ರಾಯವಾಗಿರುವದು.

‡ ಸಂನ್ಯಾಸವು ಕರ್ಮಕ್ಕಧಿಕಾರವಿಲ್ಲದ ಅಂಗಹೀನರೇ ಮುಂತಾದವರಿಗೆ ವಿಹಿತವಾದದ್ದೆಂದು ಕೆಲವರು ಮೀಮಾಂಸಕರು ಹೇಳುತ್ತಿದ್ದರು ಅವರ ಮತವನ್ನು ಇಲ್ಲಿ ಸೂಚಿಸಿದೆ. ವೃತ್ತಿಕಾರರು ಈ ಅಭಿಪ್ರಾಯವುಳ್ಳವರೆಂತ ತಿಳಿಯಬಾರದು. ಹೆಚ್ಚಿನ ಸಾಧನವು ಗೃಹಸ್ಥರಿಗೆ ವಿಹಿತವಾಗಿರುವದರಿಂದ ಹೆಚ್ಚಿನ ಫಲವಾದ ಮೋಕ್ಷವೂ ಅವರಿಗೇ ಆಗಬೇಕೆಂದು ಪೂರ್ವಪಕ್ಷಿಯ ಭಾವ.

ಉಪನಿಷತ್ತುಗಳಲ್ಲಿಯೂ ಇತಿಹಾಸದಲ್ಲಿಯೂ ಪುರಾಣದಲ್ಲಿಯೂ ಯೋಗ ಶಾಸ್ತ್ರದಲ್ಲಿಯೂ ಜ್ಞಾನಕ್ಕೆ ಅಂಗವಾಗಿ * ಸರ್ವಕರ್ಮಗಳನ್ನೂ ಸಂನ್ಯಾಸ ಮಾಡಬೇಕೆಂದು ವಿಧಿಸಿರುತ್ತದೆ ; ಮತ್ತು ಶ್ರುತಿಸ್ಮೃತಿಗಳಲ್ಲಿ ಆಶ್ರಮಗಳ ವಿಕಲ್ಪವನ್ನೂ † ಸಮುಚ್ಚಯವನ್ನೂ ವಿಧಿಸಿರುತ್ತದೆ.

## ಸಂನ್ಯಾಸವಿಧಿಯ ವಚನಗಳಿಗೂ ವೃತ್ತಿಕಾರಮತವು ವಿರುದ್ಧ

(ಪೂರ್ವಪಕ್ಷಿ) ಹಾಗಾದರೆ ‡ ಎಲ್ಲಾ ಆಶ್ರಮದವರೂ ಜ್ಞಾನಕರ್ಮ ಗಳನ್ನು ಸೇರಿಸಿಕೊಂಡು ನಡೆಸಬೇಕೆಂದು ಸಿದ್ಧವೇ ಆಯಿತಲ್ಲ ?

(ಸಿದ್ಧಾಂತಿ) ಹಾಗಲ್ಲ. ಏಕೆಂದರೆ, ಮುಮುಕ್ಷುವಾದವನು ಸರ್ವಕರ್ಮ ಗಳನ್ನೂ ಸಂನ್ಯಾಸಮಾಡಬೇಕೆಂದು ವಿಧಿಸಿರುತ್ತದೆ. ಹೇಗೆಂದರೆ "ಸಂನ್ಯಾಸ ಮಾಡಿ § ಭಿಕ್ಷಾಚರ್ಯೆಯನ್ನು ಮಾಡುವರು" (ಬೃ) ; "ಆದ್ದರಿಂದ ಈ ತಪ ಸ್ಸುಗಳಲ್ಲೆಲ್ಲ ಸಂನ್ಯಾಸವೇ ಹೆಚ್ಚಿನದೆಂದು ಹೇಳುವರು" (ತೈ. ಆ.) ; "ಸಂನ್ಯಾ ಸವೇ ಹೆಚ್ಚಿನದು" (ತೈ. ಆ.) ; ಕರ್ಮದಿಂದಲಾಗಲಿ, ಪುತ್ರಸಂತತಿಯಿಂದ ಲಾಗಲಿ, ಹಣದಿಂದಲಾಗಲಿ, (ಮುಕ್ತಿಯನ್ನು ಪಡೆಯಲಿಲ್ಲ) ಸಂನ್ಯಾಸದಿಂದಲೇ ಕೆಲವರು ಮುಕ್ತಿಯನ್ನು || ಪಡೆದರು." (ತೈ. ಆ.) ; "ಬ್ರಹ್ಮಚರ್ಯದಿಂದಲೇ

---

* ಶ್ರುತಿಸ್ಮೃತಿವಾಕ್ಯಗಳನ್ನು ಮುಂದೆ ಆಚಾರ್ಯರೇ ಉದಾಹರಿಸಿರುತ್ತಾರೆ.

† "ಬ್ರಹ್ಮಚರ್ಯವನ್ನು ಮುಗಿಸಿ ಗೃಹಸ್ಥನಾಗಬೇಕು ; ಗೃಹಸ್ಥನಾದ ಮೇಲೆ ವಾನ ಪ್ರಸ್ಥನಾಗಿ ಸಂನ್ಯಾಸಿಯಾಗಬೇಕು. ಅಥವಾ ಇನ್ನೊಂದು ಮಾರ್ಗದಲ್ಲಿಯೂ ಮಾಡಬಹುದು: ಬ್ರಹ್ಮಚರ್ಯಾಶ್ರಮದಿಂದಲೇ ಸಂನ್ಯಾಸಿಯಾಗಬಹುದು, ಗೃಹಸ್ಥನೆ ಸಂನ್ಯಾಸಿಯಾಗಬಹುದು, ವಾನ ಪ್ರಸ್ಥನೂ ಆಗಬಹುದು." ಎಂದು ಜಾಬಾಲಶ್ರುತಿಯಲ್ಲಿದೆ. ಇಲ್ಲಿ ಸಂನ್ಯಾಸದ ಆಶ್ರಮವನ್ನು ಯಾವ ಕ್ರಮದಲ್ಲಿಯಾದರೂ ಸ್ವೀಕಾರಮಾಡಬಹುದೆಂಬ ವಿಕಲ್ಪವನ್ನೂ ಹೇಳಿದೆ ; ಒಂದಾದ ಮೇಲೆ ಒಂದು ಆಶ್ರಮವನ್ನು ಸೇರಬೇಕೆಂಬ ಸಮುಚ್ಚಯವನ್ನೂ ಹೇಳಿದೆ. ಇದರಂತೆಯೆ ಆಪಸ್ತಂಬಾದಿ ಸ್ಮೃತಿಗಳಲ್ಲಿಯೂ ಹೇಳಿರುತ್ತದೆ.

‡ ಆಶ್ರಮಗಳು ಶಾಸ್ತ್ರವಿಹಿತವಾಗಿರುವದರಿಂದ ಶಾಸ್ತ್ರವಿಹಿತಕರ್ಮಗಳೂ ಅವಕ್ಕೆ ಇರ ಬಹುದೆಂದೇ ಆಯಿತು. ಆದ್ದರಿಂದ ಜ್ಞಾನಕರ್ಮಸಮುಚ್ಚಯವನ್ನೇ ಶಾಸ್ತ್ರದಲ್ಲಿ ವಿಧಿಸಿದೆಯೆನ್ನು ವದೇ ಸರಿಯಾದದ್ದು.— ಎಂದು ವೃತ್ತಿಕಾರರ ಭಾವ.

§ ವಿ|| ಗು|| ಮ|| ಈ ಪಾಠಗಳನ್ನು ಅನುಸರಿಸಿ ಇದರ ಹಿಂದಿನ ಮಾತುಗಳನ್ನು ಬಿಟ್ಟಿ ರುತ್ತದೆ.

|| ಕೆಲವರು ಮುಕ್ತಿಯನ್ನು ಪಡೆದಿವಾರಷ್ಟೆ ; ಅವರಿಗೆ ಮುಕ್ತಿಯಾದದ್ದು ಸಂನ್ಯಾಸ ದಿಂದಲೇ ಹೊರತು ಕರ್ಮಾದಿಗಳಿಂದಲ್ಲ— ಎಂಬುದು ಶ್ರುತಿಯ ತಾತ್ಪರ್ಯ.

ಸಂನ್ಯಾಸಿಯಾಗಬಹುದು" (ಜಾ)– ಎಂದು ಮುಂತಾಗಿ ಶ್ರುತಿಗಳಿವೆ. (ಇನ್ನು ಸ್ಮೃತಿಗಳನ್ನು ಉದಾಹರಿಸುತ್ತೇವೆ.) "ಧರ್ಮವನ್ನು ಬಿಡು, ಅಧರ್ಮವನ್ನೂ ಬಿಡು, ದಿಟಸಟಿಗಳೆರಡನ್ನೂ ಬಿಡು; ಹೀಗೆ ದಿಟಸಟಿಗಳೆರಡನ್ನೂ ಬಿಟ್ಟ ಮೇಲೆ ಯಾವದರಿಂದ ಅವುಗಳನ್ನು ಬಿಡುತ್ತೀಯೋ ಆ (ಅಹಂಕಾರವನ್ನು) ಬಿಟ್ಟು ಬಿಡು" (ಮೋ) "ಸಂಸಾರವೆಲ್ಲ ನಿಸ್ಸಾರವೆಂಬುದನ್ನು ಕಂಡು ಸಾರವನ್ನು ಕಾಣಬೇಕೆಂಬ ತವಕದಿಂದ ಹೆಚ್ಚಿನ ವೈರಾಗ್ಯವನ್ನು ಹೊಂದಿದವರು ಮದುವೆಯಾಗದೆಯೇ ಸಂನ್ಯಾಸಿಗಳಾಗುವರು" ಎಂದು **ಬೃಹಸ್ಪತಿಯ** ವಚನವಿದೆ. * "ಜೀವನು ಕರ್ಮದಿಂದ ಕಟ್ಟುವಡೆಯುತ್ತಾನೆ, ವಿದ್ಯೆಯಿಂದ ಬಿಡುಗಡೆ ಹೊಂದುತ್ತಾನೆ; ಆದ್ದರಿಂದ ಕೊನೆಯನ್ನು ಕಂಡ ಯತಿಗಳು ಕರ್ಮವನ್ನು ಮಾಡುವದಿಲ್ಲ" (ಮೋ) ಎಂದು **ಶುಕಾನುಶಾಸನ**ದಲ್ಲಿರುತ್ತದೆ. ಈ ಗೀತೆಯಲ್ಲಿಯೂ "ಸರ್ವಕರ್ಮಗಳನ್ನು ಮನಸ್ಸಿನಲ್ಲಿ ಸಂನ್ಯಾಸಮಾಡಿ" (೫–೧೩) ಎಂದು ಮುಂತಾದ ವಚನವಿದೆ.

## ಕರ್ಮವಿಲ್ಲದೆಯೇ ಮೋಕ್ಷವಾಗಬಹುದಾದ್ದರಿಂದಲೂ ವೃತ್ತಿಕಾರರ ಪಕ್ಷವು ಸರಿಯಲ್ಲ

ಇದಲ್ಲದೆ ಮೋಕ್ಷವೆಂಬುದು ಕಾರ್ಯವಲ್ಲವಾದ್ದರಿಂದ † ಮುಮುಕ್ಷುವಾದವನಿಗೆ ಕರ್ಮದಿಂದ ಏನೂ ಆಗಬೇಕಾದದ್ದಿರುವದಿಲ್ಲ; (ಅದ್ದರಿಂದಲೂ ಈ ಸಮುಚ್ಚಯವಾದವು ಸರಿಯಲ್ಲ.)

(ಆಕ್ಷೇಪ) ಪ್ರತ್ಯವಾಯವನ್ನು ತಪ್ಪಿಸಿಕೊಳ್ಳುವದಕ್ಕಾಗಿ ನಿತ್ಯಕರ್ಮಗಳನ್ನು ಮಾಡಲೇ ಬೇಕಲ್ಲವೆ?

(ಪರಿಹಾರ) ಹಾಗಲ್ಲ. ಏಕೆಂದರೆ ಪ್ರತ್ಯವಾಯವಾಗುವದೆಂಬುದು ಸಂನ್ಯಾಸಿಯಲ್ಲದವನ ವಿಷಯವಾಗಿರುತ್ತದೆ. ಅಗ್ನಿಹೋತ್ರವೇ ‡ ಮುಂತಾದ

---

* ಈ ವಚನವು ಎಲ್ಲಿಯದೋ ತಿಳಿಯದು.

† ಕಾರ್ಯವಾದದ್ದು ಅನಿತ್ಯವಾಗಿರಬೇಕು. ಆದರೆ ಮೋಕ್ಷವು ನಿತ್ಯವೆಂದು ಎಲ್ಲರೂ ಒಪ್ಪುವದರಿಂದ ಅದು ಕಾರ್ಯವಾಗಲಾರದು. ಕಾರ್ಯಕ್ಕೆ ಮಾತ್ರ ಸಾಧನವಾಗಬೇಕು; ನಿತ್ಯಸಿದ್ಧವಾಗಿರುವ ಮೋಕ್ಷಕ್ಕೆ ಕರ್ಮದಿಂದ ಆಗಬೇಕಾದದ್ದೇನು?

‡ ಕರ್ಮವನ್ನು ಮಾಡಬೇಕಾದವನು ಬಿಟ್ಟರೆ ದೋಷವು [ಪ್ರತ್ಯವಾಯವು] ಉಂಟಾದೀತೇ ಹೊರತು ಮಿಕ್ಕವನಿಗೆ ಆಗಲಾರದು. ಹಾಗಿಲ್ಲದಿದ್ದರೆ ಗೃಹಸ್ಥನ ಕರ್ಮವಾದ ಅಗ್ನಿಹೋತ್ರವನ್ನು ಬಿಟ್ಟರೆ ಬ್ರಹ್ಮಚಾರಿಗೂ ದೋಷವುಂಟಾಗಬೇಕಾಗುವದು– ಎಂದು ಭಾವ. ಮ|| ಪಾಠದಲ್ಲಿ

ಕರ್ಮವನ್ನು ಮಾಡದೆ ಇರುವದರಿಂದ ಸಂನ್ಯಾಸಿಗಳಲ್ಲದ ಬ್ರಹ್ಮಚಾರಿಗಳಿಗೆ ಕೂಡ [ಅವರು ಕರ್ಮಿಗಳೇ * ಆಗಿದ್ದರೂ] ಪ್ರತ್ಯವಾಯವುಂಟಾಗುವದೆಂದು ಕಲ್ಪಿಸುವದಕ್ಕೆ ಹೇಗೆ ಆಗಲಾರದೋ ಅದರಂತೆ ಸಂನ್ಯಾಸಿಗೂ ಆಗಲಾರದು. ಇದಲ್ಲದೆ (ಯಾರಿಗೇ ಆಗಲಿ) ನಿತ್ಯಕರ್ಮವನ್ನು ಮಾಡದೆ ಇರುವದೆಂಬ ಅಭಾವದಿಂದ ಭಾವರೂಪವಾದ ಪ್ರತ್ಯವಾಯವುಂಟಾಗುವದೆಂದು † ಕಲ್ಪಿಸುವದೇ ಮೊದಲು ಆಗುವ ಹಾಗಿಲ್ಲ, [ಇದು ಯುಕ್ತವೂ ಅಲ್ಲ.] ಏಕೆಂದರೆ "ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು?" (ಛಾ) ಎಂಬ ಶ್ರುತಿಯಲ್ಲಿ ಹೇಳಿರುವಂತೆ ಇಲ್ಲದ್ದರಿಂದ ಇರುವದು ಉಂಟಾಗಲಾರದು. ಹೀಗೆ ವಿಧಿಸಿರುವ ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವು ಉಂಟಾಗುವ ಸಂಭವವೇ ಇಲ್ಲದಿದ್ದರೂ ಅದು ಆಗುವದೆಂದು ವೇದವು ಹೇಳುವದಾದರೆ ಆಗ ವೇದವು ಅನರ್ಥವನ್ನುಂಟು ಮಾಡುವದರಿಂದ ‡ ಅಪ್ರಮಾಣವೇ ಎಂದು ಹೇಳಬೇಕಾಗುತ್ತದೆ; ಏಕೆಂದರೆ ಆ ಪಕ್ಷದಲ್ಲಿ ವಿಹಿತ ಕರ್ಮವನ್ನು ಮಾಡಿದರೂ ಮಾಡದೆ ಬಿಟ್ಟರೂ ದುಃಖವೊಂದೇ ಫಲವೆಂದಾಗುವದು. **ಆಗ ಶಾಸ್ತ್ರವು ಇಲ್ಲದ್ದನ್ನೂ ಉಂಟು ಮಾಡುವ ಶಕ್ತಿಯುಳ್ಳದ್ದೆಂದೂ ಇದ್ದದ್ದನ್ನು ಇದ್ದಂತೆ ತಿಳಿಸುವ ಪ್ರಮಾಣ ಮಾತ್ರವಲ್ಲವೆಂದೂ § ಅಯುಕ್ತವಾದ ಕಲ್ಪನೆಯನ್ನು ಮಾಡಿದಂತಾಗುವದು.** ಇದು ಯಾರಿಗೂ ಸಮ್ಮತವಲ್ಲ. ಆದ್ದರಿಂದ ಸಂನ್ಯಾಸಿಗಳಿಗೆ ಕರ್ಮಗಳೂ ಇರುವುದಿಲ್ಲ; ಜ್ಞಾನಕರ್ಮಗಳ ಸಮುಚ್ಚಯದಿಂದ ಅವರಿಗೆ ಮೋಕ್ಷವೆಂಬುದೂ ಯುಕ್ತವಲ್ಲ.

---

'ಅಗ್ನಿಹೋತ್ರ' ಎಂದಿದೆ. ಮಿಕ್ಕ ಪುಸ್ತಕದಲ್ಲಿ 'ಅಗ್ನಿಕಾರ್ಯ' ಎಂಬಿದೆ. ಆ ಪಾಠವನ್ನು ಅನುಸರಿಸಿದರೆ "ಬ್ರಹ್ಮಚಾರಿಯು ತನ್ನ ಕರ್ಮವಾದ ಅಗ್ನಿಕಾರ್ಯವನ್ನು ಮಾಡದಿದ್ದರೆ ಅವನಿಗೆ ಪ್ರತ್ಯವಾಯವುಂಟಾಗಬಹುದು, ಸಂನ್ಯಾಸಿಗೆ ಅದನ್ನು ಮಾಡಲಿಲ್ಲವೆಂಬ ದೋಷವಾದೀತೆ? ಹಾಗಾದರೆ ಗೃಹಸ್ಥನಿಗೂ ಆ ದೋಷವು ಬರಬೇಕಾಗುವದಲ್ಲ?" ಎಂದು ಭಾಷ್ಯಾರ್ಥವನ್ನು ಮಾಡಿಕೊಳ್ಳಬೇಕು.

* ಕರ್ಮಿಗಳೇ ಆಗಿದ್ದರೂ ಎಂಬುದು ಮ|| ಮೈ|| ಪಾಠಗಳಲ್ಲಿಲ್ಲ.

† ಕರ್ಮವನ್ನು ಬಿಟ್ಟ ಮಾತ್ರದಿಂದ ದೋಷವಿಲ್ಲವೆಂಬುದನ್ನು ತೈತ್ತಿರೀಯ, ಬ್ರಹ್ಮಸೂತ್ರ– ಮುಂತಾದ ಭಾಷ್ಯಗಳಲ್ಲಿಯೂ ಆಚಾರ್ಯರು ತಿಳಿಸಿರುತ್ತಾರೆ.

‡ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯದ ಪುರುಷಾರ್ಥಸಾಧನವನ್ನು ತಿಳಿಸುವದರಿಂದ ವೇದವು ಪ್ರಮಾಣವೆಂದು ಮೀಮಾಂಸಕರು ಹೇಳುತ್ತಾರೆ; ವೇದವು ಅನರ್ಥವನ್ನು ತಿಳಿಸಿದರೆ ಅದಕ್ಕೆ ಅಂಥ ಪ್ರಾಮಾಣ್ಯವು ಬರಲಾರದು.

§ ಪ್ರಮಾಣವು ಇದ್ದದ್ದನ್ನು ತಿಳಿಸುವದೇ ಹೊರತು ಇಲ್ಲದ್ದನ್ನುಂಟುಮಾಡುವದಿಲ್ಲ. ಶಾಸ್ತ್ರವು ಪ್ರಮಾಣವಾದ ಮಾತ್ರಕ್ಕೆ ಅಭಾವದಿಂದ ದುಃಖವನ್ನುಂಟುಮಾಡೀತೆ?

## ಸಮುಚ್ಚಯಪಕ್ಷವು ಅರ್ಜುನನ ಪ್ರಶ್ನೆಗೂ ಭಗವಂತನ ಉತ್ತರಕ್ಕೂ ಅನುಗುಣವಾಗಿಲ್ಲ

"ಜ್ಞಾನವು ಕರ್ಮಕ್ಕಿಂತ ಹೆಚ್ಚಿನದೆಂಬುದೇ ನಿನ್ನ ಅಭಿಪ್ರಾಯವಾದರೆ" (೩-೧) ಎಂದು ಅರ್ಜುನನು ಕೇಳಿರುವ ಪ್ರಶ್ನೆಯು ಅಯುಕ್ತವಾಗಿಬಿಡುವದರಿಂದಲೂ ಸಮುಚ್ಚಯವಾದವು ಸರಿಯಲ್ಲ. ಅದು ಹೇಗೆಂದರೆ, 'ಜ್ಞಾನವನ್ನೂ ಕರ್ಮವನ್ನೂ ಸೇರಿಸಿಕೊಂಡು ನೀನು ಅನುಷ್ಠಾನಮಾಡಬೇಕು' -ಎಂದು ಭಗವಂತನು ಅರ್ಜುನನಿಗೆ ಎರಡನೆಯ ಅಧ್ಯಾಯದಲ್ಲಿ ಹೇಳಿರುತ್ತಾನೆಂದು (ವೃತ್ತಿಕಾರರ ಮತವನ್ನು ಅನುಸರಿಸಿ) ಇಟ್ಟುಕೊಂಡರೆ 'ಜ್ಞಾನವು ಕರ್ಮಕ್ಕಿಂತ ಹೆಚ್ಚಿನದೆಂಬುದೇ ನಿನ್ನ ಮತವಾದರೆ' ಎಂಬ ಪ್ರಶ್ನೆಯು ಇದಕ್ಕೆ ಹೊಂದುವದಿಲ್ಲ. ಜ್ಞಾನಕರ್ಮಗಳೆರಡನ್ನೂ ಅರ್ಜುನನಿಗೆ ಹೇಳಿದ್ದರೆ ಕರ್ಮಕ್ಕಿಂತ ಹೆಚ್ಚಿನದಾದ ಬುದ್ಧಿಯನ್ನೂ ಅವನಿಗೆ ಹೇಳಿದಂತೆಯೇ ಆಗುವದರಿಂದ "ಹಾಗಾದರೆ, ಎಲೈ ಕೇಶವನೆ, ಘೋರವಾದ ಕರ್ಮವನ್ನು ಮಾಡುವಂತೆ ನನ್ನನ್ನು ಏಕೆ ಕಟ್ಟುಮಾಡುತ್ತಿದ್ದೀಯೆ?" ಎಂದು ಭಗವಂತನನ್ನು [ದೂರುವದಾಗಲಿ *] ಕೇಳುವದಾಗಲೀ ಸ್ವಲ್ಪವೂ ಹೊಂದುವದಿಲ್ಲ. ಕರ್ಮಕ್ಕಿಂತ ಹೆಚ್ಚಿನದಾದ ಜ್ಞಾನವನ್ನು ಅರ್ಜುನನೊಬ್ಬನು ಮಾತ್ರ ಅನುಷ್ಠಾನ ಮಾಡಲಾಗದೆಂದು ಭಗವಂತನು ಹಿಂದೆ ಹೇಳಿರುವನೆಂದು ಕಲ್ಪಿಸುವದಕ್ಕೂ ಆಗುವದಿಲ್ಲ ; ಆಗುವ ಹಾಗಿದ್ದರೆ ಅರ್ಜುನನು 'ಕರ್ಮಕ್ಕಿಂತ ಜ್ಞಾನವು ಹೆಚ್ಚಿನದಾದರೆ' ಎಂದು [ವಿಂಗಡಿಸಿ†] ಕೇಳಿದರೂ ಕೇಳಬಹುದಾಗಿತ್ತು. (ಆದ್ದರಿಂದ ಈ ಪಕ್ಷದಲ್ಲಿ ಪ್ರಶ್ನೆಯು ಯುಕ್ತವಾಗುವದಿಲ್ಲ.) ಇದಕ್ಕೆ ಬದಲು (ನಮ್ಮ ಅಭಿಪ್ರಾಯದಂತೆ) "ಜ್ಞಾನಕರ್ಮಗಳು ಒಂದಕ್ಕೊಂದು ವಿರುದ್ಧವಾಗಿರುವದರಿಂದ ಒಬ್ಬ ಪುರುಷನೇ ಅವುಗಳನ್ನು ಅನುಷ್ಠಾನಮಾಡುವದೆಂಬುದು ಅಶಕ್ಯವಾಗಿರುವದೆಂಬುದರ ಮೇಲೆ ಬೇರೆ ಬೇರೆ ಅಧಿಕಾರಿಗಳು ಇವುಗಳನ್ನು ಮಾಡತಕ್ಕದ್ದು- ಎಂದು ಭಗವಂತನು ಹೇಳಿದ್ದಾನೆ" ಎಂದಿಟ್ಟುಕೊಂಡರೆ "ಹೆಚ್ಚಿನದಾದರೆ" (೩-೧) ಎಂಬೀ ಪ್ರಶ್ನೆಯು ಸರಿಯೆ ಆಗುವದು.

ಅರ್ಜುನನು ನಿಜವನ್ನು ತಿಳಿಯದ್ದರಿಂದ ಈ ಪ್ರಶ್ನೆಯನ್ನು ಹಾಕಿರುತ್ತಾನೆಂದು ಇಟ್ಟುಕೊಂಡರೂ ಜ್ಞಾನನಿಷ್ಠೆಯನ್ನೂ ಕರ್ಮನಿಷ್ಠೆಯನ್ನೂ ಬೇರೆ ಬೇರೆ ಜನರು ಆಚರಿಸತಕ್ಕದ್ದೆಂದು ಭಗವಂತನು ಹೇಳಿರುವ ಉತ್ತರವು (ನಿಮ್ಮ ಮತಕ್ಕೆ) ಹೊಂದುಗಡೆಯಾಗುವದಿಲ್ಲ. ಭಗವಂತನು ತಿಳಿಯದೆ ‡ ಉತ್ತರ ಹೇಳಿದ

---

* 'ಉಪಾಲಂಭೋ ವಾ' ಎಂಬ ಮಾತು ನಿ|| ಗು|| ಮು|| ಪಾಠಗಳಲ್ಲಿಲ್ಲ.

† 'ವಿವೇಕತಃ' ಎಂಬುದು ನಿ|| ಗು|| ಮು|| ಪಾಠಗಳಲ್ಲಿಲ್ಲ.

‡ ಸರ್ವಜ್ಞನಾದ ಈಶ್ವರನು ತಿಳಿಯದೆ ಹೇಳಿದನೆಂದು ಕಲ್ಪಿಸುವದು ಅಯುಕ್ತ.

ನೆಂದಂತೂ ಕಲ್ಪಿಸುವ ಹಾಗೇ ಇಲ್ಲ. (ಅಂತೂ ಅರ್ಜುನನ ಪ್ರಶ್ನೆಯು ಹೇಗೂ ಹೊಂದುವದಿಲ್ಲವಾದ್ದರಿಂದ ಸಮುಚ್ಚಯವಾದಿಗಳ ಪಕ್ಷವು ನಿಲ್ಲತಕ್ಕದ್ದಲ್ಲ.) ಮೇಲೆ ಹೇಳಿದ ಹಾಗೆ ಜ್ಞಾನನಿಷ್ಠೆಯನ್ನೂ ಕರ್ಮನಿಷ್ಠೆಯನ್ನೂ ಬೇರೆ ಬೇರೆ ಯವರು ಅನುಸರಿಸತಕ್ಕದ್ದೆಂದು ಭಗವಂತನು ಉತ್ತರ ಹೇಳಿರುತ್ತಾನಾದ್ದರಿಂದಲೂ ಸಮುಚ್ಚಯವಾದವು ಯುಕ್ತವಾದದ್ದಲ್ಲ.

ಆದ್ದರಿಂದ ಬರಿಯ ಜ್ಞಾನದಿಂದಲೆ ಮೋಕ್ಷವಾಗುವದೆಂಬುದೇ ಭಗವದ್ಗೀತೆ ಯಲ್ಲಿಯೂ ಎಲ್ಲಾ ಉಪನಿಷತ್ತುಗಳಲ್ಲಿಯೂ ನಿಶ್ಚಯವಾಗಿರುವ ವಿಷಯವಾಗಿ ರುತ್ತದೆ.

ಇದಲ್ಲದೆ ಜ್ಞಾನಕರ್ಮಗಳೆರಡನ್ನೂ ಸೇರಿಸಿ ಅನುಷ್ಠಾನ ಮಾಡಬಹು ದಾದರೆ "ಇವೆರಡರಲ್ಲಿ ಒಂದನ್ನು ನಿಶ್ಚಯಿಸಿ ಹೇಳು" (೩-೨) ಎಂದು (ಅರ್ಜು ನನು) ಕೇಳಿರುವದೂ ಸರಿಯಾಗುವದಿಲ್ಲ, "ಆದ್ದರಿಂದ ನೀನು ಕರ್ಮವನ್ನೇ ಮಾಡು" (೪-೧೫) ಎಂಬ ಶ್ಲೋಕದಲ್ಲಿ ಅರ್ಜುನನಿಗೆ ಜ್ಞಾನನಿಷ್ಠೆಯು ಸಂಭವಿಸುವ ಹಾಗಿಲ್ಲವೆಂದು ಮುಂದೆ ಗೊತ್ತಾಗಿ ಹೇಳಿಯೂ ಇರುತ್ತದೆ. (ಇದೂ ಜ್ಞಾನ ಕರ್ಮಸಮುಚ್ಚಯಪಕ್ಷಕ್ಕೆ ಸರಿಹೋಗುವದಿಲ್ಲ.)

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

೧. ಎಲೈ ಜನಾರ್ದನನೆ, ಕರ್ಮಕ್ಕಿಂತ ಬುದ್ಧಿಯೇ ಹೆಚ್ಚಿನದೆಂದು ನಿನ್ನ ಅಭಿಪ್ರಾಯವೆ ? ಹಾಗಾದರೆ ಎಲೈ ಕೇಶವನೆ, ಘೋರವಾದ ಕರ್ಮದಲ್ಲಿ ನನ್ನನ್ನೇಕೆ ನಿಯಮಿಸುತ್ತಿದ್ದೀಯೆ ?

[ಭಾಷ್ಯ]

ಎಲೈ ಜನಾರ್ದನನೆ, ಕರ್ಮಕ್ಕಿಂತ ಬುದ್ಧಿಯೇ ಹೆಚ್ಚಿನದೆಂದು, ಕರ್ಮ ಕ್ಕಿಂತಲೂ ಜ್ಞಾನವೇ ಮೇಲೆಂದು, ನಿನ್ನ ಅಭಿಪ್ರಾಯವಾದರೆ– [ಜ್ಞಾನ ಕರ್ಮಗಳೆರಡನ್ನೂ ಸೇರಿಸಿಕೊಂಡು ಅನುಷ್ಠಾನಮಾಡಬೇಕೆಂಬುದು ಭಗ ವಂತನ ಅಭಿಪ್ರಾಯವಾಗಿದ್ದರೆ ಮುಕ್ತಿಗೆ ಸಾಧನವು ಒಂದೇ ಆಗಿ * ಬಿಡುವದ ರಿಂದ, ಕರ್ಮಕ್ಕಿಂತ ಜ್ಞಾನವು ಹೆಚ್ಚಿನದೆಂದು ಜ್ಞಾನವನ್ನು ಕರ್ಮದಿಂದ ಬೇರ್ಪಡಿಸಿ† ಇಲ್ಲಿ ಅರ್ಜುನನು ಪ್ರಶ್ನೆಮಾಡಿರುವದು ತಪ್ಪಾಗುವದು ; ಏಕೆಂದರೆ

---

* ಕರ್ಮಜ್ಞಾನಗಳೆರಡೂ ಸೇರಿ ಒಂದು ಸಾಧನ, ಒಂದು ಫಲ.

† ಕರ್ಮಕ್ಕಿಂತ ಜ್ಞಾನವು ಹೆಚ್ಚಿನದು–ಎಂದು ಕೇಳುವದು ಬೇರೆ ಬೇರೆ ಫಲವಿದ್ದರೆ ಮಾತ್ರ ಸಾಧ್ಯ. ಆದರೆ ಸಮುಚ್ಚಯವಾದಿಯ ಪಕ್ಷದಲ್ಲಿ ಬೇರೆ ಬೇರೆ ಫಲವಿಲ್ಲ.

ಬೇರೆ ಫಲವನ್ನು ಕೊಡುವದೆಂಬ ಕಾರಣದಿಂದ ತಾನೇ ತನಗಿಂತ ಬೇರೆಯಾಗ ಲಾರದು. ಮತ್ತು 'ಕರ್ಮಕ್ಕಿಂತ ಜ್ಞಾನವೇ ಶ್ರೇಯಸ್ಕರವೆಂತಲೂ ಭಗ ವಂತನು ಹೇಳಿರುತ್ತಾನೆ ; ಶ್ರೇಯಸ್ಕರವಲ್ಲದ ಕರ್ಮವನ್ನು ಮಾಡೆಂದೂ ನನಗೆ ಹೇಳುತ್ತಿರುತ್ತಾನೆ. ಇದೇತಕ್ಕಿದ್ದೀತು ? ಎಂದು ಭಗವಂತನನ್ನು ದೂರುವಂತೆ] ಎಲೈ ಕೇಶವನೆ, ಏತಕ್ಕೋಸ್ಕರ ಘೋರವಾದ ಕರ್ಮದಲ್ಲಿ ಎಂದರೆ ಹಿಂಸಾ ರೂಪವಾದ ಈ ಕ್ರೂರಕರ್ಮದಲ್ಲಿ ನನ್ನನ್ನೇಕೆ ನಿಯಮಿಸುತ್ತಿದ್ದೀಯೆ ? [ಎಂದು ಹೇಳಿರುವದೂ ಹೊಂದುವದಿಲ್ಲ. ಒಂದು ಪಕ್ಷ, ಸ್ಮಾರ್ತಕರ್ಮವನ್ನೇ ಜ್ಞಾನದೊಡನೆ ಸೇರಿಸಿಕೊಳ್ಳಬೇಕೆಂದು ಎಲ್ಲರಿಗೂ ಭಗವಂತನು ಹೇಳಿರುತ್ತಾ ನೆಂದೂ ಅರ್ಜುನನೂ ಹಾಗೆಯೇ ತಿಳಿದಿರುತ್ತಾನೆಂದೂ ಇಟ್ಟುಕೊಂಡರೂ "ಕ್ರೂರವಾದ ಕರ್ಮದಲ್ಲಿ ನನ್ನನ್ನೇಕೆ ನಿಯಮಿಸುತ್ತಿದ್ದೀಯೆ ?" ಎಂದು ಕೇಳಿರು ವದು ಹೇಗೆ ಸರಿಯಾದೀತು ?]

ಮತ್ತು—

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

೨. ಕಲೆಬೆರಕೆ ಮಾಡಿರುವಂತಿರುವ ಈ ವಾಕ್ಯದಿಂದ ನನ್ನ ಬುದ್ಧಿಗೆ ಮೋಹವನ್ನು ಉಂಟುಮಾಡುವಂತೆ ಕಾಣುತ್ತೀಯೆ. ಆದ್ದರಿಂದ ಯಾವ ದೊಂದರಿಂದ ನಾನು ಶ್ರೇಯಸ್ಸನ್ನು ಪಡೆಯಬಹುದೋ ಅಂಥ ಒಂದನ್ನು ನಿಶ್ಚಯಿಸಿ ಹೇಳಿಬಿಡು.

[ಭಾಷ್ಯ]

ಕಲೆಬೆರಕೆಮಾಡುವಂತೆ ತೋರುವ ಈ ವಾಕ್ಯದಿಂದ– ಭಗವಂತನಾದ ನೀನೇನೋ ಬಿಡಿಬಿಡಿಸಿಯೇ ಹೇಳುತ್ತಿದ್ದೀಯಾದರೂ ಅಲ್ಪಬುದ್ಧಿಯುಳ್ಳ ನನಗೆ ಈ ನಿನ್ನ ವಾಕ್ಯದಲ್ಲಿ ಎಲ್ಲವನ್ನೂ ಕಲೆಬೆರಕೆಮಾಡಿರುವಂತೆ ತೋರುತ್ತಿದೆ. ಇಂಥ ವಾಕ್ಯದಿಂದ– ನನ್ನ ಬುದ್ಧಿಗೆ ಮೋಹವನ್ನು ಉಂಟುಮಾಡುವಂತೆ ಕಾಣು ತ್ತೀಯೆ. ನನ್ನ ಬುದ್ಧಿಯ ಭ್ರಾಂತಿಯನ್ನೆಲ್ಲ ಕಳೆಯುವದಕ್ಕೇ ಅಲ್ಲವೆ ನೀನು ಹೊರಟಿರುವದು ? ಹೀಗಿರುವಲ್ಲಿ ನೀನು ನಿಜವಾಗಿ ಏತಕ್ಕೆ ಭ್ರಾಂತಿಗೊಳಿ ಸೀಯೆ ? ಆದ್ದರಿಂದ ಬುದ್ಧಿಯನ್ನು ಭ್ರಮೆಗೊಳಿಸುವ 'ಹಾಗೆ' ತೋರು ತ್ತಿರುವೆ ಎಂಬುದು ನನ್ನ ಅಭಿಪ್ರಾಯ. ಜ್ಞಾನಕರ್ಮಗಳನ್ನು ಬೇರೆ ಬೇರೆಯವರು ಮಾಡಬೇಕೆಂದೂ ಒಬ್ಬನೇ ಮಾಡಲಾಗುವದಿಲ್ಲವೆಂದೂ ನಿನ್ನ ಅಭಿಪ್ರಾಯ ವಾದರೆ ಆಗ ಅವುಗಳೆರಡರಲ್ಲಿ ಜ್ಞಾನವನ್ನೋ ಕರ್ಮವನ್ನೋ ಯಾವದಾದ

ರೊಂಡನ್ನು, ಇದೇ ಅರ್ಜುನನ ಬುದ್ಧಿಗೂ ಶಕ್ತಿಗೂ ಸ್ಥಿತಿಗೂ ತಕ್ಕದ್ದೆಂದು, ನಿರ್ಣಯಿಸಿ ಹೇಳು. ಜ್ಞಾನವೋ ಕರ್ಮವೋ ಯಾವದೊಂದರಿಂದ ನನಗೆ ಶ್ರೇಯಸ್ಸು ಸಿಕ್ಕೀತೋ ಅದನ್ನೆ ಹೇಳಿಬಿಡು.

ಕರ್ಮನಿಷ್ಠೆಗೆ ಅಂಗವಾಗಿರುವ ಜ್ಞಾನವನ್ನು ಭಗವಂತನು ಹೇಳಿದ್ದಾನೆಂದು ಇಟ್ಟುಕೊಂಡರೂ* "ಇವೆರಡರಲ್ಲಿ ಒಂದನ್ನೇ ಹೇಳಿಬಿಡು" ಎಂದು ಅರ್ಜುನನು ಇಲ್ಲಿ ಕೇಳಿರುವದು ಹೇಗೆ ಸರಿಯಾದೀತು? ಏಕೆಂದರೆ 'ಜ್ಞಾನಕರ್ಮಗಳಲ್ಲಿ ಒಂದನ್ನೇ ನಿನಗೆ ಹೇಳುತ್ತೇನೆಯೇ ಹೊರತು ಎರಡನ್ನೂ ಹೇಳುವದಿಲ್ಲ'– ಎಂದೇನೂ ಭಗವಂತನು ಹೇಳಿರುವದಿಲ್ಲ; ಹಾಗೆ ಹೇಳಿದ್ದರಲ್ಲವೆ † ತನಗೆ ಎರಡೂ ಸಿಕ್ಕುವ ಹಾಗಿಲ್ಲವೆಂದು ತಿಳಿದು ಒಂದನ್ನೇ ಕೇಳಿಕೊಳ್ಳುವದು ಸಾಧ್ಯ?

## ಭಗವಂತನ ಉತ್ತರ: ಜ್ಞಾನಕರ್ಮಗಳು ಬೇರೆ ಬೇರೆ ಜನರಿಗೆ

**ಶ್ರೀಭಗವಾನುವಾಚ :—**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಙ್ಖ್ಯಾನಾಂ ಕರ್ಮಯೋಗೇಣ ಯೋಗಿನಾಮ್ ॥**

೩. ಎಲೈ ಶ್ರೇಷ್ಠನಾದ ಅರ್ಜುನನೆ, ಈ ಲೋಕದಲ್ಲಿ ಎರಡು ಬಗೆಯ ನಿಷ್ಠೆಯನ್ನು ನಾನು ಪೂರ್ವದಲ್ಲಿ ಹೇಳಿರುವೆನು: ಸಾಂಖ್ಯರಿಗೆ ಜ್ಞಾನಯೋಗದಿಂದಿರುವ ನಿಷ್ಠೆ, ಯೋಗಿಗಳಿಗೆ ಕರ್ಮಯೋಗದಿಂದಿರುವ ನಿಷ್ಠೆ.

[ ಭಾಷ್ಯ ]

ಪ್ರಶ್ನೆಗೆ ಅನುಗುಣವಾಗಿಯೇ ಭಗವಂತನು ಉತ್ತರವನ್ನು ಹೇಳಿರುತ್ತಾನೆ. ಹೇಗೆಂದರೆ—ಎಲೈ ಪಾಪರಹಿತನಾದ ಅರ್ಜುನನೆ, ಶಾಸ್ತ್ರದಲ್ಲಿ ಹೇಳಿರುವ ಕರ್ಮ-

* ಇದುವರೆಗೆ ಕರ್ಮವನ್ನೂ ಜ್ಞಾನವನ್ನೂ ಸಮವಾದ ಬೆಲೆಯುಳ್ಳ ಸಾಧನಗಳೆಂದು ಇಟ್ಟುಕೊಂಡು ಇವೆರಡನ್ನೂ ಸೇರಿಸಿ ಅನುಷ್ಠಾನಮಾಡಿದರೆ ಮೋಕ್ಷವಾಗುವದೆಂಬ ವಾದವನ್ನು ಖಂಡಿಸಿತ್ತು. ಈಗ ಕರ್ಮವೇ ಮುಖ್ಯವು, ಜ್ಞಾನವು ಅದಕ್ಕೆ ಬೇಕಾದ ಸಹಾಯವು– ಎಂಬ ಮೀಮಾಂಸಕರ ಪಕ್ಷದಲ್ಲಿ ದೂಷಣವನ್ನು ಹೇಳಿದೆ. ಜ್ಞಾನವೇ ಹೆಚ್ಚೆಂದರೂ ಸಮುಚ್ಚಯವಾದದಲ್ಲಿ ಇದೇ ದೂಷಣವು ಬರುತ್ತದೆಯೆಂದು ತಿಳಿಯಬೇಕು.

† ಅರ್ಜುನನು ಕೇಳಿರುವ ಪ್ರಶ್ನೆಯಿಂದ ಅವನಿಗೆ ಇವೆರಡರಲ್ಲಿ ಒಂದೇ ಸಾಧನವನ್ನು ಭಗವಂತನು ಹೇಳಿದ್ದಾನೆಂದು ನಿರ್ಣಯವಾಗುವದೆಂದು ಭಾವ.

ಗಳನ್ನು ಮಾಡುವದಕ್ಕೆ ತಕ್ಕವರಾದ ಈ ಲೋಕದಲ್ಲಿರುವ ಮೂರು ವರ್ಣದ * ದ್ವಿಜರಿಗೂ ಎರಡು ಬಗೆಯ ನಿಷ್ಠೆಯನ್ನು ನಾನು ಪೂರ್ವದಲ್ಲಿ– ಎಂದರೆ ಸೃಷ್ಟಿ ಕಾಲದಲ್ಲಿ ಪ್ರಜೆಗಳನ್ನು ಸೃಷ್ಟಿಮಾಡಿ ಅವರಿಗೆ ಅಭ್ಯುದಯವನ್ನೂ ನಿಃಶ್ರೇಯಸವನ್ನೂ ದೊರಕಿಸುವ ವೇದಾರ್ಥಸಂಪ್ರದಾಯವನ್ನು ಪ್ರಕಾಶಗೊಳಿಸಿದಾಗ– ಹೇಳಿರುವೆನು. ನಿಷ್ಠೆಯೆಂದರೆ ಅದರಲ್ಲಿಯೇ ಇರುವದು, ಇದನ್ನೆ ಮಾಡಬೇಕೆಂದು ತಿಳಿದಿರುವದು.

ಈ ಎರಡು ಬಗೆಯ ನಿಷ್ಠೆ ಯಾವದು ? ಎಂದರೆ ಹೇಳುತ್ತಾನೆ. ಸಾಂಖ್ಯರಿಗೆ ಎಂದರೆ ಆತ್ಮಾನಾತ್ಮಗಳ ವಿಷಯವನ್ನು ವಿಂಗಡಿಸಿ ತಿಳಿಯಬಲ್ಲವರಾಗಿ ಬ್ರಹ್ಮಚರ್ಯಾಶ್ರಮದಿಂದಲೇ † ಸಂನ್ಯಾಸವನ್ನು ಮಾಡಿ, ವೇದಾಂತವಿಜ್ಞಾನದಿಂದ ‡ ಪರಮಾರ್ಥವನ್ನು ಚೆನ್ನಾಗಿ ನಿಶ್ಚಯಿಸಿಕೊಂಡು ಪರಮಹಂಸಪರಿವ್ರಾಜಕರಾಗಿ ಬ್ರಹ್ಮದಲ್ಲಿಯೇ ನಿಂತಿರುವಂಥವರಿಗೆ ಜ್ಞಾನಯೋಗದಲ್ಲಿ– ಎಂದರೆ ಜ್ಞಾನವೆಂಬ § ಯೋಗದಲ್ಲಿ– ನಿಷ್ಠೆಯನ್ನು ಹೇಳಿದ್ದೇನೆ. ಯೋಗಿಗಳಿಗೆ ಎಂದರೆ ಕರ್ಮಿಗಳಿಗೆ ಕರ್ಮಯೋಗದಲ್ಲಿ– ಎಂದರೆ ಕರ್ಮವೆಂಬ § ಯೋಗದಲ್ಲಿ. ನಿಷ್ಠೆಯನ್ನು ಹೇಳಿದ್ದೇನೆ.

ಒಬ್ಬ ಪುರುಷನೆ ಒಂದು ಪುರುಷಾರ್ಥವನ್ನು** ಪಡೆಯುವದಕ್ಕಾಗಿಯೇ ಜ್ಞಾನವನ್ನೂ ಕರ್ಮವನ್ನೂ ಒಟ್ಟಿಗೆ ಮಾಡಬೇಕೆಂಬುದೇ ಭಗವಂತನ ಇಷ್ಟವೆಂದು ಈ ಗ್ರಂಥದಲ್ಲಿ ಹಿಂದೆ ಹೇಳಿದ್ದರೆ ಅಥವಾ ಮುಂದೆ ಹೇಳುವ ಹಾಗಿ

---

* ಶಾಸ್ತ್ರದಲ್ಲಿ ಹೇಳಿರುವ ವೈದಿಕಕರ್ಮವು ದ್ವಿಜರಿಗೆ ಮಾತ್ರ; ಶೂದ್ರನಿಗೆ ವಿಚಾರಮಾಡಿ ಜ್ಞಾನವನ್ನು ಪಡೆಯಲು ಅಧಿಕಾರವುಂಟು.

† ಗೃಹಸ್ಥನಿಗೆ ವಿಧಿಸಿರುವ ಕರ್ಮದ ಸಂಬಂಧವೇ ಅವರಿಗೆ ಇಲ್ಲವೆಂಬುದನ್ನು ಈ ವಿಶೇಷಣವು ತಿಳಿಸುವದು.

‡ ಮುಂಡಕ ೩-೨-೬ರ ಸೂಚನೆ. ಸಂನ್ಯಾಸದಿಂದಲೇ ಚಿತ್ತಶುದ್ಧಿಯನ್ನು ಪಡೆದು ಜ್ಞಾನವೊಂದರಿಂದಲೇ ಸಂಪೂರ್ಣಮುಕ್ತಿಯನ್ನು ಪಡೆಯಬಹುದೆಂಬುದನ್ನು ಆ ಶ್ರುತಿಯಲ್ಲಿ ಹೇಳಿರುತ್ತದೆ.

§ ಜ್ಞಾನವು ನೇರಾಗಿಯೇ ಸಾಧನವು, ಕರ್ಮವು ಪರಂಪರೆಯಿಂದ ಸಾಧನವು; ಆದ್ದರಿಂದ ಇವುಗಳಿಗೆ ಯೋಗವೆಂಬ ಹೆಸರನ್ನು ಕೊಟ್ಟಿರುತ್ತದೆ. ಜ್ಞಾನವನ್ನು ಯೋಗವೆಂದು ಕರೆದಿರುವದರಿಂದ ಜ್ಞಾನವಾದ ಮೇಲೂ ಏನನ್ನಾದರೂ ಮಾಡತಕ್ಕದ್ದಿದೆ ಎಂದು ತಿಳಿಯಬಾರದು.

** ಮುಕ್ತಿಯನ್ನು. ಜ್ಞಾನಕರ್ಮಗಳೆರಡನ್ನೂ ಮಾಡಿದರೇ ಮುಕ್ತಿ ಎಂಬುದು ವೃತ್ತಿಕಾರರ ಮತ. ಕರ್ಮಕ್ಕೆ ಸ್ವರ್ಗ, ಚಿತ್ತಶುದ್ಧಿ– ಮುಂತಾದ ಫಲವೆಂದೂ ಜ್ಞಾನಕ್ಕೆ ಮುಕ್ತಿ ಎಂಬ ಫಲವೆಂದೂ ಸಿದ್ಧಾಂತಿಗಳು ಹೇಳುವರು.

ದ್ದರೆ, ವೇದಗಳಲ್ಲಿಯೂ ಹೀಗೆಯೇ ಹೇಳಿರುವದಾದರೆ, ತನ್ನಲ್ಲಿ ಉಪದೇಶಕ್ಕೆಂದು ಬಂದಿರುವ ಪ್ರಿಯನಾದ ಅರ್ಜುನನಿಗೆ ಈ ಜ್ಞಾನಕರ್ಮನಿಷ್ಠೆಗಳನ್ನು ಬೇರೆಬೇರೆಯಾಗಿ ಆಯಾ ಅಧಿಕಾರಿಗಳು ಮಾಡತಕ್ಕದ್ದೆಂದು ಭಗವಂತನು ಹೇಗೆ ಹೇಳಿಯಾನು ? ಹಾಗಲ್ಲದೆ, ಜ್ಞಾನವೂ ಕರ್ಮವೂ ಸೇರಿ ಒಂದೇ ಸಾಧನವೆಂಬುದನ್ನು ಕೇಳಿ ಅರ್ಜುನನೇನೋ ತಾನೇ ಅನುಷ್ಠಾನಮಾಡುತ್ತಾನಾದ್ದರಿಂದ ಮಿಕ್ಕವರು ಮಾತ್ರ ಇವುಗಳನ್ನು ಬೇರೆಬೇರೆಯಾಗಿಯೆ ಮಾಡತಕ್ಕದ್ದೆಂದು ಹೇಳೋಣವೆಂಬುದೇ ಭಗವಂತನ ಮತವೆಂದು ಕಲ್ಪಿಸಿದರೆ, ಆಗ ಭಗವಂತನಲ್ಲಿ ರಾಗದ್ವೇಷಗಳಿರುವದರಿಂದ ಅವನ ಮಾತು ಪ್ರಮಾಣವಲ್ಲವೆಂದು ಕಲ್ಪಿಸಿದಂತೆ ಆಗುತ್ತದೆ. ಅದು ಯುಕ್ತವಲ್ಲ.

ಹೀಗೆ ಯಾವ ಯುಕ್ತಿಯಿಂದ ನೋಡಿದರೂ ಜ್ಞಾನಕರ್ಮಗಳೆರಡೂ ಸೇರಿ ಒಂದು ಸಾಧನವಾಗುವದೆಂಬುದು ಸಿದ್ಧವಾಗುವದಿಲ್ಲ. ಅರ್ಜುನನು ಕರ್ಮಕ್ಕಿಂತ ಜ್ಞಾನವು ಹೆಚ್ಚಿನದೆಂದು ತಿಳಿದುಕೊಂಡು ಕೇಳಿರುವದನ್ನು ಭಗವಂತನು ತಿರಸ್ಕರಿಸಿರುವದಿಲ್ಲವಾಗಿ, ಆ ಅಭಿಪ್ರಾಯವು ಸರಿಯೆಂದೇ ಆಯಿತು. ಬೇರೆಬೇರೆ ಜನರು ಜ್ಞಾನಕರ್ಮಗಳನ್ನು ಅನುಷ್ಠಾನಮಾಡಬೇಕೆಂದು ಹೇಳಿರುವದರಿಂದ ಜ್ಞಾನನಿಷ್ಠೆಯನ್ನು ಸಂನ್ಯಾಸಿಗಳೇ * ಆಚರಿಸತಕ್ಕದ್ದೆಂದೂ ನಿಶ್ಚಯವಾಯಿತು. ಭಗವಂತನಿಗೆ ಇದೇ ಸಮ್ಮತವಾದದ್ದು ಎಂದೂ ನಿರ್ಣಯವಾಯಿತು.

## ಕರ್ಮಯೋಗದಿಂದಲೇ ಆತ್ಮಜ್ಞಾನಲಾಭ

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ　　॥ ೪ ॥**

೪. ಕರ್ಮಗಳನ್ನು ಪ್ರಾರಂಭಿಸದೆ ಇರುವದರಿಂದ ಮನುಷ್ಯನಿಗೆ ನೈಷ್ಕರ್ಮ್ಯವು ದೊರಕುವದಿಲ್ಲ ; ಬರಿಯ ಸಂನ್ಯಾಸದಿಂದ ಸಿದ್ಧಿಯನ್ನು ಹೊಂದುವದೂ ಇಲ್ಲ.

[ ಭಾಷ್ಯ ]

ನನ್ನನ್ನು ಮಟ್ಟಿಗೆ ಕರ್ಮದಲ್ಲಿಯೇ ನಿಯಮಿಸುತ್ತಿದ್ದೀಯಲ್ಲ ? ಎಂದು ಮನಸ್ಸಿನಲ್ಲಿ ಕಳವಳಗೊಂಡು ಕರ್ಮವನ್ನು ಮಾಡಲೊಲ್ಲೆನೆಂದು ತಿಳಿದು ಅರ್ಜುನ

* ಇದು ಪರಮಾರ್ಥಸಂನ್ಯಾಸದ ವಿಷಯವೆಂಬುದೂ ಲೋಕಸಂಗ್ರಹಾರ್ಥವಾಗಿ ಮಾಡುವ ಕರ್ಮವು ಜ್ಞಾನಿಗೂ ಇರಬಹುದೆಂಬುದೂ ಮುಂದೆ (೪-೧೯ ರ ಭಾಷ್ಯದಲ್ಲಿ) ಗೊತ್ತಾಗುವದು.

ನನು ಸುಮ್ಮನಿರುವದನ್ನು ಕಂಡು ಭಗವಂತನು ಈ ಮಾತನ್ನು ಆಡಿರುತ್ತಾನೆ. ಅಥವಾ (ಈ ಶ್ಲೋಕಕ್ಕೆ ಮತ್ತೊಂದು ಬಗೆಯಲ್ಲಿಯೂ ಸಂಬಂಧವನ್ನು ಹೇಳ ಬಹುದು. ಹೇಗೆಂದರೆ-) ಜ್ಞಾನಕರ್ಮನಿಷ್ಠೆಗಳೆರಡೂ ಒಂದಕ್ಕೊಂದು ವಿರುದ್ಧ ವಾಗಿರುವದರಿಂದ ಒಬ್ಬನೇ ಒಂದೇ ಕಾಲದಲ್ಲಿ ಅವೆರಡನ್ನೂ ಮಾಡುವದಕ್ಕೆ ಆಗುವ ಹಾಗಿಲ್ಲದ್ದರಿಂದ ಒಂದಕ್ಕೆ ಇನ್ನೊಂದರ ಗೊಡವೆಯಿಲ್ಲದೆಯೇ (ಎರಡೂ ಬೇರೆಬೇರೆಯಾಗಿಯೇ ಮೋಕ್ಷವೆಂಬ) ಪುರುಷಾರ್ಥವನ್ನು ಕೊಡಬಹುದೆಂದು ಆಯಿತು. ಆದ್ದರಿಂದ **ಕರ್ಮನಿಷ್ಠೆಯು ಜ್ಞಾನನಿಷ್ಠೆಯನ್ನು ದೊರಕಿಸು ವದಕ್ಕೆ ಕಾರಣವಾಗಿರುವದರಿಂದ ಪುರುಷಾರ್ಥಕ್ಕೆ ಕಾರಣವೆನಿಸಿರುವದೇ ಹೊರತು ಅದು ಸ್ವತಂತ್ರವಾಗಿ ಕಾರಣವಲ್ಲವೆಂದೂ ಜ್ಞಾನನಿಷ್ಠೆಯು ಮಾತ್ರ ಕರ್ಮನಿಷ್ಠೆಯೆಂಬ ಉಪಾಯದಿಂದ ಹುಟ್ಟಿ ಆಮೇಲೆ ಮತ್ತೇ ನನ್ನೂ ಬಯಸದೆ ಸ್ವತಂತ್ರವಾಗಿಯೇ ಪುರುಷಾರ್ಥಕ್ಕೆ ಕಾರಣ**ವಾಗಿರುವ ದೆಂದೂ ತಿಳಿಸುವದಕ್ಕಾಗಿ ಭಗವಂತನು ಈ ಮಾತನ್ನು ಹೇಳಿರುತ್ತಾನೆ.

'ಕರ್ಮಗಳನ್ನು ಪ್ರಾರಂಭಿಸದೆ ಇರುವದರಿಂದ' ಎಂಬಲ್ಲಿ ಕರ್ಮಗಳೆಂದರೆ ಈ ಜನ್ಮದಲ್ಲಾಗಲಿ ಬೇರೊಂದು * ಜನ್ಮದಲ್ಲಿಯಾಗಲಿ ಮಾಡಿದವುಗಳಾಗಿ ಮೊದಲು ಪಡೆದಿದ್ದ ಪಾಪಗಳನ್ನು ಸವೆಸುವದಕ್ಕೆ ಕಾರಣವಾಗಿ ಅಂತಃಕರಣವು ಶುದ್ಧಿಯಾಗುವದಕ್ಕೆ ಕಾರಣವಾಗಿಯೂ ಹಾಗೆ ಶುದ್ಧಿಗೆ ಕಾರಣವಾಗಿರುವದ ರಿಂದ ಜ್ಞಾನವು ಉತ್ಪತ್ತಿಯಾಗುವದರಿಂದ ಆ ಕ್ರಮದಿಂದ ಜ್ಞಾನನಿಷ್ಠೆಗೂ ಕಾರಣವಾಗಿಯೂ ಇರುವ ಯಜ್ಞವೇ ಮುಂತಾದ ಕ್ರಿಯೆಗಳು. "ಜ್ಞಾನ ಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ । ಯಥಾದರ್ಶತಲ ಪ್ರಖ್ಯೇ ಪಶ್ಯತ್ಯಾತ್ಮಾನಮಾತ್ಮನಿ ॥ (ಮೋ)" (ಪಾಪಕರ್ಮವು ಸವೆದರೆ ಜ್ಞಾನವುಂಟಾಗುವದು ; ಆಗ ಉಜ್ಜಿ ಬೆಳಗಿದ ಕನ್ನಡಿಯಲ್ಲಿ ಹೇಗೋ ಹಾಗೆ ತನ್ನಲ್ಲಿಯೇ ತನ್ನನ್ನು ಕಂಡುಕೊಳ್ಳುವನು) ಎಂಬುದೇ ಮುಂತಾದ ಸ್ಮೃತಿ ಗಳು (ಕರ್ಮದಿಂದ ಜ್ಞಾನೋತ್ಪತ್ತಿಯಾಗುವದೆಂಬುದಕ್ಕೆ) ಪ್ರಮಾಣವಾಗಿರು ತ್ತವೆ. ಇಂಥ ಕರ್ಮಗಳನ್ನು ಪ್ರಾರಂಭಿಸದೆ ಇರುವದರಿಂದ ಎಂದರೆ ಕೈಬಿಟ್ಟ ದ್ದರಿಂದಲೇ ಮನುಷ್ಯನಿಗೆ ನೈಷ್ಕರ್ಮ್ಯವು ದೊರೆಯುವದಿಲ್ಲ ; ಎಂದರೆ ಕರ್ಮವೆ ಇಲ್ಲದ ಜ್ಞಾನಯೋಗನಿಷ್ಠೆಯೆಂಬ ನಿಷ್ಕರ್ಮದ ಸ್ವರೂಪವು, ಯಾವ ಕ್ರಿಯೆಯೂ ಇಲ್ಲದ ಆತ್ಮಸ್ವರೂಪದಲ್ಲಿ ನಿಂತುಬಿಡುವದು, ದಕ್ಕುವದಿಲ್ಲ ಎಂದಭಿ

---

* **ಬೇರೆ ಜನ್ಮದಲ್ಲಿ ಮಾಡಿದ್ದರಿಂದ ಚಿತ್ತಶುದ್ಧಿಯಾಗಿದ್ದರೂ ಜ್ಞಾನವು ಉಂಟಾಗಬಹುದು, ಈ ಜನ್ಮದಲ್ಲಿಯೇ ಕರ್ಮಗಳನ್ನು ಮಾಡಬೇಕೆಂಬ ನಿಯಮವೇನೂ ಇಲ್ಲವೆಂದು ಭಾವ.**

ಪ್ರಾಯ. ಕರ್ಮಗಳಿಗೆ ಕೈಹಾಕದಿದ್ದರೆ ನೈಷ್ಕರ್ಮ್ಯವು ದೊರಕುವದಿಲ್ಲವೆಂದು ಹೇಳಿದ್ದರಿಂದ ಅದಕ್ಕೆ ವಿರುದ್ಧವಾಗಿ ನಡೆಯುವದರಿಂದ ಎಂದರೆ ಕರ್ಮಗಳನ್ನು ಮಾಡುವದರಿಂದ ನೈಷ್ಕರ್ಮ್ಯವು ದೊರಕುವದೆಂದು ನಿಶ್ಚಯಿಸಬಹುದಾಗಿದೆ.

(ಪ್ರಶ್ನೆ) ಕರ್ಮಗಳಿಗೆ ಕೈಹಾಕದೆ ಇದ್ದರೆ ನೈಷ್ಕರ್ಮ್ಯವು ದೊರಕುವದಿಲ್ಲವೆಂಬುದಕ್ಕೆ ಕಾರಣವೇನು ?

(ಉತ್ತರ) ಏಕೆಂದರೆ, **ಕರ್ಮಕ್ಕೆ ಕೈಹಾಕುವದೇ ನೈಷ್ಕರ್ಮ್ಯಕ್ಕೆ ಉಪಾಯವಾಗಿರುತ್ತದೆ.** ಸಾಧನವಿಲ್ಲದೆ ಸಾಧ್ಯವು ದೊರಕಲಾರದಷ್ಟೆ. ನೈಷ್ಕರ್ಮ್ಯರೂಪವಾದ ಜ್ಞಾನಯೋಗಕ್ಕೆ ಕರ್ಮಯೋಗವೇ ಸಾಧನವು ; ಏಕೆಂದರೆ ಶ್ರುತಿಯಲ್ಲಿಯೂ ಈ ಗೀತೆಯಲ್ಲಿಯೂ ಹಾಗೆಂದು ಹೇಳಿರುತ್ತದೆ. ಶ್ರುತಿಯಲ್ಲಿ ಆತ್ಮವೆಂಬ ಲೋಕವನ್ನೆ ಅರಿಯಬೇಕೆಂದು ಹೇಳುವ ಪ್ರಕರಣದಲ್ಲಿ* "ಈ ಆತ್ಮನನ್ನು ವೇದಾಧ್ಯಯನದಿಂದಲೂ ಯಜ್ಞದಿಂದಲೂ ತಿಳಿಯಲಿಚ್ಛಿಸುತ್ತಾರೆ" (ಬೃ) ಮುಂತಾದ ವಾಕ್ಯದಲ್ಲಿ ಕರ್ಮಯೋಗವು ಜ್ಞಾನಯೋಗಕ್ಕೆ ಉಪಾಯವೆಂದು ಹೇಳಿರುತ್ತದೆ. ಈ ಗೀತೆಯಲ್ಲಿಯೂ ಎಲೈ ಮಹಾಬಾಹುವೆ, ಸಂನ್ಯಾಸವು ಮಾತ್ರ ಯೋಗವಿಲ್ಲದೆ ದಕ್ಕುವದು ಕಷ್ಟ" (೫-೬) "ಯೋಗಿಗಳು ಚಿತ್ತಶುದ್ಧಿಯಾಗಲೆಂದು ಆಸಕ್ತಿಯಿಲ್ಲದೆ ಕರ್ಮವನ್ನು ಮಾಡುತ್ತಾರೆ" (೫-೧೧) "ತಿಳಿದವರಿಗೆ ಯಜ್ಞವೂ ದಾನವೂ ತಪಸ್ಸೂ ಪವಿತ್ರವಾಗಿರುವವು" (೧೮-೫) ಎಂದು ಮುಂತಾಗಿ ಮುಂದೆ ಹೇಳಿರುತ್ತದೆ.

"ಸರ್ವಭೂತಗಳಿಗೂ ಅಭಯವನ್ನು ಕೊಟ್ಟು ನೈಷ್ಕರ್ಮ್ಯವನ್ನು ಆಚರಿಸಬೇಕು" (ಅಶ್ವ) † ಎಂಬುದೇ ಮುಂತಾದ ವಚನಗಳಲ್ಲಿ ಮಾಡಬೇಕಾದ ಕರ್ಮಗಳನ್ನು ಸಂನ್ಯಾಸಮಾಡುವದರಿಂದ ನೈಷ್ಕರ್ಮ್ಯವು ದೊರಕುವದೆಂದು ಹೇಳಿದೆಯಲ್ಲ ? ಲೋಕದಲ್ಲಿ ಯಾವ ಕೆಲಸವನ್ನೂ ಮಾಡದೆ ಇದ್ದರೆ ನೈಷ್ಕರ್ಮ್ಯವೇ ಆಗುವದೆಂದು ಪ್ರಸಿದ್ಧವೂ ಆಗಿದೆಯಲ್ಲ ? ಆದ್ದರಿಂದ ನೈಷ್ಕರ್ಮ್ಯವನ್ನು ಬಯಸುವವನಿಗೆ ಕರ್ಮಗಳಲ್ಲಿ ತೊಡಗುವದರಿಂದ ಆಗಬೇಕಾದದ್ದೇನು ?" ಎಂದು ಆಕ್ಷೇಪವು ಬರಬಹುದು. ಅದಕ್ಕೆ ಹೇಳುತ್ತಾನೆ– ಬರಿಯ ಸಂನ್ಯಾಸದಿಂದ ಎಂದರೆ ಸುಮ್ಮನೆ ಜ್ಞಾನವಿಲ್ಲದೆ ಕರ್ಮಗಳನ್ನು ಕೈಬಿಟ್ಟ ಮಾತ್ರದಿಂದ ನೈಷ್ಕರ್ಮ್ಯಸಿದ್ಧಿಯನ್ನು ಹೊಂದುವದಿಲ್ಲ, ಜ್ಞಾನಯೋಗದಲ್ಲಿ ನಿಷ್ಠೆಯನ್ನು ಪಡೆಯಲಾರನು.

---

* ಇದರ ಮುಂದೆ ಇರುವ 'ವೇದನೋಪಾಯತ್ವೇನ' (ಜ್ಞಾನಕ್ಕೆ ಉಪಾಯವಾಗಿ) ಎಂಬ ಮಾತು ಅವಶ್ಯಕವಿಲ್ಲವೆಂದು ತೋರಿದ್ದರಿಂದ ಬಿಟ್ಟುಬಿಟ್ಟಿದೆ.

† ಇದು ಅಶ್ವಮೇಧಪರ್ವದ ೪೬–೧೮ ನೆಯ ಶ್ಲೋಕವು.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

೫. ಯಾವ ಕೆಲಸವನ್ನೂ ಮಾಡದೆ ಒಂದು ಕ್ಷಣವಾದರೂ ಇರುವದಕ್ಕೆ ಯಾವನಿಂದಲೂ ಆಗುವದಿಲ್ಲ ; ಏಕೆಂದರೆ ಪ್ರತಿಯೊಬ್ಬನೂ ಪ್ರಕೃತಿಯಿಂದಾದ ಗುಣಗಳಿಗೆ ವಶನಾಗಿ ಕೆಲಸವನ್ನು ಮಾಡುತ್ತಲೇ ಇರುವನು.

[ಭಾಷ್ಯ]

ಜ್ಞಾನವಿಲ್ಲದೆ ಸುಮ್ಮನೆ ಕರ್ಮಗಳನ್ನು ಕೈಬಿಡುವದರಿಂದಲೇ ನೈಷ್ಕರ್ಮ್ಯವೆಂಬ ಸಿದ್ಧಿಯನ್ನು ಜನರು ಹೊಂದುವದಿಲ್ಲವೆಂಬುದಕ್ಕೆ ಕಾರಣವೇನು ? ಎಂದರೆ ಇದಕ್ಕೆ ಕಾರಣವನ್ನು ಇಲ್ಲಿ ಹೇಳಿರುತ್ತಾನೆ. ಒಂದು ಕ್ಷಣ ಕಾಲವಾದರೂ ಕರ್ಮವನ್ನು ಮಾಡದೆ ಒಬ್ಬನೂ ಎಂದಿಗೂ ಇರುವದಿಲ್ಲ. ಏಕೆಂದರೆ ಪ್ರತಿಯೊಬ್ಬ ಜೀವನೂ ಪ್ರಕೃತಿಯಿಂದಾಗಿರುವ ಸತ್ತ್ವರಜಸ್ತಮೋಗುಣಗಳ ವಶಕ್ಕೆ ಸಿಕ್ಕಿ ಕರ್ಮವನ್ನು ಮಾಡುತ್ತಲೇ ಇರುವನು.

ಇಲ್ಲಿ 'ಪ್ರತಿಯೊಬ್ಬ' ಎಂಬುದಕ್ಕೆ 'ಅಜ್ಞನಾದ' ಎಂಬ ಮಾತನ್ನು ಸೇರಿಸಿಕೊಳ್ಳಬೇಕು ; ಏಕೆಂದರೆ "ಯಾವಾತನು ಗುಣಗಳಿಂದ ಅಲುಗಾಡುವದಿಲ್ಲವೋ (ಅವನೇ ತ್ರಿಗುಣಾತೀತನಾದ ಜ್ಞಾನಿಯು)" (೧೪–೨೩) ಎಂದು ಮುಂದೆ ಹೇಳಿರುತ್ತದೆ. ಅಲ್ಲಿ ಸಾಂಖ್ಯರು (ಗುಣಗಳಿಗೆ ವಶವಾಗುವದಿಲ್ಲವೆಂದು) ಬೇರ್ಪಡಿಸಿ ಹೇಳಿರುವದರಿಂದ ಅಜ್ಞರಿಗೇ ಕರ್ಮಯೋಗವೇ ಹೊರತು ಜ್ಞಾನಿಗಳಿಗಲ್ಲವೆಂದು ನಿಶ್ಚಯವಾಗುತ್ತದೆ. ಗುಣಗಳಿಂದ ಚಲಿಸದೆ ಇರುವ ಜ್ಞಾನಿಗಳಿಗೆ ಸ್ವರೂಪದಲ್ಲಿ * ಚಲನೆಯಿಲ್ಲದ್ದರಿಂದ ಕರ್ಮಯೋಗವು ಯುಕ್ತವಾಗುವದಿಲ್ಲ. ಹೀಗೆಂದು ಹಿಂದೆ "ವೇದಾವಿನಾಶಿನಂ" (೨–೨೧) ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ತಿಳಿಸಿಯೂ ಇರುತ್ತೇವೆ.

## ಆತ್ಮಜ್ಞಾನಿಯಲ್ಲದವನು ಕರ್ಮವನ್ನು ಬಿಡುವದಕ್ಕಾಗಲಾರದು

ಆತ್ಮವನ್ನು ಅರಿಯದವನೋ ಎಂದರೆ ಶಾಸ್ತ್ರದಲ್ಲಿ ಹೇಳಿರುವ † ಕರ್ಮ

---

* ಆತ್ಮಸ್ವರೂಪದಲ್ಲಿ ಯಾರಿಗೂ ಕರ್ತೃತ್ವವಿಲ್ಲ; ಉಪಾಧಿಯಿಂದ ಅದಕ್ಕೆ ಕರ್ತೃತ್ವವಿದೆಯೆಂಬುದು ಅಜ್ಞರಿಗೆ ಮಾತ್ರ ಹತ್ತುತ್ತದೆ.

† ಶಾಸ್ತ್ರದಲ್ಲಿ ಹೇಳಿದ ಕರ್ಮಗಳನ್ನು ಮಾಡದೆ ಇರುವದೂ ಒಂದು ಕರ್ಮವೆ. ವಿಹಿತ ನಿಷಿದ್ಧಕರ್ಮಗಳನ್ನು ಅಧಿಕಾರಿಯಾದವನು ಮಾಡದೆ ಬಿಟ್ಟರೂ ಬಿಡಬಹುದು, ಕರ್ತೃತ್ವವನ್ನು ಮಾತ್ರ ಬಿಡುವದಕ್ಕಾಗುವದಿಲ್ಲವೆಂದು ಭಾವ.

ಗಳನ್ನು ಮಾಡದೆ ಇರುವದು ಆಗುವದೇ ಇಲ್ಲ-- ಎಂದು ಮುಂದಿನ ಶ್ಲೋಕ ಗಳಲ್ಲಿ ತಿಳಿಸುತ್ತಾನೆ: —

**ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ   ॥ ೬ ॥**

೬. ಕರ್ಮೇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಮನಸ್ಸಿನಲ್ಲಿ ಇಂದ್ರಿಯಾರ್ಥಗಳನ್ನು ಯಾವನು ನೆನೆಸಿಕೊಳ್ಳುತ್ತಿರುವನೋ ಅಂಥ ಮೂಢಾತ್ಮನು ಮಿಥ್ಯಾಚಾರವುಳ್ಳವನೆನಿಸುವನು.

[ ಭಾಷ್ಯ ]

ಕೈ ಮುಂತಾದ ಕರ್ಮೇಂದ್ರಿಯಗಳನ್ನು ಬಿಗಿಹಿಡಿದು ಅವುಗಳನ್ನು ಒಳಕ್ಕೆ ಸರಿಸಿಕೊಂಡು ಯಾವನು ಇಂದ್ರಿಯವಿಷಯಗಳನ್ನು ನೆನೆಸಿಕೊಳ್ಳುತ್ತಲಿರುವನೋ ಅಂಥ ಮೂಢಬುದ್ಧಿಯುಸ್ನು ಮಿಥ್ಯಾಚಾರನು, ಸುಳ್ಳುನಡತೆಯವನು, ಪಾಪಾಚರಣೆಯುಳ್ಳವನು– ಎನ್ನುತ್ತಾರೆ.

**ಯಸ್ತ್ವಿನ್ದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇನ್ದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ   ॥ ೭ ॥**

೭. ಆದರೆ ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ತಡೆದುಕೊಂಡು ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಅಸಕ್ತನಾಗಿ ಆರಂಭಿಸುವನೋ ಅವನು ಹೆಚ್ಚಿನವನಾಗಿರುವನು.

[ ಭಾಷ್ಯ ]

ಎಲೈ ಅರ್ಜುನನೆ, ಇವನಂತಲ್ಲದೆ ಯಾವ ಕರ್ಮಾಧಿಕಾರಿಯಾದ ಅಜ್ಞನು, ತನ್ನ ಜ್ಞಾನೇಂದ್ರಿಯಗಳನ್ನು ಮನಸ್ಸಿನಲ್ಲಿ ತಡೆದುಕೊಂಡು ಮಾತು, ಕೈ- ಮುಂತಾದ ಕರ್ಮೇಂದ್ರಿಯಗಳಿಂದ ಆರಂಭಿಸುವನೋ- ಏನನ್ನಾರಂಭಿಸುವನು ? ಎಂದರೆ– ಫಲದಲ್ಲಿ ಆಸಕ್ತಿಯಿಲ್ಲದೆ ಕರ್ಮಯೋಗವನ್ನು ಮಾಡುತ್ತಾ ಇರುವನೋ ಅವನು ಮಿಥ್ಯಾಚಾರವುಳ್ಳ ಮತ್ತೊಬ್ಬನಿಗಿಂತ ಹೆಚ್ಚಿನವನಾಗಿರುವನು.

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ   ॥ ೮ ॥**

೮. ನೀನು ನಿಯತವಾದ ಕರ್ಮವನ್ನು ಮಾಡುತ್ತಿರು; ಏಕೆಂದರೆ ಕರ್ಮವನ್ನು ಬಿಡುವದಕ್ಕಿಂತಲೂ ಮಾಡುವದೇ ಲೇಸು. ಕರ್ಮವಿಲ್ಲದಿದ್ದರೆ ನಿನಗೆ ಶರೀರವನ್ನಿಟ್ಟುಕೊಂಡಿರುವದು ಕೂಡ ಆಗಲಾರದು.

[ ಭಾಷ್ಯ ]

ಹೀಗಿರುವದರಿಂದ ನೀನು ನಿಯತವಾದ ಕರ್ಮವನ್ನು-ನಿಯತವಾದದ್ದೆಂದರೆ ಶಾಸ್ತ್ರದಲ್ಲಿ ಹೇಳಿರುವ ನಿತ್ಯಕರ್ಮವು; ಯಾವನು ಯಾವ ಕರ್ಮಕ್ಕೆ ಅಧಿಕಾರಿಯಾಗಿರುವನೋ, ಯಾವದಕ್ಕೆ ಇಂಥ ಫಲವೆಂದು ಶಾಸ್ತ್ರದಲ್ಲಿ ಗೊತ್ತಾಗಿ ಹೇಳಿಲ್ಲವೋ ಅದೇ ನಿಯತವಾದ ಕರ್ಮವು. ಅದನ್ನು - ಎಲೈ ಅರ್ಜುನನೆ, ನೀನು ಮಾಡುತ್ತಿರು. ಏಕೆಂದರೆ ಯಾವ ಕರ್ಮವನ್ನೂ ಮಾಡದೆ ಇರುವದಕ್ಕಿಂತ ಕರ್ಮವೇ ಹೆಚ್ಚಿನ ಫಲವನ್ನು ಕೊಡತಕ್ಕದ್ದು. ಅದು ಹೇಗೆಂದರೆ ಕರ್ಮವನ್ನು ಮಾಡದಿದ್ದರೆ ನಿನಗೆ ಶರೀರಯಾತ್ರೆಯೂ ಸಿದ್ಧಿಸಲಾರದು, ಎಂದರೆ ಶರೀರವನ್ನು ಇಟ್ಟುಕೊಂಡಿರುವದು ಕೂಡ ಆಗದೆ ಹೋದೀತು. ಆದ್ದರಿಂದ ಕರ್ಮವನ್ನು ಮಾಡುವದಕ್ಕೂ ಬಿಡುವದಕ್ಕೂ ಇರುವ ಹೆಚ್ಚುಕಡಿಮೆಯು ಲೋಕದಲ್ಲಿ ಕಂಡೇ ಇರುತ್ತದೆ.

## ಕರ್ಮವು ಯಾವಾಗಲೂ ಬಂಧಕವೆನ್ನುವದು ಸರಿಯಲ್ಲ

ಇನ್ನು ಕರ್ಮವು ಬಂಧವನ್ನುಂಟುಮಾಡುವದರಿಂದ ಅದನ್ನು ಮಾಡತಕ್ಕದ್ದಲ್ಲ- ಎಂದು ತಿಳಿದಿರುವೆಯಷ್ಟೆ, ಅದೂ ಸರಿಯಲ್ಲ. ಹೇಗೆಂದರೆ:—

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಙ್ಗಃ ಸಮಾಚರ ॥ ೯ ॥**

೯. ಯಜ್ಞಾರ್ಥವಾಗಿ ಮಾಡುವ ಕರ್ಮವನ್ನು ಬಿಟ್ಟರೆ ಮಿಕ್ಕ ಕಡೆಗಳಲ್ಲಿ ಕರ್ಮವ ಲೋಕಕ್ಕೆ ಬಂಧಕವಾಗಿರುವದು. ಆದ್ದರಿಂದ ಎಲೈ ಕುಂತೀಕುಮಾರನೆ, ಅದಕ್ಕಾಗಿ ಕರ್ಮವನ್ನು ಸಂಗರಹಿತನಾಗಿ ಮಾಡು.

[ ಭಾಷ್ಯ ]

ಯಜ್ಞವೆಂದರೆ ಇಲ್ಲಿ ವಿಷ್ಣುವೆಂದರ್ಥ; "ಯಜ್ಞವೆಂದರೆ ವಿಷ್ಣುವೆ"- (ತೈ॥ ಸಂ॥) ಎಂಬ ಶ್ರುತಿಯು ಈ ಅರ್ಥಕ್ಕೆ ಆಧಾರವಾಗಿದೆ. ಆ ಈಶ್ವರನಿಗಾಗಿ ಮಾಡುವ ಕರ್ಮವನ್ನು ಬಿಟ್ಟರೆ, ಜನರು ಎಂದರೆ ಕರ್ಮಾಧಿಕಾರಿಗಳು ಕರ್ಮದಿಂದ ಕಟ್ಟುವಡೆಯುತ್ತಾರೆ. ಆದರೆ ಯಜ್ಞಾರ್ಥವಾದ ಕರ್ಮದಿಂದ ಬಂಧವನ್ನು ಯಾರೂ ಪಡೆಯುವದಿಲ್ಲ. ಹೀಗಿರುವದರಿಂದ ಎಲೈ ಕುಂತೀಕುಮಾರನೆ, ಕರ್ಮಫಲದಲ್ಲಿ ಆಸಕ್ತಿಯಿಲ್ಲದೆ ಯಜ್ಞಾರ್ಥವಾಗಿ ಕರ್ಮವನ್ನು ಮಾಡುವವನಾಗು.

## ದೇವತೆಗಳಿಗೂ ಮನುಷ್ಯರಿಗೂ ಕರ್ಮದಿಂದಾಗುವ ಪರಸ್ಪರಸಂಬಂಧ

ಕರ್ಮಕ್ಕೆ ಅಧಿಕಾರಿಯಾದವನು ಕರ್ಮವನ್ನು ಮಾಡುತ್ತಿರಬೇಕೆಂಬುದಕ್ಕೆ ಮತ್ತೊಂದು ಕಾರಣವೇನೆಂದರೆ:—

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**
**ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ ।**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**
**ಇಷ್ಟಾನ್ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ॥೧೨॥**
**ಯಜ್ಞಶಿಷ್ಟಾಶಿನಃ ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ ।**
**ಭುಞ್ಜತೇ ತೇ ತ್ವಘಂ ಪಾಪಾ ಯೇ ಪಚನ್ತ್ಯಾತ್ಮಕಾರಣಾತ್ ॥ ೧೩ ॥**

೧೦–೧೩. ಪೂರ್ವದಲ್ಲಿ ಬ್ರಹ್ಮನು ಯಜ್ಞಗಳನ್ನೂ ಪ್ರಜೆಗಳನ್ನೂ ಸೃಷ್ಟಿಸಿದಾಗ ಹೇಳಿರುವದೇನೆಂದರೆ– ''ಇದರಿಂದ ಅಭಿವೃದ್ಧಿಯನ್ನು ಹೊಂದಿರಿ; ಇದು ನಿಮಗೆ ಬೇಡಿದ ಕಾಮಗಳನ್ನು ಕೊಡುವುದಾಗಲಿ. ಇದರಿಂದ ದೇವತೆಗಳನ್ನು ಪುಷ್ಟಿಗೊಳಿಸಿರಿ, ಆ ದೇವತೆಗಳು ನಿಮ್ಮನ್ನು ಪುಷ್ಟಿಗೊಳಿಸಲಿ ; ಹೀಗೆ ಒಬ್ಬರನ್ನೊಬ್ಬರು ಪುಷ್ಟಿಗೊಳಿಸುತ್ತಿದ್ದರೆ ಹೆಚ್ಚಿನ ಶ್ರೇಯಸ್ಸನ್ನು ಪಡೆಯುವಿರಿ. ಯಜ್ಞದಿಂದ ಪುಷ್ಟಿಗೊಳಿಸಲ್ಪಟ್ಟ ದೇವತೆಗಳು ನಿಮಗೆ ಬೇಕಾದ ಭೋಗಗಳನ್ನು ಕೊಡುವರಷ್ಟೆ; ಅವರು ಕೊಟ್ಟಿರುವ ವಸ್ತುಗಳನ್ನೆ ಅವರಿಗೆ ಕೊಡದೆ ಯಾವಾತನು ತಾನೆ ಅನುಭವಿಸುತ್ತಿರುವನೋ ಅವನು ಕಳ್ಳನೆ ಸರಿ.'' ಯಜ್ಞ ಮಾಡಿ ಉಳಿದದ್ದನ್ನು ತಿನ್ನುವ ಸತ್ಪುರುಷರು ಸಕಲ ವಿಧವಾದ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ ; ಆದರೆ ಯಾರು ತಮಗಾಗಿಯೇ ಅಡಿಗೆ ಮಾಡಿಕೊಳ್ಳುವರೋ ಅವರು ಪಾಪವನ್ನೆ ಭೋಗಿಸುವರು.

[ ಭಾಷ್ಯ ]

ಪೂರ್ವದಲ್ಲಿ ಎಂದರೆ ಮೊದಲು ಸೃಷ್ಟಿಮಾಡುವಾಗ, ಪ್ರಜೆಗಳನ್ನು ಸೃಷ್ಟಿಸುವ ಬ್ರಹ್ಮನು, ಯಜ್ಞವನ್ನೂ ಅದರೊಡನೆ ಮೂರು ವರ್ಣದ* ಪ್ರಜೆಗಳನ್ನೂ ಸೃಷ್ಟಿಮಾಡಿ ಎಂದರೆ ಹುಟ್ಟಿಸಿ ಹೇಳಿರುವದೇನೆಂದರೆ– '' ಈ ಯಜ್ಞದಿಂದಲೇ ಅಭಿವೃದ್ಧಿಯನ್ನು ಹೊಂದಿರಿ– ['ಪ್ರಸವ' ಎಂದರೆ ವೃದ್ಧಿಯು, ಉತ್ಪತ್ತಿಯು; 'ಪ್ರಸವಿಷ್ಯಧ್ವಂ' ಎಂದರೆ ಆ ವೃದ್ಧಿಯನ್ನು ಉಂಟುಮಾಡಿಕೊಳ್ಳಿರಿ ಎಂದರ್ಥ]– ಈ ಯಜ್ಞವು ನಿಮಗೆ ಇಷ್ಟಕಾಮಗಳನ್ನು ಕರೆಯುವದಾಗಲಿ, ಎಂದರೆ ನಿಮಗೆ ಬೇಕುಬೇಕಾದ ಫಲಗಳನ್ನೆಲ್ಲ ಕೊಡುವದಾಗಲಿ. (೧೧) ಹೇಗೆಂದರೆ. ಈ ಯಜ್ಞದಿಂದ

---

* ಶಾಸ್ತ್ರೀಯಕರ್ಮವನ್ನು ಮೂರು ವರ್ಣದವರಿಗೆ ವಿಧಿಸಿರುತ್ತದೆಯಾದ್ದರಿಂದ ಇಲ್ಲಿ ಪ್ರಜೆಗಳೆಂದರೆ ಅವರನ್ನೆ ತೆಗೆದುಕೊಳ್ಳಬೇಕೆಂದು ಭಾವ.

ಇಂದ್ರನೇ ಮೊದಲಾದ ದೇವತೆಗಳನ್ನು ಪುಷ್ಟಿಗೊಳಿಸಿರಿ ; ಹಾಗೆ (ಪುಷ್ಟಿಗೊಂಡ) ದೇವತೆಗಳು ನಿಮಗೆ ಮಳೆಯನ್ನು ಕೊಡುವದೇ ಮುಂತಾದ ಬಗೆಯಲ್ಲಿ ನಿಮ್ಮನ್ನು ತೃಪ್ತಿಗೊಳಿಸಲಿ. ಹೀಗೆ ಒಬ್ಬರನ್ನೊಬ್ಬರು ತೃಪ್ತಿಗೊಳಿಸುತ್ತಾ ಇದ್ದರೆ ಮೋಕ್ಷವೆಂಬ ಹೆಚ್ಚಿನ ಗತಿಯನ್ನೆ ಜ್ಞಾನವನ್ನು ಹೊಂದುವದರ ಮೂಲಕ ಪಡೆಯುವಿರಿ. ಅಥವಾ (ಇಲ್ಲಿ ಶ್ರೇಯಸ್ಸೆಂದರೆ ಸ್ವರ್ಗವೆಂದಾದರೂ ಅರ್ಥ ಮಾಡಬಹುದು ;) ಸ್ವರ್ಗವೆಂಬ* ಹೆಚ್ಚಿನ ಶ್ರೇಯಸ್ಸನ್ನು ಪಡೆಯಿರಿ ಎಂದರ್ಥ. (೧೨) ಮತ್ತೆ ನಿಮಗೆ ಬೇಕಾದ ಭೋಗಗಳನ್ನು ಎಂದರೆ ಹೆಂಗಸರು, ದನಕರುಗಳು, ಮಕ್ಕಳು ಮರಿಗಳು— ಮುಂತಾದವುಗಳನ್ನು, ಯಜ್ಞದಿಂದ ಪುಷ್ಟರಾದ ಎಂದರೆ ತೃಪ್ತಿಹೊಂದಿದ ದೇವತೆಗಳು ಕೊಡುತ್ತಾರೆ ಎಂದರ್ಥ. ಈ ದೇವತೆಗಳು ಕೊಟ್ಟ ಭೋಗಗಳನ್ನು ಇವರಿಗೆ ಕೊಡದೆ— ಇವರ ಉಪಕಾರದ ಸಾಲವನ್ನು ತೀರಿಸಿಕೊಳ್ಳದೆಯೇ ಎಂದರ್ಥ— ಯಾವಾತನು ತನ್ನ ದೇಹೇಂದ್ರಿಯಾದಿಗಳನ್ನೆ ತೃಪ್ತಿಗೊಳಿಸುತ್ತಾ ಭೋಗಿಸುತ್ತಿರುವನೋ, ದೇವತೆಗಳೇ ಮುಂತಾದವರ† ಸ್ವತ್ತನ್ನು ಅಪಹರಿಸುವದರಿಂದ ಅವನು ಕಳ್ಳನೆ ಸರಿ.''

(೧೩) ಯಾರಾದರೆ ದೇವಯಜ್ಞವೇ ಮುಂತಾದವುಗಳನ್ನು ‡ ಮಾಡಿ ಉಳಿದ ಅಮೃತವೆಂಬ ಹೆಸರಿನ ಆಹಾರವನ್ನೇ ಯಾವಾಗಲೂ ಭೋಜನ ಮಾಡುವರೋ ಯಜ್ಞಶೇಷವನ್ನುಣ್ಣುವ ಸತ್ಪುರುಷರು ಸರ್ವಪಾಪಗಳಿಂದಲೂ ಎಂದರೆ ಚುಲ್ಲಿ § ಮುಂತಾದ ಐದು ಸೂನಾದೋಷಗಳಿಂದಲೂ ತಿಳಿಯದೆ ಮಾಡಿದ ಹಿಂಸೆಯೇ ಮುಂತಾದ್ದರಿಂದುಂಟಾದ || ಬೇರೆ ದೋಷಗಳಿಂದಲೂ ಬಿಡುಗಡೆ

* ಪರಂ ಶ್ರೇಯಃ— ಎಂದರೆ ಹೆಚ್ಚಿನ ಶ್ರೇಯಸ್ಸು ಎಂಬ ಅಕ್ಷರಾರ್ಥವನ್ನು ತೆಗೆದುಕೊಂಡರೆ ಮುಕ್ತಿಯೆಂದೇ ತಾತ್ಪರ್ಯವಾಗುವದು; ಕರ್ಮಕ್ಕೆ ಅನುಗುಣವಾದ ಹೆಚ್ಚಿನ ಫಲವೆಂದು ಅರ್ಥಮಾಡಿದರೆ ಸ್ವರ್ಗವೆಂದು ತಾತ್ಪರ್ಯವಾಗುವದು.

† ಪಿತೃಗಳಿಗೋಸ್ಕರ ಮಾಡುವ ಕರ್ಮವನ್ನು ಮಾಡದಿದ್ದರೆ ಅವರ ಸ್ವತ್ತನ್ನು ಅಪಹರಿಸಿದಂತಾಗುವದೆಂದು ಭಾವ. ಪಂಚಯಜ್ಞಗಳಿಗೂ ಇದು ಅನ್ವಯಿಸುತ್ತದೆ.

‡ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮಯಜ್ಞ— ಎಂಬ ಐದು ಯಜ್ಞಗಳನ್ನು.

§ ಚುಲ್ಲೀ (ಒಲೆ), ಪೇಷಣೀ (ಅರೆಯುವ ಕಲ್ಲು), ಅವಸ್ಕರ (ಪೊರಕೆ), ಕಂಡನೀ (ಒರಳು), ಕುಂಭ (ಕೊಡ)— ಇವು ಐದೂ ಗೃಹಸ್ಥನಿಗೆ ತಿಳಿದೊ ತಿಳಿಯದೆಯೊ ಪ್ರಾಣಿಗಳನ್ನು ಕೊಲ್ಲುವ ಸಾಧನಗಳಾಗುವವು. ಆದ್ದರಿಂದ ಇವಕ್ಕೆ ಸೂನಾ— ಎಂದರೆ ಕೊಲ್ಲುವ ಸ್ಥಾನಗಳೆಂದು ಹೆಸರು.

|| ಅಶುಚಿಯಾದ ಪದಾರ್ಥಗಳನ್ನು ಮುಟ್ಟುವದೇ ಮುಂತಾದ್ದರಿಂದ ಉಂಟಾದ (ಅ)

ಕೊಂಡುತ್ತಾರೆ. ಆದರೆ ಯಾರು ತಮ್ಮ ಹೊಟ್ಟೆಯನ್ನೇ ಹೊರೆಯುವವರಾಗಿ ತಮಗೋಸ್ಕರವಾಗಿಯೇ ಅಡಿಗೆಮಾಡಿಕೊಳ್ಳುತ್ತಿರುವರೋ ಅಂಥವರು ತಾವೂ ಪಾಪಿಷ್ಠರು, ಪಾಪವನ್ನೇ * ಉಣ್ಣುತ್ತಿರುವರು.

## ಜಗಚ್ಚಕ್ರವು ನಡೆಯುವದಕ್ಕೂ ಕರ್ಮವನ್ನು ಮಾಡಬೇಕು

ಕರ್ಮಕ್ಕೆ ಅಧಿಕಾರಿಯಾದವನು ಕರ್ಮವನ್ನು ಮಾಡಲೇ ಬೇಕೆಂಬುದಕ್ಕೆ ಮತ್ತೂ ಒಂದು ಕಾರಣವೇನೆಂದರೆ– ಜಗತ್ತಿನ ಚಕ್ರವು ತಿರುಗುವದಕ್ಕೆ ಕರ್ಮವೇ ಕಾರಣವಾಗಿರುತ್ತದೆ.† ಅದು ಹೇಗೆ ? ಎಂದರೆ ಹೇಳುತ್ತಾನೆ—

**ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**
**ಕರ್ಮಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥**

೧೪-೧೫. ಅನ್ನದಿಂದ ಪ್ರಾಣಿಗಳುಂಟಾಗುತ್ತವೆ ; ಈ ಅನ್ನವು ಮಳೆಯಿಂದ ಆಗುವದು ; ಮಳೆಯು ಯಜ್ಞದಿಂದ ಆಗುವದು ; ಯಜ್ಞವು ಕರ್ಮದಿಂದ ಆಗುವದು. ಕರ್ಮವು ಬ್ರಹ್ಮದಿಂದ ಹುಟ್ಟುವದೆಂದು ತಿಳಿ ; ಬ್ರಹ್ಮವು ಅಕ್ಷರದಿಂದ ಹುಟ್ಟುವದು. ಆದ್ದರಿಂದ ಸರ್ವವ್ಯಾಪಿಯಾದ ಬ್ರಹ್ಮವು ಯಾವಾಗಲೂ ಯಜ್ಞದಲ್ಲಿ ಇದ್ದುಕೊಂಡಿರುವದು.

[ಭಾಷ್ಯ]

ಉಂಡ ಅನ್ನವು ರಕ್ತವೂ ರೇತಸ್ಸೂ ಆಗಿ ಪರಿಣಮಿಸಲಾಗಿ ‡ ಆದರಿಂದ ಪ್ರಾಣಿಗಳು ಹುಟ್ಟುತ್ತವೆಯೆಂಬುದು ಪ್ರತ್ಯಕ್ಷವಾಗಿದೆ ; ಅನ್ನವು ಪರ್ಜನ್ಯನಿಂದ

* 'ಇದಮೇವಾಸ್ಯ ತತ್ಸಾಧಾರಣಮನ್ನಂ ಯದಿದಮದ್ಯತೇ । ಸ ಯ ಏತದುಪಾಸ್ತೇ ನ ಸ ಪಾಪ್ಮನೋ ವ್ಯಾವರ್ತತೇ ಮಿಶ್ರಂ ಹ್ಯೇತತ್ ' – ಎಂಬ ಬೃಹದಾರಣ್ಯಕಶ್ರುತಿಯಲ್ಲಿಯೂ 'ಮೋಘಮನ್ನಂ ವಿನ್ದತೇ ಅಪ್ರಚೇತಾಃ । ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ । ನಾರ್ಯಮಣಂ ಪುಷ್ಯತಿ ನೋ ಸಖಾಯಂ । ಕೇವಲಾಘೋ ಭವತಿ ಕೇವಲಾದೀ ।' ಎಂಬ ವೇದಮಂತ್ರದಲ್ಲಿಯೂ ಹೇಳಿರುವ ಅಭಿಪ್ರಾಯವನ್ನು ಈ ವಾಕ್ಯದಲ್ಲಿ ತಿಳಿಸಿದೆಯೆಂದು ಭಾವ.

† ಸ್ತ್ರೀಪುರುಷರ ಶುಕ್ಲಶೋಣಿತಗಳಿಂದ ಹುಟ್ಟುವ ಪ್ರಾಣಿಗಳೂ ಅನ್ನದಿಂದ ಹುಟ್ಟಿದಂತೆಯೆ.

‡ ಕರ್ಮದಿಂದಲೆ ಪ್ರಾಣಿಗಳು ನಾನಾಜನ್ಮವನ್ನು ಹೊಂದುವವು. ಕರ್ಮದ ಫಲವೇ ಜಗತ್ತು. ಈ ಜಗತ್ತು ಸರಿಯಾದ ಸ್ಥಿತಿಯಲ್ಲಿರಬೇಕೆಂದು ಬಯಸುವವನು ಕರ್ಮವನ್ನು ಮಾಡುತ್ತಲೆ ಇರಬೇಕು. ಮನೆಯನ್ನು ಕಟ್ಟಿಕೊಂಡವನು ಅದು ಬಿದ್ದುಹೋಗದಂತೆ ಆಗಾಗ್ಗೆ

ಆಗುವದು, ಎಂದರೆ ಮಳೆಯಿಂದ ಆಗುವದು; ಮಳೆಯು ಯಜ್ಞದಿಂದ ಉಂಟಾಗುವದು. ಹೀಗೆಂದು "ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥" (ಮನು)" (ಅಗ್ನಿಯಲ್ಲಿ ಸರಿಯಾಗಿ ಹಾಕಿದ ಹೋಮವು ಆದಿತ್ಯನನ್ನು ಮುಟ್ಟುತ್ತದೆ; ಆದಿತ್ಯನಿಂದ ವೃಷ್ಟಿಯಾಗುತ್ತದೆ; ಆ ವೃಷ್ಟಿಯಿಂದ ಅನ್ನವಾಗುತ್ತದೆ; ಅದರಿಂದ ಪ್ರಜೆಗಳು ಹುಟ್ಟುತ್ತವೆ,) ಎಂಬ ಸ್ಮೃತಿಯಲ್ಲಿಯೂ * ಹೇಳಿರುತ್ತದೆ. ಯಜ್ಞವೆಂದರೆ ಇಲ್ಲಿ ಅಪೂರ್ವವು;† ಇದು ಕರ್ಮದಿಂದ ಹುಟ್ಟುತ್ತದೆ. ಯಜ್ಞವನ್ನು ಮಾಡುವವನು ಮತ್ತು ಋತ್ವಿಕ್ಕರುಗಳು‡ ಮಾಡುವ ಕೆಲಸಗಳಿಗೆ ಕರ್ಮವೆಂದು ಹೆಸರು. ಆದರಿಂದ ಕರ್ಮವು ಹುಟ್ಟುವದರಿಂದ ಯಜ್ಞವು ಕರ್ಮದಿಂದ ಉಂಟಾಗುತ್ತದೆಯೆಂದು ಹೇಳಿದೆ.

ಈ ಕರ್ಮವು (ಏತರಿಂದಾಗಿರುವದೆಂದರೆ) ಬ್ರಹ್ಮದಿಂದ. ಬ್ರಹ್ಮವೆಂದರೆ ವೇದವು§. ಇದು ಕರ್ಮವನ್ನು ತಿಳಿಸುವದರಿಂದ ಬ್ರಹ್ಮದಿಂದ ಕರ್ಮವು ಉಂಟಾಗುತ್ತದೆ ಎಂದು ಹೇಳಿರುತ್ತದೆ. ಈ ವೇದವೆಂಬ ಬ್ರಹ್ಮವು ಅಕ್ಷರದಿಂದ ಆಗಿರುತ್ತದೆ. ಅಕ್ಷರವೆಂದರೆ ಬ್ರಹ್ಮವು, ಪರಮಾತ್ಮನು; ಆ ಅಕ್ಷರದಿಂದ ವೇದವೆಂಬ ಬ್ರಹ್ಮವು ಉಂಟಾಗಿರುತ್ತದೆ. ಹೀಗೆ ನೇರಾಗಿ ಪರಮಾತ್ಮನಿಂದಲೇ ಮನುಷ್ಯನಿಂದ ಉಸಿರು ಹುಟ್ಟುವ ಹಾಗೆ|| ಉಂಟಾಗಿರುವದರಿಂದ,

---

ಅದಕ್ಕೆ ಸುಣ್ಣಕೆಮ್ಮಣ್ಣು ಮುಂತಾದವುಗಳನ್ನು ಹಾಕಿಕೊಳ್ಳುವದು ಅಗತ್ಯವಾಗಿರುವಂತೆ ಅಶಾಶ್ವತವಾದ ಕರ್ಮಫಲವನ್ನು ಬಯಸುವವನು ಮತ್ತೆ ಮತ್ತೆ ಕರ್ಮವನ್ನು ಮಾಡುತ್ತಲೇ ಇರಬೇಕು.

* ಯಜ್ಞವೇ ಮುಂತಾದ ಸತ್ಕರ್ಮದಿಂದ ಆದ ಮಳೆಯು ಮಾತ್ರ ಪ್ರಾಣಿಗಳ ಹುಟ್ಟುವಿಕೆಗೆ ಕಾರಣವಾಗುವದು; ಸುಮ್ಮನೆ ಆಗುವ ಅತಿವೃಷ್ಟಿ ಮುಂತಾದವುಗಳಿಂದ ಪ್ರಲಯವು ಆಗುವದು—ಎಂದು ಸ್ಮೃತಿಯ ಭಾವ.

† ಮೂಲದಲ್ಲಿ ಯಜ್ಞವು ಕರ್ಮದಿಂದ ಆಗುವದೆಂದು ಹೇಳಿದೆ. ಆದರೆ ಯಜ್ಞವೂ ಕರ್ಮವೆ ಆಗಿರುವದರಿಂದ ಕರ್ಮದಿಂದ ಕರ್ಮವು ಆಗುವದೆಂದ ಹಾಗಾಗಿ ಅರ್ಥವಿಲ್ಲದ ವಾಕ್ಯವಾಗುತ್ತದೆ. ಯಜ್ಞವೆಂದರೆ 'ಅಪೂರ್ವ'ವೆಂದು ಅರ್ಥಮಾಡಿದರೆ ಈ ದೋಷವಿಲ್ಲ. ನಾವು ಮಾಡುವ ಕರ್ಮದಿಂದ 'ಅಪೂರ್ವ, ಅದೃಷ್ಟ' ಎಂದು ಕರೆಸಿಕೊಳ್ಳುವ ಒಂದಾನೊಂದು ಶಕ್ತಿವಿಶೇಷವು ಹುಟ್ಟುವದೆಂದೂ ಅದರಿಂದ ಸ್ವರ್ಗವೆ ಮುಂತಾದ ಕಾಲಾಂತರದ ದೇಶಾಂತರದ ಫಲಗಳು ಆಗುವವೆಂದೂ ಕರ್ಮಮೀಮಾಂಸಾಶಾಸ್ತ್ರದಲ್ಲಿ ಹೇಳಿದೆ.

‡ ಯಜಮಾನ, ಋತ್ವಿಕ್ಕರು, ದ್ರವ್ಯ, ದೇವತೆ— ಇಷ್ಟು ಯಾಗಕ್ಕೆ ಬೇಕು.

§ ಬ್ರಹ್ಮವು ಅಕ್ಷರದಿಂದ ಉಂಟಾಗಿದೆ— ಎಂಬಲ್ಲಿ ಬ್ರಹ್ಮವೆಂದರೆ ವೇದವೆಂದು ಅರ್ಥಮಾಡಿದರೆ ಮಾತ್ರ ಅದಕ್ಕೆ ಉತ್ಪತ್ತಿಯನ್ನು ಹೇಳುವದಕ್ಕೆ ಆಗುತ್ತದೆ.

|| ಮನುಷ್ಯನಿಂದ ಉಸಿರು ಹುಟ್ಟುವ ಹಾಗೆ ನಿತ್ಯವಾದ ವೇದವು ಅಪ್ರಯತ್ನದಿಂದ ಪರಮಾತ್ಮನಿಂದ ಹುಟ್ಟುವದು ಎಂದು ಭಾವ. ಈ ವಿಷಯದಲ್ಲಿ ಪರಿಶಿಷ್ಟವನ್ನು ನೋಡಿ.

ಈ ಬ್ರಹ್ಮವು ಸರ್ವಗತವಾಗಿರುವದು, ಎಂದರೆ ಸಕಲ ಅರ್ಥಗಳನ್ನೂ ಬೆಳಗು ತ್ತಿರುವದು. ಹೀಗೆ ಸರ್ವಗತವಾಗಿದ್ದರೂ ಯಾವಾಗಲೂ ಇದು ಯಜ್ಞದಲ್ಲಿಯೆ ಇದ್ದುಕೊಂಡಿರುವದು, ಏಕೆಂದರೆ ಯಜ್ಞವನ್ನು ವಿಧಿಸುವದರಲ್ಲಿಯೇ ಅದಕ್ಕೆ ಮುಖ್ಯತಾತ್ಪರ್ಯವು. *

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿನ್ದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬ ॥**

೧೬. ಎಲೈ ಪಾರ್ಥನೆ, ಹೀಗೆ ಪ್ರವರ್ತಿತವಾಗಿರುವ ಈ ಚಕ್ರವನ್ನು ಯಾವನು ಇಲ್ಲಿ ಅನುಸರಿಸುವದಿಲ್ಲವೊ, ಅವನು ಪಾಪಾಯುಸ್ಸುಳ್ಳವನು. ಇಂದ್ರಿಯಗಳಲ್ಲಿ ಕ್ರೀಡಿಸುತ್ತಿರುವ ಅವನು ಬದುಕಿರುವದು ವ್ಯರ್ಥ.

[ ಭಾಷ್ಯ ]

ಎಲೈ ಪಾರ್ಥನೆ, ಹೀಗೆ ವೇದಯಜ್ಞಪೂರ್ವಕವಾಗಿ ಈಶ್ವರನು ಚಾಲನೆ ಕೊಟ್ಟಿರುವ ಈ ಜಗಚ್ಚಕ್ರವನ್ನು ಈ ಲೋಕದಲ್ಲಿ ಯಾವಾತನು ಕರ್ಮಕ್ಕೆ ಅಧಿಕಾರಿಯಾಗಿದ್ದು ಅನುಸರಿಸದೆ ಇರುವನೊ, ಪಾಪದ ಆಯುಸ್ಸುಳ್ಳವನಾಗಿ ಎಂದರೆ ಪಾಪದಿಂದಲೆ ಜೀವಿಸುವವನಾಗಿ ಇಂದ್ರಿಯಗಳಿಂದ (ಆಯಾ) ವಿಷಯ ಗಳಲ್ಲಿ ವಿನೋದದಿಂದ ಆಡುತ್ತಿರುವ ಆತನ ಬಾಳು ವ್ಯರ್ಥವು. ಆದ್ದರಿಂದ ಕರ್ಮಕ್ಕೆ ಅಧಿಕಾರಿಯಾಗಿರುವ ಅಜ್ಞನು ಕರ್ಮವನ್ನು ಮಾಡಲೆ ಬೇಕು ಎಂಬದು ಈ ಪ್ರಕರಣದ ಅಭಿಪ್ರಾಯವು.

## ಕರ್ಮಯೋಗವು ಅನಾತ್ಮಜ್ಞರಿಗೇ ಹೊರತು ಜ್ಞಾನಿಗಲ್ಲ

ಆತ್ಮಜ್ಞಾನನಿಷ್ಠೆಗೆ ತಕ್ಕ ಯೋಗ್ಯತೆಯುಂಟಾಗುವವರೆಗೆ ಅಂಥ ಯೋಗ್ಯತೆ ಯುಂಟಾಗುವದಕ್ಕಾಗಿ ಕರ್ಮಕ್ಕೆ ಅಧಿಕಾರಿಯಾಗಿರುವ ಆತ್ಮಜ್ಞನಲ್ಲದ ಮನುಷ್ಯನು ಕರ್ಮಯೋಗದ ಅನುಷ್ಠಾನವನ್ನು ಮಾಡಲೇಬೇಕೆಂದು "ನ ಕರ್ಮ ಣಾಮನಾರಂಭಾತ್" (೩-೪) ಎಂಬ ಶ್ಲೋಕವನ್ನು ಮೊದಲುಗೊಂಡು "ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ" (೩-೮) ಎಂಬವರೆಗೂ ಹೇಳಿ "ಯಜ್ಞಾರ್ಥಾತ್ ಕರ್ಮಣೋಽನ್ಯತ್ರ" (೩-೯) ಎಂಬುದರಿಂದ "ಮೋಘಂ ಪಾರ್ಥ ಸ ಜೀವತಿ" (೩-೧೬) ಎಂಬ ಶ್ಲೋಕದವರೆಗೂ ಇರುವ ಗ್ರಂಥದಲ್ಲಿ ಆತ್ಮಜ್ಞನಲ್ಲದವನು ಕರ್ಮವನ್ನು ಮಾಡಲೆ ಬೇಕೆಂಬದಕ್ಕೆ ಅನೇಕ ಕಾರಣವನ್ನೂ

---

* ವೇದದಲ್ಲಿ ಅನೇಕ ಅರ್ಥವಾದಗಳಿವೆಯಾದರೂ ಅವುಗಳನ್ನು ಉದ್ದೇಶವಾಗಿ ಅದು ಹೇಳುವದಿಲ್ಲ ; ಕರ್ಮವನ್ನು ವಿಧಿಸುವದೇ ವೇದಕ್ಕೆ ಮುಖ್ಯ ಉದ್ದೇಶವು.

ಮಾತಿನ ಪ್ರಸಕ್ತಿಯಿಂದ* ಹೇಳಿ ಅದನ್ನು ಮಾಡದಿದ್ದರೆ ದೋಷವುಂಟೆಂದೂ ಹೇಳಿದ್ದಾಯಿತು.

ಹೀಗಿರುವಲ್ಲಿ ಮೇಲೆ ಹೇಳಿದಂತೆ ಚಾಲನೆ ಕೊಟ್ಟಿರುವ ಈ ಚಕ್ರವನ್ನು ಎಲ್ಲರೂ ಅನುಸರಿಸಬೇಕೆ, ಅಥವಾ– ಆತ್ಮವನ್ನು ತಿಳಿಯದವರಿಗೆ ಹಿಂದೆ ಹೇಳಿದ ಕರ್ಮಯೋಗವನ್ನು ಅನುಷ್ಠಾನ ಮಾಡುವದೆಂಬ ಸಾಧನದಿಂದಲೆ ಸಿಗತಕ್ಕದ್ದಾಗಿಯೂ ಆತ್ಮವನ್ನು ಬಲ್ಲ ಸಾಂಖ್ಯರು ಅನುಷ್ಠಾನಮಾಡತಕ್ಕದ್ದಾಗಿಯೂ ಇರುವ ಜ್ಞಾನಯೋಗದ ನಿಷ್ಠೆಯನ್ನು ಇನ್ನೂ ಪಡೆಯದೆ ಇರುವಾತನು ಮಟ್ಟಿಗೆ ಅನುಸರಿಸಬೇಕೆ ?– ಎಂದು ಅರ್ಜುನನು ಕೇಳಬಹುದೆಂದು ಭಾವಿಸಿ, ಅಥವಾ ಶಾಸ್ತ್ರಾರ್ಥವನ್ನು ಬಿಂಗಡಿಸಿ† ತಿಳಿದುಕೊಳ್ಳುವ ಹಾಗೆ ತಾನೆ ತಿಳಿಸೋಣವೆಂದು ಹೊರಟು, ಭಗವಂತನು "ಈ ಶಾಸ್ತ್ರಪ್ರಸಿದ್ಧನಾದ ಆತ್ಮನನ್ನು ತಿಳಿದುಕೊಂಡು ಮಿಥ್ಯಾಜ್ಞಾನವನ್ನು ಕಳೆದುಕೊಂಡಿರುವ ಬ್ರಾಹ್ಮಣರು, ತಪ್ಪುತಿಳಿವಿನಿಂದ ಕೂಡಿರುವ ಜನರು ಅವಶ್ಯವಾಗಿ ಅನುಸರಿಸಲೆ ಬೇಕಾಗಿರುವ ಮಕ್ಕಳ ಬಯಕೆಯೆ ಮುಂತಾದವುಗಳನ್ನು ಬಿಟ್ಟು ಸಂನ್ಯಾಸಿಗಳಾಗಿ [ವ್ಯುತ್ಥಾಯ] ಶರೀರವು ಇರುವ ಮಟ್ಟಿಗೆ ಮಾಡಬೇಕಾದ ಭಿಕ್ಷಾಟನವನ್ನು ಮಾಡುತ್ತಾರೆ. ಅವರಿಗೆ ಆತ್ಮಜ್ಞಾನನಿಷ್ಠೆಯೊಂದನ್ನು ಬಿಟ್ಟು ಮತ್ತೇನೂ ಮಾಡತಕ್ಕದ್ದಿರುವದಿಲ್ಲ" (ಬೃ) ಎಂಬ ಶ್ರುತ್ಯರ್ಥವನ್ನೆ‡ ಈ ಗೀತಾಶಾಸ್ತ್ರದಲ್ಲಿ ಹೇಳ ಹೊರಟಿದೆಯೆಂಬುದನ್ನು ತೋರಿಸುವದಕ್ಕೋಸ್ಕರ ಈ ಮುಂದಿನ ಮಾತನ್ನು ಆಡಿರುತ್ತಾನೆ:—

**ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸನ್ತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

* ಕರ್ಮಯೋಗ, ಜ್ಞಾನಯೋಗ– ಎಂಬ ಎರಡು ನಿಷ್ಠೆಗಳನ್ನು ಬಿಂಗಡಿಸಿ ಹೇಳಿ, ಕರ್ಮಯೋಗವನ್ನು ಅನುಸರಿಸಬೇಕಾದ ಅನಾತ್ಮಜ್ಞರು ಕರ್ಮವನ್ನು ಮಾಡಲೇ ಬೇಕೆಂಬುದಕ್ಕೆ ಕಾರಣವನ್ನು ಹೇಳುವ ಪ್ರಸಕ್ತಿಯು ಬಂದದ್ದರಿಂದ, ಆ ಪ್ರಸಂಗದಲ್ಲಿ ಕಾರಣವನ್ನು ಹೇಳಿರುತ್ತಾನೆಂದು ಭಾವ.

† ಪ್ರವೃತ್ತಿ ನಿವೃತ್ತಿ– ಎಂಬಿವೆರಡೂ ಈ ಗೀತಾಶಾಸ್ತ್ರದಲ್ಲಿ ಹೇಳಿರುವ ಧರ್ಮಗಳೆಂಬದನ್ನು ಬಿಂಗಡಿಸಿ ತಿಳಿಸುವದಕ್ಕೋಸ್ಕರ. ಭಾಷ್ಯಕಾರರ ಪೀಠಿಕೆಯನ್ನು ನೋಡಿ.

‡ ಶತಪಥಬ್ರಾಹ್ಮಣದ ಭಾಗವಾದ ಬೃಹದಾರಣ್ಯಕಶ್ರುತಿಯ ತಾತ್ಪರ್ಯವನ್ನು ಇಲ್ಲಿ ಕೊಟ್ಟಿದೆ. ಕರ್ಮಿಯು ಕರ್ಮಮಾಡಬೇಕು, ಜ್ಞಾನಿಯು ಮಾಡಬೇಕಾದದ್ದಿಲ್ಲ – ಎಂಬುದು ಶ್ರುತಿಯ ಅರ್ಥ ; ಇದೇ ಗೀತೆಯ ತಾತ್ಪರ್ಯವೆಂದು ಭಾವ. ಸಂನ್ಯಾಸವಿಷಯದಲ್ಲಿ ಕೆಲವರು ಪಟ್ಟಿರುವ ದುರಭಿಪ್ರಾಯವನ್ನು ಗೀತಾರ್ಥಸರ್ವಸ್ವದಲ್ಲಿ ಖಂಡಿಸಿದೆ.

೧೭. ಯಾವ ಮನುಷ್ಯನಾದರೆ ಆತ್ಮಸ್ವರೂಪದಲ್ಲಿಯೆ ರತಿಯುಳ್ಳವನಾಗಿ ಆತ್ಮದಿಂದಲೆ ತೃಪ್ತನಾಗಿ, ಆತ್ಮದಲ್ಲಿಯೇ ಸಂತೋಷವನ್ನು ಹೊಂದಿರುವನೊ, ಅವನಿಗೆ ಮಾಡಬೇಕಾದದ್ದೇನೂ ಇರುವದಿಲ್ಲ.

[ ಭಾಷ್ಯ ]

ಆದರೆ ಆತ್ಮಜ್ಞಾನದಲ್ಲಿಯೆ ನಿಷ್ಠೆಯುಳ್ಳ ಯಾವ ಸಾಂಖ್ಯನು, ಆತ್ಮರತಿಯಾಗಿ* ಎಂದರೆ ಆತ್ಮದಲ್ಲಿಯೇ ಆನಂದವನ್ನು ಹೊಂದುವದೇ ಹೊರತು ವಿಷಯಗಳಿಂದುಂಟಾಗುವ ಆನಂದವನ್ನು ಬಯಸದವನಾಗಿಯೂ, ಆತ್ಮತೃಪ್ತನಾಗಿಯೂ, ಅನ್ನದ ಸವಿಯೆ ಮುಂತಾದ್ದನ್ನು ಬಯಸದೆ† ಆತ್ಮದಿಂದಲೆ ತೃಪ್ತನಾಗಿರುವ ಮನುಷ್ಯನಾಗಿಯೂ ಎಂದರೆ ಸಂನ್ಯಾಸಿಯಾಗಿಯೂ, ಆತ್ಮದಲ್ಲಿಯೇ ಸಂತೋಷವನ್ನು ಹೊಂದುವವನಾಗಿಯೂ ಹೊರಗಿನ ವಿಷಯಗಳು ದೊರೆತಾಗಲಲ್ಲವೆ ಎಲ್ಲರಿಗೂ ಸಂತೋಷವಾಗುವದು ? ಆದರೆ ಅಂಥ ವಿಷಯಗಳ ಲಾಭವನ್ನು ಅವಲಂಬಿಸದೆ ತನ್ನ ಆತ್ಮದಲ್ಲಿಯೇ ಸಂತೋಷವನ್ನು ಪಡೆದು ಎಲ್ಲಾ ಆಸೆಗಳನ್ನೂ ತೊರೆದಿರುವವನಾಗಿಯೂ ಇರುವನೊ ಎಂದಭಿಪ್ರಾಯ. ಯಾವನು ಇಂಥ ಆತ್ಮಜ್ಞಾನಿಯಾಗಿರುವನೊ ಆತನಿಗೆ ಮಾಡಬೇಕಾದ ‡ ಕೆಲಸವೇನೂ ಇರುವದಿಲ್ಲ.

ಮತ್ತು—

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥**

೧೮. ಆತನಿಗೆ ಮಾಡಿದ್ದರಿಂದ ಆಗಬೇಕಾದದ್ದೇನೂ ಇಲ್ಲ, ಮಾಡದೆ ಇರುವದರಿಂದಲೂ ಏನೂ ಆಗಬೇಕಾದದ್ದಿಲ್ಲ. ಯಾವ ಪ್ರಾಣಿಗಳಲ್ಲಿಯೇ ಆಗಲಿ ಇವನಿಗೆ ಆಗಬೇಕಾದ ಪ್ರಯೋಜನವೂ ಏನೂ ಇರುವದಿಲ್ಲ.

---

* 'ಆತ್ಮರತಿರಾತ್ಮಕ್ರೀಡಃ' ಎಂಬ ಛಾಂದೋಗ್ಯಶ್ರುತಿಯ ಸೂಚನೆ.

† 'ರಸಗ್ಂ ಹ್ಯೇವಾಯಂ ಲಬ್ಧ್ವಾನನ್ದೀ ಭವತಿ' ಎಂಬ ತೈತ್ತಿರೀಯದ ಸೂಚನೆ.

‡ 'ತಸ್ಯ ಕಾರ್ಯಂ ನ ವಿದ್ಯತೇ'— ಎಂದರೆ ಅವನ ಕೆಲಸವಿರುವದಿಲ್ಲ, ಮತ್ತೊಬ್ಬರಿಗಾಗಿ ಮಾಡುವದಿರುವದು— ಎಂದು ಈಚೆಗೆ ಕೆಲವರು ಅರ್ಥಮಾಡಿರುತ್ತಾರೆ. ಆದರೆ ತಸ್ಯ ಎಂಬ ಮಾತುಗಳು ಎರಡಿಲ್ಲವಾದ್ದರಿಂದ ಈ ಅರ್ಥಕ್ಕೆ ಅವಕಾಶವಿಲ್ಲ. ಜ್ಞಾನಿಯು ಮೋಕ್ಷಕ್ಕಾಗಿ ಯಾವ ಕರ್ಮವನ್ನೂ ಮಾಡಬೇಕಾದ್ದಿಲ್ಲವೆಂಬುದು ಪ್ರಕರಣವೆಂಬದನ್ನೂ ಕರ್ಮವೆಂದರೆ ಶಾಸ್ತ್ರೋಕ್ತ ಕರ್ಮವೆಂಬುದನ್ನೂ ತಿಳಿಯದೆ ಹೊಸ ವ್ಯಾಖ್ಯಾನಕರ್ತರು ಭ್ರಾಂತರಾಗಿರುತ್ತಾರೆ. ಮುಂದಿನ ಶ್ಲೋಕದಲ್ಲಿಯೂ ಇದು ಸ್ಪಷ್ಟವಾಗುತ್ತದೆ. "ಯಸ್ತು" ಎಂದು ತುಶಬ್ದವನ್ನು ಪ್ರಯೋಗಮಾಡಿರುವದೂ ಭಾಷ್ಯಕಾರರ ಮತಕ್ಕೆ ಬೆಂಬಲವಾಗಿದೆ. ಗೀತಾರ್ಥಸರ್ವಸ್ವವನ್ನು ನೋಡಿ.

[ ಭಾಷ್ಯ ]

ಹೀಗೆ ಪರಮಾತ್ಮನಲ್ಲಿಯೆ ಆನಂದವನ್ನು ಹೊಂದುತ್ತಿರುವ ಈ ಜ್ಞಾನಿಗೆ ಕರ್ಮವನ್ನು ಮಾಡಿದ್ದರಿಂದ ಆಗಬೇಕಾದ ಪ್ರಯೋಜನವೇನೂ ಇರುವದಿಲ್ಲ. ಹಾಗಾದರೆ ಕರ್ಮವನ್ನು ಮಾಡದೆ ಬಿಟ್ಟದ್ದರಿಂದ ಪ್ರತ್ಯವಾಯವೆಂಬ* ಅನರ್ಥ ವಾಗಬಹುದಲ್ಲ? ಎಂದರೆ ಹಾಗಲ್ಲ. ಕರ್ಮವನ್ನು ಮಾಡದೆ ಇರುವದರಿಂದ ಆತ ನಿಗೆ ಯಾವ ದೋಷವೂ ಈ ಲೋಕದಲ್ಲಿ ಆಗುವದಿಲ್ಲ, ಪ್ರತ್ಯವಾಯವು ಬರುವ ದಾಗಲಿ ತನ್ನ ಸ್ವರೂಪವನ್ನು ಕಳೆದುಕೊಳ್ಳುವದಾಗಲಿ† ಎಂದಿಗೂ ಆಗುವ ದಿಲ್ಲ. ಬ್ರಹ್ಮನಿಂದ ಸ್ಥಾವರದವರೆಗಿನ ಪ್ರಾಣಿಗಳಲ್ಲಿ ಯಾವದೊಂದು ಪ್ರಾಣಿ ಯುಲ್ಲಾಗಲಿ, ಈತನು ಏನಾದರೊಂದು ಪ್ರಯೋಜನಕ್ಕಾಗಿ ಕರ್ಮವನ್ನು ಮಾಡಿ ಸಾಧಿಸಿಕೊಳ್ಳಬೇಕಾದ್ದಾದ ಆಶ್ರಯವೇನೂ ಇರುವದಿಲ್ಲ. ಆಶ್ರಯ ವೆಂದರೆ ಅವಲಂಬಿಸಿರುವದು. ಯಾವದಾದರೊಂದು ಪ್ರಾಣಿಯನ್ನು ಆಶ್ರಯಿಸಿ‡ ಪಡೆದುಕೊಳ್ಳಬೇಕಾದ ಪ್ರಯೋಜನವೇನೂ ಇರುವದಿಲ್ಲ. ಒಂದು ವೇಳೆ ಇದ್ದರೆ ಅದಕ್ಕಾಗಿ ಕರ್ಮವನ್ನು ಮಾಡಬೇಕಾಗುತ್ತಿತ್ತು.

ಆದರೆ ನೀನು— ಎಲ್ಲೆಲ್ಲಿಯೂ ನೀರು ತುಂಬಿರುವ ಜಲಾಶಯದಂಥ— ಈ ಜ್ಞಾನನಿಷ್ಠೆಯುಲ್ಲಿರುವದಿಲ್ಲ. ಹೀಗಿರುವದರಿಂದ—

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

೧೯. ಆದ್ದರಿಂದ ಆಸಕ್ತಿಯನ್ನಿಡದೆ ಮಾಡಬೇಕಾದ ಕರ್ಮವನ್ನು ಒಂದೇ ಸಮನಾಗಿ ಮಾಡುತ್ತಿರು; ಏಕೆಂದರೆ ಅಸಕ್ತನಾಗಿ ಕರ್ಮವನ್ನು ಮಾಡು ತ್ತಿರುವ ಪುರುಷನು ಹೆಚ್ಚಿನ ಗತಿಯನ್ನು ಪಡೆಯುತ್ತಾನೆ.

---

* ಯಾವ ದೋಷವೂ ಇಲ್ಲದ ಪರಮಾತ್ಮವಸ್ತುವೆ ತಾನೆಂದು ತಿಳಿದಿರುವದರಿಂದ ಅವನಿಗೆ ಪ್ರತ್ಯವಾಯವು ಆಗಲಾರದೆಂದು ಭಾವ. ಶಾಸ್ತ್ರವಿಹಿತವಾದ ಕರ್ಮವನ್ನು ಮಾಡದವರಿಗೆ ಪ್ರತ್ಯ ವಾಯವೆಂಬ ದೋಷವು ಗಂಟುಬೀಳುವದೆಂದು ಮೀಮಾಂಸಕರು ಹೇಳುತ್ತಾರೆ.

† ಆತ್ಮನನ್ನು ತೆಗೆದುಕೊಳ್ಳುವದಕ್ಕಾಗಲಿ ಬಿಡುವದಕ್ಕಾಗಲಿ ಆಗುವದಿಲ್ಲ; ಅದು ನಮ್ಮ ಸ್ವರೂಪವೇ ಆಗಿದೆ. ಆದ್ದರಿಂದ ಜ್ಞಾನಿಯು ಕರ್ಮವನ್ನು ಮಾಡದಿದ್ದರೆ ಅವನ ಸ್ವರೂಪವು ನಾಶ ವಾಗಬಹುದೆಂಬ ಭಯವೇನೂ ಇರುವದಿಲ್ಲ.

‡ ಅನಾತ್ಮಜ್ಞರಿಗೆ ದೇವತೆಗಳೇ ಮುಂತಾದವರನ್ನು ಆಶ್ರಯಿಸಿ ಅವರ ಉಪಾಸನೆಯಿಂದ ಪಡೆಯಬೇಕಾದ ಫಲಗಳುಂಟು; ಜ್ಞಾನಿಗೆ ಅಂಥದ್ದೇನೂ ಇರುವದಿಲ್ಲ.

[ ಭಾಷ್ಯ ]

ಆದ್ದರಿಂದ ಅಸಕ್ತನಾಗಿ ಎಂದರೆ ಸಂಗವನ್ನು * ಬಿಟ್ಟು ಮಾಡಬೇಕಾದ ಕರ್ಮವನ್ನು ಎಂದರೆ ನಿತ್ಯಕರ್ಮವನ್ನು † ಯಾವಾಗಲೂ ಮಾಡುತ್ತಿರು. ಏಕೆಂದರೆ ಆಸಕ್ತಿಯಿಲ್ಲದೆ ಕರ್ಮವನ್ನು **ಈಶ್ವರಾರ್ಪಣ**ವಾಗಿ ಮಾಡುತ್ತಿರುವ ಮನುಷ್ಯನು ಅಂತಃಕರಣದ ಶುದ್ಧಿಯನ್ನು ಪಡೆಯುವುದರ ಮೂಲಕ‡ ಹೆಚ್ಚಿನ ಗತಿಯನ್ನು ಎಂದರೆ ಮೋಕ್ಷವನ್ನು ಪಡೆಯುತ್ತಾನೆ.

## ಜ್ಞಾನಿಯು ಲೋಕಸಂಗ್ರಹಕ್ಕಾಗಿ ಮಾಡುವ ಕರ್ಮ

ಇನ್ನು ಒಂದು ಕಾರಣವುಂಟು :—

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಙ್ಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

೨೦. ಜನಕನೆ ಮುಂತಾದವರು ಕರ್ಮದೊಡನೆಯೆ ಉತ್ತಮವಾದ ಸಿದ್ಧಿಯನ್ನು ಪಡೆದರಲ್ಲವೆ ? ಲೋಕಸಂಗ್ರಹವನ್ನು ಲಕ್ಷ್ಯದಲ್ಲಿಟ್ಟಾದರೂ ನೀನು ಕರ್ಮವನ್ನು ಮಾಡುವದೊಳ್ಳೆಯದು.

[ ಭಾಷ್ಯ ]

ಪೂರ್ವದಲ್ಲಿದ್ದ ಕ್ಷತ್ರಿಯರಾದ ಜ್ಞಾನಿಗಳು ಉತ್ತಮವಾದ ಸಿದ್ಧಿಯನ್ನು ಎಂದರೆ ಮೋಕ್ಷವನ್ನು ಕರ್ಮದೊಡನೆಯೆ ಪಡೆಯುವದಕ್ಕೆ ಪ್ರವರ್ತಿಸಿದ್ದರಲ್ಲವೆ? ಜನಕಾದಿಗಳು ಎಂದರೆ **ಜನಕನು, ಅಶ್ವಪತಿ**– ಮೊದಲಾದವರು. ಅವರು ಜ್ಞಾನವನ್ನು ಪಡೆದಿದ್ದರಿಂದು ಇಟ್ಟುಕೊಂಡರೆ ಅವರು ಕರ್ಮದಲ್ಲಿ ತೊಡಗಿಬಿಟ್ಟಿದ್ದುದರಿಂದ ಲೋಕಸಂಗ್ರಹಕ್ಕಾಗಿ ಕರ್ಮದೊಡನೆಯೇ– ಕರ್ಮವನ್ನು ಸಂನ್ಯಾಸ

* ಸಂಗವೆಂದರೆ ಸತ್ತ್ವವೇ ಮುಂತಾದ ಗುಣಗಳಿಂದಾಗುವ ಕರ್ಮವನ್ನು ತಾನೆ ಮಾಡುವೆನೆಂಬ ಅಭಿಮಾನ ; ಸಂಗವನ್ನು ಬಿಡುವದೆಂದರೆ ಕರ್ಮವನ್ನು ಮಾಡುವಾಗ 'ನಾನು' ಎಂಬ ಅಭಿಮಾನವಿಲ್ಲದೆ ಮಾಡುವದು.

† 'ಮಾಡಲೇ ಬೇಕಾದ ಕರ್ಮ' ಎಂದು ಹೇಳಿದ್ದರಿಂದ ಶಾಸ್ತ್ರವಿಹಿತವಾದ ನಿತ್ಯಕರ್ಮವೆಂಬ ಅರ್ಥವು ಹೊರಡುತ್ತದೆ.

‡ ಕರ್ಮದಿಂದಲೆ ಮೋಕ್ಷವನ್ನು ನೇರಾಗಿ ಪಡೆಯುತ್ತಾನೆಂದು ಅರ್ಥಮಾಡಿದರೆ ಜ್ಞಾನದಿಂದಲೆ ಮೋಕ್ಷವೆಂದು ಗೀತೆಯಲ್ಲಿ ಹೇಳಿರುವ ಸಿದ್ಧಾಂತಕ್ಕೆ ವಿರುದ್ಧವಾಗುತ್ತದೆ ; ಮೋಕ್ಷವು ಅನಿತ್ಯವೆಂಬ ದೋಷವೂ ಬರುತ್ತದೆ.

ಮಾಡದೆಯೆ– ಉತ್ತಮವಾದ ಸಿದ್ಧಿಯನ್ನು* ಪಡೆದರು ಎಂದರ್ಥವು. ಹಾಗಿಲ್ಲದೆ ಈ ಜನಕಾದಿಗಳು ಜ್ಞಾನಿಗಳಾಗಿರಲಿಲ್ಲವೆಂದು† ಇಟ್ಟುಕೊಳ್ಳುವದಾದರೆ, ಸತ್ತ್ವಶುದ್ಧಿಯಾಗುವದಕ್ಕೆ ಸಾಧನವಾಗಿರುವ ಕರ್ಮದಿಂದ ಕ್ರಮಕ್ರಮವಾಗಿ ಮೋಕ್ಷವನ್ನು ಹೊಂದಿದರು– ಎಂದು ಈ ಶ್ಲೋಕಕ್ಕೆ ಅರ್ಥಮಾಡಬೇಕು.

ಆದರೆ ಜನಕನೇ ಮುಂತಾದ ಪೂರ್ವಕಾಲದ ಜನರೂ ಸರಿಯಾಗಿ ತತ್ತ್ವವನ್ನು ತಿಳಿಯದೆಯೆ ಕರ್ತವ್ಯಕರ್ಮವನ್ನು ಮಾಡುತ್ತಿದ್ದರೆಂದೂ ಅಷ್ಟುಮಾತ್ರದಿಂದಲೆ ಸರಿಯಾದ ಜ್ಞಾನವನ್ನು ಪಡೆದು ಕೃತಾರ್ಥರಾದ ಬೇರೆಯವರು ಕೂಡ ಮಾಡಬೇಕಾದ ಅವಶ್ಯಕತೆಯೇನೂ ಇರುವುದಿಲ್ಲವೆಂದೂ ನಿನ್ನ ಅಭಿಪ್ರಾಯವಾದರೆ ಆಗಲೂ ಫಲವನ್ನು ಕೊಡುವುದಕ್ಕೆ ಪ್ರಾರಂಭವಾಡಿರುವ‡ ಕರ್ಮಕ್ಕೆ ಒಳಗಾಗಿ

---

* ಕರ್ಮದಿಂದಾಗುವ ಸಿದ್ಧಿಯು ಎರಡು ಬಗೆ: ಚಿತ್ತಶುದ್ಧಿಯಿಂದಾಗುವ ಜ್ಞಾನನಿಷ್ಠಾಯೋಗ್ಯತೆಯೊಂದು ; ಆ ಸಿದ್ಧಿಯ ಫಲವಾಗಿ ಆಗುವ ಜ್ಞಾನನಿಷ್ಠೆ ಅಥವಾ ಮುಕ್ತಿ ಎಂಬುದೊಂದು. ಎರಡನೆಯ ಬಗೆಯ ಸಿದ್ಧಿಯನ್ನು ಪಡೆದರು ಎಂಬರ್ಥದಲ್ಲಿ ಈ ವ್ಯಾಖ್ಯಾನವನ್ನು ಮಾಡಬೇಕು. (೧೮-೪೬ ನೆಯ ಶ್ಲೋಕದ ಭಾಷ್ಯವನ್ನು ನೋಡಿ.)

† ಜನಕನು ಅಜ್ಞಾನಿಯಾಗಿರುವಾಗಲೆ ಒಂದು ಸಲ ಸಂನ್ಯಾಸವನ್ನು ತೆಗೆದುಕೊಳ್ಳುವದಕ್ಕೆ ಹೋದನೆಂದೂ ಆಗ ಅವನ ಹೆಂಡತಿಯ ವಿಜ್ಞಾಪನೆಯಿಂದ ತನ್ನ ಸ್ವಾಮಿತ್ವವನ್ನು ಕೈಬಿಟ್ಟನೆಂದೂ ಭಾರತದಲ್ಲಿ ಹೇಳಿದೆ. ಆ ಸ್ಥಿತಿಯಲ್ಲಿ ಅವನು ಮಾಡುತ್ತಿದ್ದ ಕರ್ಮವು ಸತ್ತ್ವಶುದ್ಧಿಯೆಂಬ ಸಿದ್ಧಿಯನ್ನು ಕೊಡುವದಕ್ಕೆ ಸಾಧನವಾಗಿತ್ತೆಂದು ಹೇಳಬೇಕಾಗುವದು. 'ಕರ್ಮಣಾ' ಎಂಬ ತೃತೀಯೆಗೆ 'ಕರ್ಮವೆಂಬ ಸಾಧನದಿಂದ' ಎಂಬ ಅರ್ಥವನ್ನು ಮಾಡುವದು ಆ ಸಂದರ್ಭಕ್ಕೆ ಹೊಂದುತ್ತದೆ. ಜ್ಞಾನಿಯಾದ ಮೇಲೂ ಕರ್ಮವನ್ನು ಮಾಡುತ್ತಲೆ ಜನಕನು ಕೆಲವು ಕಾಲವನ್ನು ಕಳೆದನೆಂಬುದು ಜನಕ ಮತ್ತು ಸುಲಭೆ– ಇವರ ಸಂವಾದವಿರುವ ಭಾರತಭಾಗದಿಂದ ತಿಳಿಯುವದು. ಆಗ 'ಕರ್ಮಣಾ' ಎಂದರೆ 'ಕರ್ಮಣಾ ಸಹ' ಕರ್ಮದೊಡನೆ. ಎಂಬ ಮೊದಲನೆಯ ಅರ್ಥವನ್ನು ಮಾಡುವದು ಹೆಚ್ಚು ಒಪ್ಪುವದು. ಏಕೆಂದರೆ ಆಗ ಕರ್ಮದಿಂದ ಅವನಿಗೆ ಆಗಬೇಕಾದ ಫಲವೇನೂ ಇರಲಿಲ್ಲ. ಜನಕನ ವಿಷಯವನ್ನು ಗೀತಾರ್ಥಸರ್ವಸ್ವದಲ್ಲಿ ವಿಸ್ತಾರವಾಗಿ ಚರ್ಚಿಸಿರುತ್ತದೆ.

‡ ಕರ್ಮವನ್ನು ಮಾಡಿದ ಮೇಲೆ ಅದರ ಫಲವು ಕೂಡಲೆ ಆಗದಿದ್ದರೆ ಅದರ ಸಂಸ್ಕಾರಗಳು ರಾಶಿಯಾಗಿ ನಮ್ಮ ಚಿತ್ತದಲ್ಲಿ ಉಳಿದುಕೊಳ್ಳುವವು. ಇವಕ್ಕೆ ಸಂಚಿತಕರ್ಮವೆಂದು ಹೆಸರು. ಈ ರಾಶಿಯಲ್ಲಿ ಎಷ್ಟು ಭಾಗವು ಒಂದು ಜನ್ಮದಲ್ಲಿ ಫಲವನ್ನು ಕೊಡುವದೋ ಅದಕ್ಕೆ ಪ್ರಾರಬ್ಧಕರ್ಮವೆಂದು ಹೆಸರು. ಪ್ರಾರಬ್ಧಕರ್ಮವು ಫಲವನ್ನು ಕೊಟ್ಟುಬಿಟ್ಟಿರುವದರಿಂದ ಅದನ್ನು ಅನುಭವಿಸಿ ತೀರಿಸಬೇಕು. ಉಳಿದ ಸಂಚಿತವನ್ನು ಮುಂದೆ ನಾವು ಮಾಡುವ ಕರ್ಮಗಳಿಂದ ಬೇಕಾದ ಕಡೆಗೆ ತಿರುಗಿಸಿಕೊಳ್ಳಬಹುದು. ಮುಂದೆ ಮಾಡುವ ಕರ್ಮಕ್ಕೆ ಆಗಾಮಿಕರ್ಮವೆಂದು ಹೆಸರು. ಆತ್ಮನಿಗೆ ಕರ್ತೃತ್ವವುಂಟೆಂಬ ವ್ಯವಹಾರದ ದೃಷ್ಟಿಯಿಂದ ಈ ಮೂರುವಿಧವಾದ ಕರ್ಮಗಳು ಏರ್ಪಡುತ್ತವೆ.

ರುವ ನೀನು ಲೋಕಸಂಗ್ರಹವನ್ನು ಲಕ್ಷ್ಯಪಲ್ಲಿಟ್ಟಾದರೂ – ಜನರು ತಪ್ಪು ದಾರಿಗೆ ಹೋಗದಂತೆ ತಡೆಮಾಡುವದೇ ಲೋಕಸಂಗ್ರಹವು ; ಅದೇ ಪ್ರಯೋಜನ ವಾಗುವದೆಂಬುದನ್ನು ತಿಳಿದಾದರೂ– ಕರ್ಮವನ್ನು ಮಾಡುವದು ಒಳ್ಳೆಯದು.

ಲೋಕಸಂಗ್ರಹವನ್ನು ಏಕೆ ಮಾಡಬೇಕು ? * ಎಂದರೆ ಹೇಳುತ್ತೇನೆ :—

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

೨೧. ಶ್ರೇಷ್ಠನಾದವನು ಏನೇನು ಮಾಡುವನೋ ಉಳಿದ ಜನವು ಅದ ದನ್ನೇ ಮಾಡುವದು. ಆತನು ಯಾವದನ್ನು ಪ್ರಮಾಣವೆನ್ನುವನೋ ಜನವೂ ಅದನ್ನೇ ಅನುಸರಿಸುವದು.

[ ಭಾಷ್ಯ ]

ಶ್ರೇಷ್ಠನು ಎಂದರೆ ಜನರಲ್ಲಿ ಮುಖ್ಯನೆನಿಸಿದವನು ಯಾವ ಯಾವ ಕರ್ಮ ವನ್ನು ಮಾಡುತ್ತಾನೋ ಅವನನ್ನು ಅನುಸರಿಸುವ ಉಳಿದ ಜನವೂ ಅಯಾ ಕರ್ಮವನ್ನೇ ಮಾಡುವದು. ಮತ್ತೆ ಆ ಶ್ರೇಷ್ಠನು ಲೋಕದಲ್ಲಿಯಾಗಲಿ ವೇದ ದಲ್ಲಿಯಾಗಲಿ ಯಾವಯಾವದನ್ನು ಪ್ರಮಾಣವೆನ್ನುವನೋ ಜನರೂ ಅದನ್ನೇ ಅನುಸರಿಸುವರು ಎಂದರೆ ಅದನ್ನೇ ಪ್ರಮಾಣವೆನ್ನುವರು ಎಂದರ್ಥ.

ಲೋಕಸಂಗ್ರಹವನ್ನು ಮಾಡಬೇಕೆಂಬ ವಿಷಯದಲ್ಲಿ ನಿನಗೆ ಇನ್ನೂ ಬೇರೆ ಅಭಿಪ್ರಾಯವಿದ್ದರೆ, ಇಗೋ ನನ್ನನ್ನು ಕಾಣೆಯಾ ?

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

೨೨. ಎಲೈ ಪಾರ್ಥನೆ, ಮೂರು ಲೋಕದಲ್ಲಿಯೂ ನನಗೆ ಮಾಡಬೇಕಾದ ಕರ್ಮವೇನೂ ಇರುವದಿಲ್ಲ. ನಾನು ಪಡೆಯದೆ ಇರುವದೂ ಇನ್ನು ಪಡೆಯ ಬೇಕಾದದ್ದೂ ಮತ್ತೇನೂ ಇರುವದಿಲ್ಲ. ಆದರೂ ಕರ್ಮದಲ್ಲಿದ್ದುಕೊಂಡೇ ಇರುವೆನು.

[ಭಾಷ್ಯ]

ಎಲೈ ಪಾರ್ಥನೆ, ನನಗೆ ಮೂರು ಲೋಕಗಳಲ್ಲಿಯೂ ಮಾಡಿಕೊಳ್ಳ ಬೇಕಾದ ಕರ್ಮವು ಯಾವದೊಂದೂ ಇರುವದಿಲ್ಲ; ಏಕೆಂದರೆ ನಾನು ಪಡೆಯದೆ

* ಗು॥ ನಿ॥ ಮೈ॥ ಪಾಠಗಳಲ್ಲಿ 'ಲೋಕಸಂಗ್ರಹಂ ಕಃ ಕರ್ತುಮರ್ಹತಿ ಕಥಂ ಚ ?' (ಲೋಕ ಸಂಗ್ರಹವನ್ನು ಯಾರು ಹೇಗೆ ಮಾಡಬೇಕು) ಎಂದಿದೆ. ಇಲ್ಲಿ ಕೊಟ್ಟಿರುವ ಪಾಠವೆ ಈ ಸಂದರ್ಭಕ್ಕೆ ಹೆಚ್ಚು ಒಪ್ಪುತ್ತದೆ.

ಇನ್ನೂ ಪಡೆಯಬೇಕಾಗಿರುವದು ಯಾವುದೂ ಇರುವದಿಲ್ಲ. ಆದರೂ ನಾನು ಕರ್ಮದಲ್ಲಿ ತೊಡಗಿಯೆ ಇರುತ್ತೇನೆ.

**ಯದಿ ಹ್ಯಹಂ ನ ವರ್ತೇಯ ಜಾತು ಕರ್ಮಣ್ಯತನ್ದ್ರಿತಃ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**

೨೩. ಎಲೈ ಪಾರ್ಥನೆ, ನಾನು ನಿರಾಲಸ್ಯನಾಗಿ ಕರ್ಮದಲ್ಲಿ ತೊಡಗದೆ ಯಾವಾಗಲಾದರೂ ಇದ್ದುಬಿಟ್ಟೆನೆಂದರೆ, ಮನುಷ್ಯರು ಸರ್ವಪ್ರಕಾರದಿಂದಲೂ ನನ್ನ ಮಾರ್ಗವನ್ನೆ ಅನುಸರಿಸುವರು.

[ ಭಾಷ್ಯ ]

ಹೀಗಿಲ್ಲದೆ, ಬೇಸರಪಿಲ್ಲದೆ ಕರ್ಮವನ್ನು ಮಾಡುವದನ್ನು ನಾನು ಎಂದಾದರೂ ಬಿಟ್ಟೆನೆಂದರೆ, ಎಲೈ ಪಾರ್ಥನೆ, ಶ್ರೇಷ್ಠನೆಂದೆನಿಸಿಕೊಂಡಿರುವ ನನ್ನ ದಾರಿಯನ್ನೇ ಎಲ್ಲಾ ಬಗೆಯಿಂದಲೂ ಜನರು ಅನುಸರಿಸುವರು.

ಹಾಗಾದರೆ* ದೋಷವೇನು? ಎಂದರೆ ಹೇಳುತ್ತಾನೆ:—

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಙ್ಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

೨೪. ನಾನು ಕರ್ಮವನ್ನು ಮಾಡದಿದ್ದರೆ ಈ ಲೋಕಗಳು ಹಾಳಾದಾವು, ವರ್ಣಸಂಕರಕ್ಕೂ ನಾನೇ ಕಾರಣನಾಗುವೆನು, ಈ ಜನರನ್ನೆಲ್ಲ ಹಾಳುಮಾಡಿದವನಾಗುವೆನು.

[ ಭಾಷ್ಯ ]

ನಾನು ಕರ್ಮವನ್ನು ಮಾಡದೆ ಇದ್ದರೆ, (ಯಾರೂ ಕರ್ಮವನ್ನು ಮಾಡುವದಿಲ್ಲವಾದ್ದರಿಂದ) ಲೋಕಸ್ಥಿತಿಗೆ ಬೇಕಾದ ಕರ್ಮವೆ ಇಲ್ಲದಂತಾಗಿಬಿಡುವದರಿಂದ ಈ ಲೋಕಗಳೆ ಹಾಳಾಗಿಬಿಟ್ಟಾವು, ಮತ್ತು ವರ್ಣಸಂಕರವನ್ನೂ ನಾನೆ ಮಾಡಿದಂತಾಗುವದು; ಆ ಕಾರಣದಿಂದ ಈ ಜನರನ್ನು ನಾನೆ ಹಾಳುಮಾಡಿದಂತಾಗುವದು, ಪ್ರಾಣಿಗಳಿಗೆ ಒಳ್ಳೆಯದಾಗಲೆಂದು ಹೊರಟಿರುವ ನಾನು ಅವರಿಗೆ ಕೇಡನ್ನು ಮಾಡಿದಂತೆ ಆಗುವದು. ಇದು ಈಶ್ವರನಾದ ನನಗೆ† ಅನುಗುಣವಲ್ಲದ ಕಾರ್ಯವಾಗುವದು.

---

* 'ತಥಾ ಚ ಕೋ ದೋಷ ಇತ್ಯತ್ರಾಹ'— ಎಂಬ ಪಾಠವು ಮ॥ ಮೈ॥ ನಿ॥ ಗು॥ ಕೋಶಗಳಲ್ಲಿರುತ್ತದೆ.

† ಈಶ್ವರನೆಂದು ಹೇಳಿದ್ದರಿಂದ ಏನು ಬೇಕಾದರೂ ಮಾಡುವದಕ್ಕೂ ಬಿಡುವದಕ್ಕೂ ಸ್ವಾತಂತ್ರ್ಯವನ್ನು ಸೂಚಿಸಿದಂತಾಗುವದು. ನಾನು ಸರ್ವಶಕ್ತನಾದರೂ ಲೋಕಗಳನ್ನು ಸುಸ್ಥಿತಿಯಲ್ಲಿಟ್ಟರು

ಇಷ್ಟು ನನ್ನಂತೆ ನೀನೂ ಅಥವಾ ಮತ್ತೆ ಯಾವನಾದರೂ ಮಾಡಬೇಕಾದದ್ದೇನೂ ಇಲ್ಲವೆಂದು ಬುದ್ಧಿಯುಳ್ಳ ಆತ್ಮಜ್ಞಾನಿಯಾಗಿಯೇ ಇಗಿದ್ದರೆ, ಆಗ (ನಿನಗೂ) ಅವನಿಗೂ ತನಗಾಗಿ ಮಾಡಿಕೊಳ್ಳಬೇಕಾದದ್ದು ಏನೂ ಇರುವದಿಲ್ಲವಾದರೂ, ಮತ್ತೊಬ್ಬರಿಗೆ ಒಳ್ಳೆಯದನ್ನೇ ಮಾಡಬೇಕು*– ಎಂದು ಈಗ ಹೇಳುತ್ತಾನೆ:—

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವನ್ತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾ ಸಕ್ತಶ್ಚಿಕೀರ್ಷುರ್ಲೋಕಸಙ್ಗ್ರಹಮ್ ॥೨೫॥**

೨೫. ಭರತವಂಶೋತ್ಪನ್ನನೆ, ತಿಳಿಯದವರು ಹೇಗೆ ಕರ್ಮವನ್ನು ಆಸಕ್ತಿಯಿಂದ ಮಾಡುವರೋ ಹಾಗೆ ಜ್ಞಾನಿಯು ಆಸಕ್ತಿಯಿಲ್ಲದೆ ಲೋಕಸಂಗ್ರಹವನ್ನು ಮಾಡುವದಕ್ಕಾಗಿ ಕರ್ಮವನ್ನು ಮಾಡುತ್ತಿರಬೇಕು.

[ ಭಾಷ್ಯ ]

ಈ ಕರ್ಮದ ಫಲವು ನನಗೆ ಆಗಲಿ ಎಂದು ಅಜ್ಞಾನಿಗಳು† ಹೇಗೆ ಕರ್ಮದಲ್ಲಿ ಸಕ್ತರಾಗಿ ಮಾಡುವರೋ, ಎಲೈ ಭರತವಂಶೋತ್ಪನ್ನನೆ, ಆತ್ಮವನ್ನು ಬಲ್ಲ ಜ್ಞಾನಿಯೂ ಅದರಂತೆಯೇ ಆಸಕ್ತಿಯಿಲ್ಲದೆ‡ ಮಾಡಬೇಕು. ಅವನು ಏತಕ್ಕೆ ಹಾಗೆ ಮಾಡುತ್ತಾನೆಂದರೆ ಅದನ್ನು ಕೇಳು, ಲೋಕಸಂಗ್ರಹವನ್ನು ಮಾಡುವ§ ಇಚ್ಛೆಯಿಂದ (ಹಾಗೆ ಮಾಡುತ್ತಾನೆ.)

ಹೀಗೆ ಲೋಕಸಂಗ್ರಹವನ್ನು ಮಾಡಬೇಕೆಂದು ಹೊರಟಿರುವ ನನಗಾಗಲಿ ಮಿಕ್ಕ ಯಾವ ಆತ್ಮಜ್ಞಾನಿಗೇ ಆಗಲಿ ಲೋಕಸಂಗ್ರಹವೊಂದನ್ನು ಬಿಟ್ಟು

---

ವದು ಯುಕ್ತವೆಂಬುದರ ಮೇಲೆ ಲೋಕನಾಶಕ್ಕೆ ಕಾರಣವಾಗದೆ ಇರಲೆಂದು ಕರ್ಮವನ್ನು ಮಾಡುವೆನು– ಎಂದು ಭಾವ. ಇಲ್ಲಿ ಬೇರೆ ಮತದವರು ಪಟ್ಟಿರುವ ವಿಚಿತ್ರಾಭಿಪ್ರಾಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

* ಆತ್ಮಜ್ಞಾನಿಗೆ ಲೋಕಸಂಗ್ರಹವನ್ನು ವಿಧಿಸಿರುತ್ತದೆಯೆಂತ ತಿಳಿಯಬಾರದು; ಆತ್ಮಜ್ಞಾನಿಯ ವ್ಯವಹಾರವು ಭಗವಂತನ ವ್ಯವಹಾರದಂತೆ ಲೋಕಸಂಗ್ರಹಕ್ಕಾಗಿ ನಡೆದಿರುವದು– ಎಂದು ತಿಳಿಯಬೇಕು. ಶ್ರೀಕೃಷ್ಣನ ದೃಷ್ಟಾಂತದ ತಾತ್ಪರ್ಯವನ್ನು ಗೀತಾರ್ಥಸರ್ವಸ್ವದಲ್ಲಿ ವಿವರಿಸಿರುತ್ತದೆ.

† ಗುಣಗಳಿಂದಾಗುವ ಕರ್ಮವನ್ನು ಕರ್ತೃವಲ್ಲದ ತನ್ನಲ್ಲಿ ಆರೋಪಮಾಡುವದೇ ಅಜ್ಞಾನವು ; ಅದು ಯಾರಿಗೆ ಇರುವದೋ ಅವರು ಅಜ್ಞಾನಿಗಳು. ೨೭ನೆಯ ಶ್ಲೋಕದಲ್ಲಿ ಇದನ್ನೆ ವಿವರಿಸಿದೆ.

‡ ತಾನು ಕರ್ತೃವಲ್ಲವೆಂಬ ಜ್ಞಾನದಿಂದ ಇದನ್ನು ೨೮ನೆಯ ಶ್ಲೋಕದಲ್ಲಿ ವಿವರಿಸಿದೆ.

§ ಲೋಕಸಂಗ್ರಹವನ್ನು ಮಾಡಬೇಕೆಂಬುದು ಶಾಸ್ತ್ರದ ವಿಧಿಯಲ್ಲ. ಜ್ಞಾನಿಯು ಎಲ್ಲರ ಆತ್ಮವೂ ತಾನೇ ಆಗಿರುವದರಿಂದ ಪರೋಪಕಾರದ ಕೆಲಸಗಳನ್ನೆ ಮಾಡುತ್ತಿರುವನೆಂದು ತಿಳಿಯಬೇಕು. ಕೆಲವರು ಗೃಹಸ್ಥಾಶ್ರಮದ ಕರ್ಮಗಳು ಮಾತ್ರ ಲೋಕಸಂಗ್ರಹಕ್ಕೆ ಬೇಕಾಗಿವೆಯೆಂದು ಸಂನ್ಯಾ

ಮತ್ತೇನೂ ಮಾಡಬೇಕಾದದ್ದಿರುವದಿಲ್ಲ. ಆದ್ದರಿಂದ ಅಂಥ ಜ್ಞಾನಿಗೆ ಈ ಮಾತನ್ನು ಹೇಳಿರುತ್ತದೆ:—

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಙ್ಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥೨೬॥**

೨೬. ಕರ್ಮದಲ್ಲಿ ಆಸಕ್ತಿಯುಳ್ಳ ಅಜ್ಞರ ಬುದ್ಧಿಯನ್ನು ಮಾರ್ಪಡಿಸಬಾರದು; ತಿಳಿದವನೆನಿಸಿಕೊಂಡಿರುವ ಜ್ಞಾನಿಯು ತಾನೂ ಕರ್ಮಗಳನ್ನು ಮಾಡುತ್ತಾ ಅಜ್ಞರಿಗೆ ಎಲ್ಲಾ ಕರ್ಮಗಳನ್ನೂ ಹಚ್ಚಬೇಕು.

[ಭಾಷ್ಯ]

ಬುದ್ಧಿಭೇದವೆಂದರೆ 'ನಾನು ಇದನ್ನು ಮಾಡಿ ಈ ಕರ್ಮದ ಫಲವನ್ನು ಅನುಭವಿಸಬೇಕು' ಎಂದು ನಿಶ್ಚಯಮಾಡಿಕೊಂಡಿರುವ ಬುದ್ಧಿಯ ಮಾರ್ಪಾಡು, ಅಂದರೆ ಅದನ್ನು ಅಲುಗಾಡಿಸುವದು. ಕರ್ಮದಲ್ಲಿ ಆಸಕ್ತಿಯುಳ್ಳವರಾಗಿರುವ ಸಂಗವುಳ್ಳ ಅಜ್ಞರಿಗೆ, ಅವಿವೇಕಿಗಳಿಗೆ, ಅಂಥ ಬುದ್ಧಿಭೇದವನ್ನು ಮಾಡಬಾರದು. ಮತ್ತೇನು ಮಾಡಬೇಕು? ಎಂದರೆ ಆ ಅಜ್ಞರು ಮಾಡುವ * ಕರ್ಮವನ್ನು ದೊಡ್ಡವನೆನಿಸಿದ ತಾನೂ ಮಾಡುತ್ತಾ ಎಲ್ಲಾ ಕರ್ಮಗಳನ್ನೂ ಅವರು ಆಚರಿಸುವಂತೆ ಮಾಡಬೇಕು.

ತತ್ತ್ವವನ್ನರಿಯದ ಮೂಢನು ಕರ್ಮಗಳಲ್ಲಿ ಆಸಕ್ತಿಯುಳ್ಳವನಾಗಿರುವನೆಂಬುದು ಹೇಗೆ? ಎಂದರೆ ಹೇಳುತ್ತಾನೆ:—

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ೨೭ ॥**

೨೭. ಪ್ರಕೃತಿಯ ಗುಣಗಳಿಂದ ಕರ್ಮಗಳು ನಾನಾರೀತಿಯಿಂದ ಮಾಡಲ್ಪಡುತ್ತಿರುವವು; ಅಹಂಕಾರವಿಮೂಢಾತ್ಮನು "ನಾನೇ ಮಾಡುವವನು" ಎಂದು ತಿಳಿದುಕೊಳ್ಳುತ್ತಾನೆ.

---

ಸಿಗಳು ಮಾಡುವ ಶಮದಮಾದಿಗಳೂ ಯೋಗಾನುಷ್ಠಾನವೂ ಜ್ಞಾನೋಪದೇಶವೂ ಈ ಗುಂಪಿಗೆ ಸೇರಿಲ್ಲವೆಂದೂ ತಪ್ಪಾಗಿ ತಿಳಿದುಕೊಂಡಿರುತ್ತಾರೆ. ಜ್ಞಾನಿಯಾದವನು ಯಾವ ಆಶ್ರಮದಲ್ಲಿದ್ದರೂ ಅವನು ಮಾಡುವ ಕರ್ಮವು ಲೋಕಸಂಗ್ರಹಕ್ಕೇ ಆಗಿರುವದು. ಗೀತಾರ್ಥಸರ್ವಸ್ವವನ್ನು ನೋಡಿ.

* ಅಜ್ಞನಂತೆ ತಾನೆ ನಟಿಸಬೇಕೆಂದಾಗಲಿ ಅಜ್ಞರಿಗೆ ತಿಳವಳಿಕೆಯನ್ನು ಹೇಳಬಾರದೆಂದಾಗಲಿ ಅರ್ಥವಲ್ಲ. ಆತ್ಮಜ್ಞಾನವು ಕರ್ಮದಿಂದ ಚಿತ್ತಶುದ್ಧಿಯಾದವರಿಗೇ ಉಂಟಾಗತಕ್ಕದ್ದಾದ್ದರಿಂದ ಜ್ಞಾನಿಯಾದವನು ವ್ಯವಹಾರದೃಷ್ಟಿಯಿಂದ ಯಾವ ಆಶ್ರಮದಲ್ಲಿರುವನೋ ಆ ಕರ್ಮವನ್ನು ಉಳಿದವರಿಗೆ ಮೇಲುಪಙ್ಕ್ತಿಯಾಗಿರುವದಕ್ಕಾಗಿ ಮಾಡುತ್ತಾ ಅವರನ್ನು ಕರ್ಮದಲ್ಲಿ ತೊಡಗಿಸಬೇಕು— ಎಂದು ಭಾವ.

[ಭಾಷ್ಯ]

ಪ್ರಕೃತಿಯೆಂದರೆ ಸತ್ತ್ವ, ರಜಸ್ಸು, ತಮಸ್ಸು– ಇವುಗಳ ಸಾಮ್ಯಾವಸ್ಥೆಯಾದ* **ಪ್ರಧಾನವು.** ದೇಹೇಂದ್ರಿಯರೂಪವಾಗಿ ಪರಿಣಮಿಸಿದ [ಕಾರ್ಯಕಾರಣರೂಪೈಃ] ಈ ಪ್ರಕೃತಿಯ ಗುಣಗಳಿಂದಲೆ ಎಲ್ಲಾ ವಿಧವಾದ ಲೌಕಿಕ ಕರ್ಮಗಳೂ ಶಾಸ್ತ್ರವಿಹಿತಕರ್ಮಗಳೂ† ಮಾಡಲ್ಪಡುತ್ತಿರುವವು. ಅಹಂಕಾರ ವಿಮೂಢಾತ್ಮನು– ದೇಹೇಂದ್ರಿಯಗಳ ಗುಂಪೇ ತಾನೆಂಬುದು ಅಹಂಕಾರವು; ಈ ಅಹಂಕಾರದಿಂದ ವಿವಿಧವಾಗಿ ಎಂದರೆ ಒಗೆಬಗೆಯಿಂದ‡ ಮೂಢವಾದ ಅಂತಃಕರಣವುಳ್ಳವನು– ಎಂದರೆ ದೇಹೇಂದ್ರಿಯಗಳ ಧರ್ಮಗಳು ನನ್ನವೆಂಬ ಬುದ್ಧಿಯಿಂದ ದೇಹೇಂದ್ರಿಯಗಳೆ ತಾನೆಂದು ತಿಳಿದುಕೊಂಡಿರುವಾತನು, ಈ ತಪ್ಪು ತಿಳಿವಳಿಕೆಯಿಂದ ತನ್ನಲ್ಲಿ ಕರ್ಮಗಳಿರುವವೆಂದು§ ತಿಳಿದುಕೊಂಡು ಇವುಗಳು ಮಾಡುತ್ತಿರುವ ಕರ್ಮಗಳನ್ನು "ನಾನೇ ಮಾಡುತ್ತಿರುವೆನು" ಎಂದುಕೊಳ್ಳುತ್ತಾನೆ.

ಜ್ಞಾನಿಯಾದವನಾದರೋ ಎಂದರೆ:—

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ　　॥ ೨೮ ॥**

೨೮. ಎಲೈ ಮಹಾಬಾಹುವೆ, ಗುಣಕರ್ಮಗಳ ವಿಭಾಗಗಳ ತತ್ತ್ವವನ್ನು ಅರಿತವನು, ಗುಣಗಳು ಗುಣಗಳಲ್ಲಿ ಪ್ರವರ್ತಿಸುತ್ತಿರುವವೆಂದು ತಿಳಿದು ಆಸಕ್ತನಾಗದೆ ಇರುತ್ತಾನೆ.

[ಭಾಷ್ಯ]

ಆದರೆ ಎಲೈ ಮಹಾಬಾಹುವೆ, ಗುಣಕರ್ಮಗಳ ವಿಭಾಗಗಳ ತತ್ತ್ವವನ್ನು ಅರಿತವನು (ಹೀಗೆ ಆಸಕ್ತನಾಗುವದಿಲ್ಲ.) ಏತರ ತತ್ತ್ವವನ್ನು ಅರಿತವನು?

---

* ಗುಣಗಳು ಸೃಷ್ಟಿಕಾಲದಲ್ಲಿ ಬೇರೆ ಬೇರೆ ರೂಪದಿಂದ ಪರಿಣಮಿಸುತ್ತಲೂ ಒಂದೊಂದು ವ್ಯಕ್ತಿಯಲ್ಲಿಯೂ ಒಂದೊಂದು ಕಾಲದಲ್ಲಿ ಒಂದೊಂದರಂತೆ ಗುಣವು ಪ್ರಬಲವಾಗಿರುತ್ತಲೂ ಇರುವವೆಂದೂ ಪ್ರಲಯದಲ್ಲಿ ಇವೆಲ್ಲ ಸಮಬಲವಾಗುವವೆಂದೂ ಸಾಂಖ್ಯರು ಹೇಳುವರು.

† ಮನುಷ್ಯನು ತಾನೆ ಮಾಡುವ ಕೆಲಸಗಳು ಗುಣಗಳ ಕಾರ್ಯವಾಗಿರುವಂತೆ ಶಾಸ್ತ್ರವಿಹಿತ ಕರ್ಮಗಳೂ ಗುಣಗಳ ಕಾರ್ಯವೆ; 'ತ್ರೈಗುಣ್ಯವಿಷಯಾ ವೇದಾಃ' (೨–೪೫) ಎಂಬುದಕ್ಕೆ ಇದೇ ಅರ್ಥ.

‡ ನಾನು ನೋಡುತ್ತೇನೆ, ಕೇಳುತ್ತೇನೆ, ಬರುತ್ತೇನೆ, ಹೋಗುತ್ತೇನೆ– ಎಂದು ಮೊದಲಾದ ರೀತಿಯಿಂದ.

§ ತಾನು ಕರ್ತೃವೆಂದು ತಿಳಿದುಕೊಂಡು; ನಿಜವಾಗಿ ಆತ್ಮನು ಕರ್ತೃವಲ್ಲ. ೧೮-೧೯ನೆಯ ಶ್ಲೋಕವನ್ನು ನೋಡಿ.

ಎಂದರೆ ಗುಣಕರ್ಮಗಳ (ತತ್ತ್ವವನ್ನು ಅರಿತವನು), ಗುಣಗಳ ವಿಂಗಡವನ್ನೂ (ಅವುಗಳ) ಕೆಲಸಗಳ ವಿಂಗಡವನ್ನೂ ಸರಿಯಾಗಿ ಅರಿತವನು ಎಂದರ್ಥ. (ಅವನು) ಕರಣರೂಪವಾಗಿರುವ * ಗುಣಗಳ ವಿಷಯರೂಪವಾಗಿರುವ ಗುಣಗಳಲ್ಲಿ ಪ್ರವರ್ತಿಸುತ್ತಿರುವವು, ಆತ್ಮನೇನೂ ಪ್ರವರ್ತಿಸುವದಿಲ್ಲ— ಎಂದು ತಿಳಿದಿರುವದರಿಂದ ಆಸಕ್ತನಾಗುವದಿಲ್ಲ, (ಅವುಗಳ ಕರ್ಮದಲ್ಲಿ ತಾನೆ ಅಭಿಮಾನದಿಂದ) ಆಸಕ್ತಿಯನ್ನು ಮಾಡಿಕೊಳ್ಳುವದಿಲ್ಲ.

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜನ್ತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮನ್ದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯ ॥**

೨೯. ಪ್ರಕೃತಿಯ ಗುಣಗಳಿಂದ ಮೂಢರಾಗಿರುವವರು ಗುಣಗಳ ಕರ್ಮಗಳಲ್ಲಿ ಸಕ್ತರಾಗುತ್ತಾರೆ. ಎಲ್ಲವನ್ನೂ ಅರಿಯದ ಆ ಮಂದಬುದ್ಧಿಗಳನ್ನು ಎಲ್ಲವನ್ನೂ ತಿಳಿದಾತನು ಅಲುಗಾಡಿಸಬಾರದು.

[ಭಾಷ್ಯ]

ಆದರೆ ಯಾರು ಪ್ರಕೃತಿಯ ಗುಣಗಳಿಂದ ಪೂರ ಮೂಢರಾಗಿ ಭ್ರಾಂತರಾಗಿರುವರೋ ಆಯಾ ಫಲವನ್ನು ಪಡೆಯುವದಕ್ಕಾಗಿ ನಾವೇ† ಕರ್ಮಗಳನ್ನು ಮಾಡುತ್ತಿರುವೆವು— ಎಂದು ಗುಣಕರ್ಮಗಳಲ್ಲಿ ಆಸಕ್ತರಾಗಿರುವರೋ ಅಂಥ ಕರ್ಮಸಂಗಿಗಳು ಕರ್ಮದ ಫಲವೊಂದನ್ನೆ ಕಂಡವರೆ ಹೊರತು, ಎಲ್ಲವನ್ನೂ ‡ ಅರಿಯರು. ಆ ಮಂದಬುದ್ಧಿಯ ಜನರನ್ನು ಎಲ್ಲವನ್ನೂ ಬಲ್ಲ ಆತ್ಮಜ್ಞಾನಿಯು ತಾನೇ§ ಅಲುಗಾಡಿಸಬಾರದು. ಅವರನ್ನು ಅಲುಗಾಡಿಸುವದೆಂದರೆ ಬುದ್ಧಿಯಲ್ಲಿ ಭೇದವನ್ನು ಹುಟ್ಟಿಸುವದೆ; ಅದನ್ನು ಮಾಡಬಾರದು— ಎಂದರ್ಥ.

---

* ಇಂದ್ರಿಯಗಳೂ ಮೂರು ಗುಣಗಳ ಕಾರ್ಯ, ವಿಷಯಗಳೂ ಮೂರು ಗುಣಗಳ ಕಾರ್ಯವೆ. ಆದ್ದರಿಂದ ಇಂದ್ರಿಯಗಳು ವಿಷಯಗಳಲ್ಲಿ ಹಾತುವರಿದರೆ ಗುಣಗಳು ಗುಣಗಳ ಕಡೆಗೆ ಹೋದಂತೆ ಆಯಿತೇ ಹೊರತು, ಆತ್ಮನಲ್ಲಿ ಯಾವ ಚಲನವೂ ಉಂಟಾದಂತೆ ಆಗಲಿಲ್ಲ. (೫-೯ನೆಯ ಶ್ಲೋಕದ ಭಾಷ್ಯವನ್ನು ನೋಡಿ.)

† ನಡೆಯುವ ಕರ್ಮಗಳೆಲ್ಲ ಗುಣಗಳಿಂದ ಆಗುತ್ತಿರುವವೆ ಹೊರತು ಆತ್ಮನು ಯಾವ ಕರ್ಮವನ್ನೂ ಮಾಡುವದಿಲ್ಲ. ಹೀಗಿರುವದರಿಂದ ಅಜರೂ ನಿಜವಾಗಿ ಕರ್ಮವಿಲ್ಲದವರೇ ಆಗಿರುವರು : ಆದರೆ ಅವರಿಗೆ ಗುಣಕರ್ಮಗಳಲ್ಲಿ ಅಭಿಮಾನವಿರುವದರಿಂದ ತಾವೇ ಮಾಡುತ್ತೇವೆಂದು ತಿಳಿದಿರುವರು. ಆದ್ದರಿಂದ ಅವರನ್ನು ಕರ್ಮವು ಬೆನ್ನುಬಿಡುವದಿಲ್ಲ. (೩. ೫)

‡ ಕರ್ತೃಕರ್ಮಫಲಗಳು ಅಜ್ಞಾನಸ್ವಭಾವದಿಂದ ತೋರುತ್ತಿರುವವೆಂದೂ ನಿಜವಾಗಿ ತಾವು ಕರ್ಮಸಂಬಂಧವಿಲ್ಲದ ಆತ್ಮರೆ ಎಂದೂ ಅರಿಯರು. (೫–೧೪).

§ ಆತ್ಮಜ್ಞಾನವಿಲ್ಲದ ಮೂಢನಿಗೆ ನೀನು ಅಕರ್ತೃ ಎಂದು ಉಪದೇಶಮಾಡಿದರೆ ಕರ್ಮವನ್ನು

## ಮುಮುಕ್ಷುವಾದವನು ಹೇಗೆ ಕರ್ಮವನ್ನು ಮಾಡಬೇಕು?

ಹಾಗಾದರೆ ಕರ್ಮವನ್ನು ಮಾಡಲೇಬೇಕಾಗಿರುವ ಅಜ್ಞನು ಮುಮುಕ್ಷುವಾದರೆ ಕರ್ಮವನ್ನು ಹೇಗೆ ಮಾಡಬೇಕು? ಎಂದರೆ ಹೇಳುತ್ತೇನೆ. ಕೇಳು :—

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

೩೦. ನನ್ನಲ್ಲಿ ಕರ್ಮಗಳನ್ನೆಲ್ಲ ಪರಮಾತ್ಮಬುದ್ಧಿಯಿಂದ ಸಂನ್ಯಾಸಮಾಡಿ ಯಾವುದಾದರೊಂದು ಆಸೆಯಾಗಲಿ ಮಮಕಾರವಾಗಲಿ ಇಲ್ಲದವನಾಗಿ ಯಾವ ತಾಪವೂ ಇಲ್ಲದೆ ಯುದ್ಧಮಾಡು.

[ಭಾಷ್ಯ]

ನನ್ನಲ್ಲಿ ಎಂದರೆ ಪರಮೇಶ್ವರನೂ ಸರ್ವಜ್ಞನೂ ಸಕಲರ ಆತ್ಮನೂ ಆದ ಪರಮೇಶ್ವರನಾದ ವಾಸುದೇವನಲ್ಲಿ, ಕರ್ಮಗಳನ್ನೆಲ್ಲ ಪರಮಾತ್ಮಬುದ್ಧಿಯಿಂದ [ಅಧ್ಯಾತ್ಮಚೇತಸಾ], 'ನಾನು ಈ ಕರ್ಮಗಳನ್ನು ಮಾಡುವವನು ಈಶ್ವರದಾಸನಾಗಿ ಇವನ್ನು ಮಾಡುತ್ತಿರುವೆನು' ಎಂಬ ವಿವೇಕಬುದ್ಧಿಯಿಂದ ಸಂನ್ಯಾಸಮಾಡಿ* ಎಂದರೆ ಇಟ್ಟು, ಮತ್ತೂ ಏನೆಂದರೆ, ಯಾವುದೊಂದು ಆಶೆಯೂ ಇಲ್ಲದವನಾಗಿ (ಕರ್ಮಫಲದ) ಆಶೆಯನ್ನೆಲ್ಲ ಬಿಟ್ಟು, ಮಮಕಾರವಿಲ್ಲದವನಾಗಿ ಎಂದರೆ ನನ್ನದು ಎಂಬ ಬುದ್ಧಿಯಿಲ್ಲದವನಾಗಿ, ಯಾವ ಜ್ವರವೂ ಇಲ್ಲದೆ ಎಂದರೆ ಮನಸ್ಸಿನಲ್ಲಿ ಏನೂ ಪರಿತಾಪವಿಲ್ಲದೆ ಶೋಕವಿಲ್ಲದವನಾಗಿ ಯುದ್ಧಮಾಡು–ಎಂದರ್ಥ.

ಕರ್ಮವನ್ನು ಮಾಡಲೇಬೇಕೆಂದು ಪ್ರಮಾಣಸಹಿತವಾಗಿ ನಾನು ಯಾವುದನ್ನು ಹೇಳಿದೆನೊ ಈ ನನ್ನ ಮತವನ್ನು ಹೀಗೆಯೆ—

**ಯೇ ಮೇ ಮತಮಿದಂ ನಿತ್ಯಮನುತಿಷ್ಠನ್ತಿ ಮಾನವಾಃ ।**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ॥ ೩೧ ॥**

---

ಬಿಡುವದೇ ಉತ್ತಮವೆಂದು ಅರ್ಥಮಾಡಿಕೊಂಡು ಅಲಸನಾಗುತ್ತಾನೆ. ಜ್ಞಾನವಿಲ್ಲದೆ ಕರ್ಮವನ್ನು ಬಿಡುವದಕ್ಕಿಂತ ಕರ್ಮವನ್ನು ಮಾಡುವದೇ ಉತ್ತಮವಾದ್ದರಿಂದ (೫–೨) ಕರ್ಮವನ್ನು ಬಿಡುವಂಥ ಉಪದೇಶವನ್ನು ಅಜ್ಞರಿಗೆ ಮಾಡಬಾರದು. ಕರ್ಮವನ್ನು ಮಾಡಿ ಚಿತ್ತಶುದ್ಧಿಯಾದವರಿಗೆ ಜ್ಞಾನೋಪದೇಶವನ್ನು ಅವಶ್ಯವಾಗಿ ಮಾಡಬೇಕು. ಜ್ಞಾನಕ್ಕೆ ಅರ್ಹರಾಗಿದ್ದರೂ ಕರ್ತೃತ್ವಬುದ್ಧಿಯನ್ನೆ ಉಪದೇಶಮಾಡಬೇಕೆಂಬುದು ಈ ಶ್ಲೋಕದ ತಾತ್ಪರ್ಯವಲ್ಲ.

* ನಾನು ಮಾಡುವದೆಲ್ಲ ಭಗವತ್ಸೇವೆಯೆಂದು ಮಾಡುವದರಿಂದ ಕರ್ಮದಲ್ಲಿರುವ ಸಂಗವು ಹೋಗುವದು. ಆತ್ಮಜ್ಞಾನವಿಲ್ಲದವರು ಸಂಗತ್ಯಾಗವನ್ನು ಮಾಡುವದಕ್ಕೆ ಇದೇ ಉಪಾಯವು.

೩೧. ಯಾವ ಜನರು ಶ್ರದ್ಧೆಯಿಂದಲೂ ಅಸೂಯೆಯಿಲ್ಲದೆಯೂ ಈ ನನ್ನ ಮತವನ್ನು ಯಾವಾಗಲೂ ಅನುಷ್ಠಾನಮಾಡುವರೊ ಅವರು ಕರ್ಮಗಳಿಂದ ಬಿಡುಗಡೆಯನ್ನು ಹೊಂದುವರು.

[ಭಾಷ್ಯ]

ಯಾರು ಈ ನನ್ನ ಮತವನ್ನು [ಯಾವಾಗಲೂ] * ಅನುಷ್ಠಾನಮಾಡುವರೊ, ಯಾವ ಜನರು ಶ್ರದ್ಧೆಯಿಂದಲೂ ಎಂದರೆ ನನ್ನ ಮಾತಿನಲ್ಲಿ ವಿಶ್ವಾಸವುಳ್ಳವರಾಗಿಯೂ ಅಸೂಯೆಯಿಲ್ಲದೆಯೂ ಎಂದರೆ **ಪರಮಗುರುವಾದ**† **ವಾಸುದೇವ**ನಾದ ನನ್ನಲ್ಲಿ ಅಸೂಯೆಯನ್ನು ಮಾಡದವರಾಗಿಯೂ ‡ (ನಾನು ಹೇಳಿದಂತೆ ಮಾಡುತ್ತಾ) ಇರುವರೋ, ಹೀಗೆ ನಡೆಯುವ ಅವರೂ ಪುಣ್ಯಪಾಪಗಳೆಂಬ ಕರ್ಮಗಳಿಂದ ಬಿಡುಗಡೆಯನ್ನು ಹೊಂದುವರು.

**ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ ೩೨ ॥**

೩೨. ಆದರೆ ಯಾರು ಅಸೂಯೆಯಿಂದ ಈ ನನ್ನ ಮತವನ್ನು ಅನುಷ್ಠಾನ ಮಾಡುವದಿಲ್ಲವೊ, ಯಾವ ಜ್ಞಾನವೂ ಇಲ್ಲದೆ ವಿಮೂಢರಾಗಿರುವ ಆ ಬುದ್ಧಿಹೀನರು ಹಾಳಾದರೆಂದು ತಿಳಿಯುವನಾಗು.

[ಭಾಷ್ಯ]

ಆದರೆ ಯಾರು ಇದಕ್ಕೆ ವಿರುದ್ಧವಾಗಿದ್ದುಕೊಂಡು ಈ ನನ್ನ ಮತವನ್ನು ಅಸೂಯೆಯಿಂದ ನಿಂದಿಸುತ್ತಾ, ಅನುಷ್ಠಾನಮಾಡುವದಿಲ್ಲವೊ ಎಂದರೆ ಅನುಸರಿಸದೆ ಇರುವರೋ, ಅವರು ಯಾವ ಜ್ಞಾನವೂ ಇಲ್ಲದೆ ವಿಮೂಢರಾಗಿರುವರು, ಒಗೆಬಗೆಯಿಂದ ಭ್ರಾಂತರಾಗಿರುವರು. ಬುದ್ಧಿಯಿಲ್ಲದ ಆ ಅವಿವೇಕಿಗಳು ಹಾಳಾಗಿ ಕೆಟ್ಟುಹೋಗುವರೆಂದೆ ನಿಶ್ಚಯಿಸುವನಾಗು.

---

* ಅ॥ ನಿ॥ ಗು॥ ಪಾಠಗಳಲ್ಲಿ 'ನಿತ್ಯಂ' ಎಂಬ ಮಾತು ಇಲ್ಲ.

† ಪರಮೇಶ್ವರಾರಾಧನೆಗಾಗಿ ಕರ್ಮವನ್ನು ಮಾಡಬೇಕೆಂಬ ಭಕ್ತಿಯೋಗವನ್ನು ಭಗವಂತನೆ ಮೊದಲು ಮರೀಚ್ಯಾದಿಗಳಿಗೆ ಉಪದೇಶಿಸಿದನು. ಆದ್ದರಿಂದ ಅವನು ಪರಮಗುರುವಾದನು. ಈ ಮತಕ್ಕೆ ಭಾಗವತಮತವೆಂದು ಹೆಸರು. ಗೀತಾರ್ಥಸರ್ವಸ್ವದ ಭಕ್ತಿಯೋಗದಲ್ಲಿ ಇದನ್ನು ವಿಸ್ತರಿಸಿ ಹೇಳಿರುತ್ತದೆ.

‡ ಕರ್ಮಬಂಧದಿಂದ ಬಿಡುಗಡೆಯಾಗುವದಕ್ಕೆ ಸಂಗತ್ಯಾಗಫಲತ್ಯಾಗಪೂರ್ವಕವಾಗಿ ಕರ್ಮವನ್ನು ಮಾಡುವದೇ ಉಪಾಯವು ; ಸಂಗತ್ಯಾಗಫಲತ್ಯಾಗಗಳಿಗೆ ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುವದೇ ಉಪಾಯವು. ಆದ್ದರಿಂದ ಈಶ್ವರವಾಕ್ಯದಲ್ಲಿ ವಿಶ್ವಾಸವಿದ್ದವನಿಗೆ ಕರ್ಮಬಂಧದ ಬಿಡುಗಡೆಯಾಗುವದು ಸುಲಭವಾಗಿರುವದು.

## ಜ್ಞಾನಿಯಾದವನು ಪ್ರಕೃತಿಯ ವಶನಾಗದೆ ಸ್ವಧರ್ಮವನ್ನು ಮಾಡಬೇಕು

ಹಾಗಾದರೆ ಜನರು ನಿನ್ನ ಮತವನ್ನು ಏಕೆ ಅನುಸರಿಸುವದಿಲ್ಲ ? ಅವರು ಪರಧರ್ಮವನ್ನು ಅನುಸರಿಸುವದೂ ಸ್ವಧರ್ಮವನ್ನು ಅನುಸರಿಸದೆ ಇರುವದೂ ಏಕೆ ? ನಿನಗೆ ವಿರೋಧಿಗಳಾಗಿರುವ ಅವರು ನಿನ್ನ ಅಪ್ಪಣೆಯನ್ನು ಮೀರಿದ ತಪ್ಪಿಗೆ ಗುರಿಯಾದೇವೆಂದು ಹೆದರುವದಿಲ್ಲವೇಕೆ ? ಎಂದರೆ ಇದಕ್ಕೆ ಹೇಳುತ್ತಾನೆ :—

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

೩೩. ತಿಳಿವಳಿಕೆಯುಳ್ಳವನು ಕೂಡ ತನ್ನ ಪ್ರಕೃತಿಗೆ ಅನುರೂಪವಾಗಿ ವರ್ತಿಸುತ್ತಾನೆ, ಪ್ರಾಣಿಗಳು (ತಮ್ಮ ತಮ್ಮ) ಪ್ರಕೃತಿಯನ್ನೆ ಅನುಸರಿಸುತ್ತವೆ; (ಹೀಗಿರುವಲ್ಲಿ) ನಿಗ್ರಹವು ಏನು ಮಾಡೀತು ?

[ ಭಾಷ್ಯ ]

ಅನುರೂಪವಾಗಿಯೇ ವರ್ತಿಸುತ್ತಾನೆ. ಯಾವದಕ್ಕೆ (ಅನುರೂಪವಾಗಿ)? ಎಂದರೆ ತನ್ನ ಪ್ರಕೃತಿಗೆ. ಈ ಜನ್ಮದ ಪ್ರಾರಂಭದಲ್ಲಿ ತೋರತೊಡಗಿಕೊಳ್ಳುತ್ತ ಪೂರ್ವಜನ್ಮಕೃತವಾದ ಧರ್ಮಾಧರ್ಮಗಳ ಸಂಸ್ಕಾರಕ್ಕೆ **ಪ್ರಕೃತಿ**ಯೆಂದು† ಹೆಸರು. ಆ ಪ್ರಕೃತಿಗೆ ಅನುಗುಣವಾಗಿಯೆ ಪ್ರತಿಯೊಬ್ಬ ಜೀವನೂ, ತಿಳಿದವನು ಕೂಡ, ವರ್ತಿಸುತ್ತಾನೆ ; ಇನ್ನು ಮೂಢನು (ಪ್ರಕೃತಿಯಂತೆ ಕೆಲಸ ಮಾಡುತ್ತಾನೆಂದು) ಹೇಳತಕ್ಕದ್ದೇನಿದೆ ? ಆದ್ದರಿಂದ ಪ್ರಾಣಿಗಳು ತಮ್ಮ ತಮ್ಮ ಪ್ರಕೃತಿಯನ್ನೆ ಅನುಸರಿಸುವರು. ನಾನಾಗಲಿ ಮತ್ತೊಬ್ಬನಾಗಲಿ ಹೀಗೆ ಮಾಡಬೇಡಿರೆಂದು ತಡೆಯುವ ನಿಗ್ರಹವು ಏನು ಮಾಡೀತು ?

ಪ್ರತಿಯೊಬ್ಬ ಜೀವನೂ ತನ್ನ ಪ್ರಕೃತಿಗನುಗುಣವಾಗಿಯೆ ಕೆಲಸ ಮಾಡುತ್ತಾನಾದರೆ, ಪ್ರಕೃತಿಯು ಇಲ್ಲದವನು ಒಬ್ಬನೂ ಇಲ್ಲದ್ದರಿಂದ, ಪೌರುಷಕ್ಕೆ

---

† 'ಪ್ರಕೃತಿರ್ನಾಮ ಪೂರ್ವಕೃತಧರ್ಮಾಧರ್ಮಾದಿಸಂಸ್ಕಾರೋ ವರ್ತಮಾನಜನ್ಮಾದಾವಭಿವ್ಯಕ್ತಃ ಸಾ ಪ್ರಕೃತಿಃ'— ಎಂಬ ವಾಕ್ಯವು ಎಲ್ಲಾ ಪಾಠಗಳಲ್ಲಿಯೂ ಇದೆ. ಇಲ್ಲಿ 'ಆದಿ' ಎಂಬ ಮಾತು ಲೇಖಕರ ಕೈತಪ್ಪಿನಿಂದ ಬಿದ್ದಿರಬೇಕೆಂದು ತೋರುತ್ತದೆ. ಮಾಡುವ ಕರ್ಮವು ಧರ್ಮ, ಅಧರ್ಮ— ಈ ಎರಡರಲ್ಲಿ ಒಂದಾಗಿಯೆ ಇರುತ್ತದೆ; ಆದ್ದರಿಂದ 'ಆದಿ' ಎಂಬ ಮಾತು ಅವಶ್ಯವಿಲ್ಲ. 'ಪ್ರಕೃತಿರ್ನಾಮ', 'ಸಾ ಪ್ರಕೃತಿಃ'— ಎಂಬ ಎರಡು ಮಾತುಗಳಲ್ಲಿ ಒಂದು ಇದ್ದರೆ ಸಾಕಾಗಿದೆ. ಅಂತೂ ಇಲ್ಲಿ ಭಾಷ್ಯಪಙ್ಕ್ತಿಯು ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುವದು. ಒಟ್ಟು ಅಭಿಪ್ರಾಯಕ್ಕೇನೂ ಇದರಿಂದ ಹಾನಿಯಾಗಿಲ್ಲ.

ವಿಷಯವೇ ಇಲ್ಲದಂತಾಗಿ ಶಾಸ್ತ್ರವು ವ್ಯರ್ಥವಾಗುವದಲ್ಲ? ಎಂದರೆ ಇದಕ್ಕೆ ಉತ್ತರ:

**ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪನ್ಥಿನೌ ॥ ೩೪ ॥**

೩೪. ಒಂದೊಂದು ಇಂದ್ರಿಯಕ್ಕೂ ತನ್ನ ಅರ್ಥದಲ್ಲಿ ರಾಗದ್ವೇಷಗಳು ವ್ಯವಸ್ಥಿತವಾಗಿರುವವು. ಇವೆರಡರ ವಶನಾಗಬಾರದು. ಇವೇ ತನಗೆ ಶತ್ರುಗಳು.

[ಭಾಷ್ಯ]

ಒಂದೊಂದು ಇಂದ್ರಿಯಕ್ಕೆ ಎಂದರೆ ಎಲ್ಲಾ ಇಂದ್ರಿಯಗಳಿಗೂ, ಅರ್ಥದಲ್ಲಿ ಎಂದರೆ ಶಬ್ದವೇ ಮುಂತಾದ ವಿಷಯದಲ್ಲಿ– ಬೇಕಾದ ವಿಷಯವಾದರೆ ರಾಗವು, ಬೇಡದ್ದಾದರೆ ದ್ವೇಷವು ಎಂದೀ ಸರಿಯಲ್ಲಿ ಪ್ರತಿಯೊಂದು ವಿಷಯದಲ್ಲಿಯೂ– ರಾಗದ್ವೇಷಗಳು [ವ್ಯವಸ್ಥಿತವಾಗಿರುವವು.]* ಅವಶ್ಯವಾಗಿ ಉಂಟಾಗಿಯೆ ಆಗುವವು. ಹೀಗಿರುವಲ್ಲಿ ಪುರುಷಪ್ರಯತ್ನಕ್ಕೂ ಶಾಸ್ತ್ರಕ್ಕೂ ವಿಷಯವೇನೆಂದರೆ ಇದನ್ನು ಕೇಳು: ಶಾಸ್ತ್ರದ ಅರ್ಥವನ್ನು ತಿಳಿದು ನಡೆಯಬೇಕೆನ್ನುವವನು ಮೊದಲೆ ರಾಗದ್ವೇಷಗಳನ್ನು (ಗೆದ್ದು ಅವುಗಳಿಗೆ) ವಶನಾಗದೆ ಇರಬೇಕು. ಏಕೆಂದರೆ ಪುರುಷನ ಪ್ರಕೃತಿಯೆಂಬುವದು ರಾಗದ್ವೇಷಗಳನ್ನು ಮುಂದುಮಾಡಿಕೊಂಡೇ ಮನುಷ್ಯನನ್ನು ತನ್ನ ಕಾರ್ಯದಲ್ಲಿ ತೊಡಗಿಸುವದು; ಆಗ ಅವನು ತನ್ನ ಧರ್ಮವನ್ನು ಕೈಬಿಟ್ಟು ಪರರ ಧರ್ಮವನ್ನು ಮಾಡುವದಕ್ಕೆ ಹೋಗುತ್ತಾನೆ. ಆದರೆ ಯಾವಾಗ ಮನುಷ್ಯನು ರಾಗದ್ವೇಷಗಳನ್ನು ಅವುಗಳ ಪ್ರತಿಪಕ್ಷದಿಂದ† ವಶಮಾಡಿಕೊಳ್ಳುವನೋ, ಆಗ ಶಾಸ್ತ್ರದೃಷ್ಟಿಯುಳ್ಳವನಾಗುವನು, ಪ್ರಕೃತಿಗೆ ವಶನಾಗುವದಿಲ್ಲ. ಆದ್ದರಿಂದ ಆ ರಾಗದ್ವೇಷಗಳಿಗೆ ವಶನಾಗಬಾರದು. ಏಕೆಂದರೆ ಇವೆರಡೇ ಇವನಿಗೆ ಶತ್ರುಗಳು, ಎಂದರೆ ದಾರಿಯಲ್ಲಿ ‡ ಅಡ್ಡಗಟ್ಟುವ ಕಳ್ಳರ ಹಾಗೆ ಶ್ರೇಯೋಮಾರ್ಗಕ್ಕೆ ಅಡ್ಡಿಮಾಡುತ್ತವೆ– ಎಂದರ್ಥ.

ಈ ವಿಷಯದಲ್ಲಿ ರಾಗದ್ವೇಷಗಳ ಪ್ರೇರಣೆಗೆ ಒಳಪಟ್ಟಾತನು ಶಾಸ್ತ್ರಾರ್ಥವನ್ನು ತಪ್ಪಾಗಿ ತಿಳಿದುಕೊಂಡು ಪರಧರ್ಮವೂ ಧರ್ಮವೇ ಆಗಿರುವದರಿಂದ ಮಾಡತಕ್ಕದ್ದೆ ಎಂದು (ಯೋಚಿಸಬಹುದು;) ಆದರೆ ಇದು ಸರಿಯಲ್ಲ.

---

* ವ್ಯವಸ್ಥಿತೌ– ಎಂಬ ಮೂಲದ ಮಾತು ಭಾಷ್ಯದಲ್ಲಿ ಯಾವ ಪುಸ್ತಕದಲ್ಲಿಯೂ ಕಂಡುಬರುವದಿಲ್ಲ.

† ರಾಗಕ್ಕೆ ಪ್ರತಿಪಕ್ಷವು ವೈರಾಗ್ಯವು, ದ್ವೇಷಕ್ಕೆ ಪ್ರತಿಪಕ್ಷವು ಪ್ರೀತಿ. ಪ್ರತಿಪಕ್ಷಭಾವನೆಯ ವಿಷಯದಲ್ಲಿ ಯೋಗಸೂತ್ರ (೨-೩೩, ೩೪) ಗಳನ್ನು ನೋಡಿ.

‡ 'ಪಥಿ' ಎಂಬ ಮಾತು ಸ॥ ಗು॥ ಪಾಠಗಳಲ್ಲಿಲ್ಲ, ಮ॥ ಪಾಠದಲ್ಲಿ 'ಪಥಃ' ಎಂದಿದೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

೩೫. ತನ್ನ ಧರ್ಮದಲ್ಲಿ ಗುಣವಿಲ್ಲದಿದ್ದರೂ ಚೆನ್ನಾಗಿ ಮಾಡಿದ ಮತ್ತೊಬ್ಬನ ಧರ್ಮಕ್ಕಿಂತ ಅದು ಉತ್ತಮವಾದದ್ದು. ತನ್ನ ಧರ್ಮದಲ್ಲಿ ಮರಣವು ಲೇಸು, ಮತ್ತೊಬ್ಬನ ಧರ್ಮವು ಭಯವನ್ನುಂಟುಮಾಡತಕ್ಕದ್ದು.

[ ಭಾಷ್ಯ ]

ತನ್ನ ಧರ್ಮವನ್ನು ಅಷ್ಟು ಚೆನ್ನಾಗಿ ಮಾಡದಿದ್ದರೂ ಅದರಲ್ಲಿ ಗುಣವಿಲ್ಲದಿದ್ದರೂ (ಚಿಂತೆಯಿಲ್ಲ,) ಮತ್ತೊಬ್ಬನ ಧರ್ಮವನ್ನು ಚೆನ್ನಾಗಿ ಮಾಡುವದಕ್ಕಿಂತ, ಉತ್ತಮಗುಣವಿರುವಂತೆ ಮಾಡುವದಕ್ಕಿಂತ (ಆ ಸ್ವಧರ್ಮವೆ) ಉತ್ತಮ. ತನ್ನ ಧರ್ಮದಲ್ಲಿದ್ದು ಸಾಯುವದೇ ಮತ್ತೊಬ್ಬನ ಧರ್ಮದಲ್ಲಿದ್ದು ಬದುಕಿರುವದಕ್ಕಿಂತ ಲೇಸು. ಏಕೆಂದರೆ, ಮತ್ತೊಬ್ಬನ ಧರ್ಮವೆಂಬುದು ಭಯವನ್ನುಂಟು ಮಾಡತಕ್ಕದ್ದು, ಅಂದರೆ ನರಕವೆ ಮುಂತಾದ ಅಪಾಯವನ್ನುಂಟುಮಾಡತಕ್ಕದ್ದು.

## ಕಾಮವೆ ಅಧರ್ಮಕ್ಕೆ ಮೂಲ

"ವಿಷಯಗಳನ್ನು ಧ್ಯಾನಿಸುತ್ತಿರುವ ಪುರುಷನಿಗೆ" (೨-೬೨) "ರಾಗ ದ್ವೇಷಗಳೆ ಇವನಿಗೆ ಶತ್ರುಗಳು" (೩-೩೪) ಎಂಬ ಶ್ಲೋಕಗಳಲ್ಲಿ ಅನರ್ಥಕ್ಕೆ ಮೂಲವು ಇಂಥದ್ದೆಂಬದನ್ನು (ಹಿಂದೆಯೆ) ಹೇಳಿರುತ್ತದೆಯಾದರೂ ಬೇರೆ ಬೇರೆ ಕಡೆಯಲ್ಲಿ ಸಾಮಾನ್ಯವಾಗಿ ಹೇಳಿರುವ * ಆ ವಿಷಯವನ್ನು ಒಕ್ಕಡೆಯಲ್ಲಿ ನಿಶ್ಚಿತವಾಗಿ ಇದೇ ಎಂದು ತಿಳಿದುಕೊಳ್ಳುವದಕ್ಕಾಗಿ ಅರ್ಜುನನು (ಮುಂದಿನ ಶ್ಲೋಕದಲ್ಲಿ ಹೇಳಿರುವಂತೆ) ಕೇಳಿರುತ್ತಾನೆ. ಅದನ್ನು ತಿಳಿದುಕೊಂಡರೆ ಅದರ ನಾಶಕ್ಕೆ ತಾನು ಪ್ರಯತ್ನಮಾಡಬಹುದೆಂಬುದೇ (ಆತನ ಪ್ರಶ್ನೆಯ ಉದ್ದೇಶವು.)

**ಅರ್ಜುನ ಉವಾಚ :—**
**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

ಅರ್ಜುನನು ಹೇಳಿದ್ದೇನೆಂದರೆ :—

೩೬. ಹಾಗಾದರೆ ಎಲೈ ವಾರ್ಷ್ಣೇಯನೆ, ಈ ಮನುಷ್ಯನು ತನಗೆ ಇಚ್ಛೆಯಿಲ್ಲದಿದ್ದರೂ ಏತರಿಂದ ಪ್ರೇರಿತನಾಗಿ ಬಲಾತ್ಕಾರವಾಗಿ ಕಟ್ಟುವಡೆದು ಪಾಪವನ್ನು ಮಾಡುತ್ತಿರುವನು ?

---

* "ಯದುಕ್ತಂ ತತ್ಸಂಕ್ಷಿಪ್ತಂ" ಎಂಬ ಮ॥ ಪಾಠವನ್ನಿಟ್ಟುಕೊಂಡಿದೆ.

[ ಭಾಷ್ಯ ]

ಹಾಗಾದರೆ ರಾಜನಿಂದ ಕಟ್ಟುವಡೆದ (ಜಟ್ಟಿಯು) ಆತನಂತೆ ಈ ಪುರುಷನು ಯಾವ ಕಾರಣದಿಂದ ಪ್ರೇರಿತನಾಗಿ, ಪಾಪವನ್ನು ಮಾಡುತ್ತಿರುವನು? ತನಗೇನೊ ಹಾಗೆ ಮಾಡಬೇಕೆಂಬುದು ಇಷ್ಟವಲ್ಲದಿದ್ದರೂ, ಎಲೈ ವಾರ್ಷ್ಣೇಯನೆ, ವೃಷ್ಣಿಕುಲದಲ್ಲಿ ಹುಟ್ಟಿದಾತನೆ, ಮೇಲೆ ಕೇಳಿದ ದೃಷ್ಟಾಂತದಲ್ಲಿ ರಾಜಾಜ್ಞೆಗೆ ಕಟ್ಟುಬಿದ್ದ ಜಟ್ಟಿಯುವನ ಹಾಗೆ (ಪಾಪವನ್ನು ಮಾಡುತ್ತಿರುವನಲ್ಲ !)

**ಶ್ರೀಭಗವಾನುವಾಚ :—**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭ ॥**

೩೭. ಇದೇ ಕಾಮವು, ಇದೇ ಕ್ರೋಧವು ; ಇದು ರಜೋಗುಣದಿಂದ ಹುಟ್ಟಿದ್ದು, ಎಷ್ಟಾದರೂ ತಿನ್ನುವದು, ಮಹಾಪಾಪಿಯು ; ಇದೇ ಇಲ್ಲಿ ವೈರಿಯೆಂದು ತಿಳಿ.

[ ಭಾಷ್ಯ ]

ನೀನು * ಕೇಳುತ್ತಿರುವ ಆ ವೈರಿಯು ಸಕಲ ಅನರ್ಥಗಳಿಗೂ ಕಾರಣನಾಗಿರುವ ಆ ವೈರಿಯು, ಯಾವದೆಂಬುದನ್ನು ಹೇಳುತ್ತೇನೆ ಕೇಳು– ಎಂದು ಶ್ರೀಭಗವಂತನು ಹೇಳುತ್ತಿದ್ದಾನೆ. "ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ । ವೈರಾಗ್ಯಸ್ಯಾಥ ಮೋಕ್ಷಸ್ಯ ಷಣ್ಣಾಂ ಭಗ ಇತೀರಣಾ" ಪೂರ್ಣವಾದ ಒಡೆತನವು, ಧರ್ಮವು, ಕೀರ್ತಿಯು, ಸಂಪತ್ತು, ವೈರಾಗ್ಯವು, ಮೋಕ್ಷವು– ಈ ಆರು ಗುಣಗಳಿಗೆ '**ಭಗ**' ಎಂದು ಹೆಸರು– ಎಂಬ ವಿಷ್ಣುಪುರಾಣೋಕ್ತಿಯಂತೆ ಐಶ್ವರ್ಯವೇ ಮುಂತಾದ ಆರು ಗುಣಗಳು ಯಾವಾಗಲೂ ಸ್ವಲ್ಪವೂ ಕುಂದಿಲ್ಲದೆ ಎಲ್ಲವೂ ಸೇರಿ ಇರುವದರಿಂದಲೂ, "ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಂ। ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥" (ವಿ. ಪು.) (ಪ್ರಾಣಿಗಳ ಉತ್ಪತ್ತಿಯನ್ನೂ ಪ್ರಲಯವನ್ನೂ ಆಗುಹೋಗುಗಳನ್ನೂ ವಿದ್ಯೆಯನ್ನೂ ಅವಿದ್ಯೆಯನ್ನೂ ಬಲ್ಲವನಿಗೆ 'ಭಗವಂತ' ನೆಂಬ ಹೆಸರು) ಎಂಬ ವಚನದಲ್ಲಿ ಹೇಳಿರುವಂತೆ ಉತ್ಪತ್ತಿಯೇ ಮುಂತಾದ್ದರ ವಿಷಯದ ಪೂರ್ಣಜ್ಞಾನವು ಇರುವದರಿಂದಲೂ ವಾಸುದೇವನಿಗೆ **ಭಗವಂತ**ನೆಂದು† ಹೆಸರು.

---

* 'ತ್ವಂ' ಎಂಬ ಮಾತು ಒಂದೇ ಸಲ ಇರುವ ಮ॥ ಪಾಠವನ್ನು ಅನುಸರಿಸಿದೆ.

† ಭಗವಂತನು ತಾನು ಕಾಮಾದಿಗಳ ವಶನಲ್ಲದ ನಿತ್ಯಮುಕ್ತನು, ಕಾಮಾದಿಗಳು ಪ್ರಾಣಿಗಳಿಗೆ

ಇದೇ ಕಾಮವು, ಸಕಲ ಜನರಿಗೂ ಶತ್ರುವು ಇದೇ; ಇದರಿಂದಲೆ ಪ್ರಾಣಿಗಳಿಗೆ ಸಕಲ ಅನರ್ಥಗಳೂ ಉಂಟಾಗುತ್ತಿರುವವು. ಈ ಕಾಮಕ್ಕೆ ಏತರಿಂದಲಾದರೂ ತಡೆಯಾದರೆ ಇದೆ ಕ್ರೋಧರೂಪವಾಗಿ ಪರಿಣಮಿಸುವದು; ಆದ್ದರಿಂದ ಕ್ರೋಧವೂ, ಇದೇ. ಇದು ರಜೋಗುಣಸಮುದ್ಭವವಾದದ್ದು, ಎಂದರೆ ರಜಸ್ಸೆಂಬ ಗುಣದಿಂದ ಹುಟ್ಟಿರುವದು; ಅಥವಾ ('ರಜೋಗುಣಸಮುದ್ಭವಃ' ಎಂಬ ಮಾತಿಗೆ) ರಜೋಗುಣಕ್ಕೆ ಕಾರಣವಾಗಿರುವದು (ಎಂದೂ ಅರ್ಥ ಮಾಡಬಹುದು.) ಏಕೆಂದರೆ ಕಾಮವು ಹುಟ್ಟಿದರೆ ಅದು ರಜಸ್ಸನ್ನುಂಟು ಮಾಡಿ* ಮನುಷ್ಯನನ್ನು ಕರ್ಮದಲ್ಲಿ ತೊಡಗಿಸುವದು. ಹೇಗೆಂದರೆ ರಜೋಗುಣದ ಕಾರ್ಯವಾದ ಸೇವೆಯೇ ಮುಂತಾದ ಕೆಲಸಗಳಲ್ಲಿ ತೊಡಗಿದವರು "ಆಸೆಯು ನನ್ನಿಂದ ಈ ಕೆಲಸವನ್ನು ಮಾಡಿಸಿತಲ್ಲ!" ಎಂದು ಗೋಳಾಡುತ್ತಿರುವದನ್ನು ನಾವೆಲ್ಲರೂ ಕೇಳಿರುತ್ತೇವೆ. (ಈ ಕಾಮವು) ಮಹಾಶನವು, ಎಂದರೆ ಎಷ್ಟಾದರೂ ತಿಂದು ತೇಗುತ್ತಿರುವದು. ಆದ್ದರಿಂದಲೆ ಇದು ಮಹಾಪಾಪಿಯು; ಕಾಮದ† ಪ್ರೇರಣೆಯಿಂದಲ್ಲವೆ ಜೀವನು ಪಾಪವನ್ನು ಮಾಡುವದು? ಆದ್ದರಿಂದ ಈ ಕಾಮವೇ ಈ ಸಂಸಾರದಲ್ಲಿ (ಎಲ್ಲರಿಗೂ) ವೈರಿಯೆಂದು ತಿಳಿ.

ಇದು ಹೇಗೆ ವೈರಿಯು ಎಂಬುದನ್ನು ದೃಷ್ಟಾಂತಗಳಿಂದ ಸ್ಪಷ್ಟಗೊಳಿಸುತ್ತಾನೆ:—

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ ೩೮ ॥**

೩೮. ಬೆಂಕಿಯು ಹೊಗೆಯಿಂದ ಮುಚ್ಚಿಕೊಂಡಿರುವಂತೆಯೂ ಕನ್ನಡಿಯು ಕೊಳೆಯಿಂದ ಮುಚ್ಚಿಕೊಂಡಿರುವಂತೆಯೂ ಗರ್ಭವು ಮೇಲುಪೊರೆಯಿಂದ ಮುಚ್ಚಿಕೊಂಡಿರುವಂತೆಯೂ ಇದು ಇದರಿಂದ ಮುಚ್ಚಿಕೊಂಡಿರುವದು.

[ ಭಾಷ್ಯ ]

ತನ್ನೊಡನೆ ಹುಟ್ಟಿರುವ ಪ್ರಕಾಶವಿಲ್ಲದ ಹೊಗೆಯಿಂದ ಪ್ರಕಾಶರೂಪವಾದ ಬೆಂಕಿಯು ಮುಚ್ಚಿಕೊಂಡಿರುವಂತೆಯೂ ಕನ್ನಡಿಯು ಕೊಳೆಯಿಂದ‡ ಮುಚ್ಚಿ

---

ಹೇಗೆ ಉಂಟಾಗುವವೆಂಬುದನ್ನೂ ಹೇಗೆ ಅವುಗಳ ನಾಶವಾಗುವವೆಂಬುದನ್ನೂ ಬಲ್ಲನು. ಇದನ್ನು ಸೂಚಿಸುವದಕ್ಕೆ ಭಗವಂತನೆಂಬ ಮಾತು ಇಲ್ಲಿ ಬಂದಿದೆ ಎಂದು ಭಾವವು.

* ರಜಸ್ಸನ್ನು ಹೊಸದಾಗಿ ಹುಟ್ಟಿಸುವವೆಂದು ಅರ್ಥವಲ್ಲ, ರಜೋಗುಣವನ್ನು ಉದ್ರೇಕಿಸುವದೆಂದರ್ಥ. † 'ಕಾಮಃ ಕರ್ತಾ ನಾಹಂ ಕರ್ತಾ, ಕಾಮಃ ಕಾರಯಿತಾ ನಾಹಂ ಕಾರಯಿತಾ' ಎಂಬ (ತೈ. ಆ.) ಶ್ರುತಿಯ ಸೂಚನೆ.

‡ ಪೂರ್ವದಲ್ಲಿ ಹಿತ್ತಾಳೆ ಮುಂತಾದ ಲೋಹಗಳಿಂದ ಕನ್ನಡಿಯನ್ನು ಮಾಡುತ್ತಿದ್ದರು. ಅದರ

ಕೊಂಡಿರುವಂತೆಯೂ ಜರಾಯುವೆಂಬ ಮೇಲುಪೊರೆಯಿಂದ ಗರ್ಭವು ಮುಚ್ಚಿಕೊಂಡಿರುವಂತೆಯೂ ಇದು ಆ (ಕಾಮದಿಂದ) ಮುಚ್ಚಿಕೊಂಡಿರುವದು.

ಕಾಮದಿಂದ ಮುಚ್ಚಿಕೊಂಡಿರುವದೆಂದು ನೀನು ಹೇಳಿದ 'ಇದು' ಎಂಬುದು ಯಾವದು ? ಎಂದರೆ ಹೇಳುತ್ತಾನೆ :—

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

೩೯. ಎಲೈ ಕೌಂತೇಯನೆ, ತುಂಬುವದಕ್ಕಾಗದೆ ಸಾಕೆನಿಸದೆ ಜ್ಞಾನಿಗೆ ನಿತ್ಯವೈರಿಯಾಗಿರುವ ಈ ಕಾಮವೆಂಬುದರಿಂದ ಜ್ಞಾನವು ಮುಚ್ಚಿಕೊಂಡಿರುವದು.

[ ಭಾಷ್ಯ ]

ಇದರಿಂದ ಜ್ಞಾನವು ಮುಚ್ಚಿಕೊಂಡಿರುವದು *. ಇದು ಜ್ಞಾನಿಗೆ ನಿತ್ಯವೈರಿಯಾಗಿರುವದು. ಏಕೆಂದರೆ ಜ್ಞಾನಿಯು 'ಇದು ನನ್ನನ್ನು ಅನರ್ಥದಲ್ಲಿ ತೊಡಗಿಸುತ್ತದೆ' ಎಂದು ಮೊದಲೆ ತಿಳಿದುಕೊಂಡಿರುವನು, (ಆದರಿಂದ ಅವನು) ಯಾವಾಗಲೂ ದುಃಖಿಯಾಗಿರುವನು. ಆದ್ದರಿಂದ ಇದು ಜ್ಞಾನಿಗೆ ನಿತ್ಯವೈರಿಯು, ಮೂರ್ಖನಿಗೆ ನಿತ್ಯವೈರಿಯಲ್ಲ. ಆ (ಮೂರ್ಖನು) ಕಾಮವೆಂಬುದನ್ನು ಬಯಕೆಯುಂಟಾದ ಕಾಲದಲ್ಲಿ ಮಿತ್ರನೆಂದು ಬಗೆದು ಅದರಿಂದಾದ ದುಃಖವು ಬಂದೊದಗಿದ ಮೇಲೆ 'ಅಯ್ಯೋ, ನಾನು ಬಯಕೆಯಿಂದ ಈ ದುಃಖವನ್ನು ಹೊಂದಿದೆನು!' ಎಂದು ತಿಳಿದುಕೊಳ್ಳುವನೆ ಹೊರತು ಮೊದಲೆ ತಿಳಿದುಕೊಂಡಿರುವದಿಲ್ಲ. ಆದ್ದರಿಂದ ಇದು ಜ್ಞಾನಿಗೇ † ನಿತ್ಯವೈರಿಯು. ಈ ವೈರಿಯ ಸ್ವರೂಪವೇನು? ಎಂದರೆ ಇಚ್ಛೆಯೆ ಇದಕ್ಕೆ ರೂಪವು. ಇದು ತುಂಬುವದಕ್ಕಾಗುವದಲ್ಲ, ಇದಕ್ಕೆ (ಹಿಡಿಯುವಷ್ಟು ವಿಷಯಗಳನ್ನು) ತುಂಬುವದು ಬಲುಕಷ್ಟವು. ಮತ್ತು ಇದಕ್ಕೆ 'ಸಾಕು, ಬೇಕಾದಷ್ಟು ಆಯಿತು'– ಎಂಬುದೇ ಇಲ್ಲ.

---

ಮೇಲೆ ಧೂಳಿಕೂಡುವದು, ತುಕ್ಕುಹಿಡಿಯುವದು– ಮುಂತಾದ ಕಾರಣದಿಂದ ಅದು ಮಲಿನವಾಗುತ್ತಿತ್ತು. ಆಗ ಇಟ್ಟಿಗೆಯ ಪುಡಿ ಮುಂತಾದ್ದನ್ನು ಹಾಕಿ ಅದನ್ನು ಉಜ್ಜುತ್ತಿದ್ದರು.

* ಕಾಮವು ಇರುವಾಗ ವಿವೇಕವು ತೋರಿಕೊಳ್ಳುವದಿಲ್ಲ ; ಆದ್ದರಿಂದ ಕಾಮವು ಅದನ್ನು ಮುಸುಕಿಕೊಂಡಿರುತ್ತದೆ ಎಂಬ ರೂಪಕವನ್ನು ಪ್ರಯೋಗಿಸಿದೆ.

† ಜ್ಞಾನಿಯೆಂದರೆ ವಿವೇಕಿಯಾದ ಪುರುಷನು. ಆತ್ಮಜ್ಞಾನಿಗೆ ಕಾಮವೇ ಆಗುವದಿಲ್ಲವಾದ್ದರಿಂದ ಪರಮಾರ್ಥಜ್ಞಾನಿಯೆಂದು ಅರ್ಥಮಾಡಬಾರದು.

## ಕಾಮವನ್ನು ಜಯಿಸುವ ಬಗೆ

ಕಾಮವು ಯಾವದನ್ನು ಆಶ್ರಯಿಸಿಕೊಂಡು ಜ್ಞಾನವನ್ನು ಮುಚ್ಚಿ ಸರ್ವ ಜನರಿಗೂ ವೈರಿಯಾಗಿರುವದು ಎಂಬುದನ್ನು ಈಗ ಹೇಳುತ್ತಾನೆ. ಏಕೆಂದರೆ ಶತ್ರುವಿನ ಆಶ್ರಯವನ್ನು ತಿಳಿದರೆ ಶತ್ರುವನ್ನು ಕೊಲ್ಲುವದಕ್ಕೆ ಆಗುತ್ತದೆ.

**ಇನ್ದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

೪೦. ಇಂದ್ರಿಯಗಳು, ಮನಸ್ಸು, ಬುದ್ಧಿ – ಇವೇ ಇದಕ್ಕೆ ಆಶ್ರಯವೆನಿಸಿರುವವು. ಇವುಗಳಿಂದ ಜ್ಞಾನವನ್ನು ಮುಸುಕಿಕೊಂಡು ಇದು ದೇಹಿಯನ್ನು ಮೋಹಗೊಳಿಸುತ್ತಿರುವದು.

[ ಭಾಷ್ಯ ]

ಇಂದ್ರಿಯಗಳು, ಮನಸ್ಸು, ಬುದ್ಧಿ– ಇವೇ ಕಾಮಕ್ಕೆ ಅಧಿಷ್ಠಾನವು ಎಂದರೆ ಆಶ್ರಯವೆನಿಸಿರುವವು. ಈ ಇಂದ್ರಿಯಗಳೇ ಮುಂತಾದ ಆಶ್ರಯಗಳಿಂದ ಜ್ಞಾನವನ್ನು ಮುಚ್ಚಿಕೊಂಡು ದೇಹಿಯನ್ನು ಎಂದರೆ ಶರೀರಧಾರಿಯಾದ ಜೀವನನ್ನು ಇದು ಎಂದರೆ ಕಾಮವು ಬಗೆಬಗೆಯಾಗಿ ಮೋಹಗೊಳಿಸುತ್ತಿರುವದು.

ಹೀಗಿರುವದರಿಂದ—

**ತಸ್ಮಾತ್ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹೀಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥**

೪೧. ಆದ್ದರಿಂದ ಎಲೈ ಭರತಶ್ರೇಷ್ಠನೆ, ನೀನು ಮೊದಲು ಇಂದ್ರಿಯಗಳನ್ನು ಬಿಗಿಹಿಡಿದು ಜ್ಞಾನವಿಜ್ಞಾನಗಳನ್ನು ನಾಶಗೊಳಿಸುವ ಈ ಪಾಪಿಯನ್ನು ಕಿತ್ತೊಗೆದುಬಿಡು.

[ ಭಾಷ್ಯ ]

ಆದ್ದರಿಂದ ನೀನು ಇಂದ್ರಿಯಗಳನ್ನು ಎಲ್ಲಕ್ಕೂ ಮೊದಲೆ ಬಿಗಿಹಿಡಿದು ವಶಪಡಿಸಿಕೊಂಡು, ಎಲೈ ಭರತಶ್ರೇಷ್ಠನೆ, ಈ ಪಾಪಿಯನ್ನು, ಪಾಪಕೆಲಸವನ್ನು ಮಾಡಿಸುವ ಈ ಕಾಮವನ್ನು, ತೆಗೆದುಹಾಕು. ಇದೆ ಪ್ರಕೃತವಾದ ವೈರಿಯು. ಇದು ಜ್ಞಾನವಿಜ್ಞಾನಗಳನ್ನು ನಾಶಗೊಳಿಸುವದು. **ಜ್ಞಾನವೆಂದರೆ** ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಆತ್ಮವೇ ಮುಂತಾದವುಗಳನ್ನು ಕೇಳಿ ತಿಳಿದುಕೊಳ್ಳುವದು, **ವಿಜ್ಞಾನವೆಂದರೆ** ಇಂಥದ್ದೆಂದು ಅವುಗಳನ್ನು ಅನುಭವಕ್ಕೆ ತಂದುಕೊಳ್ಳುವದು. ಈ ಜ್ಞಾನವಿಜ್ಞಾನಗಳೆರಡೂ* ಶ್ರೇಯಸ್ಸನ್ನು ಪಡೆಯು

* ಜ್ಞಾನವೆಂದರೆ ಪರೋಕ್ಷಜ್ಞಾನವು, ವಿಜ್ಞಾನವೆಂದರೆ ಸಾಕ್ಷಾತ್ಕಾರವು. ಈ ವಿಚಾರಕ್ಕೆ ೭ನೆಯ ಅಧ್ಯಾಯವನ್ನು ನೋಡಿ.

ವದಕ್ಕೆ ಕಾರಣವಾಗಿರುವವು; ಇವುಗಳನ್ನು ನಾಶಗೊಳಿಸುವ ಈ ಕಾಮವನ್ನು ಕಿತ್ತೊಗೆದುಬಿಡು*, ಬಿಟ್ಟು ಬಿಡು– ಎಂದರ್ಥ.

"ಇಂದ್ರಿಯಗಳನ್ನು ಮೊದಲು ಬಿಗಿಹಿಡಿದು ಕಾಮವೆಂಬ ಶತ್ರುವನ್ನು ಕಿತ್ತೊಗೆದುಬಿಡು" ಎಂದು ಹೇಳಿದೆಯಷ್ಟೆ. ಯಾವದನ್ನು ಆಶ್ರಯಿಸಿಕೊಂಡು† ಕಾಮವನ್ನು ತೆಗೆದುಹಾಕಬೇಕು? ಎಂದರೆ ಹೇಳುತ್ತಾನೆ:—

**ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥** ‡

೪೨. ಇಂದ್ರಿಯಗಳು ಹೆಚ್ಚಿನವು ಎನ್ನುತ್ತಾರೆ; ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು; ಮನಸ್ಸಿಗಿಂತ ಬುದ್ಧಿಯು ಹೆಚ್ಚಿನದು; ಬುದ್ಧಿಗಿಂತ ಹೆಚ್ಚಿನವನು ಆತನು.

[ ಭಾಷ್ಯ ]

ಇಂದ್ರಿಯಗಳು ಎಂದರೆ ಶ್ರೋತ್ರವೇ ಮುಂತಾದ ಐದು (ಜ್ಞಾನೇಂದ್ರಿಯಗಳು) ಸ್ಥೂಲವಾಗಿಯೂ ಹೊರಗಿನದಾಗಿಯೂ ಪರಿಚ್ಛಿನ್ನವಾಗಿಯೂ ಇರುವ ದೇಹಕ್ಕೆ ಹೋಲಿಸಿದರೆ ಹೆಚ್ಚು ಸೂಕ್ಷ್ಮವಾಗಿಯೂ§ ಒಳಗಿನವಾಗಿಯೂ ವ್ಯಾಪಕವಾಗಿಯೂ ಇರುವವರಿಂದ (ಅದಕ್ಕಿಂತ) ಹೆಚ್ಚಿನವು ಎಂದು ಪಂಡಿತರು ಹೇಳುವರು. ಮತ್ತು ಇಂದ್ರಿಯಗಳಿಗಿಂತ ಸಂಕಲ್ಪವಿಕಲ್ಪರೂಪವಾದ|| **ಮನಸ್ಸು** ಹೆಚ್ಚಿನದು, ಆ ಮನಸ್ಸಿಗಿಂತ ನಿಶ್ಚಯಾತ್ಮಕವಾದ** **ಬುದ್ಧಿಯು** ಹೆಚ್ಚಿನದು.

---

* ಕಾಮಗಳೆಲ್ಲ ಹೋದ ಮೇಲೆ ಮರ್ತ್ಯನು ಮರಣರಹಿತನಾಗುವನೆಂಬ ಬೃಹದಾರಣ್ಯಕ (೪–೪–೭) ಶ್ರುತಿಯ ಸೂಚನೆ. † ಯೋಗಜ್ಞಾನಗಳೇ ಕಾಮಜಯಕ್ಕೆ ಉಪಾಯ. ಇದು ೬, ೭ನೆಯ ಅಧ್ಯಾಯಕ್ಕೆ ಮೂಲಸೂಚನೆ ‡ ಕಠ (೧–೩–೧೦, ೧೧) ಶ್ರುತಿಯ ತಾತ್ಪರ್ಯ. ಪರಿಶಿಷ್ಟವನ್ನು ನೋಡಿ. § ಮೇಲೆ ಹೇಳಿದ ಕಠಶ್ರುತಿಯ ಭಾಷ್ಯವನ್ನು ನೋಡಿ.

|| ಹೀಗೆ ಮಾಡಬೇಕೆಂದು ಮನಸ್ಸುಮಾಡುವ ವೃತ್ತಿಗೆ ಸಂಕಲ್ಪವೆಂದು ಹೆಸರು; ಹೊರಗಿನ ವಿಷಯದಲ್ಲಿ ಆಗುವ ಬಗೆಬಗೆಯ ಜ್ಞಾನಕ್ಕೆ ವಿಕಲ್ಪವೆಂದು ಹೆಸರು. ಉದಾ: ಕಾಲಿನಲ್ಲಿ ಏನೋ ನೋವಾದಂತೆ, ಒಳಗೆ ಏನೋ ಚುಚ್ಚಿಕೊಂಡಿರುವಂತೆ ತೋರುವಾಗ ನಮಗೆ ಆಗುವ ಜ್ಞಾನವು ವಿಕಲ್ಪವು; ಅದನ್ನು ಮುಟ್ಟಿನೋಡುವದಕ್ಕಾಗಲಿ, ಕಿತ್ತುಹಾಕುವದಕ್ಕಾಗಲಿ ಪ್ರವರ್ತಿಸುವಂತೆ ಮಾಡುವ ವೃತ್ತಿಯು ಸಂಕಲ್ಪವು. 'ಜ್ಞಾನವಾಹಿ' 'ಕ್ರಿಯಾವಾಹಿ'– ಎಂಬ ಎರಡು ಬಗೆಯ ನರಗಳು ಈ ಕಾರ್ಯಕ್ಕೆ ಉತ್ತೇಜಕವೆಂದು ಈಗಿನ ಭೌತಿಕಶಾಸ್ತ್ರಜ್ಞರು ಹೇಳುತ್ತಾರೆ. ಇವೆರಡಕ್ಕೂ ಅಂತಃಕರಣವೃತ್ತಿಯೊಂದೇ ಕಾರಣವೆಂದೂ ಅದಕ್ಕೆ ಮನಸ್ಸೆಂಬ ಹೆಸರೆಂದೂ ಸಾಂಖ್ಯಶಾಸ್ತ್ರದಲ್ಲಿದೆ.

** ವಿಕಲ್ಪಗಳನ್ನು ಕೂಡಿಸಿ ನಿಶ್ಚಯಿಸುವದು ಬುದ್ಧಿಯ ಕೆಲಸವು; ಹೀಗೆ ಮಾಡಬೇಕೆಂಬುದನ್ನು ನಿಶ್ಚಯಿಸುವದೂ ಬುದ್ಧಿಯ ಕೆಲಸವೆ. ಉದಾ: ಇದು ಮುಳ್ಳೆಂದೂ ಇದನ್ನು ಕಿತ್ತುಹಾಕಬೇಕೆಂದೂ ಬುದ್ಧಿಯು ನಿಶ್ಚಯಿಸಿದ ಮೇಲೆಯೆ ಮನಸ್ಸಿನಲ್ಲಿ ಆ ಕಾರ್ಯಕ್ಕಾಗಿ ಸಂಕಲ್ಪವುಂಟಾಗುವದು.

ಇನ್ನು ಬುದ್ಧಿಯವರೆಗಿನ ದೃಶ್ಯವಾಗಿರುವ ವಸ್ತುಗಳಿಗೆಲ್ಲ **ಯಾವನು** ಒಳಗಿರುವನೋ, ಇಂದ್ರಿಯವೇ ಮುಂತಾದ ಆಶ್ರಯಗಳಿಂದ ಕೂಡಿಕೊಂಡು ಕಾಮವು ಜ್ಞಾನವನ್ನು ಮುಚ್ಚಿ ಯಾವ ದೇಹಿಯನ್ನು ಮೋಹಗೊಳಿಸುವದೆಂದು* ಹಿಂದೆ (೩–೪೦) ಹೇಳಿದೆಯೋ, ಆ ಬುದ್ಧಿಯನ್ನೂ ನೋಡುವ† ಆತ್ಮನು ಬುದ್ಧಿಗಿಂತ ಹೆಚ್ಚಿನವನು.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥**

೪೩. ಎಲೈ ಮಹಾಬಾಹುವೆ, ಹೀಗೆ ಬುದ್ಧಿಗಿಂತಲೂ ಹೆಚ್ಚಿನವನನ್ನು ತಿಳಿದು ಮನಸ್ಸನ್ನು ಮನಸ್ಸಿನಿಂದ ನಿಲ್ಲಿಸಿಕೊಂಡು, ಹಿಡಿಯುವದಕ್ಕೆ ಕಷ್ಟವಾಗಿರುವ ಈ ಕಾಮನೆಂಬ ಶತ್ರುವನ್ನು ಕೊಂದುಹಾಕು.

[ಭಾಷ್ಯ]

ಹೀಗೆ ಬುದ್ಧಿಗಿಂತಲೂ ಹೆಚ್ಚಿನವನಾದ ಆತ್ಮನನ್ನು ತಿಳಿದುಕೊಂಡು ಚೆನ್ನಾಗಿ ಸಂಸ್ಕಾರವನ್ನು ಹೊಂದಿದ ನಿನ್ನ ಮನಸ್ಸಿನಿಂದಲೆ ಮನಸ್ಸನ್ನು ಬಿಗಿದು ಕಟ್ಟಿ ನಿಲ್ಲಿಸಿ, ಚೆನ್ನಾಗಿ ಸಮಸ್ಥಿತಿಯಲ್ಲಿಟ್ಟುಕೊಂಡು, ಎಲೈ ಮಹಾಬಾಹುವೆ, ಈ ಕಾಮವೆಂಬ ಶತ್ರುವನ್ನು ಕೊಲ್ಲುವವನಾಗು. ಈ ಕಾಮವು ದುರಾಸದವಾಗಿರುವದು, ಎಂದರೆ ಇದನ್ನು ಹಿಡಿಯುವದು ಕಷ್ಟವು. ಇದರ ಬಗೆಬಗೆಯ ವಿಶೇಷರೂಪಗಳು ಅನೇಕವಾಗಿರುವದರಿಂದ‡ ಇದನ್ನು ತಿಳಿದುಕೊಳ್ಳುವದು ಬಲುಕಷ್ಟ. (ಇದನ್ನು ಮನಸ್ಸಮಾಧಾನವನ್ನು ಪಡೆದೇ ಗೆಲ್ಲುವವನಾಗು).

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಕರ್ಮಯೋಗೋ** ನಾಮ
ತೃತೀಯೋಽಧ್ಯಾಯಃ

---

* ಆತ್ಮನು ಸ್ವತಃ ಕಾಮಕ್ಕೆ ವಶನಲ್ಲ. ಇಂದ್ರಿಯಾದಿಗಳು ತನ್ನವೆಂದು ತಿಳಿದುಕೊಂಡ ಮೇಲೆ ಕಾಮಕ್ಕೆ ವಶನಾಗುವನು. † ಆತ್ಮನು 'ನೋಡುವವನು'; ಬುದ್ಧಿ, ಮನಸ್ಸು, ಇಂದ್ರಿಯ ದೇಹ, ವಿಷಯ– ಇವೆಲ್ಲ 'ನೋಡಲ್ಪಡುವ' ಅನಾತ್ಮಗಳು. ‡ ಕಾಮವು ಸಾತ್ತ್ವಿಕ, ರಾಜಸ, ತಾಮಸ– ಎಂದು ಮೂರು ಪಂಗಡ. ಇವುಗಳಲ್ಲಿ ಒಳಪಂಗಡಗಳೂ ಉಂಟು. ಕೆಲವು ಕಡೆಗಳಲ್ಲಿ ಇದು ಕಾಮವೆಂದೇ ಗೊತ್ತಾಗದೆ ಹೋಗುತ್ತದೆ.

# ಮೂರನೆಯ ಅಧ್ಯಾಯದ ಸಾರ

೧–೨. ಹಿಂದಿನ ಅಧ್ಯಾಯದಲ್ಲಿ ಸಾಂಖ್ಯಬುದ್ಧಿಯನ್ನೂ ಯೋಗಬುದ್ಧಿಯನ್ನೂ ಹೇಳಿದ ಮೇಲೆ ಭಗವಂತನು ಸಾಂಖ್ಯರಿಗೆ ಅಂದರೆ ಜ್ಞಾನಿಗಳಿಗೆ ಸರ್ವಕರ್ಮಸಂನ್ಯಾಸವೆಂಬ ಸಾಧನವನ್ನೂ ಅವರಿಗೆ ಅದರಿಂದ ಮುಕ್ತಿಯೆಂಬುದನ್ನೂ ಹೇಳಿದನು ; ಅರ್ಜುನನಿಗೆ ಕರ್ಮವನ್ನೆ ಮಾಡಬೇಕೆಂದು ಹೇಳಿದನು. ಆಗ ಅರ್ಜುನನು " ಕರ್ಮಕ್ಕಿಂತ ಜ್ಞಾನವೆ ಹೆಚ್ಚಾದರೆ ನನ್ನನ್ನೇಕೆ ಘೋರವಾದ ಯುದ್ಧವೆಂಬ ಕರ್ಮಕ್ಕೆ ಹಚ್ಚುತ್ತಿರುವೆ ? ನಿನ್ನ ಅಭಿಪ್ರಾಯವೆ ಗೊತ್ತಾಗಲಿಲ್ಲವಲ್ಲ !" ಎನ್ನಲು ಭಗವಂತನು ಹೇಳಿದನೇನೆಂದರೆ :—

೩–೩೨. " ಎಲೈ ಅರ್ಜುನನೆ, ಹಿಂದೆ ನಾನು ಜ್ಞಾನಯೋಗವೆಂದೂ ಕರ್ಮಯೋಗವೆಂದೂ ಎರಡು ಬಗೆಯ ನಿಷ್ಠೆಯನ್ನು ಹೇಳಿರುವೆನು. ಸರ್ವಕರ್ಮಸಂನ್ಯಾಸವು ಮುಕ್ತಿಗೆ ಹೇತುವೆಂಬುದೇ ನನ್ನ ಅಭಿಪ್ರಾಯವು ; ಆದರೆ ಸುಮ್ಮನೆ ಕರ್ಮವನ್ನು ಕೈಬಿಟ್ಟ ಮಾತ್ರದಿಂದ ಆ ಸಂನ್ಯಾಸವು ದಕ್ಕುವದೆಂಬುದು ನನ್ನ ಅಭಿಪ್ರಾಯವಲ್ಲ. ಅಜ್ಞರು ಕರ್ಮವನ್ನು ಬಿಡುವದೆಂಬುದು ಆಗುವ ಮಾತೂ ಅಲ್ಲ ; ಒಂದು ವೇಳೆ ಅವರು ಕರ್ಮೇಂದ್ರಿಯಗಳನ್ನು ಬಿಗಿಹಿಡಿದು ಮನಸ್ಸಿನಿಂದ ವಿಷಯವನ್ನು ಚಿಂತಿಸುತ್ತಾ ಇರಬಹುದು, ಅಷ್ಟೆ. ಆದರೆ ಅಂಥ ಅಕರ್ಮದಿಂದ ಏನೂ ಪ್ರಯೋಜನವಿಲ್ಲ. ಅದಕ್ಕಿಂತ ಸಂಗವಿಲ್ಲದೆ ಕರ್ಮಯೋಗವನ್ನು ಮಾಡುವದೇ ಉತ್ತಮ. ಕರ್ಮದಿಂದಲೆ ಶರೀರಯಾತ್ರೆಯು ಸಾಗುವದು, ದೇವತೆಗಳು ಮನುಷ್ಯನ ಇಷ್ಟಾರ್ಥವನ್ನು ಈಡೇರಿಸುವರು, ಜಗಚ್ಚಕ್ರವು ಸಾಗುವದು. ಕರ್ಮದಿಂದ ಏನು ಕೆಡುಕೂ ಇಲ್ಲ, ಸಂಗದಿಂದಲೂ ಫಲಾಶಯದಿಂದಲೂ ಕೆಡಕುಂಟು. ಉದಾಹರಣೆಗೆ ನೋಡು: ಆತ್ಮಜ್ಞಾನಿಗೆ ಯಾವ ಕರ್ಮವಿಲ್ಲವಾದರೂ ಲೋಕಸಂಗ್ರಹಾರ್ಥವಾಗಿ ಅವನು ಕರ್ಮವನ್ನು ಮಾಡುತ್ತಿರುವನು; ಪರಮೇಶ್ವರನಾದ ನಾನು ಕೂಡ ಜಗತ್ತಿನ ಕಲ್ಯಾಣಕ್ಕಾಗಿ ಕರ್ಮವನ್ನು ಮಾಡುತ್ತಿರುವೆನು. ಆದ್ದರಿಂದ ಇದನ್ನು ತಿಳಿದು ನೀನೂ ಈಶ್ವರಾರ್ಪಣಬುದ್ಧಿಯಿಂದ ಅಸಕ್ತನಾಗಿ ಕರ್ಮವನ್ನು ಮಾಡು. ಈ ನನ್ನ ಅಭಿಪ್ರಾಯದಂತೆ ಯಾರು ಕರ್ಮಯೋಗವನ್ನು ಮಾಡುವರೋ ಅವರು ಕರ್ಮಗಳಿಂದ ಬಿಡುಗಡೆಯಾಗಿ ನಾನು ಹೇಳಿದ ನಿಷ್ಕರ್ಮಸಂನ್ಯಾಸವನ್ನು ಪಡೆಯುವರು ; ಹಾಗೆ ಮಾಡದೆ ಇರುವವರು ದುರ್ಗತಿಯನ್ನು ಪಡೆಯುವರು.

೩೩–೩೯. " ಜನರು ಈ ನನ್ನ ಉಪದೇಶದಂತೆ ನಡೆಸದೆ ಇರುವದಕ್ಕೆ ಕಾಮವೆ ಕಾರಣವು. ಕಾಮದಿಂದಲೆ ಅವರು ಸ್ವಧರ್ಮವನ್ನು ಕೈಬಿಟ್ಟು ಪರಧರ್ಮಕ್ಕೆ ಕೈಸೇದುವರು. ಕಾಮವುಂಟಾಯಿತೆಂದರೆ ಮನುಷ್ಯನಲ್ಲಿ ರಜೋಗುಣವು ತಲೆಯೆತ್ತಿಕೊಳ್ಳುವದು. ಆಗ ಯುಕ್ತಾಯುಕ್ತವಿವೇಕವು ತೋರದೆ ಹೋಗುವದು. ಹೀಗೆ ಮಾಡಬಾರದ ಕರ್ಮಕ್ಕೆ ಅವಿವೇಕದಿಂದ ಕೈಹಾಕುವ ಕಾಮಿಗೆ ಆತ್ಮಜ್ಞಾನವಾಗಲಿ, ಆತ್ಮಾನುಭವವಾಗಲಿ ಹೇಗೆ ಉಂಟಾದಾವು ?

೪೦–೪೩. " ಇಂದ್ರಿಯ, ಮನಸ್ಸು, ಬುದ್ಧಿ– ಇವುಗಳನ್ನು ಆಶ್ರಯಿಸಿಕೊಂಡೇ ಕಾಮವು ತೋರಿಕೊಳ್ಳುವದರಿಂದ ಮೊದಲು ಇಂದ್ರಿಯಗಳನ್ನೂ ಕ್ರಮಕ್ರಮವಾಗಿ ಮನೋಬುದ್ಧಿಗಳನ್ನೂ ಜಯಿಸಬೇಕು. ಬುದ್ಧಿಗೂ ಸಾಕ್ಷಿಯಾಗಿರುವ ಆತ್ಮವನ್ನು ತಿಳಿಯುವದಕ್ಕೂ ಯತ್ನಿಸುತ್ತಿರಬೇಕು. ಇದರಿಂದ ಕಾಮದ ಉಪಟಳವು ಇಲ್ಲವಾಗುವದು."

ಅಧ್ಯಾತ್ಮ ಗ್ರಂಥಾವಳಿ

ಶ್ರೀ ಶಾಂಕರಭಾಷ್ಯಸಮೇತವಾದ

# ಶ್ರೀಮದ್ಭಗವದ್ಗೀತೆಯು

## ಅಧ್ಯಾಯಗಳು ೪–೭

ಅನುವಾದಕ

ವೈ. ಸುಬ್ಬರಾವ್

ಅಧ್ಯಾತ್ಮಪ್ರಕಾಶಕಾರ್ಯಾಲಯ



ಬೆಂಗಳೂರು ಸಿಟಿ, ಚಾಮರಾಜಪೇಟೆ, ೩ನೆಯ ಬೀದಿಯಲ್ಲಿರುವ

ಅಧ್ಯಾತ್ಮಪ್ರಕಾಶಮುದ್ರಣಾಲಯದಲ್ಲಿ

ಅಚ್ಚಾದದ್ದು

1931

# ವಾ ಚ ಕ ರಿ ಗೆ

ಈ ಗೀತಾನುವಾದದಲ್ಲಿ:—

(೧) ದಪ್ಪಕ್ಷರದಲ್ಲಿ ಬರೆದಿರುವ ತಲೆಬರಹ("ಹೆಡಿಂಗ್")ಗಳು ಅನುವಾದಕರು ಹೊಸದಾಗಿ ಸೇರಿಸಿದವುಗಳಾಗಿವೆ.

(೨) ಭಾಷ್ಯದಲ್ಲಿ ಮುಖ್ಯವಾದ ಅಥವಾ ವಾದಾಸ್ಪದವಾದ ವಿಷಯಗಳನ್ನು ತಿಳಿಸುವ ವಾಕ್ಯಗಳನ್ನೂ ಸಂಕೇತನಾಮಗಳನ್ನೂ ಕಪ್ಪಕ್ಷರ("antique")ದಲ್ಲಿ ಅಚ್ಚುಮಾಡಿಸಿದೆ.

(೩) ಮೂಲದಲ್ಲಿಲ್ಲದೆ ಇದ್ದರೂ ಅರ್ಥಕ್ಕೆ ಬೇಕಾಗುವಂತೆ ಸೇರಿಸಿದ ಮಾತುಗಳನ್ನು ದುಂಡುಕಂಸದಲ್ಲಿ (               ) ಹೀಗೆ ತೋರಿಸಿರುತ್ತದೆ.

(೪) ಭಾಷ್ಯದ ಯಾವ ಮಾತಿನ ಪರಿವರ್ತನೆಯಿರಬಹುದೆಂಬ ಸಂಶಯವು ಬರಬಹುದಾದ ಕಡೆಗಳಲ್ಲಿ ಚೌಕಕಂಸಗಳಲ್ಲಿ [               ] ಹೀಗೆ ಆ ಸಂಸ್ಕೃತಮಾತುಗಳನ್ನು ಮುಂದುಗಡೆಯಲ್ಲಿ ತೋರಿಸಿರುತ್ತದೆ. ಭಾಷ್ಯಪಾಠದಲ್ಲಿ ಸಂದೇಹವಿರುವ ಭಾಗಗಳನ್ನೂ ಹೀಗೆಯೇ ಚೌಕಕಂಸಗಳಲ್ಲಿಟ್ಟಿರುತ್ತದೆ.

—*—

ಸಭಾಷ್ಯಭಗವದ್ಗೀತೆಯ ಎರಡನೆಯ ಭಾಗದ

# ವಿಷಯಗಳ ಪಟ್ಟಿ

—**—

## ಏಳನೆಯ ಅಧ್ಯಾಯ

### ವಿಜ್ಞಾನಯೋಗ

# ನಾಲ್ಕನೆಯ ಅಧ್ಯಾಯ

(ಜ್ಞಾನಯೋಗ)

## ಭಾಗವತಮತದ ಗುರುಪರಂಪರೆ

ಹಿಂದಿನ ಎರಡು ಅಧ್ಯಾಯಗಳಲ್ಲಿ ಕರ್ಮಯೋಗವೆಂಬ ಸಾಧನೆಯಿಂದ ದೊರಕುವ ಸಂನ್ಯಾಸಸಹಿತವಾದ ಜ್ಞಾನನಿಷ್ಠೆಯೆಂಬ ಯಾವ ಯೋಗವನ್ನು ಹೇಳಿರುತ್ತದೆಯೊ, ಇದರಲ್ಲಿಯೇ ಪ್ರವೃತ್ತಿ, ನಿವೃತ್ತಿ- ಎಂಬ (ಎರಡು) ವೇದಾರ್ಥವೂ* ಸೇರಿಕೊಂಡಿರುವದು. ಮತ್ತು (ಈ) ಗೀತೆಯ (ಶ್ಲೋಕಗಳ)ಲ್ಲೆಲ್ಲ ಯೋಗವೆಂದು† ಭಗವಂತನು ಹೇಳಿರುವದು ಇದನ್ನೇ. ಆದ್ದರಿಂದ ವೇದಾರ್ಥವು ಇಲ್ಲಿಗೆ ಮುಗಿದಂತಾಯಿತೆಂದು ಭಗವಂತನು (ಗುರು)ವಂಶವನ್ನು‡ ತಿಳಿಸುವದರ ಮೂಲಕ ಇದನ್ನು ಹೊಗಳುತ್ತಿದ್ದಾನೆ.

**ಶ್ರೀಭಗವಾನುವಾಚ :—**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

ಶ್ರೀಭಗವಂತನು ಹೇಳಿದ್ದೇನೆಂದರೆ :—

೧. ಈ ಅವ್ಯಯವಾದ ಯೋಗವನ್ನು ನಾನು ವಿವಸ್ವಂತನಿಗೆ ಹೇಳಿದೆನು. ವಿವಸ್ವಂತನು ಮನುವಿಗೆ ಹೇಳಿದನು; ಮನುವು ಇಕ್ಷ್ವಾಕುವಿಗೆ ತಿಳಿಸಿದನು.

[ಭಾಷ್ಯ]

ಹಿಂದಿನ ಎರಡಧ್ಯಾಯಗಳಲ್ಲಿ ಹೇಳಿರುವ ಈ ಯೋಗವನ್ನು ಸೃಷ್ಟಿಯ ಪ್ರಾರಂಭದಲ್ಲಿ **ವಿವಸ್ವಂತನಿಗೆ** ಎಂದರೆ ಸೂರ್ಯನಿಗೆ,§ ಜಗತ್ತನ್ನು ಕಾಪಾಡುವ

*. ಈಶಾವಾಸ್ಯಭಾಷ್ಯದ ಉಪಸಂಹಾರವನ್ನು ನೋಡಿ. †. ೫ನೆಯ ಅಧ್ಯಾಯದ ೫ನೆಯ ಶ್ಲೋಕದ ಭಾಷ್ಯವನ್ನು ನೋಡಿ ‡. ಇದು ಈ ಸಮಯಕ್ಕೆ ಬೇಕೆಂದು ಕಲ್ಪಿಸಿದ ಉಪದೇಶವಲ್ಲವೆಂದೂ ಹಿಂದೆಯೇ ದೊಡ್ಡದೊಡ್ಡ ಗುರುಪರಂಪರೆಯಿಂದ ಬಂದದ್ದೆಂದೂ ತಿಳಿಸುವುದಕ್ಕಾಗಿ ವಂಶವನ್ನು ಹೇಳಿದೆ. ಭಾಗವತಧರ್ಮಕ್ಕೆ ಹೇಳಿರುವ ಗುರುಪರಂಪರೆಗಳು ಅನೇಕವಾಗಿದ್ದರೂ ಇಲ್ಲಿ ಇದನ್ನೆ ಆರಿಸಿರುವದಕ್ಕೆ ಕಾರಣವೇನೆಂಬುದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ. §. ಸೂರ್ಯನು ಕ್ಷತ್ರಿಯರಾಜರ ವಂಶಕ್ಕೆ ಮೂಲಪುರುಷನು.

ಕ್ಷತ್ರಿಯರಿಗೆ ಬಲವನ್ನು ಕೊಡುವದಕ್ಕಾಗಿ ಹೇಳಿದೆನು; ಏಕೆಂದರೆ ಅವರು ಈ ಯೋಗಬಲದಿಂದ* ಕೂಡಿದ್ದರೆ ಬ್ರಾಹ್ಮಣ್ಯವನ್ನು† ಕಾಪಾಡುವದಕ್ಕೆ ಸಮರ್ಥರಾಗುವರು; ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ಕಾಪಾಡಿದರೆ (ಅವರಿಬ್ಬರೂ) ಜಗತ್ತನ್ನು ಕಾಪಾಡುವದಕ್ಕೆ ಸಮರ್ಥರಾಗುವರು. ಈ ಯೋಗದ ಫಲವು ನಾಶವಾಗುವದಿಲ್ಲವಾದ್ದರಿಂದ ಇದು ಅವ್ಯಯವಾದದ್ದು; ಏಕೆಂದರೆ ಸರಿಯಾದ ಜ್ಞಾನದಲ್ಲಿ ನಿಲುಗಡೆಯನ್ನು ಪಡೆಯುವದೆಂಬ [ಸಮ್ಯಗ್ದರ್ಶನನಿಷ್ಠಾಲಕ್ಷಣಸ್ಯ] ಈ ಯೋಗದ ಫಲವಾದ ಮೋಕ್ಷವು ನಾಶವಾಗುವದೇ ಇಲ್ಲ. (ಹೀಗೆ ಅವ್ಯಯವಾದ ಈ ಯೋಗವನ್ನು ನಾನು ವಿವಸ್ವಂತನಿಗೆ ಹೇಳಿದೆನು;) ಆ ವಿವಸ್ವಂತನು ಮನುವಿಗೆ‡ ಹೇಳಿದನು. ಮನುವು ಮೊದಲನೆಯ ರಾಜನಾದ ಇಕ್ಷ್ವಾಕುವೆಂಬ ತನ್ನ ಮಗನಿಗೆ ಹೇಳಿದನು.

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥**

೨. ಹೀಗೆ ಪರಂಪರೆಯಿಂದ ಬಂದಿರುವ ಈ ಯೋಗವನ್ನು ರಾಜರ್ಷಿಗಳು ಬಲ್ಲರು. ಎಲೈ ಪರಂತಪನೆ, ಆ ಯೋಗವು ಬಹುಕಾಲವಾದ ಮೇಲೆ ಇಲ್ಲಿ ಕಾಣದೆ ಹೋಯಿತು.

[ ಭಾಷ್ಯ ]

ಹೀಗೆ ಕ್ಷತ್ರಿಯರ ಪರಂಪರೆಯಿಂದ ಬಂದಿರುವ ಈ ಯೋಗವನ್ನು ರಾಜರ್ಷಿಗಳು ಎಂದರೆ ರಾಜರೂ ಋಷಿಗಳೂ§ ಆಗಿರುವವರು ಬಲ್ಲವರಾಗಿದ್ದರು. ಆ

---

*. ಯೋಗಬಲವಿಲ್ಲದ ಕ್ಷತ್ರಿಯನು ಅಧಿಕಾರಮತ್ತನಾಗಿ ಲೋಕಕಂಟಕನಾಗುವನು. ಕ್ಷತ್ರಿಯರಿಗೆ ಧರ್ಮವೇ ಬಲವೆಂಬ ವಿಷಯಕ್ಕೆ ಬೃ॥ ೧-೪-೧೪ನೆಯ ಮಂತ್ರವನ್ನು ನೋಡಿ.

†. 'ಬ್ರಹ್ಮಕ್ಷತ್ರೇ ಪರಿರಕ್ಷಿತುಂ' ಎಂಬ ಮ॥ ಪಾಠದಲ್ಲಿ 'ಕ್ಷತ್ರೇ' ಎಂಬ ಮಾತು ಬರೆದವರ ಕೈತಪ್ಪಿನಿಂದ ಬಿದ್ದಿರಬೇಕು.

‡. ಮನುಗಳು ೧೪ ಜನ; ಒಬ್ಬೊಬ್ಬ ಮನುವಿನ ಕಾಲವು ೭೧ ದಿವ್ಯಯುಗಗಳಾಗುವಷ್ಟು ಕಾಲವಾಗುವದು. ಇದಕ್ಕೆ ಮನ್ವಂತರವೆಂದು ಹೆಸರು. ಈಗಿನ ಮನ್ವಂತರವು ವೈವಸ್ವತನೆಂಬ ಏಳನೆಯ ಮನುವಿಗೆ ಸೇರಿದ್ದು. ಇವನನ್ನೇ ಇಲ್ಲಿ ಗುರುಪರಂಪರೆಯಲ್ಲಿ ಹೇಳಿರುತ್ತದೆ. ಇಲ್ಲಿ ಹೇಳಿರುವ ಗುರುಪರಂಪರೆಯೇ ಅಲ್ಲದೆ ಬೇರೆ ಎಷ್ಟೋ ಪರಂಪರೆಗಳನ್ನು ಮೋಕ್ಷಧರ್ಮದ ನಾರಾಯಣೀಯದಲ್ಲಿ ಹೇಳಿರುತ್ತದೆ. ಈ ಸಂಪ್ರದಾಯಪರಂಪರೆಗಳ ವಿಚಾರವಾಗಿ ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

§. ಋಷಿಗಳೆಂದರೆ ಮಂತ್ರವನ್ನು ಕಂಡುಕೊಂಡವರು. ಇವರಲ್ಲಿ ದೇವರ್ಷಿ ಮಹರ್ಷಿ, ರಾಜರ್ಷಿ- ಎಂದು ಬೇರೆ ಬೇರೆ ಪಂಗಡಗಳುಂಟು.

ಯೋಗವು, ಎಲೈ ಪರಂತಪನೆ, ಬಹುಕಾಲವಾದ ಮೇಲೆ ಕಾಣದೆ ಹೋಯಿತು, ಎಂದರೆ ಅದರ ಸಂಪ್ರದಾಯವು ಕಡಿದುಹೋಯಿತು. ತನಗೆ ಎದುರಿನ ಪಕ್ಷದವರು ಪರರು; ಅಂಥವರಿಗೆ ತನ್ನ ಶೂರತನದ ತೇಜಸ್ಸುಗಳಿಂದ, ಸೂರ್ಯನು ತನ್ನ ಕಿರಣಗಳಿಂದ (ಜನರಿಗೆ ಸಂತಾಪವನ್ನುಂಟುಮಾಡುವ ಹಾಗೆ,) ಸಂತಾಪವನ್ನುಂಟುಮಾಡುವವರಿಂದ (ಅರ್ಜುನನನ್ನು) ಪರಂತಪನು ಎಂದರೆ ಶತ್ರುಗಳನ್ನು ಸಂಕಟಗೊಳಿಸುವವನು ಎಂದು ಕರೆದಿರುತ್ತಾನೆ.

**ಸ ಏವಾಯಂ ಮಯಾ ತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋऽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩ ॥**

೩. ಆ ಪುರಾತನವಾದ ಈ ಯೋಗವೇ, ನನಗೆ ಭಕ್ತನೂ ಗೆಳೆಯನೂ ಆಗಿರುತ್ತೀಯೆಂಬುದರ ಮೇಲೆ ಈಗ ನನ್ನಿಂದ ನಿನಗೆ ಹೇಳಲ್ಪಟ್ಟಿರುವದು. ಇದು ಉತ್ತಮವಾದ ರಹಸ್ಯವು.

[ ಭಾಷ್ಯ ]

ದುರ್ಬಲರಾಗಿ ತಮ್ಮ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಲಾರದವರ* ಕೈಗೆ ಬಿದ್ದದ್ದರಿಂದ ಯೋಗವು ನಾಶವಾದದ್ದನ್ನು ಜನರಿಗೆ ಪುರುಷಾರ್ಥವು ದೊರಕದಂತೆ ಇದ್ದನ್ನು ಕಂಡು — ಆ ಪುರಾತನವಾದ ಈ ಯೋಗವನ್ನೇ, ನೀನು ನನಗೆ ಭಕ್ತನೂ† ಗೆಳೆಯನೂ ಆಗಿರುತ್ತೀಯೆ ಎಂಬ ಕಾರಣದಿಂದ ನಾನು ನಿನಗೆ ಹೇಳಿರುತ್ತೇನೆ. ಏಕೆಂದರೆ ಇದು ಹೆಚ್ಚಿನ ರಹಸ್ಯವಾಗಿರುತ್ತದೆ; ಇದು ಎಂದರೆ ಈ ಯೋಗದ ಜ್ಞಾನವು ಎಂದರ್ಥ.

## ಈಶ್ವರನು ಕರ್ಮದ ಕಟ್ಟಿಗೆ ಬೀಳದೆ ಅವತರಿಸುತ್ತಾನೆ

ಭಗವಂತನು (ಹೀಗೆ) ಹೇಳಿದ್ದು ವಿರುದ್ಧವಾದದ್ದೆಂದು ಯಾರಿಗೂ ತಿಳಿವಳಿಕೆಯುಂಟಾಗದೆ ಇರುವದಕ್ಕಾಗಿ (ಅಂಥ ತಿಳಿವಳಿಕೆಯನ್ನು) ಬರಗೊಡಿಸದೆ ಇರುವದಕ್ಕೆಂದು ಆಕ್ಷೇಪಣೆಯನ್ನು ಮಾಡುವವನಂತೆ‡ ಅರ್ಜುನನು (ಮುಂದಿನ ಶ್ಲೋಕದಲ್ಲಿ ಹೇಳಿರುವ ಮಾತನ್ನು) ಆಡಿರುತ್ತಾನೆ:—

---

* ಸಂಪ್ರದಾಯವನ್ನು ಮುಂದಕ್ಕೆ ಸಾಗಿಸಬಲ್ಲ ಗುರುವಾಗಬೇಕಾದರೆ ಮೊದಲು ಇಂದ್ರಿಯಗಳನ್ನು ಗೆದ್ದುಕೊಂಡಿರಬೇಕು. ಇಂದ್ರಿಯಪರವಶನಾಗಿರುವವನ ಮಾತು ಕಾರ್ಯಕಾರಿಯಾಗುವದಿಲ್ಲ.

†. ಯೋಗ್ಯರಾದವರಿಗೇ ಈ ಯೋಗವನ್ನು ಹೇಳಿದರೆ ಸಂಪ್ರದಾಯವು ಮುಂದಕ್ಕೆ ಸಾಗುವದೆಂಬುದರ ಮೇಲೆ ನಿನಗೆ ಹೇಳಿದ್ದೇನೆಯೇ ಹೊರತು, ನನ್ನ ಗೆಳೆಯನೆಂಬುದೊಂದೇ ಕಾರಣದಿಂದಲ್ಲ ಎಂದು ಭಾವ.

‡ 'ನನಗೆ ಸಕಲಕರ್ಮಗಳನ್ನೂ ಅರ್ಪಿಸು' ಎಂದು ಹಿಂದೆ (೩-೩೦ರಲ್ಲಿ) ಹೇಳಿರುವ ಮಾತಿನಿಂದಲೆ ಶ್ರೀಕೃಷ್ಣನು ಸಾಕ್ಷಾದ್‌ಭಗವಂತನೆಂದು ಗೊತ್ತಾಗಿದ್ದರೂ ಭಗವತ್ಸ್ವರೂಪದ ವಿಷಯಕ್ಕೆ

**ಅರ್ಜುನ ಉವಾಚ —**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**

**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

ಅರ್ಜುನನು ಹೇಳಿದ್ದೇನೆಂದರೆ:—

೪. ನಿನ್ನ ಜನ್ಮವು ಈಚೆಗೆ, ವಿವಸ್ವಂತನ ಜನ್ಮವು ಆಚೆಗೆ. ನೀನು ಮೊದಲು ಹೇಳಿದೆ ಎಂಬುದನ್ನು ನಾನು ಹೇಗೆ ತಿಳಿದುಕೊಳ್ಳಲಿ?

[ಭಾಷ್ಯ]

ನೀನು ಹುಟ್ಟಿದ್ದು ಈಚೆಗೆ, ಎಂದರೆ ಈ ಕಾಲದಲ್ಲಿ **ವಸುದೇವ**ನ ಮನೆಯಲ್ಲಿ; ವಿವಸ್ವಂತನು ಹುಟ್ಟಿದ್ದು ಆಚೆಗೆ, ಎಂದರೆ ಮೊದಲು, ಸೃಷ್ಟಿಯಾಗುವ ಪ್ರಾರಂಭದಲ್ಲಿ; ಹೀಗಿರುವದರಿಂದ ನೀನೇ ಮೊದಲು ಈ ಯೋಗವನ್ನು ಹೇಳಿದೆಯೆಂದೂ, ಆ ನೀನೇ ಈಗ ನನಗೆ ಈಗ ಹೇಳಿರುವೆಯೆಂದೂ ಹೇಗೆ* ತಿಳಿಯಲಿ?

**ವಾಸುದೇವನು** ಈಶ್ವರನಲ್ಲವೆಂದೂ† ಸರ್ವಜ್ಞನಲ್ಲನೆಂದೂ ಮೂರ್ಖರಿಗೆ ಸಂಶಯವು ಬರಬಹುದಷ್ಟೆ; ಅದನ್ನು ಪರಿಹರಿಸುವದಕ್ಕಾಗಿ ಶ್ರೀಭಗವಂತನು ಹೇಳಿರುತ್ತಾನೆ. ಇದಕ್ಕೋಸ್ಕರವೆ ಅರ್ಜುನನು ಪ್ರಶ್ನೆಯನ್ನು ಮಾಡಿರುವದು.

**ಶ್ರೀಭಗವಾನುವಾಚ :—**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**

**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥**

ಶ್ರೀಭಗವಂತನು ಹೇಳಿದ್ದೇನೆಂದರೆ :—

೫. ಅರ್ಜುನನೆ, ನನಗೂ ನಿನಗೂ ಅನೇಕಜನ್ಮಗಳು ಕಳೆದುಹೋಗಿವೆ; ಅವುಗಳನ್ನೆಲ್ಲವನ್ನೂ ನಾನು ಬಲ್ಲೆನು, ಎಲೈ ಪರಂತಪನೆ, ನೀನು ಅರಿಯೆ.

[ಭಾಷ್ಯ]

ಅರ್ಜುನನೆ, ನನಗೂ ನಿನಗೂ ಎಷ್ಟೋ ಜನ್ಮಗಳು ಆಗಿಹೋಗಿರುತ್ತವೆ. ಅವುಗಳೆಲ್ಲವನ್ನೂ ನಾನು ಬಲ್ಲೆನು, ತಿಳಿದುಕೊಂಡಿರುತ್ತೇನೆ; ಧರ್ಮ,

---

ಇನ್ನೂ ಹೆಚ್ಚಿನ ವಿಷಯಗಳನ್ನು ಆತನ ಬಾಯಿಂದ ಹೊರಡಿಸಬೇಕೆಂದು ಅರ್ಜುನನ ನಿಜವಾದ ಉದ್ದೇಶವು, ಆಕ್ಷೇಪವನ್ನು ಮಾಡುವದು ಅಲ್ಲ.

*. ಈ ಪ್ರಶ್ನೆಯ ಅಭಿಪ್ರಾಯದ ವಿಷಯದಲ್ಲಿ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

†. ಶ್ರೀಕೃಷ್ಣನು ಈಶ್ವರನೆಂಬುದರ ಅರ್ಥವೇನೆಂಬುದನ್ನೂ ಅವತಾರದ ಸ್ವರೂಪವನ್ನೂ ಕುರಿತು ಗೀತಾರ್ಥಸರ್ವಸ್ವದ ಭಕ್ತಿಯೋಗಪ್ರಕರಣದಲ್ಲಿ ಚರ್ಚಿಸಿರುತ್ತದೆ.

ಅಧರ್ಮ-* ಮುಂತಾದವುಗಳು (ನಿನ್ನ) ಜ್ಞಾನಶಕ್ತಿಗೆ ಅಡ್ಡಿಯಾಗಿರುವದರಿಂದ (ಅವುಗಳನ್ನು) ನೀನು ಅರಿಯೆ; ಆದರೆ ನಾನು ಯಾವಾಗಲೂ ಸ್ವಭಾವದಿಂದಲೇ ಶುದ್ಧನೂ ಜ್ಞಾನಸ್ವರೂಪನೂ ಮುಕ್ತನೂ [ನಿತ್ಯಶುದ್ಧಬುದ್ಧಮುಕ್ತಸ್ವಭಾವತ್ವಾತ್] ಆಗಿರುವೆನು, ನನ್ನ ಜ್ಞಾನಶಕ್ತಿಗೆ ಯಾವದೊಂದು ಮುಸುಕೂ† ಇಲ್ಲ [ಅನಾವರಣಜ್ಞಾನಶಕ್ತಿಃ]; ಆದ್ದರಿಂದ ಎಲೈ ಪರಂತಪನೆ, ನಾನು (ಅವುಗಳೆಲ್ಲವನ್ನೂ) ಬಲ್ಲೆನು.

ಹಾಗಾದರೆ, ಯಾವಾಗಲೂ ಈಶ್ವರನಾಗಿರುವ ನಿನಗೆ ಧರ್ಮವಾಗಲಿ ಅಧರ್ಮವಾಗಲಿ ಇಲ್ಲವಾಗಲಾಗಿ, (ನಿನಗೆ) ಜನ್ಮವುಂಟಾದದ್ದು ಹೇಗೆ? ಎಂದರೆ ಹೇಳುತ್ತೇನೆ:—

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥**

೬. ಅಜನೂ ಅವ್ಯಯಸ್ವಭಾವದವನೂ ಆಗಿದ್ದರೂ ಪ್ರಾಣಿಗಳಿಗೆ ಈಶ್ವರನಾಗಿದ್ದರೂ ನನ್ನ ಪ್ರಕೃತಿಯನ್ನು ಹಿಡಿತದಲ್ಲಿಟ್ಟುಕೊಂಡು ನನ್ನ ಮಾಯೆಯಿಂದ ಹುಟ್ಟುತ್ತಿರುವೆನು.

[ಭಾಷ್ಯ]

(ನಾನು) ಅಜನು ಎಂದರೆ ಹುಟ್ಟುವವನಲ್ಲ; ಅವ್ಯಯಸ್ವಭಾವದವನು, ಜ್ಞಾನಶಕ್ತಿಯು ನಾಶವಾಗುವಂಥ ಸ್ವಭಾವದವನಲ್ಲ. ಹೀಗಿದ್ದರೂ, ಮತ್ತು ಬ್ರಹ್ಮನು ಮೊದಲಾಗಿ ಸ್ಥಾವರಜನ್ಮದವರೆಗಿನ [ಬ್ರಹ್ಮಾದಿಸ್ತಂಭಪರ್ಯಂತಾನಾಂ] ಪ್ರಾಣಿಗಳಿಗೆಲ್ಲ ಈಶ್ವರನು ಎಂದರೆ (ಅವುಗಳನ್ನು) ಆಳುತ್ತಿರುವವನಾಗಿದ್ದರೂ, ನನ್ನ **ಪ್ರಕೃತಿ**ಯನ್ನು ಎಂದರೆ **ವೈಷ್ಣವಮಾಯೆ**ಯನ್ನು‡ – ಸಕಲಜಗತ್ತೂ ಯಾವದರ ಅಧೀನದಲ್ಲಿರುವದೋ, ಯಾವದರಿಂದ ಮೋಹಗೊಂಡು ವಾಸುದೇವನೇ

* ಧರ್ಮ, ಅಧರ್ಮ- ಮುಂತಾದವುಗಳಿಗೆ ಅಜ್ಞಾನದಿಂದ ವಶನಾಗಿರುವಿಕೆಯು ಜೀವನ ಜ್ಞಾನಕ್ಕೆ ಅಡ್ಡಿಯಾಗಿರುವದು; ಈಶ್ವರನು ಸಾಕ್ಷಿರೂಪವಾದ ಜ್ಞಾನವೇ ಆಗಿರುವದರಿಂದ ಅವನಿಗೆ ಯಾವ ಅಡ್ಡಿಯೂ ಇರುವದಿಲ್ಲ. ವ್ಯವಹಾರದೃಷ್ಟಿಯಿಂದ ಜೀವೇಶ್ವರಭೇದವನ್ನಿಟ್ಟುಕೊಂಡೇ ಇಲ್ಲಿ ಹೀಗೆಂದು ಹೇಳಿದೆ. ಈ ವಿಷಯದಲ್ಲಿ ಬ್ರ॥ ಸೂ॥ ೧-೧-೫ ಭಾಷ್ಯವನ್ನು ನೋಡಿ.

† ಅಜ್ಞಾನವೆಂಬ ಒಂದಾನೊಂದು ಭಾವಪದಾರ್ಥವನ್ನೂ ಅದಕ್ಕೆ ಆವರಣವೆಂಬ ಒಂದಾನೊಂದು ಶಕ್ತಿಯನ್ನೂ ಈಗಿನ ವೇದಾಂತಿಗಳು ಕೆಲವರು ಅಂಗೀಕರಿಸಿರುತ್ತಾರೆ. ಇದೇನೂ ಭಾಷ್ಯಕಾರರ ತಾತ್ಪರ್ಯವಲ್ಲ. ತೆರೆಯಿಂದ ವಸ್ತುಗಳು ಮರೆಯಾಗಿರುವಂತೆ ಅಜ್ಞಾನದಿಂದ ತತ್ತ್ವವು ತೋರದೆ ಇರುವದೆಂಬುದೇ ಪ್ರಕೃತ.

‡ ಮಾಯೆಯೆಂದರೇನೆಂಬುದನ್ನು ಗೀತಾರ್ಥಸರ್ವಸ್ವದಲ್ಲಿ ವಿಚಾರಮಾಡಿರುತ್ತದೆ,

ತಮ್ಮ ಆತ್ಮನೆಂದು ಅರಿಯದೆ ಇರುವರೋ, ಮೂರು ಗುಣಗಳಿಂದಾಗಿರುವ* [ತ್ರಿಗುಣಾತ್ಮಿಕಾಂ] ಅಂಥ ನನ್ನ ಪ್ರಕೃತಿಯನ್ನು ಆಳಿಕೊಂಡು,† ಎಂದರೆ ಹಿಡಿತದಲ್ಲಿಟ್ಟುಕೊಂಡು ಹುಟ್ಟುವೆನು, ಎಂದರೆ ದೇಹವುಳ್ಳವನಾದಂತೆಯೂ‡ ಹುಟ್ಟುವವನಂತೆಯೂ ತೋರಿಕೊಳ್ಳುವೆನು. ನನ್ನ ಮಾಯೆಯಿಂದ [ಆತ್ಮ ಮಾಯಯಾ] (ಹುಟ್ಟುವೆನೇ ಹೊರತು) ಮಿಕ್ಕ ಜನರ ಹಾಗೆ§ ನಿಜವಾಗಿಯೂ (ಹುಟ್ಟುವ)ದಿಲ್ಲ.

## ಅವತಾರದ ಉದ್ದೇಶ

ಆ ಜನ್ಮವು ಯಾವಾಗ, ಮತ್ತು ಏತಕ್ಕೆ? ಎಂದರೆ ಹೇಳುತ್ತಾನೆ :—

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭ ॥**

೭. ಎಲೈ ಭರತವಂಶೋತ್ಪನ್ನನೆ, ಯಾವಯಾವಾಗ ಧರ್ಮಕ್ಕೆ ಕುಂದುಂಟಾಗುವದೋ ಅಧರ್ಮಕ್ಕೆ ಏಳಿಗೆಯಾಗುವದೋ ಆಗಾಗ ನಾನು ನನ್ನನ್ನು ಸೃಷ್ಟಿಮಾಡಿಕೊಳ್ಳುವೆನು.

[ ಭಾಷ್ಯ ]

ವರ್ಣಾಶ್ರಮಧರ್ಮವೇ ಮುಂತಾದ ರೂಪವುಳ್ಳದ್ದಾಗಿಯೂ ಪ್ರಾಣಿಗಳ ಅಭ್ಯುದಯಕ್ಕೂ ಮುಕ್ತಿಗೂ ಸಾಧನವಾಗಿಯೂ ಇರುವ ಧರ್ಮಕ್ಕೆ ಯಾವಾಗ ಹಾನಿಯಾಗುವದೋ ಅಧರ್ಮವು ಮೇಲಕ್ಕೇರುವದೋ ಎಂದರೆ ತಲೆದೋರಿಕೊಳ್ಳುವದೋ, ಆಗಾಗ ನಾನು ಮಾಯೆಯಿಂದ ನನ್ನನ್ನು ಸೃಷ್ಟಿ ಮಾಡಿಕೊಳ್ಳುವೆನು.

---

*. ಮುಂದೆ ೭–೧೪ನೆಯ ಶ್ಲೋಕವನ್ನು ನೋಡಿ.

†. ಪ್ರಕೃತಿಯೆಂದರೆ ಪ್ರಧಾನವೆಂಬ ಒಂದಾನೊಂದು ನಿತ್ಯವಾದ ಜಡವಸ್ತುವೆಂದೂ ಅದು ಜಗತ್ತಿನ ರೂಪವಾಗಿ ತಾನೆ ಪರಿಣಮಿಸುವದೆಂದೂ ಸಾಂಖ್ಯರು ಹೇಳುವರು. ಅಂಥ ಸ್ವತಂತ್ರವಾದ ಜಡತತ್ತ್ವವು ಯಾವದೂ ಇಲ್ಲವೆಂದೂ ವ್ಯವಹಾರದೃಷ್ಟಿಯಿಂದ ಇರುವಂತೆ ತೋರುವ ಪ್ರಕೃತಿಯು ನಿಜವಾಗಿ ಚೇತನಕ್ಕೆ ಅಧೀನವಾಗಿ ಇರುವದೆಂದೂ ವೇದಾಂತಿಗಳು ಹೇಳುತ್ತಾರೆ. ಬ್ರ॥ ಸೂ॥ (೧–೪–೩)ವನ್ನು ನೋಡಿ.

‡. ದೇಹವಾನ್ ಎಂಬ ಮ॥ ಪಾಠಕ್ಕಿಂತ 'ದೇಹವಾನಿವ' ಎಂಬ ಪಾಠವೇ ಉತ್ತಮ. 'ಜಾತ ಇವ' ಎಂದು ಎಲ್ಲಾ ಪಾಠಗಳಲ್ಲಿಯೂ ಇದೆ; ಜಾತ ಇವ ಚ ಎಂದು ಇರಬೇಕೆಂದು ತೋರುವದು. ಭಾಷ್ಯಕಾರರ ಅವತರಣಿಕೆ (ಪುಟ ೪ ಟಿಪ್ಪಣಿ‡)ಯನ್ನು ನೋಡಿ.

§. ಕರ್ಮಕ್ಕೆ ಫಲವಾಗಿ ಮಿಕ್ಕವರು ಹುಟ್ಟುವಂತೆ; ಇದೂ ವ್ಯವಹಾರದೃಷ್ಟಿಯಿಂದ.

ಏತಕ್ಕೆ? ಎಂದರೆ

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮ ॥**

೮. ಸಾಧುಗಳನ್ನು ಕಾಪಾಡುವದಕ್ಕೂ ಪಾಪಿಗಳನ್ನು ನಾಶಗೊಳಿಸುವದಕ್ಕೂ ಧರ್ಮವನ್ನು ಚೆನ್ನಾಗಿ ಸ್ಥಾಪನೆಮಾಡುವದಕ್ಕೂ ಯುಗಯುಗದಲ್ಲಿಯೂ ಹುಟ್ಟುವೆನು.

[ಭಾಷ್ಯ]

ಸರಿಯಾದ ಮಾರ್ಗದಲ್ಲಿರುವ ಸಾಧುಗಳನ್ನು ಕಾಪಾಡುವದಕ್ಕಾಗಿಯೂ, ಪಾಪಿಗಳನ್ನು ಎಂದರೆ ಪಾಪಕರ್ಮವನ್ನು ಮಾಡುವಂಥವರನ್ನು ನಾಶಗೊಳಿಸುವದಕ್ಕಾಗಿಯೂ, ಧರ್ಮವನ್ನು ಚೆನ್ನಾಗಿ ಸ್ಥಾಪನೆಗೊಳಿಸಿ ಭದ್ರಪಡಿಸುವದಕ್ಕಾಗಿಯೂ ಯುಗಯುಗದಲ್ಲಿಯೂ ಪ್ರತಿಯುಗದಲ್ಲಿಯೂ (ಮಾಯೆಯಿಂದ) ಹುಟ್ಟುತ್ತಿರುವೆನು.

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥**

೯. ಎಲೈ ಅರ್ಜುನನೆ, ಈ ದಿವ್ಯವಾದ ನನ್ನ ಜನ್ಮವನ್ನೂ ಕರ್ಮವನ್ನೂ ಯಾವಾತನು ಸರಿಯಾಗಿ ತಿಳಿದುಕೊಳ್ಳುವನೋ ಅವನು ಈ ದೇಹವನ್ನು ಬಿಟ್ಟು ಮತ್ತೆ ಜನ್ಮವನ್ನು ಹೊಂದುವದಿಲ್ಲ, ನನ್ನನ್ನೆ ಹೊಂದುವನು.

[ಭಾಷ್ಯ]

ಅಂಥ ನನ್ನ ದಿವ್ಯವಾದ, ಎಂದರೆ ಪ್ರಕೃತಿಗೆ ಸಂಬಂಧಪಡದ ಈಶ್ವರಸಂಬಂಧವಾದ, ಮಾಯಾರೂಪವಾದ ಜನ್ಮವನ್ನೂ ಸಾಧುಗಳನ್ನು ಕಾಪಾಡುವದೇ ಮುಂತಾದ ಕರ್ಮವನ್ನೂ ಮೇಲೆ ಹೇಳಿದಂತೆ ಇದ್ದದ್ದು ಇದ್ದಹಾಗೆ ಯಾವಾತನು* ಅರಿತುಕೊಳ್ಳುವನೋ, ಅವನು, ಎಲೈ ಅರ್ಜುನನೆ, ಈ ದೇಹವನ್ನು†

---

*. ಭಗವಂತನ ಜನ್ಮವು ಮಾಯಾಮಯವಾದದ್ದೆಂದು ತಿಳಿದರೆ ಮುಕ್ತಿ ಏಕೆ ಆಗುವದೆಂದು ಶಂಕಿಸಬಾರದು. ಏಕೆಂದರೆ ಭಗವಂತನು ತನ್ನ ಆತ್ಮವೇ ಆಗಿರುತ್ತಾನೆಂದು ತಿಳಿಯುವ ಜ್ಞಾನಿಗೆ ಮಾತ್ರವೇ ಪರಮಾತ್ಮನ ಜನ್ಮವು ಮಾಯಾಮಯವೆಂದು ತಿಳಿಯುವದು. (೫೦ನೆಯ ಪುಟದಲ್ಲಿರುವ ೨–೨೧ನೆಯ ಶ್ಲೋಕದ ಭಾಷ್ಯವನ್ನು ನೋಡಿ.)

†. ಮಿಕ್ಕವರು ಮತ್ತೆ ಮತ್ತೆ ಹುಟ್ಟುತ್ತಾರೆ. ಜ್ಞಾನಿಯು ಹುಟ್ಟುವದಿಲ್ಲ – ಎಂಬುದನ್ನು ತಿಳಿಸುವದೇ ಇಲ್ಲಿ ಬೇಕಾದದ್ದು, ಈ ದೇಹವು ಇರುವವರೆಗೆ ಮುಕ್ತಿಯಿಲ್ಲವೆಂಬುದಲ್ಲ. ಏಕೆಂದರೆ ಜ್ಞಾನಿಯ ದೃಷ್ಟಿಯಿಂದ ಶರೀರವು ಮಾಯಿಕವಾಗಿದೆ, ನಿಜವಾಗಿರುವದಿಲ್ಲ

ಬಿಟ್ಟ ಮೇಲೆ ಮತ್ತೆ ಜನ್ಮವನ್ನು ಪಡೆಯುವದಿಲ್ಲ, ಮತ್ತೆ ಹುಟ್ಟುವದೂ ಇಲ್ಲ, ನನ್ನ ಒಳಿಗೆ ಬಂದು ಸೇರುತ್ತಾನೆ, ಎಂದರೆ ಮುಕ್ತನಾಗುತ್ತಾನೆ.

ಈ ಮೋಕ್ಷಮಾರ್ಗವು ಈಗ ಹೊರಟದ್ದಲ್ಲ, ಹಿಂದೆಯೂ

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**

**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

೧೦. ರಾಗಭಯಕ್ರೋಧಗಳಿಲ್ಲದವರಾಗಿ ನನ್ನ ಸ್ವರೂಪರಾಗಿ ನನ್ನನ್ನೇ ಆಶ್ರಯಿಸಿದವರಾಗಿ ಅನೇಕರು ಜ್ಞಾನತಪಸ್ಸಿನಿಂದ ಪವಿತ್ರರಾಗಿ ನನ್ನ ಭಾವವನ್ನು ಹೊಂದಿರುತ್ತಾರೆ.

[ ಭಾಷ್ಯ ]

ಆಸೆ, ಹೆದರಿಕೆ, ಸಿಟ್ಟು– ಇವುಗಳು ಹೋದವರು ವೀತರಾಗಭಯಕ್ರೋಧರು; ಮನ್ಮಯರು* ಎಂದರೆ ಈಶ್ವರನಿಗೂ ತಮಗೂ ಅಭೇದವನ್ನು ತಂದುಕೊಂಡಿರುವ ಬ್ರಹ್ಮಜ್ಞಾನಿಗಳು; ನನ್ನನ್ನು ಆಶ್ರಯಿಸಿರುವವರು ಎಂದರೆ ಪರಮೇಶ್ವರನನ್ನೇ (ಆಶ್ರಯಿಸಿರುವವರು), ಒರಿಯ ಜ್ಞಾನದಲ್ಲೇ ನಿಷ್ಠೆಯುಳ್ಳವರು ಎಂದರ್ಥ. (ಇಂಥ) **ಅನೇಕರು ಜ್ಞಾನವೆಂಬ ಪರಮಾತ್ಮವಿಷಯವಾದ ತಪಸ್ಸಿನಿಂದ ಪವಿತ್ರರಾಗಿ, ಹೆಚ್ಚಿನ ಶುದ್ಧಿಯನ್ನು ಹೊಂದಿ, ನನ್ನ ಭಾವವನ್ನು*** **ಎಂದರೆ ಈಶ್ವರಸ್ವರೂಪವಾದ ಮೋಕ್ಷವನ್ನು ಪಡೆದಿರುತ್ತಾರೆ.** 'ಜ್ಞಾನವೆಂಬ ತಪಸ್ಸಿನಿಂದ' ಎಂದು ತಪಸ್ಸಿಗೆ ವಿಶೇಷಣವನ್ನು ಹಾಕಿರುವದು ಜ್ಞಾನನಿಷ್ಠೆಗೆ ಮತ್ತೆ ಯಾವ† ತಪಸ್ಸಿನ ಸಹಾಯವೂ ಬೇಕಿಲ್ಲವೆಂದು ತಿಳಿಸುವದಕ್ಕೆ.

## ಸಾಧನೆಗೆ ತಕ್ಕ ಫಲವನ್ನು ಕೊಡುವ ಈಶ್ವರನಿಗೆ ರಾಗದ್ವೇಷಗಳಿರುವದಿಲ್ಲ

ಹಾಗಾದರೆ ಕೆಲವರಿಗೆ ಮಾತ್ರ ನಿನ್ನ ಸ್ವರೂಪಪ್ರಾಪ್ತಿಯನ್ನು ಕೊಡುವೆಯೇ ಹೊರತು ಎಲ್ಲರಿಗೂ ಕೊಡದೆ ಇರುವದರಿಂದ ನಿನ್ನಲ್ಲಿ (ಇತರರ ಹಾಗೆಯೇ) ರಾಗದ್ವೇಷಗಳಿರುತ್ತವೆಯೆಂದಾಯಿತಲ್ಲ? ಎಂದರೆ ಹೇಳುತ್ತಾನೆ:–

*. ಈ ವಿಷಯದಲ್ಲಿ ಮತಾಂತರದವರೂ ವ್ಯಾಖ್ಯಾನಕಾರರೂ ಮಾಡಿರುವ ಬೇರೆ ಬೇರೆ ಅರ್ಥವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

†. ಉಪಾಸನವೇ ಮುಂತಾದ ತಪಸ್ಸು, ಮತ್ತು ಮುಂದೆ ೧೭ನೆಯ ಅಧ್ಯಾಯದಲ್ಲಿ ೧೪ ೧೫, ೧೬– ಈ ಶ್ಲೋಕಗಳಲ್ಲಿ ವಿವರಿಸಿರುವ ಮೂರು ಬಗೆಯ ತಪಸ್ಸು. ಇವು ಜ್ಞಾನವುಂಟಾಗುವದಕ್ಕೆ ಬೇಕೇ ಹೊರತು, ಮೋಕ್ಷಕ್ಕೆ ಬೇಡ. ಈ ವಿಷಯದಲ್ಲಿ ಗೀತಾರ್ಥಸರ್ವಸ್ವವನ್ನು ನೋಡಿ.

**ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧ ॥**

೧೧. ಯಾರು ಹೇಗೆ ನನ್ನ ಬಳಿಗೆ ಬರುವರೋ ನಾನು ಅವರಿಗೆ ಹಾಗೆಯೇ ಉಪಕಾರಮಾಡುವೆನು. ಎಲೈ ಪಾರ್ಥನೆ, ಮನುಷ್ಯರು ಸರ್ವಪ್ರಕಾರದಿಂದಲೂ ನನ್ನ ಮಾರ್ಗವನ್ನೇ ಅನುಸರಿಸುತ್ತಿರುವರು.

[ ಭಾಷ್ಯ ]

ಯಾರು ಹೇಗೆ ಯಾವ ರೀತಿಯಿಂದ, ಎಂದರೆ ಯಾವ ಪ್ರಯೋಜನಕ್ಕಾಗಿ, ಎಂಥ ಫಲವಾಗಬೇಕೆಂದು ನನ್ನನ್ನು ಬಂದು ಸೇರುವರೋ ಅವರನ್ನು ಹಾಗೆಯೇ ಆಯಾ ಫಲವನ್ನು ಕೊಟ್ಟು ಉಪಕಾರಮಾಡುವೆನು ಎಂದರೆ (ಹಾಗೆಯೇ ಅವರಿಗೆ) ಅನುಗ್ರಹಿಸುವೆನು ಎಂದು ತಾತ್ಪರ್ಯ. ಅವರಿಗೆ ಮೋಕ್ಷವು ಬೇಕಿಲ್ಲದಿರುವದರಿಂದ (ಅವರಿಗೆ ಅದನ್ನು ಕೊಡುವದಿಲ್ಲ) ಒಬ್ಬನೇ ಏಕಕಾಲದಲ್ಲಿ ಮೋಕ್ಷವನ್ನು ಬಯಸುವದು ಮತ್ತು (ಕರ್ಮದ) ಫಲವನ್ನು ಬಯಸುವದು-ಎಂಬುವದು ಆಗದ ಮಾತು.

ಆದುದರಿಂದ **ಯಾರು ಫಲವನ್ನು ಬಯಸುವರೋ ಅವರಿಗೆ (ಆಯಾ) ಫಲವನ್ನು ಕೊಡುವದು, ಯಾರು ಶಾಸ್ತ್ರದಲ್ಲಿ ಹೇಳಿರುವಂತೆ ಕರ್ಮವನ್ನು ಮಾಡಿ ಫಲವನ್ನು ಬಯಸದೆ ಮುಮುಕ್ಷುಗಳಾಗಿರುವರೋ*ಅವರಿಗೆ ಜ್ಞಾನವನ್ನು ಕೊಡುವದು, ಯಾರು ಜ್ಞಾನಿಗಳಾಗಿ (ಕರ್ಮಗಳನ್ನು) ಕೈಬಿಟ್ಟು ಮುಮುಕ್ಷುಗಳಾಗಿರುವರೋ ಅವರಿಗೆ ಮೋಕ್ಷವನ್ನು ಕೊಡುವದು, ಸಂಕಟದಲ್ಲಿರುವವರ ಸಂಕಟವನ್ನು ಪರಿಹರಿಸುವದು†**- ಹೀಗೆ ಯಾರು ಹೇಗೆ ನನ್ನನ್ನು ಭಜಿಸುವರೋ ಅವರಿಗೆ ಹಾಗೆಯೇ ಅನುಗ್ರಹಿಸುವೆನೇ ಹೊರತು‡ ರಾಗದ್ವೇಷಗಳಿಂದಾಗಲಿ ಮೋಹದಿಂದಲಾಗಲಿ ಯಾರಿಗೂ ಫಲವನ್ನು ಕೊಡುವದಿಲ್ಲ.

---

*. ಕರ್ಮಯೋಗದಲ್ಲಿರುವವರು, ಸಂನ್ಯಾಸಿಗಳಾಗಿ ತತ್ತ್ವವಿಚಾರವನ್ನು ಮಾಡುತ್ತಿರುವವರು-ಎಂದು ಮುಮುಕ್ಷುಗಳು ಎರಡು ಬಗೆ; ಕರ್ಮಯೋಗಿಗಳಿಗೆ ಜ್ಞಾನವೇ ಸಾಕ್ಷಾತ್ಫಲ, ಮೋಕ್ಷವು ಅದರಿಂದಾಗುವ ಫಲ.

†. ೭-೧೬ರ ಸೂಚನೆ.

‡. ಇಲ್ಲಿ 'ತಂ ಯಥಾ ಯಥೋಪಾಸತೇ ತಂ ತಮೇವ ಫಲಂ ಲಭೆತ ಇತಿ ಶ್ರುತೇಃ' ಎಂಬ ವಾಕ್ಯವು ಮ॥ ಪಾಠದಲ್ಲಿದೆ. ಸೂತ್ರಭಾಷ್ಯದಲ್ಲಿಯೂ (೧-೧-೧೨) ಈ ಶ್ರುತಿಯನ್ನು ಉದಾಹರಿಸಿದೆ; ಆದರೆ ಅಲ್ಲಿ 'ತದೇವ ಭವತಿ' ಎಂದಿದೆ.

ಹೇಗೇ ಆಗಲಿ, ಎಲೈ ಪಾರ್ಥನೇ, ಸಕಲರಲ್ಲಿಯೂ ಇರುವ* [ಸರ್ವಾವಸ್ಥಸ್ಯ] ಈಶ್ವರನಾದ ನನ್ನ ಮಾರ್ಗವನ್ನೇ† ಮನುಷ್ಯರು ಸರ್ವಪ್ರಕಾರಗಳಿಂದಲೂ ಅನುಸರಿಸುತ್ತಿರುವರು. ಯಾರು ಯಾವ ಕರ್ಮಕ್ಕೆ ಅಧಿಕಾರಿಗಳಾಗಿದ್ದು ಯಾವ ಫಲವು ತಮಗೆ ಆಗಬೇಕೆಂದು ಪ್ರಯತ್ನಿಸುವರೋ (ಆ ಸಾಧಕರನ್ನು) ಇಲ್ಲಿ ಮನುಷ್ಯರು‡ ಎಂದು ಕರೆದಿದೆ.

ಈಶ್ವರನಾದ ನಿನಗೆ ರಾಗದ್ವೇಷಗಳು ಇಲ್ಲದ್ದರಿಂದ ಸಕಲಪ್ರಾಣಿಗಳಿಗೂ ಅನುಗ್ರಹವನ್ನು ಮಾಡಬೇಕೆಂಬ ಇಚ್ಛೆಯು ಸಮವಾಗಿಯೇ ಇದ್ದ ಮೇಲೆ,§ ಸರ್ವಫಲಗಳನ್ನು ಕೊಡುವದಕ್ಕೆ ಸಮರ್ಥನಾದ ನೀನು ಇದ್ದೂ ಇದ್ದೂ 'ಎಲ್ಲವೂ ವಾಸುದೇವನೆ'|| ಎಂಬ ಜ್ಞಾನದಿಂದ ಎಲ್ಲರೂ ಮುಮುಕ್ಷುಗಳಾಗಿ ನಿನ್ನನ್ನೇ ಏಕೆ ಹೊಂದದೆ ಇರುವರು ?– ಎಂದರೆ ಅದಕ್ಕೆ ಕಾರಣವನ್ನು ಕೇಳು :—

**ಕಾಙ್ಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥**

೧೨. ಕರ್ಮಗಳ ಸಿದ್ಧಿಯನ್ನು ಬಯಸಿದವರಾಗಿ ಇಲ್ಲಿ ದೇವತೆಗಳನ್ನು ಪೂಜಿಸುತ್ತಾರೆ; ಏಕೆಂದರೆ ಮನುಷ್ಯಲೋಕದಲ್ಲಿ ಕರ್ಮದ ಸಿದ್ಧಿಯು ಬೇಗನೆ ಆಗುತ್ತದೆ.

[ ಭಾಷ್ಯ ]

ಕರ್ಮಗಳ ಸಿದ್ಧಿಯನ್ನು ಬಯಸಿ ಎಂದರೆ (ಕರ್ಮಗಳಿಗೆ) ಫಲವುಂಟಾಗಬೇಕೆಂದು ಇಚ್ಛಿಸಿದವರಾಗಿ (ಜನರು) ಈ ಲೋಕದಲ್ಲಿ **ಇಂದ್ರ, ಅಗ್ನಿ–**

---

*. 'ಸರ್ವಾವಸ್ಥಸ್ಯ' ಎಂಬುದಕ್ಕೆ ಎಲ್ಲಾ ಅವಸ್ಥೆಗಳಲ್ಲಿಯೂ ಇರುವ ಎಂದು ಅರ್ಥವನ್ನು ಮಾಡಬಾರದು; ಏಕೆಂದರೆ ಪರಮಾತ್ಮನಿಗೆ ಬೇರೆಬೇರೆ ಅವಸ್ಥೆಗಳಿರುವದಿಲ್ಲ. ೧೮–೬೧ನ್ನು ನೋಡಿ.

† ಕರ್ಮಕ್ಕೆ ನಾನೇ ಫಲವನ್ನು ಕೊಡಬೇಕೇ ಹೊರತು ಕರ್ಮವು ತನಗೆ ತಾನೇ ಫಲವನ್ನು ಕೊಡಲಾರದು– ಎಂದು ಭಾವ. (ಬ್ರ॥ ಸೂ॥ ೩–೨–೩೮, ಗೀತೆ ೭–೨೧ ನೋಡಿ.)

‡. ಮನುಷ್ಯರೆಂದರೆ ಆಯಾ ಅಧಿಕಾರಿಗಳು ಎಂದು ಅರ್ಥವನ್ನು ಮಾಡಿಕೊಳ್ಳದಿದ್ದರೆ ಯಾವ ಮನುಷ್ಯನು ಯಾವ ಕರ್ಮವನ್ನು ಮಾಡಿದರೂ ಫಲವನ್ನು ಕೊಡುವೆನು– ಎಂದರ್ಥವಾಗುವದು. ಇದು ಶ್ರುತಿಯಲ್ಲಿ ಹೇಳಿರುವ ಅಧಿಕಾರವ್ಯವಸ್ಥೆಗೂ ಮುಂದೆ ೧೮ನೆಯ ಅಧ್ಯಾಯದಲ್ಲಿ ಹೇಳಿರುವ ಚಾತುರ್ವರ್ಣ್ಯಧರ್ಮದ ವಿಭಾಗಕ್ಕೂ ವಿರೋಧವಾಗುವದು– ಎಂದು ಭಾವ.

§. ಯದಿ ರಾಗದ್ವೇಷಾಭಾವಾತ್– ಎಂಬ ಪಾಠದಲ್ಲಿ ಅನ್ವಯವು ಸರಿಯಾಗುವದಿಲ್ಲ; 'ಯದಿ' ಎಂಬುದಾದರೂ ಇರಬಾರದು, 'ರಾಗದ್ವೇಷಾಭಾವಃ' ಎಂದಾದರೂ ಇರಬೇಕು. ಆದರೆ ಮುದ್ರಿತಪುಸ್ತಕಗಳಲ್ಲೆಲ್ಲಾ ಈ ಪಾಠವೇ ಇದೆ. ||. ೭–೧೯ರ ಸೂಚನೆ.

ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. (ಹೀಗೆ ಅವರು ಪೂಜಿಸುವದಕ್ಕೆ ಅಜ್ಞಾನವೇ ಕಾರಣವೆಂಬುದಕ್ಕೆ) "ಇನ್ನು ಯಾವನು 'ಈ ದೇವತೆಗಳನ್ನು ಬೇರೆ, ನಾನು ಬೇರೆ' ಎಂದು ದೇವತೆಯನ್ನು ತನಗಿಂತ ಅನ್ಯವಾಗಿ ಪೂಜಿಸುವನೋ ಅವನು ಅರಿಯನು; ಅವನು ದೇವತೆಗಳ ಪಶುವಿನಂತೆ ಇರುವನು" (ಬೃ) ಎಂಬ ಶ್ರುತಿಯು* ಪ್ರಮಾಣವು. (ಹೀಗೆ ತಮಗಿಂತಲೂ) ದೇವತೆಗಳು ಬೇರೆಯೆಂದು ತಿಳಿದು ಫಲದ ಆಸೆಯಿಂದ ಯಾಗವನ್ನು ಮಾಡುತ್ತಿರುವ ಅವರ (ಕರ್ಮಗಳಿಗೆ) ಎಂದರೆ ವರ್ಣಾಶ್ರಮಗಳೇ ಮುಂತಾದ ಅಧಿಕಾರಿಗಳಿಗೆ ಹೇಳಿರುವ ಕರ್ಮಗಳಿಗೆ ಈ ಮನುಷ್ಯಲೋಕದಲ್ಲಿ ಕರ್ಮದಿಂದಾಗಬೇಕಾದ ಫಲವು ಬೇಗನೆ† ಉಂಟಾಗಿಯೇ ಆಗುವದು. ಮನುಷ್ಯಲೋಕದವರಿಗೆ ತಾನೆ ಶಾಸ್ತ್ರದಲ್ಲಿ‡ ಅಧಿಕಾರವಿರುವದು?

'ಮನುಷ್ಯಲೋಕದಲ್ಲಿ ಬೇಗನೆ (ಕರ್ಮಫಲವಾಗುತ್ತದೆ)' – ಎಂದು ವಿಶೇಷಣವನ್ನು ಕೊಟ್ಟಿರುವದರಿಂದ ಬೇರೆ ಲೋಕಗಳಲ್ಲಿಯೂ§ ಕರ್ಮಕ್ಕೆ ಫಲವು ಉಂಟಾಗುವದೆಂದು ಭಗವಂತನು ತಿಳಿಸಿಕೊಟ್ಟಂತಾಯಿತು. ಮನುಷ್ಯಲೋಕದಲ್ಲಿ ವರ್ಣಾಶ್ರಮವೇ ಮುಂತಾದ ಕರ್ಮಗಳೂ ಇವೆ ಎಂಬುದೊಂದು (ಈ ಲೋಕದ) ವಿಶೇಷವು;|| ಇಂಥ ಆಯಾ ವರ್ಣ, ಆಶ್ರಮ– ಮುಂತಾದ ಅಧಿಕಾರಿಗಳು ಮಾಡುವ ಕರ್ಮದಿಂದುಂಟಾಗುವ ಸಿದ್ಧಿಯು, ಬೇಗನೆ ಆಗುತ್ತದೆ.

---

*. ಈ ಶ್ರುತಿಯಲ್ಲಿ ದೇವತೆಯನ್ನು ತನಗಿಂತ ಬೇರೆಯೆಂದು ಉಪಾಸನೆಮಾಡುವವರನ್ನು ಪಶುವೆಂದು ನಿಂದಿಸಿರುವದರಿಂದ ಕರ್ಮಕ್ಕಿಂತಲೂ ಮುಮುಕ್ಷುತೆಯಿಂದ ಪರಮಾತ್ಮನನ್ನೇ ಸೇರುವದು ಹೆಚ್ಚೆಂದು ಸೂಚಿಸಿದಂತೆ ಆಯಿತು.

† ಮನುಷ್ಯಲೋಕದಲ್ಲಿ ಕರ್ಮಫಲದ ಸಿದ್ಧಿಯು ಬೇಗನೆ ಆಗುವದು, ಲೋಕಾಂತರದಲ್ಲಿ ತಡವಾಗಿ ಆಗುವದು– ಎಂಬದು ಸ್ವಾರಸ್ಯವೆಂದು 'ಕ್ಷಿಪ್ರಂ' ಶಬ್ದದ (ಆ||) ವ್ಯಾಖ್ಯಾನಕಾರರು ಹೇಳುತ್ತಾರೆ; ಇದು ಪ್ರಕರಣಕ್ಕೆ ಹೊಂದುವಹಾಗಿಲ್ಲ. ಮನುಷ್ಯಲೋಕದಲ್ಲಿ ಕರ್ಮದ ಫಲವೇ ಬೇಗನೆ ಆಗುವದು; ಆದ್ದರಿಂದ ಅಜ್ಞಾನದಿಂದ ಫಲಕಾಮಿಗಳಾದ ಜನರು ಕರ್ಮದಲ್ಲಿ ತೊಡಗುವರೇ ಹೊರತು, ನಿದಾನವಾಗಿ ಫಲವಾಗುವ ಜ್ಞಾನದಲ್ಲಿ ತೊಡಗುವದಿಲ್ಲ– ಎಂಬುದೇ ಪ್ರಕೃತಕ್ಕೆ ಬೇಕಾದದ್ದು. ಇದು ಭಾಷ್ಯದ ಅವತರಣಿಕೆಯಿಂದಲೂ ಅಲ್ಲಿ ಕೊಟ್ಟಿರುವ ಬೃಹದಾರಣ್ಯಕಶ್ರುತಿಯಿಂದಲೂ ಗೊತ್ತಾಗುತ್ತದೆ.

‡. ಮನುಷ್ಯರಿಗೆ ಮಾತ್ರ ಯಾಗಾದಿಗಳಲ್ಲಿ ಅಧಿಕಾರವಿರುವದೆಂಬುದನ್ನು ಜೈಮಿನಿಸೂತ್ರ (೬–೧–೫)ದಲ್ಲಿ ನಿರ್ಣಯಿಸಿದೆ.

§. ಋಷಿಗಳಿಗೂ ದೇವತೆಗಳಿಗೂ ಉಪಾಸನಾರೂಪವಾದ ಕರ್ಮವುಂಟು– ಎಂದು ಬ್ರ|| ಸೂ|| ೧–೩–೨೬ರಲ್ಲಿ ನಿರ್ಣಯಿಸಿದೆ.

||. ಈ ಲೋಕದಲ್ಲಿರುವ ಜನರಿಗೆ ಇರುವ ವರ್ಣಾಶ್ರಮಧರ್ಮಗಳು ದೇವತೆಗಳಿಗೆ ಇಲ್ಲ.

ಮನುಷ್ಯಲೋಕದಲ್ಲಿಯೆ ವರ್ಣಾಶ್ರಮವೇ ಮುಂತಾದ ಕರ್ಮಗಳ ಅಧಿಕಾರವಿರುವದೇ ಹೊರತು ಮಿಕ್ಕ ಲೋಕಗಳಲ್ಲಿಲ್ಲ– ಎಂಬ ನಿಯಮಕ್ಕೆ ಕಾರಣವೇನು? ಅಥವಾ– 'ವರ್ಣಾಶ್ರಮವೇ ಮುಂತಾದ ವಿಂಗಡವುಳ್ಳ ಮನುಷ್ಯರು ನನ್ನ ಮಾರ್ಗವನ್ನೇ ಸರ್ವಪ್ರಕಾರದಿಂದಲೂ ಅನುಸರಿಸುತ್ತಾರೆ' (೪–೧೧) ಎಂದೆಯಷ್ಟೆ: ನಿನ್ನ ಮಾರ್ಗವನ್ನೆ ಅನುಸರಿಸುವದಕ್ಕೂ ಮತ್ತೊಬ್ಬರ (ಮಾರ್ಗವನ್ನು) ಅನುಸರಿಸದೆ ಇರುವದಕ್ಕೂ ಕಾರಣವೇನು? ಎಂದರೆ ಹೇಳುತ್ತೇನೆ :—

## ಕರ್ಮಗಳ ಫಲದ ಅಂಟು ಪರಮಾತ್ಮನಿಗೆ ಇಲ್ಲವೆಂದು ತಿಳಿದವರಿಗೆ ಬಂಧವಿಲ್ಲ

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩ ॥**

೧೩. ಗುಣಕರ್ಮಗಳ ವಿಂಗಡದ ರೀತಿಯಿಂದ ಚಾತುರ್ವರ್ಣ್ಯವು ನನ್ನಿಂದ ಸೃಷ್ಟಿಯಾಗಿದೆ; ನಾನು ಅದನ್ನು ಮಾಡಿರುವವನಾದರೂ ಅಕರ್ತೃವೆಂದೂ ಅವ್ಯಯನೆಂದೂ ತಿಳಿ.

[ಭಾಷ್ಯ]

ನಾಲ್ಕು ವರ್ಣಗಳಿಗೆ ಚಾತುರ್ವರ್ಣ್ಯವೆಂದು ಹೆಸರು. (ಇದು) ಈಶ್ವರನಾದ ನನ್ನಿಂದ ಸೃಷ್ಟಿಯಾಗಿದೆ, ಹುಟ್ಟಿರುತ್ತದೆ. ['ಬ್ರಾಹ್ಮಣನು ಈತನ ಮುಖವಾಗಿದ್ದನು' ಮುಂತಾದ (ಋ.) ಶ್ರುತಿಯು ಇದಕ್ಕೆ ಪ್ರಮಾಣವು*] ಗುಣಕರ್ಮಗಳ ವಿಂಗಡದಿಂದ ಎಂದರೆ ಗುಣಗಳ ವಿಂಗಡದ ರೀತಿಯಿಂದಲೂ ಕರ್ಮಗಳ ವಿಂಗಡದ ರೀತಿಯಿಂದಲೂ ಎಂದರ್ಥ; ಸತ್ತ್ವ, ರಜ, ತಮ– ಇವೇ ಗುಣಗಳು. ಇವುಗಳಲ್ಲಿ ಸತ್ತ್ವವೇ† ಮುಖ್ಯವಾಗಿ ಸಾತ್ತ್ವಿಕನಾಗಿರುವ **ಬ್ರಾಹ್ಮಣ**ನಿಗೆ ಶಮ, ದಮ, ತಪಸ್ಸು– ಮುಂತಾದ (೧೮–೪೨) ಕರ್ಮಗಳು; ಸತ್ತ್ವವನ್ನು ಎರಡನೆಯದಾಗಿ ಮಾಡಿಕೊಂಡಿರುವವನಾಗಿಯೂ ರಜೋಗುಣವು

---

*. ಈ ವಾಕ್ಯವು ಮ॥ ಮೈ॥ ಪಾಠಗಳಲ್ಲಿಲ್ಲ. 'ಬ್ರಾಹ್ಮಣೋಽಸ್ಯ ಮುಖಮಾಸೀತ್'– ಎಂಬುದಕ್ಕೆ ಮೇಲೆ ಕೊಟ್ಟಿರುವಂತೆ ಅಕ್ಷರಾರ್ಥವಾಗುತ್ತದೆ. 'ಬ್ರಹ್ಮನು ಮುಖದಿಂದ ಹುಟ್ಟಿದನು' –ಎಂದು ಅರ್ಥಮಾಡಬೇಕೆಂದು ಸಾಯಣಭಾಷ್ಯದಲ್ಲಿ ಬರೆದಿದೆ; ಅದಕ್ಕೆ ತೈತ್ತಿರೀಯಸಂಹಿತೆಯ ಪ್ರಮಾಣವನ್ನು ಅಲ್ಲಿ ತೋರಿಸಿರುತ್ತದೆ.

†. ಬ್ರಾಹ್ಮಣನು ಸಾತ್ತ್ವಿಕನೆಂದರೆ ಸತ್ತ್ವವೇ ಮುಖ್ಯವೆಂದು ಅರ್ಥವೇ ಹೊರತು ಮಿಕ್ಕ ಗುಣಗಳು ಅವನಲ್ಲಿಲ್ಲವೆಂದಲ್ಲ.

ಮುಖ್ಯವಾಗಿಯುಳ್ಳವನಾಗಿಯೂ ಇರುವ **ಕ್ಷತ್ರಿಯ**ನಿಗೆ ಶೌರ್ಯ, ತೇಜಸ್ಸು, (೧೮-೪೩) ಮುಂತಾದ ಕರ್ಮಗಳು; ತಮಸ್ಸನ್ನು ಎರಡನೆಯದಾಗಿ ರಜಸ್ಸನ್ನೇ ಮುಖ್ಯವಾಗಿಟ್ಟುಕೊಂಡಿರುವ **ವೈಶ್ಯ**ನಿಗೆ ಕೃಷಿಯೇ ಮುಂತಾದ ಕರ್ಮಗಳು (೧೮-೪೪); ರಜೋಗುಣವು ಎರಡನೆಯದಾಗಿ ತಮೋಗುಣವೇ ಮುಖ್ಯವಾಗಿರುವ **ಶೂದ್ರ**ನಿಗೆ ಸೇವೆಯೇ ಕರ್ಮವು- ಎಂದೀ ಪರಿಯಾಗಿ ಗುಣಕರ್ಮಗಳ* ಪಂಗಡದ ರೀತಿಯಿಂದ ಚಾತುರ್ವರ್ಣ್ಯವು ನನ್ನಿಂದ† ಸೃಷ್ಟಿಯಾಗಿದೆಯೆಂದರ್ಥ. ಈ ಚಾತುರ್ವರ್ಣ್ಯವೆಂಬುದು ಬೇರೆ ಲೋಕಗಳಲ್ಲಿಲ್ಲ. ಆದ್ದರಿಂದಲೇ 'ಮನುಷ್ಯಲೋಕದಲ್ಲಿ' ಎಂಬ ವಿಶೇಷಣವನ್ನು (೪-೧೨) ಹೇಳಿದ್ದು.

(ಅರ್ಜುನ):- ಸರಿ, ಹಾಗಾದರೆ ನಾಲ್ಕು ಬಗೆಯ ವರ್ಣವನ್ನು ಸೃಷ್ಟಿಸುವದೇ ಮುಂತಾದ ಕರ್ಮವನ್ನು ಮಾಡಿರುವದರಿಂದ ಆದರ ಫಲಕ್ಕೂ ಭಾಗಿಯಾಗಿರುತ್ತೀಯೆ; ಆದ್ದರಿಂದ ನೀನು ನಿತ್ಯಮುಕ್ತನಾದ ನಿತ್ಯೇಶ್ವರನಲ್ಲ- ಎಂದಾಗುವದಲ್ಲ?

(ಶ್ರೀಕೃಷ್ಣ):- ಇದಕ್ಕೆ ಉತ್ತರವನ್ನು ಹೇಳುವೆನು ಕೇಳು. **ಮಾಯೆಯ‡ ವ್ಯವಹಾರದ** (ದೃಷ್ಟಿಯಿಂದ ನೋಡಿದರೆ) ಆ ಕರ್ಮಕ್ಕೆ ನಾನು ಕರ್ತೃವಾಗಿದ್ದರೂ ನಾನು ನಿಜವಾಗಿ ಏನೂ ಮಾಡುವವನಲ್ಲ; ಆದ್ದರಿಂದಲೇ ಅವ್ಯಯನು ಎಂದರೆ ಸಂಸಾರಕ್ಕೆ ಒಳಗಾದವನಲ್ಲ- ಎಂದು ತಿಳಿ.

(ಹೀಗೆ) ಯಾವ ಕರ್ಮವನ್ನು ನಾನು ಮಾಡುವೆನೆಂದು ತಿಳಿದಿರುವೆಯೋ ನಿಜವಾಗಿ ನಾನು ಅವಗಳನ್ನು ಮಾಡುವದೇ ಇಲ್ಲವಾದ್ದರಿಂದ-

**ನ ಮಾಂ ಕರ್ಮಾಣಿ ಲಿಮ್ಪನ್ತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

---

*. ಮೊದಲು ಬ್ರಾಹ್ಮಣರನ್ನೆ ದೇವರು ಸೃಷ್ಟಿಸಿದನೆಂದೂ ಆಯಾ ಕರ್ಮದಿಂದ ಬೇರೆ ಬೇರೆ ವರ್ಣದವರಾದರೆಂದೂ ಮೋಕ್ಷಧರ್ಮದಲ್ಲಿದೆ. ಈ ವಿಷಯದಲ್ಲಿ ಗೀತಾರ್ಥಸರ್ವಸ್ವವನ್ನು ನೋಡಿ.

†. 'ನಾನೇ ಕರ್ಮವಿಭಾಗಕ್ಕೆ ತಕ್ಕ ಫಲವನ್ನು ಕೊಡುವೆನಾದ್ದರಿಂದ ಯಾವ ರೀತಿಯಿಂದಲೂ ಜನರು ನನ್ನ ಮಾರ್ಗವನ್ನೇ ಅನುಸರಿಸುವರು ಎಂದು ಹೇಳಿದೆನು'- ಎಂದು ಭಾವ.

‡. ಮಾಯೆಯು ಮೂರುಗುಣಗಳಿಂದಾಗಿರುವದು, ಮೂರು ಗುಣಗಳಿಂದಾಗುವ ಕ್ರಿಯೆಯನ್ನು ಪರಮಾತ್ಮನಲ್ಲಿ ಆರೋಪಮಾಡಿದ ಹೊರತು ಆತ್ಮನು ಕರ್ತೃವಾಗುವಹಾಗಿಲ್ಲ. ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

೧೪. ಕರ್ಮಗಳು ನನಗೆ ಅಂಟುವದಿಲ್ಲ, ನನಗೆ ಕರ್ಮದ ಫಲದಲ್ಲಿ ಆಸೆಯಿಲ್ಲ. ಹೀಗೆಂದು ನನ್ನನ್ನು ಯಾವಾತನು ತಿಳಿದುಕೊಳ್ಳುವನೋ ಅವನು ಕರ್ಮಗಳಿಗೆ ಕಟ್ಟುಬೀಳುವದಿಲ್ಲ.

[ಭಾಷ್ಯ]

ಆ ಕರ್ಮಗಳು ದೇಹಾದಿಗಳನ್ನುಂಟುಮಾಡುವ ಮೂಲಕ* [ದೇಹಾದ್ಯಾರಂಭಕತ್ವೇನ] ನನಗೆ ಅಂಟಿಕೊಳ್ಳುವದಿಲ್ಲ, ಏಕೆಂದರೆ (ನನಗೆ) ಅಹಂಕಾರವಿರುವದಿಲ್ಲ. ಆ ಕರ್ಮಗಳ ಫಲದಲ್ಲಿ ನನಗೆ ಆಸೆಯೂ ಎಂದರೆ ಬಯಕೆಯೂ ಇರುವದಿಲ್ಲ. ಆದರೆ ಯಾವ ಸಂಸಾರಿಗಳಿಗೆ ನಾನು ಕರ್ಮಗಳನ್ನು ಮಾಡುತ್ತೇನೆಂಬ ಅಭಿಮಾನವೂ ಅವುಗಳ ಫಲದಲ್ಲಿ ಆಸೆಯೂ ಇರುವದೋ ಅವರಿಗೆ ಕರ್ಮಗಳು ಅಂಟಿಕೊಳ್ಳುವವೆಂಬುದು ಯುಕ್ತವೇ ಆಗಿದೆ; ಹಾಗಿಲ್ಲವಾದ್ದರಿಂದ† ನನಗೆ ಕರ್ಮಗಳು ಅಂಟಿಕೊಳ್ಳುವದಿಲ್ಲ.

ಹೀಗೆಂದು ಮತ್ತೆ ಯಾವನು ನನ್ನನ್ನು ತನ್ನ ಸ್ವರೂಪವೇ ಎಂದು [ಆತ್ಮತ್ವೇನ] ಅರಿತು 'ನಾನು ಕರ್ಮವನ್ನು ಮಾಡುವದಿಲ್ಲ, ನನಗೆ ಕರ್ಮದ ಫಲದಲ್ಲಿ ಆಸೆಯಿಲ್ಲ'– ಎಂದು ತಿಳಿದುಕೊಳ್ಳುವನೋ, ಅವನು ಕರ್ಮಗಳಿಗೆ ಕಟ್ಟುಬೀಳುವದಿಲ್ಲ; ಅವನಿಗೂ ಕರ್ಮಗಳು ದೇಹವೇ ಮುಂತಾದ್ದನ್ನುಂಟುಮಾಡುವವಾಗುವದಿಲ್ಲ ಎಂದರ್ಥ.

'ನಾನು ಕರ್ಮವನ್ನು ಮಾಡುವವನಲ್ಲ, ನನಗೆ ಕರ್ಮದ ಫಲದಲ್ಲಿ ಆಸೆಯಿಲ್ಲ' ಎಂದು–

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ ೧೫ ॥**

೧೫. ಹೀಗೆಂದು ತಿಳಿದುಕೊಂಡು ಹಿಂದಿನ ಮುಮುಕ್ಷುಗಳೂ ಕರ್ಮವನ್ನು ಮಾಡುತ್ತಿದ್ದರು. ಆದ್ದರಿಂದ ನೀನು ಹಿಂದಿನವರು ಮಾಡಿದಂಥ ಬಲು ಹಿಂದಿನದಾದ ಕರ್ಮವನ್ನೆ ಮಾಡು.

---

*. ಆರಂಭಕವೆಂದರೆ ಕಾರಣವಾಗಿರುವದು; ವೈಶೇಷಿಕರು ಹೇಳುವ ಆರಂಭವಾದದ ವಿಷಯವೇನೂ ಇಲ್ಲಿಲ್ಲ.

†. ಕರ್ಮಗಳು ಮಿಥ್ಯೆಯಾದ್ದರಿಂದ ಕರ್ಮಗಳು ಅಂಟುವದಿಲ್ಲವೆಂದು ಹೇಳಬೇಕಾದದ್ದೇ ಇಲ್ಲವೆಂದು ಕೆಲವರು ಆಕ್ಷೇಪಿಸಿರುತ್ತಾರೆ. ಇದು ಸರಿಯಲ್ಲ; ಕರ್ಮ ಫಲ– ಇವುಗಳನ್ನೆಲ್ಲ ವ್ಯವಹಾರದೃಷ್ಟಿಯಿಂದ ಒಪ್ಪಿ ಜ್ಞಾನಿಯ ದೃಷ್ಟಿಯಿಂದ ಇವು ನಿಜವಾಗಿರುವದಿಲ್ಲವೆಂದು ಹೇಳುವದರಲ್ಲಿ ಏನು ಬಾಧಕವೂ ಇಲ್ಲ.

‡. ೨–೫೫ರ ಮೇಲಿನ ಭಾಷ್ಯವನ್ನು (ಪುಟ ೫೦) ನೋಡಿ.

[ಭಾಷ್ಯ]

ಈ ರೀತಿಯಲ್ಲಿ* ತಿಳಿದುಕೊಂಡು ಹಿಂದೆ ಆಗಿಹೋಗಿರುವ ಮುಮುಕ್ಷುಗಳು ಕೂಡ ಕರ್ಮವನ್ನು ಮಾಡುತ್ತಿದ್ದರು. ಆದ್ದರಿಂದ ನೀನು ಕರ್ಮವನ್ನೇ ಮಾಡು; ಸುಮ್ಮನೆ ಕೂತುಕೊಳ್ಳಲೂ ಬೇಡ, ಕರ್ಮವನ್ನು ಬಿಡಲೂ† ಬೇಡ. ಆದ್ದರಿಂದ, ಎಂದರೆ ಹಿಂದಿನವರೂ ಕರ್ಮವನ್ನು ಮಾಡಿರುವರಾದ್ದರಿಂದ ನೀನು **ಆತ್ಮವನ್ನರಿಯದವನಾದರೆ ಚಿತ್ತಶುದ್ಧಿಗಾಗಿಯೂ [ಆತ್ಮಶುದ್ಧ್ಯರ್ಥಂ] ತತ್ತ್ವವನ್ನರಿತವನಾದರೆ ಲೋಕಸಂಗ್ರಹಕ್ಕಾಗಿಯೂ** ಪೂರ್ವದ ಜನಕನೇ‡ ಮುಂತಾದವರು ಮಾಡಿರುವ, ಬಲು ಹಿಂದಿನದಾದ, ಈಗಿನದಲ್ಲದ ಕರ್ಮವನ್ನು, ಮಾಡು.

## ಕರ್ಮ, ಅಕರ್ಮ– ಇವುಗಳ ತತ್ತ್ವ

ಇಲ್ಲಿ ಕರ್ಮವನ್ನು ಮಾಡಲೇಬೇಕೆಂಬುದೇ ಸರಿಯಾದರೆ ನೀನು ಹೇಳಿದ್ದರಿಂದಲೇ ನಾನು ಮಾಡುವೆನಲ್ಲ, 'ಹಿಂದಿನವರು ಮಾಡಿದ ಬಲು ಹಿಂದಿನ (ಕರ್ಮ)'§ ಎಂದು (ಕರ್ಮಕ್ಕೆ) ವಿಶೇಷಣವನ್ನು ಹಾಕಿದ್ದರ ಉದ್ದೇಶವೇನು? ಎಂದರೆ ಹೇಳುತ್ತೇನೆ. ಹೀಗೇಕೆ ಹೇಳಿದೆನೆಂದರೆ, ಕರ್ಮದ ವಿಷಯದಲ್ಲಿ (ಜನರಿಗೆ) ಬಹಳ ಹೆಚ್ಚುಕಡಿಮೆಯಾದ (ಅಭಿಪ್ರಾಯವಿದೆ.) ಹೇಗೆಂದರೆ:—

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**

೧೬. ಕರ್ಮವು ಯಾವುದು, ಅಕರ್ಮವು ಯಾವುದು? –ಎಂಬೀ ವಿಷಯದಲ್ಲಿ ತಿಳಿದವರೂ ಮೋಹಿತರಾಗಿರುವರು. ಆದ್ದರಿಂದ ನಿನಗೆ ಕರ್ಮವನ್ನು ಹೇಳುವೆನು, ಅದನ್ನು ಅರಿತುಕೊಂಡರೆ ಅಶುಭದಿಂದ ಬಿಡುಗಡೆಯನ್ನು ಹೊಂದುತ್ತೀಯೆ.

[ಭಾಷ್ಯ]

ತಿಳಿದ ಜಾಣರು ಕೂಡ ಕರ್ಮವು ಯಾವದು, ಅಕರ್ಮವು ಯಾವದು?– ಎಂಬ ಈ ವಿಷಯದಲ್ಲಿ, ಎಂದರೆ ಈ ಕರ್ಮವೇ ಮುಂತಾದದ್ದರ ವಿಷಯದಲ್ಲಿ

---

*. 'ಮಾಡುವವನು ನಾನಲ್ಲ' ಎಂದು ತಿಳಿದು ಮಾಡುವದು ಹೇಗೆ? ಎಂದು ಆಕ್ಷೇಪಿಸಬಾರದು. ಮುಮುಕ್ಷುಗಳಾದರೆ 'ಪರಮೇಶ್ವರನೇ ಮಾಡಿಸುತ್ತಾನೆ' ಎಂಬ ಬುದ್ಧಿಯಿಂದ ಮಾಡಬಹುದು ಜ್ಞಾನಿಯಾದರೆ 'ಇದೆಲ್ಲವೂ ವ್ಯವಹಾರ' ಎಂಬ ಬುದ್ಧಿಯಿಂದ ಮಾಡಬಹುದು.

†. ೨–೪೭ನೆಯ ಶ್ಲೋಕದ ಭಾಷ್ಯವನ್ನು ನೋಡಿ. ಕರ್ಮಸಂನ್ಯಾಸದ ವಿಚಾರವನ್ನು ಗೀತಾರ್ಥಸರ್ವಸ್ವದಲ್ಲಿ ವಿಚಾರಮಾಡಿರುತ್ತದೆ. ‡. ೩–೨೦ನೆಯ ಶ್ಲೋಕದ ಭಾಷ್ಯವನ್ನು ನೋಡಿ.

ಮೋಹಿತರಾಗಿರುವರು, ಭ್ರಾಂತಿಯನ್ನು ಹೊಂದಿರುವರು. ಆದ್ದರಿಂದ ನಿನಗೆ ನಾನು ಕರ್ಮವನ್ನೂ ಅಕರ್ಮವನ್ನೂ ಸರಿಯಾಗಿ ಹೇಳಿಕೊಡುವೆನು. ಆ ಕರ್ಮವೇ ಮುಂತಾದದ್ದನ್ನು ತಿಳಿದುಕೊಂಡರೆ ಅಶುಭವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತೀಯೆ.

ಕರ್ಮವೆಂದರೆ ದೇಹವೇ ಮುಂತಾದವುಗಳ ಕೆಲಸವೆಂದು ಜನರಿಗೆ ಗೊತ್ತೇ ಇದೆ, ಅಕರ್ಮವೆಂದರೆ ಅದನ್ನು ಮಾಡದೆ ಸುಮ್ಮನೆ ಕೂತಿರುವದು. (ಇದೂ ಗೊತ್ತೇ ಇದೆ.) ಇದರಲ್ಲಿ ತಿಳಿದುಕೊಳ್ಳತಕ್ಕದ್ದೇನಿದೆ ? ಎಂದೀ ರೀತಿಯಾಗಿಯೂ ಯೋಚಿಸಿಕೊಳ್ಳಬೇಡ. ಏಕೆಂದರೆ, ಹೇಳುತ್ತೇನೆ ಕೇಳು :—

**ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

೧೭. ಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ, ವಿಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ, ಅಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಕರ್ಮದ ಗತಿಯು ಬಹು ಕಷ್ಟವಾಗಿರುವದು.

[ಭಾಷ್ಯ]

ಶಾಸ್ತ್ರದಲ್ಲಿ (ಮಾಡಬೇಕೆಂದು) ವಿಧಿಸಿರುವದು **ಕರ್ಮವು**; (ಇದರ) ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. (ಮಾಡಕೂಡದೆಂದು) ನಿವಾರಣೆ ಮಾಡಿರುವದು **ವಿಕರ್ಮವು**; (ಇದರ) ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಸುಮ್ಮನೆ ಇರುವದು **ಅಕರ್ಮವು**; (ಇದರ) ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ;- ಮೂಲದಲ್ಲಿರುವ ಮೂರು ವಾಕ್ಯದಲ್ಲಿಯೂ 'ಇದೆ' ಎಂಬ ಮಾತನ್ನು ಅಧ್ಯಾಹಾರಮಾಡಿಕೊಳ್ಳಬೇಕು.- 'ಏಕೆಂದರೆ ಕರ್ಮದ ಗತಿಯು ಗಹನವಾಗಿರುವದು' ಇಲ್ಲಿ ಕರ್ಮವೆಂಬ ಮಾತು ಕರ್ಮವೇ ಮುಂತಾದವುಗಳಿಗೆ ಉಪಲಕ್ಷಣವಾಗಿರುತ್ತದೆ, ಕರ್ಮ, ಅಕರ್ಮ, ವಿಕರ್ಮ- ಇವುಗಳ ಗತಿಯು ಎಂದರೆ ನಿಜವಾದ ತತ್ತ್ವವು ತಿಳಿದುಕೊಳ್ಳುವದಕ್ಕೆ ಬಲು ಕಷ್ಟವಾಗಿರುವದು.- ಎಂದರ್ಥ.

ಹಾಗಾದರೆ ನಾನು ತಿಳಿದುಕೊಳ್ಳತಕ್ಕದ್ದೆಂದೂ ನೀನು ಹೇಳಿಕೊಡುವೆಯೆಂದೂ ತಿಳಿಸಿದ ಆ ಕರ್ಮವೇ ಮುಂತಾದ್ದರ ತತ್ತ್ವವು ಯಾವುದು? ಎಂದರೆ ಕೇಳು :-

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥೧೮॥**

೧೮. ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಯಾವಾತನು ಕಂಡುಕೊಳ್ಳುವನೋ ಮನುಷ್ಯರಲ್ಲಿ ಅವನು ಬುದ್ಧಿವಂತನು, ಅವನು ಯುಕ್ತನು, ಎಲ್ಲಾ ಕರ್ಮಗಳನ್ನೂ ಮಾಡಿದವನು.

[ ಭಾಷ್ಯ ]

ಕರ್ಮವೆಂದರೆ ಯಾವದು ಮಾಡಲ್ಪಡುವದೋ ಅಂಥ ಕ್ರಿಯಾಸಾಮಾನ್ಯವು ;* ಅಂಥ ಕರ್ಮದಲ್ಲಿ ಅಕರ್ಮವನ್ನು, ಎಂದರೆ ಕರ್ಮದ ಅಭಾವವನ್ನು, ಯಾವನು ಕಾಣುವನೋ, ಮತ್ತು ಅಕರ್ಮದಲ್ಲಿ ಎಂದರೆ ಕರ್ಮದ ಅಭಾವದಲ್ಲಿ– **ಪ್ರವೃತ್ತಿನಿವೃತ್ತಿಗಳೆರಡೂ† ಕರ್ತೃವಿಗೆ ಅಧೀನವಾಗಿರುವದರಿಂದ,‡ ಕ್ರಿಯೆ, ಕಾರಕ- ಮುಂತಾದ ವ್ಯವಹಾರವೆಲ್ಲವೂ ಅವಿದ್ಯಾಭೂಮಿಯಲ್ಲಿಯೇ§ ಇರುವದೇ ಹೊರತು ಪರಮಾರ್ಥವಸ್ತುವಿಗೆ ಸೇರಿರುವದಿಲ್ಲವಾದ್ದ**ರಿಂದ (ಕರ್ಮವನ್ನು ಬಿಡುವದೆಂಬ ಅಕರ್ಮವೂ ಒಂದು ಬಗೆಯ ಕರ್ಮವೆಂದು) ಕರ್ಮವನ್ನು ಯಾವನು ಕಂಡುಕೊಳ್ಳುವನೋ, 'ಅವನು ಮನುಷ್ಯರಲ್ಲೆಲ್ಲ ಬುದ್ಧಿವಂತನು, ಅವನೇ ಯುಕ್ತನು ಎಂದರೆ ಯೋಗಿ, ಮತ್ತು ಎಲ್ಲಾ ಕರ್ಮಗಳನ್ನೂ ಮಾಡಿದಾತನು'– ಎಂದು ಕರ್ಮಾಕರ್ಮಗಳನ್ನು ವಿಂಗಡಿಸಿ ತಿಳಿಯುವವನನ್ನು ಇಲ್ಲಿ ಹೊಗಳಿರುತ್ತದೆ.

(ಆಕ್ಷೇಪ):– ಇದೇನು, 'ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಯಾವಾತನು ತಿಳಿದುಕೊಳ್ಳುವನೋ' ಎಂದು ವಿರುದ್ಧವಾಗಿ ಹೇಳಿದೆಯಲ್ಲ? ಕರ್ಮವು ಅಕರ್ಮವಾಗಿಯಾಗಲಿ, ಅಕರ್ಮವು ಕರ್ಮವಾಗಿಯಾಗಲಿ ಇರಲಾರದಷ್ಟೆ? ಹೀಗಿರುವಲ್ಲಿ (ತಿಳಿದು) ನೋಡುವಾತನು (ಹೇಗೆ) ವಿರುದ್ಧವಾದದ್ದನ್ನು (ಹೇಗೆ) ಕಂಡುಕೊಳ್ಳಬೇಕು?

(ಪರಿಹಾರ):– ಹಾಗಲ್ಲ. ನಿಜವಾಗಿ ಅಕರ್ಮವಾಗಿ ಇರುವದೇ ತಪ್ಪು ತಿಳಿವಿನ ಜನರಿಗೆ ಕರ್ಮದಂತೆ ತೋರುತ್ತಿರುವದು; ಮತ್ತು (ಕರ್ಮವೇ) ಅವರಿಗೆ

---

*. ಏನೇನು ಮಾಡುತ್ತೇವೊ ಅದೆಲ್ಲ– ಹೋಗುವದು, ಬರುವದು, ಕೈಯಲ್ಲಾಡಿಸುವದು, ನೋಡುವದು, ಕೇಳುವದು, ಯೋಚಿಸುವದು, ತಿಳಿಯುವದು ಮುಂತಾದದ್ದೆಲ್ಲ– ಕರ್ಮವೆ; ಕೇವಲ ಅಗ್ನಿಹೋತ್ರಾದಿಗಳಲ್ಲ, ಅಥವಾ ಬರಿಯ ದೇಹದಿಂದ ಮಾಡುವ ಕೆಲಸವೂ ಅಲ್ಲ. ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ– ಇವುಗಳ ವ್ಯಾಪಾರವೆಲ್ಲ ಕರ್ಮವೆಂದು ಅಭಿಪ್ರಾಯ.

†. ಪ್ರವೃತ್ತಿಯೆಂದರೆ ಕೆಲಸದಲ್ಲಿ ತೊಡಗುವದು, ನಿವೃತ್ತಿಯೆಂದರೆ ಕೆಲಸವನ್ನು ಬಿಟ್ಟು ಹಿಂಜಗ್ಗುವದು.

‡. ಮಾಡುವವನ ಇಚ್ಛೆಗೆ ವಶವಾಗಿರುವದರಿಂದ.

§. ದೇಹಾದಿಗಳೇ ತಾನೆಂದು ತಿಳಿದುಕೊಂಡವನು ಮಾತ್ರ ಕ್ರಿಯೆಯನ್ನು ಮಾಡುವನು, ಕ್ರಿಯೆಗೆ ಸಾಮಗ್ರಿಗಳಾದ ಕಾರಕಗಳನ್ನೂ ಜೋಡಿಸಿಕೊಳ್ಳುವನು.

ಅಕರ್ಮವಾಗಿ ತೋರುತ್ತಿರುವದು. ಆದ್ದರಿಂದ ಇದ್ದದ್ದನ್ನು ಇದ್ದಂತೆ ತಿಳಿದುಕೊಳ್ಳಲೆಂದು ಭಗವಂತನು 'ಕರ್ಮದಲ್ಲಿ ಅಕರ್ಮವನ್ನು ಯಾವಾತನು ಕಂಡುಕೊಳ್ಳುವನೋ', ಎಂದು ಮುಂತಾಗಿ ಹೇಳಿರುತ್ತಾನೆ. ಆದ್ದರಿಂದ ವಿರೋಧವೇನೂ ಇಲ್ಲ. '(ಅವನು) ಬುದ್ಧಿವಂತನು' ಎಂದು ಮುಂತಾಗಿ ಹೇಳಿರುವದರಿಂದಲೂ (ಶ್ಲೋಕಕ್ಕೆ ಇದೇ ಅಭಿಪ್ರಾಯವಾಗಿರಬೇಕು.) 'ತಿಳಿದುಕೊಳ್ಳತಕ್ಕದ್ದಿದೆ' ಎಂದು ಹೇಳಿದ್ದರಲ್ಲಿಯೂ ಇದ್ದದ್ದನ್ನು ಇದ್ದಂತೆ ತಿಳಿದುಕೊಳ್ಳತಕ್ಕದ್ದನ್ನೇ ಹೇಳಿದೆ. ಇದಲ್ಲದೆ ತಪ್ಪಾಗಿ ತಿಳಿದುಕೊಂಡರೆ ಕೆಟ್ಟ (ಸಂಸಾರ)ದಿಂದ ಬಿಡುಗಡೆಯಾಗಲಾರದು; ಆದರೆ 'ಇದನ್ನು ಅರಿತುಕೊಂಡರೆ ಕೆಟ್ಟದ್ದರಿಂದ ಬಿಡುಗಡೆಯನ್ನು ಹೊಂದುತ್ತೀಯೆ' (೪–೧೬) ಎಂದು ಹಿಂದೆ ಹೇಳಿರುತ್ತದೆ. ಆದ್ದರಿಂದ ಕರ್ಮಾಕರ್ಮಗಳನ್ನು ಜೀವರು ತಪ್ಪಾಗಿ ತಿಳಿದುಕೊಂಡಿರುತ್ತಾರೆಂದೂ ಆ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸುವದಕ್ಕಾಗಿ ಭಗವಂತನು 'ಕರ್ಮದಲ್ಲಿ ಅಕರ್ಮವನ್ನು ಯಾರು (ಕಂಡುಕೊಳ್ಳುವರೊ)' ಎಂದು ಮುಂತಾಗಿ ಹೇಳಿರುತ್ತಾನೆಂದೂ (ತಿಳಿಯಬೇಕು). ಇದಲ್ಲದೆ ಕುಡಿಕೆಯಲ್ಲಿ ಯಗಚೀಕಾಯಿಗಳಿರುವಂತೆ ಕರ್ಮವೆಂಬ ಆಧಾರದಲ್ಲಿ ಅಕರ್ಮವೇನೂ ಇರುವದಿಲ್ಲ, ಅಕರ್ಮವೆಂಬ ಆಧಾರದಲ್ಲಿ ಕರ್ಮವೂ ಇರುವದಿಲ್ಲ; ಏಕೆಂದರೆ ಅಕರ್ಮವೆಂದರೆ ಕರ್ಮದ ಅಭಾವ(ಮಾತ್ರ) ವಾಗಿರುತ್ತದೆ.* ಆದ್ದರಿಂದ ಬಿಸಿಲುಕುದುರೆಯಲ್ಲಿ ನೀರನ್ನೂ ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿಯನ್ನೂ ಅರಿಯುವ ಹಾಗೆ ಜನರು ತಪ್ಪಾಗಿ ತಿಳಿದುಕೊಂಡಿರುವ ಕರ್ಮಾಕರ್ಮಗಳನ್ನೇ (ಇಲ್ಲಿ ಭಗವಂತನು ಹೇಳಿರುತ್ತಾನೆಂದಾಯಿತು.)

(ಆಕ್ಷೇಪ):– ಕರ್ಮವು ಎಲ್ಲರಿಗೂ ಕರ್ಮವೇ,† ಬೇರೆಯಾಗಿರುವದೇ ಇಲ್ಲ.

(ಪರಿಹಾರ):– ಹಾಗಲ್ಲ, ಏಕೆಂದರೆ ಹಡಗು ಹೋಗುತ್ತಿರುವಾಗ ಹಡಗಿನಲ್ಲಿರುವವನಿಗೆ ದಡದಲ್ಲಿ ಓಡಾಡದೆ ನಿಂತಿರುವ ಮರಗಳೇ (ಹಡಗು ಹೋಗುವ ದಿಕ್ಕಿಗೆ) ವಿರುದ್ಧವಾದ ದಿಕ್ಕಿಗೆ ಹೋಗುತ್ತಿರುವಂತೆ ತೋರುತ್ತಿರುತ್ತದೆ; ಕಣ್ಣಿಗೆ

---

*. ಆದ್ದರಿಂದ 'ಕರ್ಮದಲ್ಲಿ' 'ಅಕರ್ಮದಲ್ಲಿ' ಎನ್ನುವಾಗ ಸಪ್ತಮೀವಿಭಕ್ತಿಗೆ 'ಪಾತ್ರೆಯಲ್ಲಿ ಹಣ್ಣುಗಳಿವೆ' ಎಂಬ ಉದಾಹರಣೆಯಲ್ಲಿರುವಂತೆ ಆಧಾರವೆಂಬ ಅರ್ಥವನ್ನಿಟ್ಟುಕೊಳ್ಳುವದಕ್ಕೆ ಆಗುವದಿಲ್ಲ. ಏಕೆಂದರೆ ಅಭಾವವೆಂದರೆ ಇಲ್ಲದ್ದು; ಅದರಲ್ಲಿ ಮತ್ತೊಂದಿದೆ ಎಂದರೂ ಅರ್ಥವಿಲ್ಲ, ಅದು ಮತ್ತೊಂದರಲ್ಲಿದೆ ಎಂದರೂ ಅರ್ಥವಿಲ್ಲ.

†. "ಕರ್ಮ ಕರ್ಮೈವ" ಎಂಬ ಮ|| ಮೈ|| ಪಾಠವೇ ಸರಿಯೆಂಬುದು ಸಂದರ್ಭದಿಂದಲೂ ಆ|| ವ್ಯಾಖ್ಯಾನದಿಂದಲೂ ಗೊತ್ತಾಗುತ್ತದೆ.

ಚೆನ್ನಾಗಿ* ಸಿಕ್ಕದಷ್ಟು [ಅಸನ್ನಿಕೃಷ್ಟೇಷು] ದೂರದಲ್ಲಿ ಕೆಲವರು ಹೋಗು ತ್ತಿದ್ದರೆ ಅವರು ಚಲಿಸುತ್ತಲಿಲ್ಲವೆಂದೇ ತೋರುತ್ತದೆ. ಇದರಂತೆ ಇಲ್ಲಿಯೂ ಅಕರ್ಮವನ್ನು ಕರ್ಮವೆಂದೂ ಕರ್ಮವನ್ನು ಅಕರ್ಮವೆಂದೂ ತಪ್ಪಾಗಿ ತಿಳಿದುಕೊಂಡಿರುವದರಿಂದ ಇದನ್ನು ಪರಿಹರಿಸುವದಕ್ಕಾಗಿ 'ಕರ್ಮವನ್ನು ಅಕರ್ಮವೆಂದು ಯಾವಾತನು ಕಂಡುಕೊಳ್ಳುವನೋ' ಎಂದು ಮುಂತಾಗಿ ಹೇಳಿರುತ್ತದೆ.

ಆ ಈ ವಿಷಯದಲ್ಲಿ ಎಷ್ಟೋ ಸಲ ಸಮಾಧಾನವನ್ನು ಹೇಳಿರುತ್ತದೆಯಾದರೂ ತೀರ ತಪ್ಪಾದ ತಿಳಿವಳಿಕೆಯ ವಾಸನೆಯಿಂದ† ಮತ್ತೆ ಮತ್ತೆ ಭ್ರಾಂತರಾಗಿ ಜನರು ಎಷ್ಟೋ ಸಲ ಕೇಳಿರುವ ತತ್ತ್ವವನ್ನೇ ಮರೆತು ಮರೆತು ಇಲ್ಲದ ಪ್ರಸಕ್ತಿ ಗಳನ್ನು‡ ಒಡ್ಡಿ ಒಡ್ಡಿ ಆಕ್ಷೇಪಣೆಯನ್ನು ಮಾಡುತ್ತಾರೆ. ಆದ್ದರಿಂದ ಪರ ಮಾರ್ಥವಸ್ತುತತ್ತ್ವವು ತಿಳಿಯುವದಕ್ಕೆ ಬಹುಕಷ್ಟವೆಂಬುದನ್ನು ಲಕ್ಷ್ಯದಲ್ಲಿಟ್ಟು ಭಗವಂತನೇ ಮತ್ತೆ ಮತ್ತೆ (ಈ ಆಕ್ಷೇಪಣೆಗೆ) ಉತ್ತರವನ್ನು ಹೇಳುತ್ತಿದ್ದಾನೆ. "ಈತನು ಅವ್ಯಕ್ತನೆಂದೂ ಅಚಿಂತ್ಯನೆಂದೂ (ಎನಿಸಿಕೊಳ್ಳುವನು)" (೨-೨೫) "(ಈತನು ಎಂದೆಂದಿಗೂ) ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ" (೨-೨೦) ಎಂಬಿವೇ ಮುಂತಾದ ವಾಕ್ಯಗಳಿಂದ ಆತ್ಮನಲ್ಲಿ ಯಾವ ಕರ್ಮವೂ ಇಲ್ಲವೆಂಬ ಶ್ರುತಿಸ್ಮೃತಿನ್ಯಾಯಸಿದ್ಧವಾದ ವಿಷಯವನ್ನು (ಹಿಂದೆಯೂ) ಹೇಳಿದೆ, ಮುಂದೆ ಯೂ§ ಹೇಳಲಾಗುವದು. ಕರ್ಮಗಳು ಯಾವವೂ ಇಲ್ಲದ ಅಕರ್ಮನಾದ ಆ ಆತ್ಮನಲ್ಲಿ ಕರ್ಮವಿರುವದೆಂದು ತಪ್ಪಾಗಿ ತಿಳಿದುಕೊಳ್ಳುವದು (ಜನರಲ್ಲಿ) ಬಹಳವಾಗಿ ರೂಢಿಯಲ್ಲಿದ್ದುಬಿಟ್ಟಿದೆ ; ಇದರಿಂದಲೇ "ಕರ್ಮವೆಂದರೇನು. ಅಕರ್ಮವೆಂದರೇನು- ಎಂಬ ವಿಷಯದಲ್ಲಿ ತಿಳಿದವರೂ ಮೋಹಿತರಾಗಿರುತ್ತಾರೆ" (೪-೧೬) ದೇಹವೇ ಮುಂತಾದವುಗಳಲ್ಲಿದ್ದುಕೊಂಡಿರುವ ಕರ್ಮವನ್ನು ಜನರು ಆತ್ಮನಲ್ಲಿ ಆರೋಪಿಸಿಕೊಂಡು 'ನಾನು ಕರ್ತನು, ಇದು ನನ್ನ ಕರ್ಮವು, ನಾನು

---

*. ಇಂದ್ರಿಯಸನ್ನಿಕರ್ಷವು ಆದಮೇಲೆಯೆ ಪದಾರ್ಥವು ಕಾಣಿಸುವದು, ಇಲ್ಲದಿದ್ದರೆ ಕಾಣಿ ಸುವದೇ ಇಲ್ಲ; ಆದ್ದರಿಂದ 'ಅಸನ್ನಿಕೃಷ್ಟೇಷು' ಎಂಬ ಮಾತಿಗೆ 'ಸರಿಯಾಗಿ ಪೂರ ಸನ್ನಿಕರ್ಷವಾಗದಿ ರುವ' ಎಂಬ ಅರ್ಥವನ್ನು ಮಾಡಬೇಕು.

†. ಮನಸ್ಸಿನಲ್ಲಿ ಯಾವ ಭಾವನೆಯಿರುವದೋ ಅದಕ್ಕನುಸಾರವಾಗಿ ನಮ್ಮ ವಿಚಾರಸರಣಿ ಯುಂಟಾಗುವದು. ಭ್ರಾಂತಿಗಳಿಗೆ ಇಂಥ ಮನೋವಾಸನೆಯೇ ಕಾರಣವು.

‡. ಪ್ರಸಕ್ತಿಯೆಂದರೆ 'ಹೀಗಾದರೆ ಇಂಥ ತೊಂದರೆ ಬರುವದಲ್ಲ' ಎಂದು ಕಲ್ಪಿಸುವ ಅನಿಷ್ಟ.

§ ೫-೧೪ ಮುಂತಾದ ಕಡೆಯಲ್ಲಿ.

ಈ ಕರ್ಮದ ಫಲವನ್ನು ಅನುಭವಿಸಬೇಕು'* ಎಂದು (ತಿಳಿಯುತ್ತಾರೆ). ಇದರಂತೆ 'ನಾನು ಸುಮ್ಮನೆ ಇರುವೆನು, ಇದರಿಂದ ನನಗೆ ಯಾವ ಆಯಾಸವೂ ಇಲ್ಲದೆ ಸುಖವಾಗುವದು' ಎಂದು ದೇಹೇಂದ್ರಿಯಗಳಲ್ಲಿರುವ ಕೆಲಸವಿಲ್ಲದೆ ಇರುವಿಕೆಯೆಂಬುದನ್ನೂ ಅದರಿಂದಾಗುವ (ಫಲವಾದ) ಸುಖವಾಗಿರುವಿಕೆಯೆಂಬುದನ್ನೂ ಆತ್ಮನಲ್ಲಿ ಆರೋಪಿಸಿಕೊಂಡು 'ನಾನು ಏನೂ ಮಾಡುವದಿಲ್ಲ, ಸುಮ್ಮನೆ ಸುಖವಾಗಿದ್ದೇನೆ' ಎಂದು ತಿಳಿದುಕೊಳ್ಳುತ್ತಿರುವರು. ಹೀಗಿರುವದರಿಂದ ಜನರ ಈ ತಪ್ಪುತಿಳಿವಳಿಕೆಯನ್ನು ತೊಲಗಿಸುವದಕ್ಕಾಗಿ ಭಗವಂತನು "ಕರ್ಮದಲ್ಲಿ ಅಕರ್ಮವನ್ನು ಯಾವಾತನು ಕಂಡುಕೊಳ್ಳುವನೋ" ಎಂದು ಮುಂತಾದ ಮಾತನ್ನು ಆಡಿರುತ್ತಾನೆ.

ಮತ್ತು ಇಲ್ಲಿ ಕರ್ಮವು ಕರ್ಮವೇ ಆಗಿ ದೇಹೇಂದ್ರಿಯಗಳಲ್ಲಿದ್ದುಕೊಂಡಿರುವದಾದರೂ [ಕಾರ್ಯಕರಣಾಶ್ರಯಂ] ಯಾವ ಕರ್ಮವೂ ಇಲ್ಲದ ಆತ್ಮನಲ್ಲಿ ಇದನ್ನು ಎಲ್ಲರೂ **ಅಧ್ಯಾಸ**ಮಾಡುತ್ತಿರುತ್ತಾರೆ; ಅದು ಹೇಗೆಂದರೆ ಪಂಡಿತನು ಕೂಡ 'ನಾನು ಮಾಡುತ್ತೇನೆ' ಎಂದು ತಿಳಿಯುತ್ತಾನೆ. ಆದ್ದರಿಂದ ಆತ್ಮನಲ್ಲಿ ಸೇರಿಕೊಂಡಿರುವದೆಂದು† [ಆತ್ಮಸಮವೇತತಯಾ] ಸಕಲ ಜನರೂ ತಿಳಿದುಕೊಂಡಿರುವ ಕರ್ಮದಲ್ಲಿ, ನದಿಯ ದಡದಲ್ಲಿರುವ ಮರಗಳು (ನಿಜವಾಗಿ) ಚಲಿಸುತ್ತಿರುವದಿಲ್ಲವೆಂದು ತಿಳಿದುಕೊಳ್ಳುವಂತೆ, ಅಕರ್ಮವನ್ನು ಯಾವನು ಕಂಡುಕೊಳ್ಳುವನೋ ಎಂದರೆ ಮರಗಳು ಚಲಿಸುವದಿಲ್ಲವೆಂದು ತಿಳಿದುಕೊಳ್ಳುವಂತೆಯೇ ಆತ್ಮನಲ್ಲಿ ಕರ್ಮವು ಇಲ್ಲವೆಂದು ಯಾವನು ಇದ್ದದ್ದು ಇದ್ದಹಾಗೆ‡ (ಅರಿತುಕೊಳ್ಳುವನೋ), ಮತ್ತು ಅಕರ್ಮದಲ್ಲಿ– ದೇಹೇಂದ್ರಿಯಗಳು ಕೆಲಸವನ್ನು ಬಿಡೋಣ

*. 'ನಾನು ಕರ್ತನು' ಎಂದು ಕೆಲಸವನ್ನು ಮಾಡುವ ಶಕ್ತಿಯನ್ನು ಕಲ್ಪಿಸಿಕೊಳ್ಳುತ್ತಾರೆ; ಇದು ನನ್ನ ಕರ್ಮವು' ಎಂದು ಕ್ರಿಯೆಗೂ ತಮಗೂ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತಾರೆ; 'ಈ ಕರ್ಮದ ಫಲವನ್ನು ಅನುಭವಿಸಬೇಕು' ಎಂದು ಕ್ರಿಯೆಯ ಫಲವನ್ನೂ ಅನುಭವಿಸುವಿಕೆಯೆಂಬ ಭೋಕ್ತೃತ್ವವನ್ನೂ ಕಲ್ಪಿಸಿಕೊಳ್ಳುತ್ತಾರೆ.

†. ನಿತ್ಯಸಂಬಂಧಕ್ಕೆ ಸಮವಾಯವೆಂದು ತಾರ್ಕಿಕರು ಹೆಸರುಕೊಟ್ಟಿರುವರು; ಜನರು ಆತ್ಮನಿಗೆ ನಿತ್ಯವಾಗಿ ಕರ್ಮವು ಗುಂಟುಬಿದ್ದಿರುವದೆಂದು ನಂಬಿರುತ್ತಾರೆಂದು ಸೂಚಿಸುವದಕ್ಕೆ 'ಸಮವೇತ' ಎಂಬ ಮಾತನ್ನು ಭಾಷ್ಯಕಾರರು ಉಪಯೋಗಿಸಿರುತ್ತಾರೆ.

‡. ಆತ್ಮನಲ್ಲಿ ಕ್ರಿಯೆಯಿಲ್ಲವೆಂದು ಧ್ಯಾನಮಾಡಬೇಕೆಂಬುದು ಭಗವಂತನ ಅಭಿಪ್ರಾಯವಲ್ಲ; ಆತ್ಮನಲ್ಲಿ ನಿಜವಾಗಿಯೂ ಕ್ರಿಯೆಯಿಲ್ಲವೇ ಇಲ್ಲವೆಂಬುದನ್ನು ಸರಿಯಾದ ತಿಳಿವಳಿಕೆಯಿಂದ ನಿಶ್ಚಯಿಸಬೇಕೆಂಬುದೇ ಅಭಿಪ್ರಾಯ. ಗೀತಾರ್ಥಸರ್ವಸ್ವದಲ್ಲಿ ಕ್ರಿಯಾಸ್ವರೂಪದ ವಿಚಾರವನ್ನು ಮಾಡಿರುತ್ತದೆ.

ವೆಂಬುದೂ ಕರ್ಮದಂತೆ ಆತ್ಮನಲ್ಲಿ ಹುಟ್ಟುಗಟ್ಟಿದ್ದಾಗಿದೆಯಷ್ಟೆ [ಅಧ್ಯಾರೋಪಿತೇ]; 'ಏನೂ ಮಾಡದೆ ಸುಖವಾಗಿದ್ದೇನೆ' ಎಂಬ ಅಹಂಕಾರದ ಅರಿವಿಗೆ ಇದು ಕಾರಣವಾಗಿರುವದರಿಂದ ಈ ಅಕರ್ಮದಲ್ಲಿಯೂ– ಯಾವನು ಕರ್ಮವನ್ನು ಕಂಡುಕೊಳ್ಳುವನೋ; ಯಾವನು ಹೀಗೆ ಕರ್ಮವನ್ನೂ ಅಕರ್ಮವನ್ನೂ ಬಿಂಗಡಿಸಿ ತಿಳಿದುಕೊಳ್ಳುವನೋ ಅವನು ಮನುಷ್ಯರಲ್ಲಿ ಬುದ್ಧಿವಂತನು, ಪಂಡಿತನು; ಅವನು ಯುಕ್ತನು ಎಂದರೆ ಯೋಗಿಯು, ಅವನು ಎಲ್ಲಾ ಕರ್ಮಗಳನ್ನೂ ಮಾಡಿದವನು; ಅವನು ಕೆಟ್ಟ (ಸಂಸಾರದಿಂದ) ಬಿಡುಗಡೆಯನ್ನು ಹೊಂದಿ ಕೃತಕೃತ್ಯನಾಗುವನು ಎಂದರ್ಥ.

## ವೃತ್ತಿಕಾರರ ತಪ್ಪುವ್ಯಾಖ್ಯಾನ

ಈ ಶ್ಲೋಕಕ್ಕೆ **ಕೆಲವರು*** ಬೇರೆ ರೀತಿಯಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಹೇಗೆಂದರೆ, ನಿತ್ಯಕರ್ಮಗಳನ್ನು ಈಶ್ವರನ ಪ್ರೀತಿಗೆಂದು ಮಾಡಿದರೆ ಅವುಗಳಿಗೆ ಫಲವಾಗುವದಿಲ್ಲ; ಆದ್ದರಿಂದ ಅವುಗಳನ್ನು 'ಅಕರ್ಮ' ಎಂದು ಗೌಣವೃತ್ತಿಯಿಂದ† ಕರೆದಿರುತ್ತದೆ. ಅವುಗಳನ್ನು ಮಾಡದೆ ಇರುವದು ಅಕರ್ಮವು; ಅದರಿಂದ **ಪ್ರತ್ಯವಾಯ**ವೆಂಬ ಫಲವಾಗುವದರಿಂದ‡ ಅದನ್ನು ಕರ್ಮವೆಂದಿದೆ; ಇದೂ ಗೌಣವೃತ್ತಿಯಿಂದಲೇ ಹೇಳಿದ್ದು. ಇವುಗಳಲ್ಲಿ ನಿತ್ಯಕರ್ಮದಲ್ಲಿ ಫಲವಿಲ್ಲವಾದ್ದರಿಂದ ಅಕರ್ಮವನ್ನು ಯಾವಾತನು ಕಾಣುವನೋ – ಹಸುವಾಗಿದ್ದರೂ ಹಾಲೆಂಬ ಫಲವನ್ನು ಕೊಡುವದಿಲ್ಲವೆಂಬುದರ ಮೇಲೆ ಹಸುವನ್ನೇ ಹಸುವಲ್ಲವೆಂದು ಹೇಳಬಹುದಲ್ಲವೆ? ಅದರಂತೆಯೇ ಇದು – ಮತ್ತು ನಿತ್ಯಕರ್ಮವನ್ನು ಮಾಡದೆ ಇರುವದೆಂಬ ಅಕರ್ಮದಲ್ಲಿ, ಅದು ನರಕವೇ ಮುಂತಾದ ಪ್ರತ್ಯವಾಯಫಲವನ್ನು ಕೊಡುವದೆಂಬ ಕಾರಣದಿಂದ, ಯಾವನು ಕರ್ಮವನ್ನು ಕಾಣುವನೋ–(ಎಂದು ಮುಂತಾಗಿ ಅವರು ವ್ಯಾಖ್ಯಾನವನ್ನು ಮಾಡಿರುತ್ತಾರೆ.)

---

*. ಹಿಂದಿನ ಅಧ್ಯಾಯಗಳಲ್ಲಿ ವರ್ಣಿಸಿರುವ ಸಮುಚ್ಚಯವಾದವನ್ನವಲಂಬಿಸಿರುವ ವೃತ್ತಿಕಾರರು. ಈ ಶ್ಲೋಕದ ಮೇಲೆ ಈಚಿನ ಭಾಷ್ಯಕಾರರು ಪಟ್ಟಿರುವ ಅಭಿಪ್ರಾಯಗಳನ್ನೂ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನೂ ಪರಿಶಿಷ್ಟದಲ್ಲಿ ಕೊಟ್ಟಿದೆ.

†. ಅಕರ್ಮಕ್ಕೆ ಫಲವಿಲ್ಲ, ಈಶ್ವರಾರ್ಪಣಕ್ಕಾಗಿ ಮಾಡಿದ ನಿತ್ಯಕರ್ಮಕ್ಕೂ ಫಲವಿಲ್ಲ; ಅಕರ್ಮದ ಈ ಗುಣವು ನಿತ್ಯಕರ್ಮದಲ್ಲಿಯೂ ಬಂದಿರುವದರಿಂದ ಗೌಣವೃತ್ತಿಯಿಂದ ಈ ಕರ್ಮವನ್ನೆ ಅಕರ್ಮವೆನ್ನಬಹುದು ಎಂದು ವೃತ್ತಿಕಾರರ ಆಶಯ.

‡. ನಿತ್ಯಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವೆಂಬ ಕೆಟ್ಟ ಫಲವಾಗುವದೆಂಬ ಮೀಮಾಂಸಕರ ಮತವನ್ನೇ ವೃತ್ತಿಕಾರರು ಅನುಸರಿಸಿರುತ್ತಾರೆ.

ಇದು ಸರಿಯಾದ ವ್ಯಾಖ್ಯಾನವಲ್ಲ; ಏಕೆಂದರೆ ಹೀಗೆಂದು ತಿಳಿದರೆ ಕೆಟ್ಟ (ಸಂಸಾರ)ದಿಂದ ಮೋಕ್ಷವಾಗುವದೆಂಬುದು ಹೊಂದುವದಿಲ್ಲ. "ಇದನ್ನು ತಿಳಿದರೆ ಕೆಟ್ಟದ್ದರಿಂದ ಬಿಡುಗಡೆಯನ್ನು ಹೊಂದುತ್ತೀಯೆ" (೪-೧೬) ಎಂದು ಭಗವಂತನು ಹೇಳಿರುವದು ಸುಳ್ಳಾಗಬೇಕಾಗುವದು. ಹೇಗೆಂದರೆ ನಿತ್ಯ ಕರ್ಮಗಳನ್ನು ಮಾಡಿದರೆ ಒಂದು ವೇಳೆ ಅಶುಭದಿಂದ ಬಿಡುಗಡೆಯಾದರೂ ಆದೀತು;* ಆದರೆ ಅವುಗಳಿಗೆ ಫಲವಿಲ್ಲವೆಂದು ತಿಳಿದದ್ದರಿಂದ ಎಂದಿಗೂ ಆಗ ಲಾರದು. ನಿತ್ಯಕರ್ಮಗಳಿಗೆ ಫಲವಿಲ್ಲವೆಂಬ ಜ್ಞಾನದಿಂದಲಾಗಲಿ ನಿತ್ಯಕರ್ಮದ ಜ್ಞಾನದಿಂದಲಾಗಲಿ ಅಶುಭದಿಂದ ಬಿಡುಗಡೆಯಾಗುವದೆಂದು ಯಾವ ಶ್ರುತಿಯಲ್ಲಿ ಯೂ ಹೇಳಿರುವದೇ ಇಲ್ಲ [ಚೋದಿತಂ]; ಅಥವಾ ಭಗವಂತನಾದರೂ ಇಲ್ಲಿ ಹೇಳಿ ರುವದಿಲ್ಲ. ಅಕರ್ಮವನ್ನು ಕರ್ಮವೆಂದು ಕಾಣಬೇಕೆಂಬ (ವ್ಯಾಖ್ಯಾನವನ್ನೂ) ಇದರಿಂದ ನಿರಾಕರಿಸಿದಂತೆಯೇ ಆಯಿತು; ಏಕೆಂದರೆ ಅಕರ್ಮವನ್ನು ಕರ್ಮವೆಂದು ತಿಳಿಯಬೇಕೆಂದು (ಈ ಗೀತೆಯಲ್ಲಿ) ಎಲ್ಲಿಯೂ ವಿಧಿಸಿರುವದಿಲ್ಲ; ನಿತ್ಯಕರ್ಮ ವನ್ನು† ಮಾಡಬೇಕೆಂದು ಮಾತ್ರ ಹೇಳಿರುತ್ತದೆ. ನಿತ್ಯಕರ್ಮವನ್ನು ಮಾಡದೆ ಇರುವದರಿಂದ ಪ್ರತ್ಯವಾಯವಾಗುವದೆಂದು ತಿಳಿಯುವದರಿಂದಲೂ ಯಾವ ಫಲವೂ ಆಗುವಂತಿಲ್ಲ; ನಿತ್ಯಕರ್ಮವನ್ನು ಮಾಡದೆ ಇರುವದರ ವಿಚಾರವಾಗಿ ತಿಳಿಯ ಬೇಕೆಂದೂ ಇಲ್ಲಿ ವಿಧಿಸಿರುವದಿಲ್ಲ. ಕರ್ಮವನ್ನು ಅಕರ್ಮವೆಂದು ತಿಳಿದು ಕೊಳ್ಳುವ ತಪ್ಪುಜ್ಞಾನದಿಂದ– ಅಶುಭದಿಂದ ಮುಕ್ತನಾಗುವದು, ಬುದ್ಧಿವಂತ ನಾಗುವದು, ಯೋಗಿಯಾಗುವದು, ಎಲ್ಲಾ ಕರ್ಮಗಳನ್ನೂ ಮಾಡಿದಂತಾಗು ವದು– ಇದೇ ಮುಂತಾದ ಫಲವು (ನಿಜವಾಗಿ) ಆಗುವದೆಂದಾಗಲಿ, ಅಥವಾ (ಆ ಜ್ಞಾನವನ್ನು ಈ ಮಾತುಗಳಿಂದ) ಹೊಗಳಿದೆಯೆಂದಾಗಲಿ‡ ಹೇಳುವದೂ ಹೊಂದು

---

*. ಕರ್ಮದಿಂದ ಮೋಕ್ಷವಾಗುವದೆಂಬುದನ್ನು ಸಿದ್ಧಾಂತದಲ್ಲಿ ಒಪ್ಪುವದಿಲ್ಲವಾದರೂ ಕರ್ಮಕ್ಕೆ ಒಂದು ಫಲವಿರುವದೆಂಬುದನ್ನು ಒಪ್ಪಬಹುದು; ಆದ್ದರಿಂದ ನಿತ್ಯಕರ್ಮವನ್ನು ಮಾಡಿದರೆ ಪಾಪವೇ ಮುಂತಾದ ಅಶುಭದಿಂದ ಬಿಡುಗಡೆಯಾಗುತ್ತದೆ ಎಂದು ಒಪ್ಪಬಹುದು– ಎಂದು ಭಾವ.

†. ೩–೮ ನೋಡಿ.

‡. ಜ್ಞಾನದಿಂದ ಅಜ್ಞಾನವು ಹೋಗುವದು ಸ್ವಾಭಾವಿಕವಾದ್ದರಿಂದ ಅಜ್ಞಾನದಿಂದಾದ ಅಶು ಭವು ಎಂದರೆ ಸಂಸಾರವು ಜ್ಞಾನದಿಂದ ಬಿಡುಗಡೆಯಾಗುವದೆಂಬುದು ಯುಕ್ತವಾಗಿದೆ. ಮನುಷ್ಯನು ಒಂದೊಂದು ಇಷ್ಟವನ್ನು ಪಡೆಯುವದಕ್ಕೂ ಅನಿಷ್ಟವನ್ನು ತಪ್ಪಿಸಿಕೊಳ್ಳುವದಕ್ಕೂ ಒಂದೊಂದು ಕರ್ಮ ವನ್ನು ಮಾಡುವನು; ಜ್ಞಾನದಿಂದ ಸಕಲೇಷ್ಟಪ್ರಾಪ್ತಿಯೂ ಸಕಲಾನಿಷ್ಟನಿವೃತ್ತಿಯೂ ಆಗುವದರಿಂದ ಅವನನ್ನು ಯೋಗಿಯೆಂದೂ ಸಕಲಕರ್ಮಗಳನ್ನೂ ಮಾಡಿದವನೆಂದೂ ಹೊಗಳಬಹುದಾಗಿದೆ. ತಪ್ಪು ಜ್ಞಾನದಿಂದ ಈ ಯಾವ ಫಲವೂ ಆಗಲಾರದಾದ್ದರಿಂದ ಅದನ್ನು ಹೀಗೆ ಹೊಗಳುವದು ಸರಿಯಾಗುವದಿಲ್ಲ.

ಗಡೆಯಾಗುವದಿಲ್ಲ. ತಪ್ಪುಜ್ಞಾನವೆಂಬುದೇ ಅಶುಭರೂಪವಾಗಿರುವದು; ಹೀಗಿರುವಲ್ಲಿ ಆದರಿಂದ ಮತ್ತೊಂದು ಅಶುಭದ ಬಿಡುಗಡೆಯಾಗುವದೆಂಬುದೆಲ್ಲಿ ಬಂತು? ಕತ್ತಲೆಯು ಕತ್ತಲೆಯನ್ನು ಕಳೆಯಲಾರದಷ್ಟೆ?

(ವೃತ್ತಿಕಾರ):- ಕರ್ಮವನ್ನು ಅಕರ್ಮವೆಂದು ತಿಳಿಯುವದಾಗಲಿ ಅಕರ್ಮವನ್ನು ಕರ್ಮವೆಂದು ತಿಳಿಯುವದಾಗಲಿ ಮಿಥ್ಯಾಜ್ಞಾನವಲ್ಲ, ಫಲವಿರುವದು ಇಲ್ಲದಿರುವದು ಎಂಬ ನಿಮಿತ್ತದಿಂದಾಗಿರುವ ಗೌಣಜ್ಞಾನವು* (ಎಂದಲ್ಲವೆ ನಾವು ವ್ಯಾಖ್ಯಾನಮಾಡಿರುವದು ?)

(ಉತ್ತರ) :– ಹಾಗಲ್ಲ. ಏಕೆಂದರೆ ಕರ್ಮವು ಅಕರ್ಮವೆಂದು ತಿಳಿಯುವ ಗೌಣಜ್ಞಾನಕ್ಕಾದರೂ ಫಲವನ್ನು ಹೇಳಿರುವದಿಲ್ಲ. ಹೇಳಿರುವದನ್ನುಬಿಟ್ಟು† ಹೇಳದೆ ಇರುವದನ್ನು ಕಲ್ಪಿಸುವದರಿಂದ ಯಾವ ಹೆಚ್ಚುಕಡಿಮೆಯೂ ಆದಂತೆ ಕಂಡುಬರುವದಿಲ್ಲ. 'ನಿತ್ಯಕರ್ಮಗಳನ್ನು ಮಾಡುವದರಿಂದ ಫಲವೇನೂ ಇಲ್ಲ, ಅವುಗಳನ್ನು ಮಾಡದಿದ್ದರೆ ನರಕಕ್ಕೆ ಬೀಳಬೇಕಾಗುವದು' ಎಂದು ನೇರಾಗಿ ಅದೇ ಮಾತಿನಿಂದಲೆ ಈ ವಿಷಯವನ್ನು ಹೇಳಿಬಿಡಲೂ ಬಹುದಾಗಿದೆ; ಹೀಗಿರುವಲ್ಲಿ 'ಕರ್ಮದಲ್ಲಿ ಅಕರ್ಮವನ್ನು ಯಾವನು ನೋಡುತ್ತಾನೋ' ಎಂದು ಮತ್ತೊಬ್ಬರಿಗೆ ಭ್ರಾಂತಿಯುಂಟಾಗುವಂತೆ ಮೋಸದ ಮಾತಿನಿಂದ ಹೇಳುವದರಿಂದೇನು ಪ್ರಯೋಜನ? ಇಲ್ಲಿ ಹೀಗೆ ಭಗವಂತನು ವಿವರಿಸಿರುವದರಿಂದ ಅವನು ಹೇಳಿರುವದು ಜನರನ್ನು ಮರುಳುಗೊಳಿಸುವದಕ್ಕೆಂದು ಸ್ಪಷ್ಟವಾಗಿ ಕಲ್ಪಿಸಿದಂತೆ ಆಗುವದು. ಇದಲ್ಲದೆ ಇದು ವಕ್ರರೀತಿಯಿಂದ ಹೇಳಿ ಕಾಪಾಡತಕ್ಕ‡ ವಸ್ತುವೇನೂ ಅಲ್ಲ; ಅಥವಾ ಬೇರೆ ಮಾತಿನಿಂದ ಮತ್ತೆ ಮತ್ತೆ ಹೇಳಿದರೆ ಸುಲಭವಾಗಿ ತಿಳಿದೀತೆಂದು (ಹೀಗೆ ಹೇಳಿರುತ್ತಾನೆನ್ನುವದೂ) ಸರಿಯಾಗುವದಿಲ್ಲ. 'ನಿನಗೆ ಕರ್ಮದಲ್ಲಿಯೇ ಅಧಿಕಾರವು' (೨-೪೭) ಎಂಬಲ್ಲಿ ಅತ್ಯಂತಸ್ಪಷ್ಟವಾಗಿ ಹೇಳಿಬಿಟ್ಟಿರುವದರಿಂದ ಅದನ್ನು ಮತ್ತೆ ಹೇಳಬೇಕಾದದ್ದೇನೂ ಇರುವದೇ ಇಲ್ಲ. ಶಾಸ್ತ್ರದಲ್ಲಿ ಎಲ್ಲಿಯೇ

---

*. ಮಿಥ್ಯಾಜ್ಞಾನವು ಅಶುಭವಾದರೆ ಆಗಲಿ. ನಾವೇನೂ ಮಿಥ್ಯಾಜ್ಞಾನವನ್ನು ಹೇಳಿಲ್ಲ. ಕರ್ಮವನ್ನು ಅಕರ್ಮವೆಂದು ತಿಳಿಯುವದು ಗೌಣಜ್ಞಾನವೆಂದಲ್ಲವೆ ನಾವು ಹೇಳಿದ್ದು– ಎಂದು ವೃತ್ತಿಕಾರರ ಪ್ರಶ್ನೆ.

†. ಕರ್ಮವನ್ನು ಅಕರ್ಮವೆಂದು ತಿಳಿಯಬೇಕೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ; ಇದು ಮುಖ್ಯವಲ್ಲವೆಂದೂ ಗೌಣವೆಂದೂ ಕಲ್ಪಿಸಿದ್ದರಿಂದಲೂ ಲಾಭವೇನು?

‡. ಯಾವದಾದರೂ ಬಹು ಮುಖ್ಯವಾದ ವಿಷಯವಾದರೆ ಅದನ್ನು ವಿರೋಧಾಭಾಸವೇ ಮುಂತಾದ ಆಲಂಕಾರಿಕಭಾಷೆಯಿಂದ ಮೊದಲು ಜನರ ಲಕ್ಷ್ಯಕ್ಕೆ ತಂದು ಆಮೇಲೆ ಅದನ್ನು ವಿವರಿಸುವದು ಅವಶ್ಯ. ಸಾಮಾನ್ಯವಿಷಯಗಳಿಗೆ ಇಷ್ಟು ಆಡಂಬರವೇಕೆ?

ಆಗಲಿ ಯಾವದನ್ನು ಮಾಡಬೇಕೋ ಅದನ್ನೇ ಹೊಗಳಿರುತ್ತದೆ, ಅದನ್ನೇ ತಿಳಿದು ಕೊಳ್ಳಬೇಕೆಂದು ಹೇಳಿರುತ್ತದೆಯೇ ಹೊರತು ಯಾವ ಪ್ರಯೋಜನವೂ ಇಲ್ಲದ್ದನ್ನು ತಿಳಿದುಕೊಳ್ಳಬೇಕೆಂದು ಹೇಳಿರುವದಿಲ್ಲ. ಆದರೆ ಮಿಥ್ಯಾಜ್ಞಾನವಾಗಲಿ ಆದರಿಂದ ಕಲ್ಪಿತವಾದ ಭ್ರಾಂತಿಸಿದ್ಧವಾದ ವಸ್ತುವಾಗಲಿ ತಿಳಿದುಕೊಳ್ಳತಕ್ಕದ್ದಾಗಿರಲಾರದು.

ಇದಲ್ಲದೆ ನಿತ್ಯಕರ್ಮಗಳನ್ನು ಮಾಡದೆ ಇರುವದೆಂಬ ಅಭಾವದಿಂದ ಪ್ರತ್ಯವಾಯುವೆಂಬ ಭಾವವು ಹುಟ್ಟುವಂತೆಯೂ ಇಲ್ಲ. ಏಕೆಂದರೆ "ಅಸತ್ತಾದದ್ದಕ್ಕೆ ಹುಟ್ಟುವಿಕೆಯಿಲ್ಲ" (೨-೧೬) ಎಂದು* ಭಗವಂತನು ಹಿಂದೆ ಹೇಳಿರುತ್ತಾನೆ. ಇಲ್ಲದ (ಅಸತ್ತಿ)ನಿಂದ ಇರುವ (ಸತ್ತು) ಹೇಗೆ ಉಂಟಾದೀತು ?" (ಛಾ.) ಎಂಬ ಶ್ರುತಿಯಲ್ಲಿ ಅಸತ್ತಿನಿಂದ ಸತ್ತು ಉಂಟಾಗಲಾರದೆಂದು ತಿಳಿಸಿರುತ್ತದೆ. ಅಸತ್ತಿನಿಂದ ಸತ್ತು ಉಂಟಾಗುವದೆಂದು ಹೇಳಿದರೆ ಇಲ್ಲದ್ದೇ ಇರುವದಾಗುವದೆಂದೂ ಇರುವದು ಇಲ್ಲದ್ದಾಗುವದೆಂದೂ ಹೇಳಿದಂತಾಗುವದು. ಇದೂ ಯುಕ್ತವಲ್ಲ, ಏಕೆಂದರೆ ಇದು ಸಕಲಪ್ರಮಾಣಗಳಿಗೂ† ವಿರೋಧವಾಗಿರುತ್ತದೆ.

ಇದೂ ಅಲ್ಲದೆ ನಿಷ್ಫಲವಾದ ಕರ್ಮವನ್ನು ಶಾಸ್ತ್ರವು ವಿಧಿಸಲೂ ಆರದು ; ಏಕೆಂದರೆ ಕರ್ಮವೆಂಬುದು ದುಃಖರೂಪವಾದದ್ದು. ದುಃಖವನ್ನು ಬುದ್ಧಿಪೂರ್ವಕವಾಗಿ ಯಾರೂ ಮಾಡಿಕೊಳ್ಳುವ ಹಾಗಿಲ್ಲವಾದ್ದರಿಂದಲೂ ಅದನ್ನು ಮಾಡದೆ ಇದ್ದರೆ ನರಕಪಾತವೇ ಆಗುವದೆಂದು ಅಂಗೀಕರಿಸಿರುವದರಿಂದಲೂ ಮಾಡಿದರೂ ಮಾಡದೆ ಬಿಟ್ಟರೂ ಎರಡು ಬಗೆಯಿಂದಲೂ‡ ಅನರ್ಥವೇ ಎಂದಾಗಿ ಶಾಸ್ತ್ರವು ನಿಷ್ಫಲವೆಂದು ಕಲ್ಪಿಸಿದಂತೆ ಆಗುವದು. ಮತ್ತು ನಿತ್ಯಕರ್ಮಕ್ಕೆ ಫಲವಿಲ್ಲವೆಂದೂ ಹೇಳಿ ಅದರಿಂದ ಮೋಕ್ಷವೆಂಬ ಫಲವಾಗುವದೆಂದೂ§ ಹೇಳಿದರೆ ಅದು ನಿಮ್ಮ ಅಂಗೀಕಾರಕ್ಕೂ ವಿರುದ್ಧವಾಗಿರುವದು.

---

*. 'ಅಸತ್ತು ಹುಟ್ಟುವದಿಲ್ಲ', ಎಂದರೆ ಅಸತ್ತಿನಿಂದ ಸತ್ತು ಉಂಟಾಗಲಾರದೆಂದರ್ಥ.

†. ಇಲ್ಲದ್ದರಿಂದ ಎಂದರೆ ಬರಿಯ ಸೊನ್ನೆಯಿಂದ ಏನಾದರೂ ಉಂಟಾಗುವದೆಂಬುದು ಪ್ರತ್ಯಕ್ಷದಲ್ಲಿ ಕಂಡಿಲ್ಲ, ಅನುಮಾನದಿಂದ ಊಹಿಸುವದಕ್ಕೆ ಬರುವದಿಲ್ಲ, ಶಾಸ್ತ್ರದಲ್ಲಿ ಹೇಳಿಲ್ಲ. ಇದ್ದದ್ದು ಇಲ್ಲದಂತಾಗುವದೆಂಬುದೂ ಹೀಗೆಯೇ ಪ್ರಮಾಣಕ್ಕೆ ವಿರೋಧ.

‡. ನಿತ್ಯಕರ್ಮವನ್ನು ಮಾಡಿದರೆ ಮಾಡುವ ದುಃಖ, ಮಾಡದೆ ಇದ್ದರೆ ನರಕದ ದುಃಖ– ಹೀಗೆ ಎರಡು ಬಗೆಯಿಂದಲೂ ದುಃಖವೇ ಎಂದು ಹೇಳಿದಂತಾಗುವದು.

§. ವೃತ್ತಿಕಾರರ ಮತದಲ್ಲಿ ಜ್ಞಾನಕರ್ಮಗಳೆರಡೂ ಸೇರಿ ಮೋಕ್ಷವನ್ನು ಕೊಡುವವೆಂದು ಒಪ್ಪಿರುತ್ತದೆ; ನಿತ್ಯಕರ್ಮಕ್ಕೆ ಫಲವಿಲ್ಲವೆಂಬುದು ಇದಕ್ಕೆ ವಿರುದ್ಧ.

ಆದ್ದರಿಂದ "ಕರ್ಮದಲ್ಲಿ ಅಕರ್ಮವನ್ನು ಯಾರು (ಕಾಣುವನೊ)" ಎಂದು ಮುಂತಾಗಿರುವ ಈ ವಾಕ್ಯಕ್ಕೆ ಅಕ್ಷರಾರ್ಥವನ್ನು ಇಟ್ಟುಕೊಂಡೇ ತಾತ್ಪರ್ಯವನ್ನು ಹೇಳಬೇಕು [ಯಥಾ ಶ್ರುತ ಏವ]; ಆದ್ದರಿಂದ ನಾವು ಈ ಶ್ಲೋಕಕ್ಕೆ ಹಾಗೆಯೇ ವ್ಯಾಖ್ಯಾನಮಾಡಿರುತ್ತೇವೆ.

## ಜ್ಞಾನಿಗೆ ಯಾವ ಕರ್ಮದ ಬಂಧವೂ ಇಲ್ಲ

ಈಗ ಕರ್ಮದಲ್ಲಿ ಅಕರ್ಮವನ್ನು ನೋಡುವದು ಮುಂತಾದ ಈ ಜ್ಞಾನವನ್ನು ಹೊಗಳುತ್ತಾನೆ :—

**ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥ ೧೯ ॥**

೧೯. ಯಾವಾತನು ಪ್ರಾರಂಭಿಸುವ ಕರ್ಮಗಳೆಲ್ಲ ಕಾಮಸಂಕಲ್ಪವಿಲ್ಲದೆ ಇರುವವೋ, ಜ್ಞಾನಾಗ್ನಿಯಿಂದ ಸುಟ್ಟ ಕರ್ಮವುಳ್ಳ ಆತನನ್ನು ತಿಳಿದವರು ಪಂಡಿತನೆಂದು ಕರೆಯುವರು.

[ ಭಾಷ್ಯ ]

ಮೇಲೆ ಹೇಳಿದಂತೆ (ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ) ಕಾಣುವ ಯಾವಾತನ ಸಮಾರಂಭಗಳು ಎಂದರೆ (ಯಾವಾತನು) ಪ್ರಾರಂಭಿಸುವ ಕರ್ಮಗಳು ಎಲ್ಲವೂ ಕಾಮಸಂಕಲ್ಪಗಳಿಲ್ಲದೆ– ಕಾಮಗಳಾಗಲಿ ಅವುಗಳಿಗೆ ಕಾರಣವಾದ ಸಂಕಲ್ಪಗಳಾಗಲಿ* ಇಲ್ಲದೆ ಇರುವವೋ, ಸುಮ್ಮನೆ (ಫಲವಿಲ್ಲದ) ವ್ಯಾಪಾರರೂಪವಾಗಿ† ಮಾಡಲ್ಪಡುತ್ತಿರುವವೋ, **ತಾನು ಪ್ರವೃತ್ತಿಧರ್ಮದಲ್ಲಿದ್ದರೆ‡ ಲೋಕಸಂಗ್ರಹಕ್ಕಾಗಿಯೂ ನಿವೃತ್ತಿಧರ್ಮದಲ್ಲಿದ್ದರೆ ಬದು**

---

*. ಒಂದು ವಸ್ತುವಿನ ಅಥವಾ ಒಂದು ಕ್ರಿಯೆಯ ವಿಷಯವನ್ನು ಮನಸ್ಸಿನಲ್ಲಿ ಮತ್ತೆ ಮತ್ತೆ ಆಲೋಚಿಸುವದು ಸಂಕಲ್ಪವು.

†. ಕರ್ಮಕ್ಕೆ ಫಲವಾಗಬೇಕಾದರೆ ನಾನು ಮಾಡುತ್ತೇನೆಂಬ ಕರ್ತೃತ್ವಬುದ್ಧಿಯೂ ಫಲದ ಬಯಕೆಯೂ ಬೇಕು; ಯಂತ್ರವು ಕೆಲಸವನ್ನು ಮಾಡುವ ಹಾಗೆ ಸುಮ್ಮನೆ ಕೆಲಸವನ್ನು ಮಾಡಿದರೆ ಫಲವೇನೂ ಆಗುವದಿಲ್ಲ.

‡. ಪ್ರವೃತ್ತಿಯೂ ನಿವೃತ್ತಿಯೂ ಎರಡೂ ಕರ್ಮಗಳೇ ಎಂದೂ, ಪರಮಾರ್ಥದ ದೃಷ್ಟಿಯಿಂದ ನೋಡಿದರೆ ಜ್ಞಾನಿಗೆ ಇವೆರಡೂ ಇಲ್ಲವೆಂದೂ ಆಚಾರ್ಯರ ಅಭಿಪ್ರಾಯವು. ಜ್ಞಾನಿಯು ಪ್ರವೃತ್ತಿಕರ್ಮದಲ್ಲಿರುವದಿಲ್ಲವೆಂದಾಗಲಿ, ಇದ್ದರೆ ಅವನು ಜ್ಞಾನಿಯಲ್ಲವೆಂದಾಗಲಿ, ಅವರ ತಾತ್ಪರ್ಯವಲ್ಲ. ಗೀತಾರ್ಥಸರ್ವಸ್ವದಲ್ಲಿ ಪರಮಾರ್ಥಸಂನ್ಯಾಸದ ವಿಷಯವಾಗಿ ಚರ್ಚಿಸಿರುತ್ತದೆ.

**ಕಿರುವ ಮಟ್ಟಿಗೆ ಬೇಕಾದವೆಂಬ ಕಾರಣದಿಂದಲೂ** (ಯಾವನು ಕರ್ಮವನ್ನು ಮಾಡುತ್ತಿರುವನೋ), ಅಂಥ ಜ್ಞಾನಾಗ್ನಿಯಿಂದ ಸುಟ್ಟ ಕರ್ಮವುಳ್ಳವನನ್ನು–(ಮೇಲೆ ಹೇಳಿರುವಂತೆ) ಕರ್ಮದಲ್ಲಿ ಅಕರ್ಮವನ್ನು ನೋಡುವದೇ ಮುಂತಾದದ್ದು ಜ್ಞಾನವು, ಆ ಜ್ಞಾನವೇ ಅಗ್ನಿಯು. ಅಂಥ– ಜ್ಞಾನಾಗ್ನಿಯಿಂದ ಯಾವನ ಪುಣ್ಯಪಾಪಗಳೆಂಬ ಕರ್ಮಗಳು ಸುಟ್ಟುಹೋಗಿರುವವೋ* ಅವನನ್ನು, ನಿಜವಾದ ಪಂಡಿತನೆಂದು ತಿಳಿದವರು ಎಂದರೆ ಬ್ರಹ್ಮಜ್ಞಾನಿಗಳು ಕರೆಯುತ್ತಾರೆ

**ಯಾವನು (ಕರ್ಮದಲ್ಲಿ) ಅಕರ್ಮವನ್ನು ನೋಡುವದೇ ಮುಂತಾದ ಜ್ಞಾನವುಳ್ಳವನೋ, ಆತನು (ಹೀಗೆ) ಅಕರ್ಮವೇ ಮುಂತಾದದ್ದನ್ನು ಕಾಣುವದರಿಂದಲೇ ನಿಷ್ಕರ್ಮನಾಗಿ ಸಂನ್ಯಾಸಿಯಾಗಿರುವನು, ಬದುಕಿರುವ ಮಟ್ಟಿಗೆ ಕೆಲಸವನ್ನು ಮಾಡುತ್ತಿರುವನು; ಈ ವಿವೇಕವು ಹುಟ್ಟುವ ಮೊದಲು ಕರ್ಮದಲ್ಲಿ ಪ್ರವೃತ್ತನಾಗಿದ್ದರೂ (ಇನ್ನು ಮುಂದೆ ಅವನು) ಕರ್ಮದಲ್ಲಿ ತೊಡಗುವದಿಲ್ಲ.** ಆದರೆ **ಕರ್ಮವನ್ನು ಪ್ರಾರಂಭಿಸಿದ ಮೇಲೆ ಯಾವನಿಗೆ ಸರಿಯಾದ ಜ್ಞಾನವು ಉಂಟಾಗುವದೋ** ಅವನಿಗೆ ಯಾವ ಕರ್ಮದಲ್ಲಿಯೂ ಯಾವ ಪ್ರಯೋಜನವೂ ತೋರುವದಿಲ್ಲವಾದ್ದರಿಂದ ಕರ್ಮವನ್ನೂ ಆದರ ಸಾಧನಗಳನ್ನೂ ಬಿಟ್ಟೇಬಿಡುವನು; ಅವನಿಗೆ ಏನಾದರೊಂದು ನಿಮಿತ್ತದಿಂದ ಕರ್ಮವನ್ನು ಬಿಡುವದಕ್ಕೆ ಆಗದೆ ಇದ್ದರೆ, ಕರ್ಮದಲ್ಲಿಯೂ ಆದರ ಫಲದಲ್ಲಿಯೂ ಸಂಗವಿಲ್ಲದ್ದರಿಂದ **ತನಗೆ ಅದರಿಂದ ಆಗಬೇಕಾದ ಪ್ರಯೋಜನವೇನೂ ಇಲ್ಲದಿದ್ದರೂ ಲೋಕಸಂಗ್ರಹಕ್ಕಾಗಿ† ಮೊದಲಿನಂತೆಯೆ ಕರ್ಮದಲ್ಲಿ ಆತನು ತೊಡಗಿದ್ದರೂ ಅವನು (ನಿಜವಾಗಿ) ಏನೂ ಮಾಡುತ್ತಲೇ ಇರುವದಿಲ್ಲ; ಜ್ಞಾನವೆಂಬ ಬೆಂಕಿಯಿಂದ ಕರ್ಮವು ಸುಟ್ಟುಹೋಗಿರುವದರಿಂದ – ಆತನ ಕರ್ಮವು ಅಕರ್ಮವೇ ಆಗಿಬಿಡುವದು–** ಹೀಗೆಂಬ ವಿಷಯವನ್ನು ತೋರಿಸುವದಕ್ಕಾಗಿ (ಭಗವಂತನು) ಈ ಮುಂದಿನ ಮಾತನ್ನು ಆಡಿರುತ್ತಾನೆ:—

**ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥**

---

*. ಸುಟ್ಟುಹೋಗುವದೆಂದರೆ ಫಲವನ್ನು ಕೊಡದೆ ಹೋಗುವದೇ.

†. ೩–೧೮ನ್ನೂ ಅದರ ಮೇಲಿನ ಭಾಷ್ಯವನ್ನೂ ನೋಡಿ; ೩–೨೬ರ ಅವತರಣಿಕೆಯನ್ನೂ ನೋಡಿ.

೨೦. ಕರ್ಮಫಲಾಸಂಗವನ್ನು ಬಿಟ್ಟು ನಿತ್ಯತೃಪ್ತನಾಗಿ ನಿರಾಶ್ರಯನಾಗಿರುವ ಆತನು ಕರ್ಮದಲ್ಲಿ ತೊಡಗಿದ್ದರೂ ಆತನು (ನಿಜವಾಗಿ) ಏನೂ ಮಾಡುತ್ತಿರುವದಿಲ್ಲ.

[ ಭಾಷ್ಯ ]

ಕರ್ಮಗಳಲ್ಲಿ ಅಭಿಮಾನವನ್ನೂ (ಕರ್ಮಗಳ) ಫಲದಲ್ಲಿ ಆಸಕ್ತಿಯನ್ನೂ ಮೇಲೆ ಹೇಳಿದ ಜ್ಞಾನದಿಂದ ಬಿಟ್ಟು ನಿತ್ಯತೃಪ್ತನಾಗಿ ಎಂದರೆ ವಿಷಯಗಳಲ್ಲಿ ಆಶೆಯಿಲ್ಲದೆ ಎಂದರ್ಥ. ನಿರಾಶ್ರಯನಾಗಿ ಎಂದರೆ ಆಶ್ರಯವಿಲ್ಲದವನಾಗಿ; ಯಾವದನ್ನು ಆಶ್ರಯಿಸಿ ಪುರುಷಾರ್ಥವನ್ನು ಪಡೆದುಕೊಳ್ಳಬೇಕೆಂದಿರುತ್ತಾನೋ ಅದು ಆಶ್ರಯವು; (ಅದಿಲ್ಲದವನಾಗಿ ಎಂದರೆ,) ಕಂಡಿರುವ (ಈ ಲೋಕದಲ್ಲಿ ಅನುಭವಿಸಬೇಕಾಗಿರುವ ಕರ್ಮದ) ಫಲಗಳು, ಮತ್ತು ಕಾಣದಿರುವ (ಪರಲೋಕದಲ್ಲಿ ಅನುಭವಿಸಬೇಕಾಗಿರುವ ಕರ್ಮದ) ಫಲಗಳು– ಇವುಗಳನ್ನು ಸಾಧಿಸುವದಕ್ಕಾಗಿ ಯಾವದೊಂದನ್ನೂ ಆಶ್ರಯಿಸದವನಾಗಿ ಎಂದರ್ಥ. **ಜ್ಞಾನಿಯಾದವನು ಮಾಡುವ ಕರ್ಮವೆಂಬುದು ನಿಜವಾಗಿ ಕರ್ಮವೇ ಅಲ್ಲ, ಏಕೆಂದರೆ ಅದು ನಿಷ್ಕ್ರಿಯನಾದ ಆತ್ಮನೇ ತಾನೆಂಬ ಜ್ಞಾನದಿಂದ ಕೂಡಿರುತ್ತದೆ.**

ಹೀಗೆ ಇರುವಾತನಿಗೆ (ಕರ್ಮಗಳಿಂದ) ಆಗಬೇಕಾದ ಪ್ರಯೋಜನವೇನೂ ಇಲ್ಲವಾದ್ದರಿಂದ ಕರ್ಮವನ್ನು ಅದರ ಸಾಧನಗಳ ಸಹಿತವಾಗಿ (ಅವನು) ಬಿಡತಕ್ಕದ್ದೇ ಯುಕ್ತವೆಂದಾಯಿತಷ್ಟೆ. (ಆದರೆ ಏನೋ ಕಾರಣದಿಂದ ಆ ಕರ್ಮವನ್ನು ಮಾಡುವ ಆಶ್ರಮವನ್ನು) ಬಿಟ್ಟುಹೋಗುವದಕ್ಕೆ ಆಗದೆ ಇರುವಾಗ **ಲೋಕಸಂಗ್ರಹಕ್ಕಾಗಲಿ ಶಿಷ್ಟರ ನಿಂದೆಗೆ ಎಡೆಗೊಡದೆ ಇರುವದಕ್ಕಾಗಲಿ** ಮೊದಲಿನಂತೆ ಕರ್ಮದಲ್ಲಿ ತೊಡಗಿದ್ದರೂ* ನಿಷ್ಕ್ರಿಯನಾದ ಆತ್ಮನೇ ತಾನೆಂಬ ಜ್ಞಾನವನ್ನು ಹೊಂದಿರುವದರಿಂದ ಅವನು (ನಿಜವಾಗಿ)† ಯಾವದೊಂದು (ಕರ್ಮವನ್ನೂ) ಮಾಡುತ್ತಿರುವದಿಲ್ಲ.‡

ಆದರೆ ಯಾವನು ಮೇಲೆ ಹೇಳಿದಂಥವನಲ್ಲದೆ§ ಕರ್ಮದಲ್ಲಿ ತೊಡಗುವದಕ್ಕೆ

---

*. ನೋಡುವವರ ದೃಷ್ಟಿಯಿಂದ ಅವನು ಕರ್ಮವನ್ನು ಮಾಡುತ್ತಿದ್ದರೂ.

†. ತನ್ನ ಪರಮಾರ್ಥದೃಷ್ಟಿಯಿಂದ.

‡. ಆದ್ದರಿಂದ ಇಲ್ಲಿ ಜ್ಞಾನಕರ್ಮಗಳ ಸಮುಚ್ಚಯವೇನೂ ಇಲ್ಲ.

§. ಹಿಂದಿನ ಶ್ಲೋಕದಲ್ಲಿ ಹೇಳಿರುವದು ಗೃಹಸ್ಥಾಶ್ರಮದಲ್ಲಿದ್ದು ಜ್ಞಾನಿಯಾದವನ ವಿಷಯ; ಇಲ್ಲಿ ಬ್ರಹ್ಮಚರ್ಯದಲ್ಲಿಯೇ ಜ್ಞಾನವಾದವನ ವಿಷಯವನ್ನು ಹೇಳಿದೆ.

ಮೊದಲೇ ಎಲ್ಲಕ್ಕೂ ಒಳಗಿರುವ* ಕ್ರಿಯಾರಹಿತವಾದ ಬ್ರಹ್ಮವೇ ತಾನೆಂದು ಕಂಡುಕೊಳ್ಳುವನೋ ಅವನಿಗಿಂತ (ಈ ಲೋಕದಲ್ಲಿ) ಕಂಡಿರುವ ಅಥವಾ ಕಾಣದ (ಎಂದರೆ ಪರಲೋಕದಲ್ಲಿ) ಬೇಕಾಗಿರುವದೆಂಬ ಯಾವದೊಂದು ವಸ್ತುವಿನ ವಿಷಯ ಆಶೆಯೂ ಇರುವದಿಲ್ಲವಾದ್ದರಿಂದ ಇಹಲೋಕಪರಲೋಕಗಳಿಗೆ ಬೇಕಾದ ಕರ್ಮದಲ್ಲಿ ಯಾವ ಪ್ರಯೋಜನವೂ ತೋರದೆ ಇರುವದರಿಂದ ಕರ್ಮವನ್ನು ಅದರ ಸಾಧನಗಳೊಡನೆ ಕೈಬಿಟ್ಟು ದೇಹದ ಕೆಲಸವು ಸಾಗುವದಕ್ಕೆ ತಕ್ಕಷ್ಟು ಕರ್ಮವನ್ನು ಮಾತ್ರ ಮಾಡುತ್ತಾ ಯತಿಯಾಗಿ ಜ್ಞಾನನಿಷ್ಠನಾಗಿದ್ದುಕೊಂಡು ಮುಕ್ತಿಯನ್ನು ಹೊಂದುತ್ತಾನೆ- ಎಂಬೀ ವಿಷಯವನ್ನು ತಿಳಿಸುವದಕ್ಕೆ ಈ ಮುಂದಿನ ಮಾತನ್ನು ಹೇಳುತ್ತಾನೆ:—

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೨೧ ॥**

೨೧. ಆಶೆಯಿಲ್ಲದವನಾಗಿ ಚಿತ್ತವನ್ನೂ ಆತ್ಮವನ್ನೂ ಬಿಗಿಹಿಡಿದುಕೊಂಡು ಸರ್ವಪರಿಗ್ರಹವನ್ನೂ ಬಿಟ್ಟು ಬರಿಯ ಶಾರೀರಕರ್ಮವನ್ನು ಮಾಡುತ್ತಿರುವಾತನಿಗೆ ಯಾವ ಕಿಲ್ಬಿಷವೂ ಆಗುವದಿಲ್ಲ.

[ ಭಾಷ್ಯ ]

ಆಶೆಯಿಲ್ಲದೆ ಎಂದರೆ ಬಯಕೆಗಳನ್ನೆಲ್ಲ ತೊರೆದವನಾಗಿ ಚಿತ್ತವನ್ನೂ ಆತ್ಮವನ್ನೂ ಬಿಗಿಹಿಡಿದುಕೊಂಡು – ಚಿತ್ತವೆಂದರೆ ಅಂತಃಕರಣವು, ಆತ್ಮವೆಂದರೆ ಹೊರಗಿನ ಶರೀರೇಂದ್ರಿಯಗಳ ಗುಂಪು–ಇವೆರಡನ್ನೂ ಸ್ವಾಧೀನದಲ್ಲಿಟ್ಟುಕೊಂಡು ಶಾರೀರಕರ್ಮವನ್ನು ಎಂದರೆ ಶರೀರವು ಬದುಕಿರುವವರೆಗೆ ಬೇಕಾಗಿರುವ ಕರ್ಮವನ್ನು, ಅದರಲ್ಲಿಯೂ ಕೇವಲ (ಶಾರೀರಕರ್ಮವನ್ನು) ಎಂದರೆ ಅಭಿಮಾನವಿಲ್ಲದೆ ಬರಿಯ ಶರೀರಸ್ಥಿತಿಗೆ ಬೇಕಾದಷ್ಟೇ ಕರ್ಮವನ್ನು ಮಾಡುತ್ತಿರುವಾತನಿಗೆ ಕಿಲ್ಬಿಷವು ಆಗುವದಿಲ್ಲ; ಎಂದರೆ ಅನಿಷ್ಟರೂಪವಾದ ಪಾಪವನ್ನಾಗಲಿ ಧರ್ಮವನ್ನಾಗಲಿ ಆತನು ಹೊಂದುವದಿಲ್ಲ (ಎಂದರ್ಥ). ಮುಮುಕ್ಷುವಾದವನಿಗೆ ಧರ್ಮವೂ ಕಿಲ್ಬಿಷವೇ, ಏಕೆಂದರೆ ಅದೂ ಬಂಧವನ್ನುಂಟುಮಾಡುತ್ತದೆ. ಆದ್ದರಿಂದ ಈ ಎರಡರಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ,† ಎಂದರೆ ಸಂಸಾರದಿಂದಲೇ ಮುಕ್ತನಾಗುತ್ತಾನೆ ಎಂದರ್ಥ.

---

*. ಬೃ. ೩–೪–೧ರ ಸೂಚನೆ.

†. ಜ್ಞಾನಿಯು ಪಾಪದಂತೆ ಪುಣ್ಯವನ್ನೂ ದಾಟುವನು. ಬ್ರ॥ ಸೂ॥ ೪–೧–೧೪

'ಬರಿಯ ಶಾರೀರಕರ್ಮವನ್ನು' ಎಂಬಲ್ಲಿ* ಶರೀರದಿಂದ ಮಾಡುವ ಕರ್ಮವೆಂಬ ಅಭಿಪ್ರಾಯವಿದೆಯೋ ಅಥವಾ ಜೀವದಿಂದ ಇರುವವುಟ್ಟಿಗೆ ಬೇಕಾದ ಕರ್ಮವೆಂಬ ಅಭಿಪ್ರಾಯವಿದೆಯೋ? (ಇದನ್ನು ಇಲ್ಲಿ ವಿಚಾರಿಸಬೇಕಾದದ್ದು ಅವಶ್ಯ.)

(ಪ್ರಶ್ನೆ): — ಶರೀರದಿಂದ ಮಾಡುವ ಕರ್ಮವೇ ಶಾರೀರಕರ್ಮವಾದರೇನು, ಶರೀರಸ್ಥಿತಿಯ ಮಟ್ಟಿಗೆ ಬೇಕಾಗಿರುವ ಕರ್ಮವೇ ಶಾರೀರವಾಗಿದ್ದರೇನು?

(ಉತ್ತರ):— ಹೇಳುತ್ತೇವೆ, ಕೇಳಿ. ಶರೀರದಿಂದ ಮಾಡಿದ ಕರ್ಮವೇ ಶಾರೀರವೆಂದು ಇಲ್ಲಿ ಅಭಿಪ್ರಾಯ – ಎಂಬದಾಗಿಟ್ಟುಕೊಂಡರೆ ಆಗ ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಫಲವನ್ನನುಭವಿಸಬೇಕಾಗಿರುವ ಪ್ರತಿಷಿದ್ಧ ಕರ್ಮವನ್ನು ಮಾಡಿದರೂ ಯಾವ ಕಿಲ್ಬಿಷವೂ ಆಗುವದಿಲ್ಲವೆಂದು ಹೇಳಿದಂತಾಗುವದರಿಂದ ವಿರುದ್ಧವಾದ† ಮಾತನ್ನು ಹೇಳಿದಂತೆ ಆಗುವದು. ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವದಾಗಿಯೂ ಇಹಲೋಕಪರಲೋಕಗಳಲ್ಲಿ ಫಲವನ್ನನುಭವಿಸತಕ್ಕದ್ದಾಗಿಯೂ ಇರುವ ಕರ್ಮವನ್ನು ಶರೀರದಿಂದ ಮಾಡಿದರೆ ಕಿಲ್ಬಿಷವಾಗುವದಿಲ್ಲ– ಎಂದು ಅರ್ಥವನ್ನು ಮಾಡಿದರೆ ಒದಗದೆ‡ ಇದ್ದದ್ದನ್ನು ನಿಷೇಧಮಾಡಿದಂತಾಗುವದು. 'ಶಾರೀರಕರ್ಮವನ್ನು ಮಾಡಿದರೆ' ಎಂದು (ಶಾರೀರವೆಂಬ) ವಿಶೇಷಣವನ್ನು ಹಾಕಿರುವದರಿಂದಲೂ 'ಬರಿಯ' ಎಂಬ ಮಾತನ್ನು ಉಪಯೋಗಿಸಿರುವದರಿಂದಲೂ ವಾಕ್ಕು, ಮನಸ್ಸು– ಇವುಗಳಿಂದ ಆಗುವ ವಿಹಿತಪ್ರತಿಷಿದ್ಧವಾದ ಧರ್ಮಾಧರ್ಮಗಳೆಂಬ ಹೆಸರಿನ ಕರ್ಮವನ್ನು ಮಾಡಿದರೆ ಪಾಪವುಂಟಾಗುವದೆಂದು ಹೇಳಿದಂತೆ ಆಗುವದು. ಆಗಲೂ ವಾಕ್ಕು, ಮನಸ್ಸು–ಇವುಗಳಿಂದ ಶಾಸ್ತ್ರವಿಹಿತವನ್ನು ಮಾಡಿದರೆ ಕಿಲ್ಬಿಷವಾಗುವದೆಂದು ಹೇಳುವ ಭಾಗವು ವಿರುದ್ಧವಾಗುವದು;§ ಪ್ರತಿಷಿದ್ಧಕರ್ಮವನ್ನು

---

*. ಈ ವಾಕ್ಯದ ಪ್ರಾರಂಭದಲ್ಲಿರುವ "ಕಿಂ ಚ" ಎಂಬ ಮಾತುಗಳು ಎಲ್ಲಾ ಪಾಠಗಳಲ್ಲಿಯೂ ಇಲ್ಲ, ಬೇಕಾಗಿಯೂ ಇಲ್ಲ.

† ಕರ್ಮಕ್ಕೆ ಫಲವಾಗಬೇಕೆಂಬುದೇ ನಿಯಮವು; ಮಾಡಿದರೂ ಫಲವಾಗುವದಿಲ್ಲವೆಂಬದು ವಿರುದ್ಧ.

‡. ಶಾಸ್ತ್ರೀಯಕರ್ಮವನ್ನು ಮಾಡಿದರೆ ಕಿಲ್ಬಿಷವಾಗುವದೆಂದು ಎಲ್ಲಿಯೂ ಹೇಳಿಲ್ಲ; ಆದ್ದರಿಂದ ಅದು ಆಗುವದಿಲ್ಲವೆಂದು ಹೇಳಬೇಕಾದದ್ದೇ ಇಲ್ಲ.

§. ಶಾಸ್ತ್ರವಿಹಿತವಾದದ್ದನ್ನು ಮಾಡಿದರೆ ಪುಣ್ಯವಲ್ಲವೆ ಬರಬೇಕು?

ಮಾಡಿದರೆ ಕಿಲ್ಬಿಷವಾಗುವದೆಂದು ಹೇಳುವ ಭಾಗದಲ್ಲಿ ಇದ್ದದ್ದನ್ನೇ ಮತ್ತೆ ಹೇಳಿದಂತಾಗಿ ವಾಕ್ಯಕ್ಕೇನೂ* ಹೆಚ್ಚಿನ ಅರ್ಥವಿಲ್ಲದೆ ಹೋಗುವದು.

ಹೀಗಲ್ಲದೆ ಶಾರೀರಕರ್ಮವೆಂದರೆ ಶರೀರವಿರುವವರೆಗೆ ಬೇಕಾಗಿರುವ ಕರ್ಮವೆಂಬುದೇ ಅಭಿಪ್ರಾಯವೆಂದು ಇಟ್ಟುಕೊಂಡರೆ, ಈ ಲೋಕಪರಲೋಕಗಳಲ್ಲಿ ಅನುಭವಿಸಬೇಕಾದ ಫಲವುಳ್ಳದ್ದಾಗಿಯೂ ಶಾಸ್ತ್ರದಲ್ಲಿ ವಿಧಿಸಿ ಅಥವಾ ಪ್ರತಿಷೇಧಮಾಡಿ ಇರುವದಾಗಿಯೂ ಶರೀರ, ವಾಕ್ಕು, ಮನಸ್ಸು- ಇವುಗಳಿಂದ ಮಾಡತಕ್ಕದ್ದಾಗಿಯೂ ಇರುವ ಬೇರೆ ಯಾವ ಕರ್ಮವನ್ನೂ ಮಾಡದೆ ಆದೇ ಶರೀರಾದಿಗಳಿಂದ ಶರೀರವು ಬದುಕಿರುವ ವರೆಗೆ ಬೇಕಾಗಿರುವ ಕರ್ಮಗಳನ್ನು- 'ಬರಿಯ' ಎಂಬ ಮಾತಿರುವದರಿಂದ ಆ ಕರ್ಮಗಳಲ್ಲಿಯೂ ನಾನು ಮಾಡುತ್ತೇನೆಂಬ ಅಭಿಮಾನವಿಲ್ಲದೆ ಬರಿಯ ಶರೀರಾದಿಗಳ ವ್ಯಾಪಾರಮಾತ್ರವಾಗಿರುವ ಕರ್ಮಗಳನ್ನು- ಜನರ ದೃಷ್ಟಿಯಿಂದ† ತಾನು ಮಾಡುತ್ತಿದ್ದರೂ ಕಿಲ್ಬಿಷವನ್ನು ಹೊಂದುವದಿಲ್ಲ; ಹೀಗಿರುವವನಿಗೆ ಪಾಪವೆಂಬ ಹೆಸರಿನ ಕಿಲ್ಬಿಷವು ಒಂದೊದಗುವ ಸಂಭವವೇ ಇಲ್ಲವಾದ್ದರಿಂದ, ಕಿಲ್ಬಿಷವನ್ನು ಹೊಂದುವದಿಲ್ಲ ಎಂದರೆ ಸಂಸಾರವನ್ನು ಹೊಂದುವದಿಲ್ಲ; ಜ್ಞಾನವೆಂಬ ಬೆಂಕಿಯಿಂದ ಸರ್ವಕರ್ಮವನ್ನೂ ಸುಟ್ಟುಕೊಂಡಿರುವದರಿಂದ ಯಾವ ಅಡ್ಡಿಯೂ ಇಲ್ಲದೆ ಮುಕ್ತನಾಗಿಯೇ ತೀರುತ್ತಾನೆ- ಎಂದು ಹಿಂದೆ ಹೇಳಿದ ಸರಿಯಾದ ಜ್ಞಾನದ ಫಲವನ್ನು ಇಲ್ಲಿ ಸುಮ್ಮನೆ ಅನುವಾದವಾಗಿ ಹೇಳಿದೆಯೆಂದು ಹೇಳಬೇಕಾಗುವದು. 'ಬರಿಯ ಶಾರೀರಕರ್ಮವನ್ನು' ಎಂಬುದಕ್ಕೆ ಹೀಗೆ ಅರ್ಥವನ್ನು‡ ಮಾಡಿಕೊಂಡರೆ ಯಾವ ಆಕ್ಷೇಪವೂ ಇಲ್ಲದಂತಾಗುವದು.

ತನ್ನದೆಂಬುದೆಲ್ಲವನ್ನೂ ಬಿಟ್ಟಿರುವ ಯತಿಗೆ ಶರೀರವನ್ನು ಕಾಪಾಡಿಕೊಳ್ಳುವದಕ್ಕೆ ಬೇಕಾದ ಅನ್ನವೇ ಮುಂತಾದದ್ದು§ ಕೂಡ ತನ್ನದಾಗಿ ಇರುವದಿಲ್ಲವಾದ್ದ

---

*. ಪ್ರತಿಷಿದ್ಧವಾದ ಕರ್ಮಕ್ಕೆ ಪಾಪವು ಬರಬೇಕಾದದ್ದು ಸಹಜವಾಗಿಯೇ ಇದೆ; ಅದನ್ನು ಮತ್ತೆ ಹೇಳಬೇಕಾದದ್ದೇನು?

†. ತಾನು ಮಾಡುವದಿಲ್ಲವೆಂಬ ಜ್ಞಾನದೃಷ್ಟಿಯಿಂದ ಜ್ಞಾನಿಯು ಮಾಡುತ್ತಿರುವ ಕರ್ಮವನ್ನು ಜನರು ಸಾಮಾನ್ಯರೀತಿಯ ಕರ್ಮವೆಂದೇ ತಪ್ಪಾಗಿ ಭಾವಿಸಿಕೊಳ್ಳುವರು.

‡. ಶರೀರವಿರುವ ಮಟ್ಟಿಗೆ ಕರ್ಮವನ್ನು ಮಾಡುತ್ತೇನೆಂಬ ಸಂಕಲ್ಪದಿಂದ ಜ್ಞಾನಿಯು ಕರ್ಮವನ್ನು ಮಾಡುತ್ತಾನೆಂದು ತಿಳಿಯಬಾರದು; ಅವನ ದೃಷ್ಟಿಯಿಂದ ನಿಜವಾಗಿ ಶರೀರವಾಗಲಿ ಕರ್ಮವಾಗಲಿ ಇರುವದೇ ಇಲ್ಲ. ಈ ವಿಚಾರದಲ್ಲಿ ಗೀತಾರ್ಥಸರ್ವಸ್ವವನ್ನು ನೋಡಿ.

§. ದಂಡ, ಪಾದುಕ, ಕೌಪೀನ, ಹೊದಿಯುವ ಬಟ್ಟೆ- ಮುಂತಾದವು.

ರಿಂದ ಯಾಚನೆಯೇ ಮುಂತಾದ್ದರಿಂದ* ಶರೀರವನ್ನು ಕಾಪಾಡಿಕೊಳ್ಳಬೇಕೆಂದಾಯಿತು. ಶರೀರವಿರುವದಕ್ಕೆ ಅವಶ್ಯವಾದ (ಈ) ಅನ್ನಾದಿಗಳನ್ನು ಪಡೆಯುವದಕ್ಕೆ (ಶಾಸ್ತ್ರದಲ್ಲಿ) "ಅಯಾಚಿತಮಸಂಕ್ಲೃಪ್ತಮುಪಪನ್ನಂ ಯದೃಚ್ಛಯಾ" (ಬೋ. ೨-೮-೧೨); (ತಾನು ಬೇಡದೆ ಇದ್ದದ್ದು, ಮೊದಲು ಗೊತ್ತುಮಾಡಿಕೊಳ್ಳದೆ ಇದ್ದದ್ದು, ತಾನೇ ಒದಗಿಬಂದದ್ದು....) ಮುಂತಾದ† ವಚನದಲ್ಲಿ, ಆಗಬಹುದೆಂದು ಹೇಳಿರುವ ಮಾರ್ಗವನ್ನು ತಿಳಿಸಬೇಕೆಂದು ಭಗವಂತನು ಈ ಮುಂದಿನ ಮಾತನ್ನು ಆಡಿರುತ್ತಾನೆ :—

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥**

೨೨. ಅಕಸ್ಮಾತ್ತಾಗಿ ಸಿಕ್ಕುವಷ್ಟರಿಂದ ತೃಪ್ತನಾಗಿ ದ್ವಂದ್ವಗಳನ್ನು ಮೀರಿ ಮತ್ಸರವಿಲ್ಲದೆ, ಸಿದ್ಧಿಯಾದರೂ ಆಗದಿದ್ದರೂ ಸಮನಾಗಿದ್ದುಕೊಂಡಿರುವ ಈತನು ಕರ್ಮವನ್ನು ಮಾಡಿದರೂ ಬದ್ಧನಾಗುವದಿಲ್ಲ.

[ಭಾಷ್ಯ]

ಯದೃಚ್ಛೆಯಿಂದ ಸಿಕ್ಕಿದ್ದು ಎಂದರೆ ಒಬ್ಬನನ್ನು ಕೇಳದೆ ತಾನೇ ಬಂದೊದಗಿದ್ದು; ಅದರಿಂದಲೇ ತೃಪ್ತನಾಗಿ ಸಾಕೆಂಬ ಬುದ್ಧಿಯುಂಟಾದವನಾಗಿ, ದ್ವಂದ್ವಗಳನ್ನು ಮೀರಿ, – ದ್ವಂದ್ವಗಳೆಂದರೆ ಶೀತೋಷ್ಣವೇ ಮುಂತಾದವುಗಳು ; ಅವುಗಳ ಹೊಡೆತಕ್ಕೆ ಸಿಕ್ಕಿದರೂ ಮನಸ್ಸಿನಲ್ಲಿ ನೊಂದುಕೊಳ್ಳದೆ ಇರುವವನು ದ್ವಂದ್ವಗಳನ್ನು ಮೀರಿದವನೆನಿಸುವನು. (ಹೀಗೆ ದ್ವಂದ್ವಗಳನ್ನು ಮೀರಿ)– ಮತ್ಸರವಿಲ್ಲದೆ ಎಂದರೆ ಯಾರಲ್ಲಿಯೂ ಹಗೆತನವಿಲ್ಲದೆ ತಾನಾಗಿಯೇ ಸಿಕ್ಕುವದು ಸಿಕ್ಕಲಿ ಸಿಗದಿರಲಿ, ಸಮನಾಗಿ ; ಹೀಗೆ ಶರೀರವನ್ನು ಕಾಪಾಡಿಕೊಳ್ಳುವದಕ್ಕೆ ಅವಶ್ಯವಾಗಿ ಬೇಕಾಗಿರುವ ಅನ್ನವೇ ಮುಂತಾದ್ದು ಸಿಗಲಿ ಸಿಗದಿರಲಿ, ಮನಸ್ಸಿನಲ್ಲಿ ಹಿಗ್ಗದೆ ತಗ್ಗದೆ ಒಂದೇ ಸಮನಾಗಿದ್ದುಕೊಂಡು, ಕರ್ಮಾದಿಗಳಲ್ಲಿ ಅಕರ್ಮಾದಿಗಳನ್ನು ಕಾಣುತ್ತಿರುವ ಸತ್ಯವಾದ ಆತ್ಮಜ್ಞಾನದಲ್ಲಿಯೇ ನಿಂತಿರುವವನಾಗಿ ಶರೀರವು ಇರುವ ಮಟ್ಟಿಗೆ ಅವಶ್ಯವಾಗಿ ಶರೀರಾದಿಗಳಿಂದ ಆಗಬೇಕಾಗಿರುವ ಭಿಕ್ಷಾ

---

*. ಸೇವೆ, ಕೃಷಿ- ಮುಂತಾದ್ದರಿಂದಲೂ ಶರೀರವನ್ನು ಕಾಪಾಡಿಕೊಳ್ಳಬಹುದು ಎಂದಾಯಿತು ; ಹಿಂದಿನ ಶ್ಲೋಕದಲ್ಲಿ ಹೇಳಿರುವ ಗೃಹಸ್ಥನಿಗೆ ಇದು ಆಗಬಹುದು, ಆದರೆ ಇಲ್ಲಿ ಹೇಳಿರುವ ಯತಿಗೆ ಇದು ಕೂಡದು.

†. ಯತಿಗೆ ಮಧುಕರವೃತ್ತಿಯಿಂದ ಸಿಕ್ಕಿದ್ದು, ಯಾರಾದರೂ ಕೊಟ್ಟದ್ದು, ತಾನಾಗಿಯೆ ದೊರೆತ ಹಣ್ಣು ಹಂಪಲು – ಮುಂತಾದವುಗಳೇ ಆಹಾರವೆಂದು ಸ್ಮೃತಿಗಳಲ್ಲಿ ಹೇಳಿರುತ್ತದೆ.

ಟನೆಯೇ ಮುಂತಾದ ಕರ್ಮಗಳ ವಿಷಯದಲ್ಲಿ 'ನಾನು (ನಿಜವಾಗಿ) ಏನನ್ನೂ ಮಾಡುತ್ತಿರುವದಿಲ್ಲ' (೫-೮) "ಗುಣಗಳು ಗುಣಗಳಲ್ಲಿ ಕೆಲಸಮಾಡುತ್ತಿರುವವು" (೩-೨೮) ಎಂದೀ ಪರಿಯಾಗಿ ಯಾವಾಗಲೂ ಚಿಂತಿಸಿಕೊಳ್ಳುತ್ತಾ [ಸಂಪರಿಚಕ್ಷಾಣಃ] ತನಗೆ ಯಾವ ಕರ್ತೃತ್ವವೂ ಇಲ್ಲವೆಂದು ಅರಿತುಕೊಂಡು ಭಿಕ್ಷಾಟನೆಯೇ ಮುಂತಾದ ಕರ್ಮವನ್ನು ಮಾಡುತ್ತಿರುವನೋ*- **ಜನರು ಮಾಡುವ ವ್ಯವಹಾರದಂತೆಯೇ ಇವನ ವ್ಯವಹಾರವೂ ಕಾಣುವದರಿಂದ ಸಾಮಾನ್ಯಜನರು ಇವನು ಕರ್ತನೆಂದು ಆರೋಪಿಸುವರಾದ್ದರಿಂದ (ಅಷ್ಟರಮಟ್ಟಿಗೆ) ಭಿಕ್ಷಾಟನೆಯೇ ಮುಂತಾದ ಕರ್ಮಕ್ಕೆ ಇವನು ಕರ್ತನಾಗಿರುವನು; ಆದರೆ ಶಾಸ್ತ್ರಪ್ರಮಾಣದಿಂದ† ಉಂಟಾಗಿರುವ ತನ್ನ ಅನುಭವದಿಂದ ನೋಡಿದರೋ ಕರ್ತೃವಲ್ಲವೇ ಅಲ್ಲ.‡** ಹೀಗೆ ಮತ್ತೊಬ್ಬರು ತನ್ನಲ್ಲಿ ಆರೋಪಿಸಿರುವ ಕರ್ತೃತ್ವದಿಂದ ಶರೀರಸ್ಥಿತಿಗೆ ಮಾತ್ರ ಬೇಕಾದ ಭಿಕ್ಷಾಟನವೇ ಮುಂತಾದ ಕರ್ಮವನ್ನು ಆತನು ಮಾಡುತ್ತಿದ್ದರೂ- ಆತನಿಗೆ ಬಂಧವಿರುವದಿಲ್ಲ; ಏಕೆಂದರೆ ಬಂಧಕ್ಕೆ ನಿಮಿತ್ತವಾದ ಕರ್ಮವೆಂಬುದು ತನ್ನ ಕಾರಣದೊಡನೆ§ ಜ್ಞಾನಾಗ್ನಿಯಿಂದ ಸುಟ್ಟುಹೋಗಿರುತ್ತದೆ. ಇದೂ ಹಿಂದೆ (೪-೧೯, ೨೦) ಹೇಳಿರುವದರ ಅನುವಾದವೇ (ಹೊರತು ಹೊಸ ವಿಷಯವೇನೂ ಅಲ್ಲ.)

"ಕರ್ಮಫಲದಲ್ಲಿ ಆಸಕ್ತಿಯನ್ನು ಬಿಟ್ಟು" ಎಂಬ (೪-೨೦) ಶ್ಲೋಕದಲ್ಲಿ ಯಾವಾತನು ಕರ್ಮವನ್ನು ಮಾಡುವದಕ್ಕೆ ಮೊದಲುಮಾಡಿ 'ಯಾವ ಕ್ರಿಯೆಯೂ ಇಲ್ಲದ ಬ್ರಹ್ಮಾತ್ಮನೇ ನಾನು' ಎಂಬ ಅರಿವನ್ನು ಯಾವಾಗ ಪಡೆದುಕೊಳ್ಳುವನೋ ಆಗ ತನ್ನಲ್ಲಿ ಕರ್ತೃ, ಕರ್ಮ, ಫಲ- ಯಾವವೂ ಇಲ್ಲವೆಂದು ಅರಿತುಕೊಂಡಿರುವದರಿಂದ ಕರ್ಮವನ್ನು ಬಿಡಬೇಕೆಂದೇ ಆಯಿತಾದರೂ ಯಾವದೋ ನಿಮಿತ್ತದಿಂದ ಹಾಗೆ ಬಿಡುವದು ಆಗದೆ ಇರುವಲ್ಲಿ ಮೊದಲಿನಂತೆ ಕರ್ಮದಲ್ಲಿ ಆತನು ತೊಡಗಿಯೇ ಇದ್ದರೂ ಆತನು ನಿಜವಾಗಿ ಏನೂ ಮಾಡುತ್ತಿರುವದಿಲ್ಲ - ಎಂದು

---

*. 'ಪಶ್ಯನ್ನೇವ'- ಎಂಬ ಗು|| ಪಾಠವನ್ನಿಟ್ಟುಕೊಂಡರೆ ಈ ಅರ್ಥವಾಗುವದು; 'ಪಶ್ಯನ್ನೈವ' ಎಂಬ ಪಾಠದಲ್ಲಿ 'ಅರಿತುಕೊಂಡಿರುವದರಿಂದ ಭಿಕ್ಷಾಟನೆಯೇ...... ಮಾಡುತ್ತಿರುವದಿಲ್ಲವೋ' ಎಂದು ಅರ್ಥಮಾಡಬೇಕು ಎರಡು ಸಂದರ್ಭದಲ್ಲಿಯೂ ತಾತ್ಪರ್ಯವು ಒಂದೇ.

†. 'ಶಾಸ್ತ್ರಪ್ರಮಾಣಜನಿತೇನ' ಎಂಬ ಮು|| ಮೈ|| ಪಾಠಗಳನ್ನೇ ಇಟ್ಟುಕೊಂಡಿದೆ; 'ಆದಿ' ಎಂಬ ಮಾತು ಅವಶ್ಯವಿಲ್ಲ.

‡. ಜ್ಞಾನಿಯ ವ್ಯವಹಾರವನ್ನು ಕುರಿತು ಗೀತಾರ್ಥಸರ್ವಸ್ವದಲ್ಲಿ ವಿಸ್ತಾರವಾಗಿ ಚರ್ಚಿಸಿರುತ್ತದೆ.

§. ಕರ್ಮಕ್ಕೆ ಕಾರಣವು ಕಾಮ, ಅದಕ್ಕೆ ಕಾರಣವು ಅಜ್ಞಾನ.

ಕರ್ಮದ ಅಭಾವವನ್ನು ಹೇಳಿದ್ದಾಗಿದೆಯಷ್ಟೆ. ಹೀಗೆ ಯಾವಾತನಿಗೆ ಕರ್ಮ ವಿಲ್ಲವೆಂದು ತಿಳಿಸಲಾಯಿತೋ ಅಂಥ –

**ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

೨೩. ಸಂಗವು ಹೋಗಿ ಮುಕ್ತನಾಗಿ ಜ್ಞಾನದಲ್ಲಿಯೇ ನಿಂತಿರುವ ಮನಸ್ಸಿನವನಾಗಿ ಯಜ್ಞಕ್ಕೋಸ್ಕರವೇ ಕರ್ಮವನ್ನು ಮಾಡುತ್ತಿರುವವನಿಗೆ ಕರ್ಮವು ಸಮಗ್ರವಾಗಿ ಅಡಗಿಹೋಗುವದು.

[ ಭಾಷ್ಯ ]

ಸಂಗವು ಹೋಗಿ ಎಂದರೆ (ಕರ್ಮದಲ್ಲಿಯೂ ಫಲದಲ್ಲಿಯೂ) ಯಾವದರಲ್ಲಿಯೂ ಆಸಕ್ತಿಯಿಲ್ಲದೆ, ಮುಕ್ತನಾಗಿ ಎಂದರೆ ಧರ್ಮಾಧರ್ಮಗಳೇ ಮುಂತಾದ ಬಂಧಗಳು ತೊಲಗಿಹೋಗಿ, ಜ್ಞಾನದಲ್ಲಿಯೇ ನಿಂತಿರುವ ಮನಸ್ಸುಳ್ಳವನಾಗಿ ಯಜ್ಞಕ್ಕಾಗಿ ಎಂದರೆ ಯಜ್ಞವಾಗಲೆಂದು* ಕರ್ಮವನ್ನು ಮಾಡುತ್ತಿರುವಾತನಿಗೆ ಕರ್ಮವು ಸಮಗ್ರವಾಗಿ ಅಡಗಿಹೋಗುವದು. ಅಗ್ರವೆಂದರೆ ಫಲವು, ಅದರೊಡನೆ ಸೇರಿ ಎಂದರೆ ಫಲಸಹಿತವಾಗಿ ನಾಶವಾಗುವದು ಎಂದರ್ಥ.

## ಜ್ಞಾನಯಜ್ಞ

ಆತನು ಮಾಡುವ ಕರ್ಮವು ತನ್ನ ಫಲವನ್ನು ಕೊಡದೆ ಸಮಗ್ರವಾಗಿ ನಾಶವಾಗುವದಕ್ಕೇನು ಕಾರಣ? ಎಂದರೆ ಹೇಳುತ್ತೇನೆ ಕೇಳು. ಏಕೆಂದರೆ:—

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

೨೪. ಅರ್ಪಣವು ಬ್ರಹ್ಮವೆ, ಹವಿಸ್ಸು ಬ್ರಹ್ಮವೆ, ಬ್ರಹ್ಮಾಗ್ನಿಯಲ್ಲಿ ಬ್ರಹ್ಮದಿಂದಲೇ ಹೋಮಮಾಡಲ್ಪಡುತ್ತದೆ. ಬ್ರಹ್ಮಕರ್ಮದ ಸಮಾಧಿಯಿಂದ ಆತನು ಪಡೆಯಬೇಕಾದದ್ದೂ ಬ್ರಹ್ಮವೆ.

[ ಭಾಷ್ಯ ]

ಅರ್ಪಣವು ಬ್ರಹ್ಮವೆ; ಬ್ರಹ್ಮಜ್ಞಾನಿಯು ಹವಿಸ್ಸನ್ನು ಅಗ್ನಿಯಲ್ಲಿ ಹಾಕು

---

*. 'ಯಜ್ಞವೆಂಬ ಹೆಸರಿನ ನಾರಾಯಣಭಗವಂತನ ಪ್ರೀತಿಗಾಗಿ' ಎಂದು (ಆ||) ವ್ಯಾಖ್ಯಾನಕಾರರು ಬರೆದಿರುತ್ತಾರೆ. ಜ್ಞಾನಿಯು ನಾರಾಯಣನಿಗಿಂತ ತಾನು ಬೇರೆಯೆಂದು ತಿಳಿಯುವದಿಲ್ಲವಾದ್ದರಿಂದ ಜ್ಞಾನವೆಂಬ ಯಜ್ಞಕ್ಕಾಗಿ ಎಂದರ್ಥಮಾಡುವದೇ ಯುಕ್ತವೆಂದು ತೋರುವದು. ಇದು ಮುಂದಿನ ಶ್ಲೋಕಾರ್ಥಕ್ಕೂ ಹೊಂದುವದು.

ತ್ತಾನಷ್ಟೆ, ಆ ಅರ್ಪಣವೆಂಬ ಕರಣವು* ಬ್ರಹ್ಮವೆ; ಅದು ಆತ್ಮನಿಗಿಂತ† ಬೇರೆ ಯಾಗಿರುವದಿಲ್ಲವೆಂದು ಆತನು ಅರಿತಿರುತ್ತಾನೆ. ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯಿರು ವದಿಲ್ಲವೆಂದು (ಭ್ರಾಂತಿಯನ್ನು ಕಳೆದುಕೊಂಡ ಜನರು) ತಿಳಿಯುತ್ತಾರಲ್ಲವೆ? ಹಾಗೆಯೇ ಇದು. ಆದ್ದರಿಂದ 'ಬೆಳ್ಳಿಯೆಂಬುದು (ನಿಜವಾಗಿ) ಕಪ್ಪೆಯ ಚಿಪ್ಪೆ' ಎಂದು (ಜನರು) ಹೇಳುವಂತೆಯೆ 'ಅರ್ಪಣವೆಂಬುದು ಬ್ರಹ್ಮವೆ' ಎಂದು ಇಲ್ಲಿ ಹೇಳಿರುತ್ತದೆ.('ಬ್ರಹ್ಮಾರ್ಪಣಮ್'ಎಂದು ಸಮಾಸವಲ್ಲ,)'ಬ್ರಹ್ಮ', 'ಅರ್ಪಣಮ್' –ಎಂದು ಎರಡು ಬೇರೆ ಬೇರೆ ಪದಗಳು. ಜನರು ಅರ್ಪಣವೆಂದು ತಿಳಿದುಕೊಳ್ಳು ವರಷ್ಟೆ, ಅದು ಈ ಬ್ರಹ್ಮಜ್ಞಾನಿಗೆ ಬ್ರಹ್ಮವೇ‡ ಆಗಿರುವದು– ಎಂದರ್ಥ.

(ಇದರಂತೆಯೆ) ಹವಿಸ್ಸು ಬ್ರಹ್ಮವೆ ಎಂದರೆ ಹವಿಸ್ಸೆಂದು ಜನರು ತಿಳಿಯು ವದು ಈತನಿಗೆ ಬ್ರಹ್ಮವೆ ಆಗಿರುವದು. ಮತ್ತು ಬ್ರಹ್ಮಾಗ್ನಿಯಲ್ಲಿ– ಇಲ್ಲಿ 'ಬ್ರಹ್ಮಾಗ್ನೌ' ಎಂಬುದು ಸಮಾಸವು. ಯಾವ ಅಗ್ನಿಯಲ್ಲಿ ಅವನು ಹೋಮ ಮಾಡುತ್ತಾನೋ ಅದೂ ಬ್ರಹ್ಮವೆ. ಬ್ರಹ್ಮವೆಂಬ ಕರ್ತೃವಿನಿಂದಲೇ (ಬ್ರಹ್ಮಾಗ್ನಿ ಯಲ್ಲಿ ಹೋಮಮಾಡಲ್ಪಡುವದು); ಹೋಮಮಾಡುವ ಕರ್ತೃವೂ ಬ್ರಹ್ಮವೆ ಎಂದರ್ಥ.– ಅವನಿಂದ ಹುತವಾಗುವದು ಎಂದರೆ ಹೋಮಮಾಡುವದೆಂಬ ಕೆಲಸ ವುಂಟಷ್ಟೆ, ಅದೂ ಬ್ರಹ್ಮವೆ. ಆತನು ಹೋಗಿ ಪಡೆಯಬೇಕಾಗಿರುವ ಫಲ ವೆಂಬುದೂ ಬ್ರಹ್ಮವೆ. ಬ್ರಹ್ಮಕರ್ಮಸಮಾಧಿಯಾದವನು– ಬ್ರಹ್ಮವೆಂಬ ಕರ್ಮವು ಬ್ರಹ್ಮಕರ್ಮವು; ಅದರಲ್ಲಿ ಮನಸ್ಸಿಟ್ಟಿರುವಾತನು [ಸಮಾಧಿರ್ಯಸ್ಯ] ಬ್ರಹ್ಮ ಕರ್ಮಸಮಾಧಿಯೆನಿಸುವನು; ಅಂಥ ಬ್ರಹ್ಮಕರ್ಮಸಮಾಧಿಯಾಗಿರುವ (ಪುರು ಷನು)– ಪಡೆಯತಕ್ಕದ್ದೂ ಬ್ರಹ್ಮವೇ (ಆಗಿರುವದು).

ಈ ರೀತಿಯಲ್ಲಿ ಲೋಕಸಂಗ್ರಹವನ್ನು ಮಾಡಬೇಕೆಂದು ಮಾಡುವಾತನ ಕರ್ಮವು ಕೂಡ ನಿಜವಾಗಿ ನೋಡಿದರೆ ಕರ್ಮವೇ ಅಲ್ಲ, ಏಕೆಂದರೆ ಇದೆಲ್ಲವೂ

---

*. ಅರ್ಪಿಸುವದೆಂಬ ಕ್ರಿಯೆಯಲ್ಲ; ಕ್ರಿಯೆಯನ್ನು ಮುಂದೆ ಬ್ರಹ್ಮಕರ್ಮ ಎಂಬ ಮಾತಿ ನಲ್ಲಿಯೇ ಹೇಳಿದೆ. ಹೋಮಕ್ಕೆ ಸಾಧನವಾದ ಸ್ರುಕ್ಕು ಸ್ರುವ ಮುಂತಾದದ್ದೇ ಇಲ್ಲಿ ಅರ್ಪಣವು.

†. ಜ್ಞಾನಿಯು ಬ್ರಹ್ಮವೇ ತಾನೆಂದು ತಿಳಿದುಕೊಂಡಿರುತ್ತಾನೆ. ಬ್ರಹ್ಮ, ಆತ್ಮ– ಎಂಬ ಎರಡು ಮಾತಿಗೂ ಅವನ ದೃಷ್ಟಿಯಿಂದ ಒಂದೇ ಅರ್ಥ.

‡. ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಪ್ಪಾಗಿ ತಿಳಿದುಕೊಂಡಿದ್ದವನಿಗೆ ಇದು ಕಪ್ಪೆಯ ಚಿಪ್ಪೇ, ಎಂದು ಗೊತ್ತಾದರೆ ಕಪ್ಪೆಯ ಚಿಪ್ಪಿಗಿಂತ ಬೇರೆಯಾಗಿ ಬೆಳ್ಳಿಯೆಂಬುದು ಯಾವಾಗಲೂ ಇರಲಿಲ್ಲವೆಂದು ಗೊತ್ತಾಗುವಂತೆ ಜ್ಞಾನಿಯಾದವನಿಗೆ ಬ್ರಹ್ಮಕ್ಕಿಂತ ಬೇರೆಯಾಗಿ ಹೋಮ, ಹೋಮ ಸಾಧನ, ಅಗ್ನಿ, ಫಲ– ಮುಂತಾದದ್ದು ಯಾವದೂ ಎಂದಿಗೂ ಇರಲಿಲ್ಲವೆಂದು ನಿಶ್ಚಯವಾಗುವದು.

ಬ್ರಹ್ಮವೇ, ಎಂಬ ಬುದ್ಧಿಯಿಂದ ಅದರ ಹುಟ್ಟಡಗಿಹೋಗಿರುತ್ತದೆ.* [ಬ್ರಹ್ಮಬುದ್ಧ್ಯಾಪಮೃದಿತತ್ವಾತ್]. ಹೀಗಿರುವದರಿಂದ ಕರ್ಮವನ್ನು ಬಿಟ್ಟಿರುವ ಸರ್ವಕರ್ಮಸಂನ್ಯಾಸಿಯ† ವಿಷಯದಲ್ಲಿಯೂ ಅವನ ಸರಿಯಾದ ತಿಳಿವಳಿಕೆಯನ್ನು ಹೊಗಳುವ ದೃಷ್ಟಿಯಿಂದ (ಆತನ) ಜ್ಞಾನಕ್ಕೆ ಯಜ್ಞವೆಂಬ ರೂಪವನ್ನು ಕೊಟ್ಟು [ಸಂಪಾದನಮ್]‡ "ಯಜ್ಞದಲ್ಲಿ ಅರ್ಪಣವೇ ಮುಂತಾದವು ಪ್ರಸಿದ್ಧವಾಗಿರುವದಷ್ಟೆ, ಅದು ಪರಮಾರ್ಥವನ್ನು ಕಂಡುಕೊಂಡಿರುವ ಈತನಿಗೆ ತನ್ನೊಳಗಿರುವ ಬ್ರಹ್ಮವೆ" ಎಂದು ಹೇಳುವದು ಮಾತ್ರ ಚೆನ್ನಾಗಿ ಹೊಂದುಗೆಯಾಗುತ್ತದೆ. ಹಾಗಿಲ್ಲದೆ (ಬೇರೆ ಅರ್ಥವನ್ನು ಈ ಶ್ಲೋಕಕ್ಕೆ ಮಾಡುವದಾದರೆ) ಎಲ್ಲವೂ ಬ್ರಹ್ಮವೇ ಆಗಿರುವಾಗ ಅರ್ಪಣವೇ ಮುಂತಾದವುಗಳು ಮಾತ್ರಕ್ಕೆ ಬ್ರಹ್ಮವೆಂದು ಹೇಳಿರುವದಕ್ಕೆ ಅರ್ಥವಿಲ್ಲದೆ ಹೋಗುವದು. ಆದ್ದರಿಂದ ಇದೆಲ್ಲವೂ ಬ್ರಹ್ಮವೇ ಎಂದು ತಿಳಿದಿರುವ ಜ್ಞಾನಿಗೆ ಕರ್ಮವಿಲ್ಲವೆಂದಾಯಿತು.

ಇವು ಕಾರಕಗಳೆಂಬ§ ಭಾವನೆಯು ಇರುವದಿಲ್ಲವಾದ್ದರಿಂದಲೂ (ಜ್ಞಾನಿಗೆ ಕರ್ಮವಿರುವದಿಲ್ಲ.) ಏಕೆಂದರೆ ಕಾರಕಗಳೆಂಬ ಭಾವನೆಯು ಇಲ್ಲದೆಯೆ ಯಜ್ಞವೆಂಬ ಕರ್ಮವಿರುವದನ್ನು (ನಾವೆಲ್ಲಿಯೂ) ಕಂಡಿಲ್ಲ. ಅಗ್ನಿಹೋತ್ರವೇ ಮುಂತಾದ ಕರ್ಮವೆಲ್ಲವೂ ಶಬ್ದ(ಪ್ರಮಾಣವು)|| ತಿಳಿಸುವ ಆಯಾ ದೇವತೆಯು ಸಂಪ್ರದಾನಕಾರಕವು ಎಂದು ಮುಂತಾಗಿ ತಿಳಿದು** ತಾನು ಕರ್ತೃವೆಂಬ ಅಭಿ

---

* ಬ್ರ|| ಸೂ|| ೩-೪-೧೭ರ ಸೂಚನೆ. †. ಗೃಹಸ್ಥನಾಗಿ ಕರ್ಮವನ್ನು ಮಾಡುತ್ತಿರುವನಂತೆ ತೋರುವ ಜ್ಞಾನಿಗೇ ಕರ್ಮವಿಲ್ಲದಿರುವಾಗ ಸಂನ್ಯಾಸಿಯ ವಿಷಯದಲ್ಲಿ ಹೇಳತಕ್ಕದ್ದೇನು?

‡. ಜ್ಞಾನವನ್ನೆ ಯಜ್ಞವೆಂದು ವರ್ಣಿಸಿರುವದು ಜ್ಞಾನಕ್ಕಿಂತ ಬೇರೆಯಾಗಿ ಮಾಡತಕ್ಕ ಕರ್ಮವೇನೂ ಇಲ್ಲವೆಂದು ಹೇಳುವದಕ್ಕೆ —ಎಂದು ಭಾವ.

§. ಅರ್ಪಣಾದಿಗಳೆಂಬ ಕಾರಕಗಳು ಬೇರೆ ಬೇರೆಯಾಗಿ ನಿಜವಾಗಿಯೂ ಇರುವವೆಂದು ಜ್ಞಾನಿಯ ಭಾವನೆಯಿರುವದಿಲ್ಲ.

||. ಇಂಥಿಂಥ ಕ್ರಿಯೆಗಳಿಗೆ ಇಂಥಿಂಥ ಕಾರಕ(ಸಾಮಗ್ರಿ)ಗಳು ಬೇಕಾಗುವವೆಂಬುದನ್ನು ಶಾಸ್ತ್ರವೇ ತಿಳಿಸಿಕೊಡಬೇಕು.

** 'ಅಗ್ನಯೇ ಸ್ವಾಹಾ' ಎಂಬ ಮಂತ್ರದಲ್ಲಿ ಅಗ್ನಿದೇವತೆಯೇ ಸಂಪ್ರದಾನಕಾರಕವು, ಎಂದರೆ ಆ ದೇವತೆಗೇ ಹೋಮವನ್ನು ಅರ್ಪಿಸುವದು; ಹೋಮವು ಕ್ರಿಯೆ ಎಂದರೆ ಮಾಡುವ ಕೆಲಸವು; ಹಾಲು, ಮೊಸರು, ಮುಂತಾದದ್ದು ಕರ್ಮ; ಸ್ರುಕ್ಕು, ಸ್ರುವ ಮುಂತಾದದ್ದು ಕರಣ ಎಂದರೆ ಸಾಧನವು; ಮಂತ್ರಪೂತವಾದ ಅಗ್ನಿಯೇ ಅಧಿಕರಣಕಾರಕವು, ಎಂದರೆ ಹೋಮಮಾಡುವ ಸ್ಥಳವು; ನಾನೇ ಕರ್ತೃಕಾರಕವು, ಎಂದರೆ ಹೋಮವೆಂಬ ಕರ್ಮವನ್ನು ಮಾಡುವವನು; ಸ್ವರ್ಗವೇ ಮುಂತಾದದ್ದು ಈ ಕರ್ಮಕ್ಕೆ ಫಲವು —ಎಂದೀ ಪರಿಯಾಗಿ ಕ್ರಿಯಾಕಾರಕಫಲಗಳನ್ನು ಮನಸ್ಸಿನಲ್ಲಿ ತಂದುಕೊಳ್ಳುವವನೊಬ್ಬನಿದ್ದರೆ ಮಾತ್ರ ಕರ್ಮವೆನಿಸುವದು.

ಮಾನದಿಂದ (ಆಯಾ) ಫಲದಲ್ಲಿ ಆಸೆಯಿರುವಾತನು ಮಾಡತಕ್ಕದ್ದೆಂದೇ ಕಂಡು
ಬಂದಿರುವದೇ ಹೊರತು ಕ್ರಿಯೆ, ಕಾರಕ, ಫಲ– ಎಂಬ ಭೇದದ ಜ್ಞಾನವು ಹುಟ್ಟ
ಡಗಿದ ಮೇಲಾಗಲಿ ತಾನು ಕರ್ತೃವೆಂಬ ಅಭಿಮಾನವೂ ಇದರ ಫಲವು ನನಗೆ ಆಗ
ಬೇಕೆಂಬ ಅಭಿಪ್ರಾಯವೂ ಇಲ್ಲದವನಿಂದಾಗಲಿ ಆದದ್ದು ಕಂಡುಬರುವದಿಲ್ಲ.
ಆದರೆ ಈ ಕರ್ಮವು (ಎಲ್ಲವೂ) ಬ್ರಹ್ಮವೆಂಬ ತಿಳಿವಳಿಕೆಯಿಂದ ಅರ್ಪಣವೇ
ಮುಂತಾದ ಕಾರಕಗಳು, ಕ್ರಿಯೆ, ಫಲ– ಎಂಬ ಭೇದಬುದ್ಧಿಯು ಹುಟ್ಟಡಗಿ
ಹೋಗಿರುವ ಕರ್ಮವಾಗಿರುತ್ತದೆ. ಆದ್ದರಿಂದ (ನಿಜವಾಗಿ) ಇದು ಅಕರ್ಮವೆ.
ಆದ್ದರಿಂದಲೇ "ಕರ್ಮದಲ್ಲಿ ಅಕರ್ಮವನ್ನು ಯಾವಾತನು ಕಾಣುವನೋ"
(೪-೧೮) "ಕರ್ಮದಲ್ಲಿ ತೊಡಗಿದ್ದರೂ ಆತನು ಯಾವ ಕರ್ಮವನ್ನೂ ಏನಿ
ಷ್ಟೂ ಮಾಡುವದಿಲ್ಲ" (೪–೨೦) "ಗುಣಗಳು ಗುಣಗಳಲ್ಲಿ ಪ್ರವರ್ತಿಸುತ್ತಿರು
ವವು" (೩–೨೮) "ನಾನು ಏನೂ ಮಾಡುತ್ತಿರುವದಿಲ್ಲವೆಂದು ತತ್ತ್ವವನ್ನರಿತ
ಮನುಷ್ಯನು ತಿಳಿದಿರುವನು" (೫–೮) ಮುಂತಾದ ಕಡೆಗಳಲ್ಲಿ ಇದೇ ಅಭಿಪ್ರಾಯ
ವನ್ನು ತಿಳಿಸಿರುತ್ತದೆ. ಹಾಗೆ ತಿಳಿಸಿರುವದರಿಂದ ಆಯಾ ಕಡೆಯಲ್ಲಿ ಕ್ರಿಯೆ,
ಕಾರಕ, ಫಲ– ಎಂಬ ಭೇದಬುದ್ಧಿಯನ್ನೇ ಅಡಗಿಸಿಬಿಟ್ಟಿರುತ್ತದೆ. ಕಾಮ್ಯಾಗ್ನಿ
ಹೋತ್ರವೇ* ಮುಂತಾದ ಕಡೆಯಲ್ಲಿ ಕಾಮವು ಅಡಗಿಹೋಗಲು ಅದು (ಆ
ಮೇಲೆ) ಕಾಮ್ಯಾಗ್ನಿಹೋತ್ರವೇ ಮುಂತಾದದ್ದಲ್ಲದೆ ಹೋಗುವದೆಂಬುದು ಕಂಡೇ
ಇದೆ. ಮತ್ತು ಬುದ್ಧಿಪೂರ್ವಕವಾಗಿ ಮಾಡುವ ಕರ್ಮಗಳಿಗೂ ಬುದ್ಧಿಪೂರ್ವಕ
ವಾಗಿಯಲ್ಲದೆ ಮಾಡುವ ಕರ್ಮಗಳಿಗೂ† ಬೇರೆ ಬೇರೆ ಫಲವು ಆಗುವದೂ
ಕಂಡಿದೆ. ಅದರಂತೆ ಇಲ್ಲಿಯೂ 'ಇದೆಲ್ಲವೂ ಬ್ರಹ್ಮವೇ' ಎಂಬ ಬುದ್ಧಿಯಿಂದ
ಅರ್ಪಣವೇ ಮುಂತಾದ ಕ್ರಿಯಾಕಾರಕಫಲಗಳೆಂಬ ಭೇದವು ಹುಟ್ಟಡಗಿಹೋಗಿ
ರುವ ಜ್ಞಾನಿಯ ಕರ್ಮವೂ ಹೊರಗಿನ ವ್ಯಾಪಾರಮಾತ್ರವಾಗಿರುವದರಿಂದ‡

*. ೨೯ನೆಯ ಪುಟದ * ಟಿಪ್ಪಣಿಯನ್ನು ನೋಡಿ.

†. ಮತಿಪೂರ್ವಕಾಮತಿಪೂರ್ವಕಾದೀನಾಮ್ – ಎಂಬ ಭಾಷ್ಯವು ವ್ಯಾಖ್ಯಾನಕ್ಕೆ ಸಮ್ಮತ
ವಾಗಿದೆ. ಆದರೆ ಬುದ್ಧಿಪೂರ್ವಕ, ಅಬುದ್ಧಿಪೂರ್ವಕ ಎಂಬ ತರಗತಿಗಳಲ್ಲಿ ಸೇರದೆ ಇರುವ ಕರ್ಮವೇ
ಇರುವದಿಲ್ಲವಾದ್ದರಿಂದ ಇಲ್ಲಿ 'ಆದಿ' ಎಂಬ ಮಾತು ಹೆಚ್ಚೆಂದು ತೋರುತ್ತದೆ. ಅಥವಾ 'ಕರ್ಮಾ
ದೀನಾಮ್' ಎಂದಾದರೂ ಇರಬೇಕು; ಆಗ ಕರ್ಮ, ಅಕರ್ಮ, ವಿಕರ್ಮ– ಇವುಗಳೆಂದು ಅರ್ಥ
ಮಾಡಿಕೊಳ್ಳಬಹುದು.

‡. ನಾನು ಕರ್ತೃವೆಂಬ ಅಭಿಮಾನ, ಕಾರಕಗಳು ಕರ್ಮದ ಸಾಧನವೆಂಬ ಭಾವನೆ, ಫಲದಲ್ಲಿ
ಆಶೆ- ಇಷ್ಟು ಇದ್ದರೆ ಮಾತ್ರ ಕರ್ಮವಾಗುವದು; ಹಾಗಲ್ಲದೆ ಬರಿಯ ಚಲನೆಯೆ ಕರ್ಮವೆನಿಸುವದಾದರೆ
ಗಾಳಿಯಲ್ಲಿ ಚಲಿಸುವ ಹುಲ್ಲುಕಡ್ಡಿಯ ಚಲನೆಯೇ ಮುಂತಾದವುಗಳೂ ಕರ್ಮಗಳೆನ್ನಬೇಕಾಗುವದು.

ಆಕರ್ಮವೇ ಆಗುವದು*. ಆದ್ದರಿಂದಲೇ 'ಸಮಗ್ರವಾಗಿ ಲಯಹೊಂದುತ್ತದೆ' ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಿರುವದು.

## ವೃತ್ತಿಕಾರರು ಈ ಶ್ಲೋಕಕ್ಕೆ ಮಾಡಿರುವ ತಪ್ಪುವ್ಯಾಖ್ಯಾನದಲ್ಲಿ ದೋಷ

ಈ (ಶ್ಲೋಕವನ್ನು ವ್ಯಾಖ್ಯಾನಮಾಡಿರುವಾಗ) **ಕೆಲವರು** ಹೇಳಿರುವದೇನೆಂದರೆ:- ಬ್ರಹ್ಮವೆಂಬುದು ಯಾವುದೋ ಅದೇ ಅರ್ಪಣಾದಿಗಳು (ಎಂಬುದು ಈ ಶ್ಲೋಕದ ಅಭಿಪ್ರಾಯವು). ಬ್ರಹ್ಮವೇ ಅರ್ಪಣಾದಿಯಾದ ಐದು ಬಗೆಯ ಕಾರಕಗಳ ರೂಪದಲ್ಲಿದ್ದುಕೊಂಡು ಅದೇ ಕರ್ಮವನ್ನು ಮಾಡುತ್ತದೆ. ಆದ್ದರಿಂದ ಇಲ್ಲಿ ಅರ್ಪಣವೇ ಮುಂತಾದವುಗಳ ಬುದ್ಧಿಯನ್ನು ತೆಗೆದುಹಾಕಿರುವದಿಲ್ಲ, ಮತ್ತೇನೆಂದರೆ ಅರ್ಪಣವೇ ಮುಂತಾದವುಗಳಲ್ಲಿ ಬ್ರಹ್ಮಬುದ್ಧಿಯನ್ನುಂಟುಮಾಡಬೇಕೆಂದು ಹೇಳಿರುತ್ತದೆ. ಹೇಗೆ **ಪ್ರತಿಮೆಯೇ** ಮುಂತಾದದ್ದರಲ್ಲಿ ವಿಷ್ಣುವೇ ಮುಂತಾದ ಬುದ್ಧಿಯನ್ನು (ಶಾಸ್ತ್ರದಲ್ಲಿ ವಿಧಿಸಿರುತ್ತದೆಯೋ) ಅಥವಾ ನಾಮವೇ† ಮುಂತಾದದ್ದರಲ್ಲಿ ಬ್ರಹ್ಮಬುದ್ಧಿಯನ್ನು (ವಿಧಿಸಿರುತ್ತದೆಯೋ ಅದರಂತೆಯೇ ಇದು.)

ನಿಜವೆ, ಈ ಪ್ರಕರಣವು ಜ್ಞಾನಯಜ್ಞದ ಸ್ತುತಿಗಾಗಿ ಹೊರಡದೆ ಇದ್ದಿದ್ದರೆ ಹೀಗೂ ಆಗಬಹುದಾಗಿತ್ತು. ಆದರೆ ಇಲ್ಲಿ ಜ್ಞಾನಯಜ್ಞವೆಂಬ ಹೆಸರಿನಿಂದ ಸರಿಯಾದ (ಆತ್ಮ)ಜ್ಞಾನವನ್ನೇ ಹೇಳಿರುತ್ತದೆ. ಯಜ್ಞಗಳೆಂಬ ಆಯಾ ಕರ್ಮಗಳನ್ನು ಬಹಳವಾಗಿ ಹೇಳಿ "ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವೆ ಉತ್ತಮವಾದದ್ದು" (೪-೩೩) ಎಂದು ಜ್ಞಾನವನ್ನು ಹೊಗಳಿರುತ್ತದೆ.‡ ಇಲ್ಲಿ "ಬ್ರಹ್ಮಾರ್ಪಣಂ" ಮುಂತಾದ ವಚನವು ಜ್ಞಾನಕ್ಕೆ ಯಜ್ಞದ ರೂಪವನ್ನು ಕೊಟ್ಟು ವರ್ಣಿಸುವದಕ್ಕೆ [ಯಜ್ಞತ್ವಸಂಪಾದನೆ] ಒಂದಿದೆಯೆಂದು ಇಟ್ಟುಕೊಂಡರೆ ಸಾರ್ಥಕವಾಗುವದು; ಹಾಗಿಲ್ಲದೆ (ಬೇರೆ ಅರ್ಥವನ್ನು ಮಾಡಿದರೆ), ಎಲ್ಲವೂ ಬ್ರಹ್ಮವೇ ಆಗಿರುವಲ್ಲಿ ಅರ್ಪಣಾದಿಗಳು ಬ್ರಹ್ಮವೆಂದು ವಿಶೇಷವಾಗಿ ಎತ್ತಿ ಹೇಳಿರುವದು ವ್ಯರ್ಥವಾಗುವದು.

---

*. ಯಾವ ಫಲವನ್ನೂ ಕೊಡುವದಿಲ್ಲ.

†. ಛಾಂ॥ ೭-೧-೫ ನೋಡಿ.

‡. ಜ್ಞಾನವು ನಿಜವಾಗಿ ಯಜ್ಞವಲ್ಲ; ಯಜ್ಞವೆಂಬುದು ವೇದದಲ್ಲಿ ವಿಧಿಸಿರುವ ಕ್ರಿಯಾರೂಪವಾದದ್ದು; ಕ್ರಿಯಾರೂಪವಾದ ಯಜ್ಞಗಳನ್ನು ಹೇಳಿ ಈ ಎಲ್ಲಾ ಯಜ್ಞಗಳಿಗಿಂತಲೂ ಜ್ಞಾನಯಜ್ಞವು ಹೆಚ್ಚಿನದು ಎಂದು ಹೇಳಿರುತ್ತದೆ. ಇದು ಕರ್ಮಕ್ಕಿಂತಲೂ ಜ್ಞಾನಕ್ಕೆ ಹೆಚ್ಚಿನ ಫಲವುಂಟು ಎಂದು ಜ್ಞಾನವನ್ನು ಹೊಗಳುವದಕ್ಕೆ.

ಪ್ರತಿಮೆಯಲ್ಲಿ ವಿಷ್ಣುದೃಷ್ಟಿಯನ್ನೂ ನಾಮಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನೂ ಮಾಡಿಕೊಳ್ಳಬೇಕೆಂದು ವಿಧಿಸಿರುವಂತೆ ಅರ್ಪಣವೇ ಮುಂತಾದವುಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಿಕೊಳ್ಳಬೇಕೆಂದು ಇಲ್ಲಿ ವಿಧಿಸಿದೆ ಎಂದು ಯಾರು ಹೇಳುತ್ತಾರೋ, ಅವರ ಮತದಲ್ಲಿ ಇಲ್ಲಿ ಹಿಂದೆ ಹೇಳಿರುವ ಬ್ರಹ್ಮವಿದ್ಯೆಯನ್ನು ತಿಳಿಸುವದರಲ್ಲಿ ತಾತ್ಪರ್ಯವಿಲ್ಲವೆಂದಾಗುವದು [ನ ವಿವಕ್ಷಿತಾ]; ಏಕೆಂದರೆ (ಅವರ ವ್ಯಾಖ್ಯಾನದಂತೆ) ಇಲ್ಲಿ ಹೇಳಿರುವ ಜ್ಞಾನಕ್ಕೆ ಅರ್ಪಣ ಮುಂತಾದದ್ದೇ ವಿಷಯವಾಗಿರುವದು. ಇದಲ್ಲದೆ (ಹೀಗೆ ಒಂದರಲ್ಲಿ ಬ್ರಹ್ಮ)ದೃಷ್ಟಿಯನ್ನು ಮಾಡಿಕೊಳ್ಳುವ ರೂಪದ ಜ್ಞಾನದಿಂದ ಮೋಕ್ಷವು ಸಿಕ್ಕಲಾರದು;* (ಇಲ್ಲಿಯೋ ಎಂದರೆ) 'ಅವನು ಪಡೆಯಬೇಕಾದದ್ದು ಬ್ರಹ್ಮವೇ' ಎಂದು ಹೇಳಿರುತ್ತದೆ. ಸರಿಯಾದ ಜ್ಞಾನವಿಲ್ಲದೆ ಮೋಕ್ಷವುಂಟಾಗುವದೆಂಬುದು (ಯುಕ್ತಿಗೂ) ವಿರುದ್ಧವಾದ ಮಾತು. ಇದಲ್ಲದೆ (ಈ ವೃತ್ತಿಕಾರರ ವ್ಯಾಖ್ಯಾನವು) ಪ್ರಕರಣಕ್ಕೂ ವಿರುದ್ಧವಾಗಿರುತ್ತದೆ. ಹೇಗೆಂದರೆ, ಇಲ್ಲಿ "ಕರ್ಮದಲ್ಲಿ ಅಕರ್ಮವನ್ನು ಯಾವಾತನು ಕಂಡುಕೊಳ್ಳುವನೋ" (೪–೧೮) ಎಂಬಲ್ಲಿ ಸರಿಯಾದ ಜ್ಞಾನವನ್ನು ಕುರಿತ ಪ್ರಕರಣವು ಪ್ರಾರಂಭವಾಗಿದೆ. ಕೊನೆಯಲ್ಲಿಯೂ ಸರಿಯಾದ ಜ್ಞಾನವನ್ನೇ ಹೇಳಿರುತ್ತದೆಯೆನ್ನಬೇಕು; ಏಕೆಂದರೆ ಅದನ್ನು ಕುರಿತ (ವಾಕ್ಯದಿಂದಲೇ ಪ್ರಕರಣವನ್ನು) ಉಪಸಂಹಾರಮಾಡಿರುತ್ತದೆ. "ದ್ರವ್ಯಮಯವಾದ ಯಜ್ಞಕ್ಕಿಂತ ಜ್ಞಾನಯಜ್ಞವು ಉತ್ತಮವಾದದ್ದು" (೪–೩೩) "ಜ್ಞಾನವನ್ನು ಪಡೆದರೆ ಹೆಚ್ಚಿನ ಶಾಂತಿಯನ್ನು (ತಡವಿಲ್ಲದೆ ಹೊಂದುವನು") (೪–೩೯) ಎಂದು ಮುಂತಾಗಿ ಈ ಸರಿಯಾದ ಜ್ಞಾನವನ್ನು ಹೊಗಳುವದರಲ್ಲಿಯೇ ಈ ಅಧ್ಯಾಯವು ಕೊನೆಗಂಡಿರುತ್ತದೆ. ಹೀಗಿರುವಲ್ಲಿ† ಇದ್ದಕ್ಕಿದ್ದಹಾಗೆಯೆ, ಪ್ರಕರಣವನ್ನು ಕೈಬಿಟ್ಟು, ಪ್ರತಿಮೆಯಲ್ಲಿ ವಿಷ್ಣುದೃಷ್ಟಿಯನ್ನಿಡುವಂತೆ ಅರ್ಪಣಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನು ಇಡಬೇಕೆಂದು ಇಲ್ಲಿ ಹೇಳಿದೆ ಎಂದರೆ ಹೊಂದುಗಡೆಯಿಲ್ಲದ ಮಾತಾಗುವದು. ಆದ್ದರಿಂದ ನಾವು ಹೇಳಿರುವದೇ‡ ಈ ಶ್ಲೋಕಕ್ಕೆ ಸರಿಯಾದ ಅರ್ಥವು.

---

* ಏಕೆಂದರೆ ಇಂಥ ಉಪಾಸನೆಯಿಂದ ಮೋಕ್ಷವು ದೊರೆಯುವದೆಂದು ಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲ.

†. ಉಪಕ್ರಮ, ಉಪಸಂಹಾರ– ಈ ಎರಡೂ ಆತ್ಮಜ್ಞಾನದ ವಿಷಯವೇ ಆಗಿರುವಾಗ, ಇದೊಂದು ಶ್ಲೋಕವು ಮಾತ್ರ ಉಪಾಸನೆಯನ್ನು ಹೇಳುವದೆಂದು ಹೇಳಿದರೆ ಪ್ರಕರಣಕ್ಕೆ ಹೊಂದುವದಿಲ್ಲವೆಂದು ಭಾವ.

‡. ಈ ಶ್ಲೋಕಕ್ಕೆ ಬೇರೆ ಭಾಷ್ಯಕಾರರು ವ್ಯಾಖ್ಯಾನಮಾಡಿರುವ ರೀತಿಯನ್ನು ಪರಿಶಿಷ್ಟದಲ್ಲಿ ತಿಳಿಸಿದೆ.

## ಬಗೆಬಗೆಯ ಯಜ್ಞಗಳು

ಹೀಗೆ ಸರಿಯಾದ ಜ್ಞಾನಕ್ಕೆ ಯಜ್ಞದ ರೂಪವನ್ನು ಕೊಟ್ಟು ವರ್ಣಿಸಿ ಈಗ ಅದನ್ನು ಹೊಗಳುವದಕ್ಕಾಗಿ ಬೇರೆ ಯಜ್ಞಗಳನ್ನು ಇಲ್ಲಿ ತಿಳಿಸುತ್ತಾನೆ :—

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥**

೨೫. ಕೆಲವು ಯೋಗಿಗಳು ದೈವಯಜ್ಞವನ್ನೇ ಸೇವಿಸುತ್ತಾರೆ; ಮತ್ತೆ ಕೆಲವರು ಬ್ರಹ್ಮಾಗ್ನಿಯಲ್ಲಿ ಯಜ್ಞದಿಂದಲೆ ಯಜ್ಞವನ್ನು ಹೋಮಮಾಡುತ್ತಾರೆ.

[ ಭಾಷ್ಯ ]

ದೈವಯಜ್ಞವೆಂದರೆ ದೇವತೆಗಳನ್ನು ಕುರಿತು ಮಾಡುವ ಯಜ್ಞವು; ಇದನ್ನು ಕೆಲವರಾದ ಯೋಗಿಗಳು– ಎಂದರೆ ಕರ್ಮಿಗಳು– ಸೇವಿಸುತ್ತಾರೆ ಎಂದರೆ ಮಾಡುತ್ತಾರೆ ಎಂದರ್ಥ. (ಮತ್ತೆ ಕೆಲವರು) ಬ್ರಹ್ಮಾಗ್ನಿಯಲ್ಲಿ– "ಸತ್ಯವೂ ಜ್ಞಾನವೂ ಅನಂತವೂ ಆಗಿರುವದು ಬ್ರಹ್ಮವು"(ತೈ) "ವಿಜ್ಞಾನವೂ ಆನಂದವೂ ಆಗಿರುವದು ಬ್ರಹ್ಮವು" (ಬೃ) "ಯಾವದು ಪರೋಕ್ಷವಲ್ಲದೆ ನೇರಾಗಿಯೇ ಇದ್ದುಕೊಂಡಿರುವ ಬ್ರಹ್ಮವೊ, ಯಾವನು ಎಲ್ಲಕ್ಕೂ ಒಳಗಿನ ಆತ್ಮನೋ" (ಬೃ) ಮುಂತಾದ ವಚನಗಳಲ್ಲಿ ಹೇಳಿರುವದಾಗಿಯೂ ಹಸಿವು ಮುಂತಾದ ಯಾವ ಸಂಸಾರಧರ್ಮಗಳೂ ಇಲ್ಲದ್ದಾಗಿಯೂ* "ಇದಲ್ಲ, ಇದಲ್ಲ" (ಬೃ) ಎಂದು ಯಾವ ವಿಶೇಷವೂ ಇಲ್ಲದ ತತ್ತ್ವವೇ ಬ್ರಹ್ಮವೆಂಬ ಶಬ್ದದಿಂದ ಹೇಳಲ್ಪಡ ತಕ್ಕದ್ದು. 'ಬ್ರಹ್ಮಾಗ್ನಿ' ಎಂದರೆ ಬ್ರಹ್ಮವೆಂಬ ಅಗ್ನಿ; ಹೋಮವನ್ನು ಎತರಲ್ಲಿ ಮಾಡಬೇಕಾಗಿದೆಯೋ ಅದೆಂದು ತಿಳಿಸುವದಕ್ಕೆ ಬ್ರಹ್ಮಾಗ್ನಿಯಲ್ಲಿ ಎಂದು ಹೇಳಿದೆ. ಈ ಬ್ರಹ್ಮವೆಂಬ ಅಗ್ನಿಯಲ್ಲಿ– ಮತ್ತೆ ಕೆಲವರು ಎಂದರೆ ಬ್ರಹ್ಮಜ್ಞಾನಿಗಳು 'ಯಜ್ಞವನ್ನು' ಎಂದರೆ ಆತ್ಮನನ್ನು ಎಂದರ್ಥ. ಏಕೆಂದರೆ (ನಿಘಂಟುವಿನಲ್ಲಿ) ಆತ್ಮನ ಹೆಸರುಗಳ ನಡುವೆ 'ಯಜ್ಞ' ಎಂಬುದನ್ನೂ ಹೇಳಿದೆ. ನಿಜವಾಗಿ ನೋಡಿದರೆ ಬ್ರಹ್ಮವೇ ಆಗಿರುವನಾಗಿಯೂ ಬುದ್ಧಿಯೇ ಮುಂತಾದ† ಉಪಾಧಿಗಳಿಂದ ಕೂಡಿದವನಾಗಿ, ಉಪಾಧಿಗಳ ಧರ್ಮವೆಲ್ಲ ಆರೋಪಿತವಾಗಿರುವ (ಅಧಿಷ್ಠಾನಸ್ವರೂಪ)ನಾಗಿಯೂ ಆಹುತಿಯ‡ ರೂಪವಾಗಿರುವನಾಗಿಯೂ

---

*. ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣ–ಇವು. ಬೃ. ೩-೫-೧ ನೋಡಿ.

†. ಬುದ್ಧಿ, ಮನಸ್ಸು, ಪ್ರಾಣ, ಇಂದ್ರಿಯ, ಶರೀರ– ಎಂಬ ಉಪಾಧಿಗಳಿಂದ ಆತ್ಮನು ಸಂಸಾರಿಯಾಗಿರುವಂತೆ ತೋರುವನು.

‡. ಆಹುತಿಯನ್ನು ಅಗ್ನಿಯಲ್ಲಿ ಹಾಕಿ ಸುಡುವಂತೆ ಉಪಾಧಿಯಿಂದ ಕೂಡಿದ ರೂಪವನ್ನು ಜ್ಞಾನಾಗ್ನಿಯಿಂದ ಸುಟ್ಟುಬಿಡಬೇಕಾಗಿರುವದು.

ಇರುವ ಈ ಆತ್ಮನನ್ನು ಯಜ್ಞದಿಂದಲೇ ಮೇಲೆ ಹೇಳಿದಂಥ ಯಜ್ಞದಿಂದಲೇ ಎಂದರೆ ಆತ್ಮನಿಂದಲೆ ಹೋಮಮಾಡುತ್ತಾರೆ, ಅಗ್ನಿಯಲ್ಲಿ ಹಾಕುತ್ತಾರೆ. ಉಪಾಧಿಯಿಂದ ಕೂಡಿದ ಆತ್ಮನನ್ನು ಯಾವ ಉಪಾಧಿಯೂ ಇಲ್ಲದ ಪರಬ್ರಹ್ಮ ರೂಪದಿಂದ ಕಾಣುವದೇ ಆ (ಬ್ರಹ್ಮಾಗ್ನಿಯಲ್ಲಿ ಮಾಡುವ) ಹೋಮವು. ಅದನ್ನು ಮಾಡುವರು, ಎಂದರೆ ಸಂನ್ಯಾಸಿಗಳಾಗಿ ಬ್ರಹ್ಮಾತ್ಮೈಕ್ಯಜ್ಞಾನದಲ್ಲಿದ್ದು ಕೊಂಡಿರುವರು ಎಂದರ್ಥ.

'ಬ್ರಹ್ಮಾರ್ಪಣಂ' ಮುಂತಾದ ಶ್ಲೋಕಗಳಿಂದ ಪ್ರಾರಂಭವಾಗಿರುವ ಈ ಸರಿಯಾದ ಜ್ಞಾನವೆಂಬ ಯಜ್ಞವನ್ನು "ದ್ರವ್ಯಮಯವಾದ **ಯಜ್ಞಕ್ಕಿಂತಲೂ** ಜ್ಞಾನಯಜ್ಞವು ಉತ್ತಮವಾದದ್ದು" (೪-೩೩) ಎಂಬ ಮುಂತಾಗಿ (ಮುಂದೆ) ಹೊಗಳಬೇಕಾಗಿರುವದರಿಂದ ದೈವಯಜ್ಞವೇ ಮುಂತಾದವುಗಳ ನಡುವೆ ಇದನ್ನು ಸೇರಿಸಿ ಹೇಳಿರುತ್ತದೆ.

**ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯೇ ಇನ್ದ್ರಿಯಾಗ್ನಿಷು ಜುಹ್ವತಿ ॥ ೨೬ ॥**

೨೬. ಕೆಲವರು ಶ್ರೋತ್ರವೇ ಮುಂತಾದ ಇಂದ್ರಿಯಗಳನ್ನು ಸಂಯಮಾಗ್ನಿಗಳಲ್ಲಿ ಹೋಮಮಾಡುತ್ತಾರೆ; ಮತ್ತೆ ಕೆಲವರು ಶಬ್ದವೇ ಮುಂತಾದ ವಿಷಯಗಳನ್ನು ಇಂದ್ರಿಯವೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ.

[ ಭಾಷ್ಯ ]

ಕೆಲವರು ಎಂದರೆ, ಯೋಗಿಗಳು ಶ್ರೋತ್ರವೇ ಮುಂತಾದ ಇಂದ್ರಿಯಗಳನ್ನು ಸಂಯಮಾಗ್ನಿಗಳಲ್ಲಿ ಹೋಮಮಾಡುತ್ತಾರೆ. ಪ್ರತಿಯೊಂದು ಇಂದ್ರಿಯಕ್ಕೂ **ಸಂಯಮವು*** ಬೇರೆ ಬೇರೆಯಾಗಿರುವದರಿಂದ 'ಸಂಯಮಾಗ್ನಿಗಳಲ್ಲಿ' ಎಂದು ಬಹುವಚನವನ್ನು ಉಪಯೋಗಿಸಿರುತ್ತದೆ. ಸಂಯಮಗಳೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ, ಎಂದರೆ ಇಂದ್ರಿಯಗಳನ್ನು ಬಿಗಿಹಿಡಿಯುವ ಕೆಲಸವನ್ನು ಮಾಡುತ್ತಾರೆ ಎಂದರ್ಥ. ಮತ್ತೆ ಕೆಲವರು ಶಬ್ದವೇ ಮುಂತಾದ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ,† ಎಂದರೆ

---

*. ಸಂಯಮವೆಂದರೆ ಧ್ಯಾನ, ಧಾರಣ, ಸಮಾಧಿ– ಇವು ಮೂರನ್ನೂ ಒಕ್ಕಡೆಯಲ್ಲಿ ಸೇರಿಸಿ ಮಾಡುವದು ಎಂದು ಯೋಗಶಾಸ್ತ್ರದ ಅರ್ಥವು ; ಆದರೆ ಇಂದ್ರಿಯಗಳ ಸಂಯಮವೆಂದರೆ ಅದಲ್ಲ. ಇಂದ್ರಿಯಗಳನ್ನು ಬಿಗಿಹಿಡಿಯುವದೆ. ಇದನ್ನು ಯೋಗದಲ್ಲಿ ಪ್ರತ್ಯಾಹಾರವೆಂದು ಕರೆಯುತ್ತಾರೆ

†. ಇಂದ್ರಿಯಗಳನ್ನು ವಿಷಯಗಳ ಕಡೆಗೇ ಯಾವಾಗಲೂ ಹೋಗಗೊಡದಿರುವದು ಸಾಧ್ಯವಲ್ಲವೆಂದು ಮತ್ತೆ ಕೆಲವರು. ರಾಗದ್ವೇಷವಿಲ್ಲದೆ ವಿಷಯಗಳನ್ನು ಇಂದ್ರಿಯಗಳಿಂದ ಗ್ರಹಿಸುವದೇ ಒಂದು ಬಗೆಯ ಯಜ್ಞವೆಂದು ಭಾವಿಸಿರುವರು ಎಂದು ಭಾವ. (ಆ||)

ಶ್ರೋತ್ರಾದಿಗಳಿಂದ ನಿಷಿದ್ಧವಲ್ಲದ (ಯೋಗ್ಯ)ವಿಷಯಗಳನ್ನು ಗ್ರಹಿಸುವದೇ ಹೋಮವೆಂದು ಎಣಿಸುತ್ತಾರೆ.

ಮತ್ತು

**ಸರ್ವಾಣೀನ್ದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

೨೭. ಇನ್ನೂ ಕೆಲವರು ಇಂದ್ರಿಯಕರ್ಮಗಳು, ಪ್ರಾಣಕರ್ಮಗಳು– ಇವೆಲ್ಲವನ್ನೂ ಜ್ಞಾನದಿಂದ ಹೊತ್ತಿಸಿದ ಆತ್ಮಸಂಯಮಯೋಗವೆಂಬ ಅಗ್ನಿಯಲ್ಲಿ ಹೋಮಮಾಡುತ್ತಾರೆ.

[ಭಾಷ್ಯ]

ಇಂದ್ರಿಯಕರ್ಮಗಳೆಂದರೆ ಇಂದ್ರಿಯಗಳ ವ್ಯಾಪಾರಗಳು, (ಅವುಗಳನ್ನು) ಮತ್ತು ಪ್ರಾಣಕರ್ಮಗಳನ್ನು – ಒಳಗಿನ ವಾಯುವಿಗೆ ಪ್ರಾಣವೆಂದು ಹೆಸರು. ಅದರ ವ್ಯಾಪಾರಗಳು ಎಂದರೆ ಕುಗ್ಗಿಸುವದು, ಹಿಗ್ಗಿಸುವದು- ಮುಂತಾದವುಗಳು; ಅವುಗಳನ್ನು– ಬೇರೆ ಕೆಲವರು, ಆತ್ಮಸಂಯಮಯೋಗಾಗ್ನಿಯಲ್ಲಿ ಹೋಮ ಮಾಡುತ್ತಾರೆ. ಆತ್ಮನಲ್ಲಿ ಮಾಡುವ ಸಂಯಮಕ್ಕೆ ಆತ್ಮಸಂಯಮವೆಂದು ಹೆಸರು. ಆ (ಆತ್ಮಸಂಯಮವೆಂಬುದೇ)ಯೋಗಾಗ್ನಿಯು; ಅಂಥ ಆತ್ಮಸಂಯಮ ಯೋಗಾಗ್ನಿಯಲ್ಲಿ (ಇಂದ್ರಿಯಾದಿಗಳ ವ್ಯಾಪಾರವನ್ನು) ಹೋಮಮಾಡು ತ್ತಾರೆ, (ಅದರಲ್ಲಿ ಆ ಕರ್ಮಗಳನ್ನೆಲ್ಲ) ಹಾಕಿ ಲಯಮಾಡುತ್ತಾರೆ. ಜ್ಞಾನ ದಿಂದ ಹೊತ್ತಿಕೊಂಡಿರುವ ಎಂದರೆ ಎಣ್ಣೆಯಿಂದ ದೀಪದುರಿಯು ಬಲವಾಗು ವಂತೆ ವಿವೇಕರೂಪವಾದ ಅರಿವಿನಿಂದ ಬಲವಾಗಿ ಉರಿಯುತ್ತಿರುವ (ಆತ್ಮ ಸಂಯಮಯೋಗಾಗ್ನಿಯಲ್ಲಿ ಅವುಗಳನ್ನು) ಲಯಮಾಡಿಬಿಡುತ್ತಾರೆ* ಎಂದರ್ಥ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

೨೮. ಕೆಲವರು ದ್ರವ್ಯಯಜ್ಞವನ್ನು ಮಾಡುವವರು, (ಕೆಲವರು) ಯೋಗ ಯಜ್ಞವನ್ನು ಮಾಡುವವರು, (ಕೆಲವರು) ಸ್ವಾಧ್ಯಾಯದಿಂದಲೂ ಜ್ಞಾನದಿಂದಲೂ ಯಜ್ಞವನ್ನು ಮಾಡುವವರು; (ಇವರೆಲ್ಲರೂ) ಹರಿತವಾದ ವ್ರತವುಳ್ಳ ಯತಿಗಳು.

---

*. ಆತ್ಮನಲ್ಲಿಯೇ ಮನಸ್ಸಿಟ್ಟು ಜ್ಞಾನವನ್ನು ಸಂಪಾದಿಸಿ ಜ್ಞಾನೇಂದ್ರಿಯಕರ್ಮೇಂದ್ರಿಯ ಗಳ ವ್ಯಾಪಾರವನ್ನೂ ಪ್ರಾಣದ ವ್ಯಾಪಾರಗಳನ್ನೂ ಸ್ವಾಧೀನಕ್ಕೆ ತೆಗೆದುಕೊಳ್ಳುವರು ಎಂದರ್ಥ. ಇದನ್ನು ಬಾಧಪೂರ್ವಕಸಮಾಧಿಯೆನ್ನುತ್ತಾರೆ. ಹಿಂದಿನ ಶ್ಲೋಕದಲ್ಲಿ ಇಂದ್ರಿಯಗಳನ್ನು ಒಳಕ್ಕೆಳೆದು ಮನಸ್ಸನ್ನು ಏಕಾಗ್ರವಾಗಿ ಮಾಡುವ ಯೋಗವನ್ನು ಹೇಳಿದೆ. ಇಲ್ಲಿ ಜ್ಞಾನವನ್ನು ಹೇಳಿದೆ. ವ್ಯಾಖ್ಯಾನಕಾರರ ಅಭಿಪ್ರಾಯಕ್ಕೆ ಪರಿಶಿಷ್ಟವನ್ನು ನೋಡಿ.

[ಭಾಷ್ಯ]

ಇದೇ ಯಜ್ಞವೆಂಬ ಬುದ್ಧಿಯಿಂದ ತೀರ್ಥಗಳಲ್ಲಿ ದ್ರವ್ಯವನ್ನು ಯಾರು ವಿನಿಯೋಗಮಾಡುವರೋ ಅವರು ದ್ರವ್ಯಯಜ್ಞರು *; ತಪಸ್ಸನ್ನೆ ಯಾರು ಯಜ್ಞವೆಂದೆಣಿಸುವರೋ ಆ ತಪಸ್ವಿಗಳೇ ತಪೋಯಜ್ಞರು†; ಪ್ರಾಣಾಯಾಮ, ಪ್ರತ್ಯಾಹಾರ– ಮುಂತಾದ ರೂಪದ ಯೋಗವೆ ಯಜ್ಞವೆಂದು ಯಾರು ಭಾವಿಸುವರೋ ಅವರು ಯೋಗಯಜ್ಞರು‡; ಮತ್ತು ಕೆಲವರು ಸ್ವಾಧ್ಯಾಯಯಜ್ಞರು– ಸ್ವಾಧ್ಯಾಯವೆಂದರೆ ವಿಧಿಯನ್ನು ವಿಾರದೆ ಋಗ್ವೇದವೇ ಮುಂತಾದದ್ದನ್ನು ಅಭ್ಯಾಸಮಾಡುವದು, ಇದೇ ಯಜ್ಞವೆಂದು ಯಾರು ಅರಿಯುವರೋ ಅವರು ಸ್ವಾಧ್ಯಾಯಯಜ್ಞರು; ಜ್ಞಾನವನ್ನು ಎಂದರೆ ಶಾಸ್ತ್ರಾರ್ಥದ§ ತಿಳಿವಳಿಕೆಯನ್ನು ಯಾರು ಯಜ್ಞವೆಂದೆಣಿಸುವರೋ ಅವರು ಜ್ಞಾನಯಜ್ಞರು. (ಇವರೆಲ್ಲರೂ)|| ಯತಿಗಳು, ಎಂದರೆ (ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವದಕ್ಕೆ) ಯತ್ನವನ್ನು ಮಾಡುತ್ತಿರುವವರು; ಹರಿತವಾದ ವ್ರತವುಳ್ಳವರು, ಎಂದರೆ ಚೆನ್ನಾಗಿ ಹರಿತಮಾಡಿ ಸರಿಕಟ್ಟುಗೊಳಿಸಿದ ವ್ರತಗಳುಳ್ಳವರು.

ಮತ್ತು

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥**

೨೯. ಕೆಲವರು ಪ್ರಾಣದ ಮತ್ತು ಅಪಾನದ ಗತಿಗಳನ್ನು ತಡೆದುಕೊಂಡು ಪ್ರಾಣಾಯಾಮದಲ್ಲಿ ಹೆಚ್ಚಿನ ಆಸಕ್ತಿಯುಳ್ಳವರಾಗಿ ಅಪಾನದಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ಅಪಾನವನ್ನೂ ಹೋಮಮಾಡುವರು.

[ಭಾಷ್ಯ]

ಮತ್ತೆ ಕೆಲವರು 'ಅಪಾನದಲ್ಲಿ ಪ್ರಾಣವನ್ನು ಹೋಮಮಾಡುವರು' ಎಂದರೆ ಅಪಾನವೃತ್ತಿಯಲ್ಲಿ ಪ್ರಾಣವೃತ್ತಿಯನ್ನು ಹೋಮವಾಗಿ ಹಾಕುವರು **ಪೂರಕ**ವೆಂಬ ಪ್ರಾಣಾಯಾಮವನ್ನು ಮಾಡುತ್ತಾರೆಂದರ್ಥ. ಇನ್ನೂ ಕೆಲವರು

*. ಇದು ಹೋಮವೇ ಮುಂತಾದದ್ದಲ್ಲ; ದೈವಯಜ್ಞವೆಂಬ ಮಾತಿಗೆ ಹಿಂದಿನ ಶ್ಲೋಕದಲ್ಲಿ ಮಾಡಿರುವ ಭಾಷ್ಯವನ್ನು ನೋಡಿ.

†. ಕೃಚ್ಛ್ರ, ಚಾಂದ್ರಾಯಣ– ಮುಂತಾದ ತಪಸ್ಸನ್ನು ಮಾಡುವವರು.

‡. ಪಾತಂಜಲಯೋಗವನ್ನು ಮಾಡುವವರು.

§. ಇದರಲ್ಲಿ ಆತ್ಮಜ್ಞಾನವು ಸೇರಿರುವದಿಲ್ಲ.

||. ಸಂಶಿತವ್ರತಾಃ – ಎಂಬುದು ಬೇರೊಂದು ಬಗೆಯ ಯಜ್ಞವೆಂದು ವ್ಯಾಖ್ಯಾನದಲ್ಲಿದೆ; ಮೂಲಶ್ಲೋಕದ ಸ್ವಾರಸ್ಯದಿಂದ ಇದು ಸರಿಯೆಂದು ತೋರುವದಿಲ್ಲ.

'ಪ್ರಾಣದಲ್ಲಿ ಅಪಾನವನ್ನು ಹೋಮಮಾಡುವರು' ಎಂದರೆ **ರೇಚಕ**ವೆಂಬ ಪ್ರಾಣಾಯಾಮವನ್ನು ಮಾಡುವರು ಎಂದರ್ಥ. ಪ್ರಾಣದ ಗತಿಯೆಂದರೆ ಬಾಯಿಯಿಂದಲೂ ಮೂಗಿನಿಂದಲೂ ಉಸಿರು ಹೊರಕ್ಕೆ ಹೋಗುವದು; ಅಪಾನದ ಗತಿಯೆಂದರೆ ಅದಕ್ಕೆ ವಿರುದ್ಧವಾಗಿ ಕೆಳಗಡೆಗೆ ವಾಯು ಹೋಗುವದು. ಈ ಪ್ರಾಣಾಪಾನಗಳ ಗತಿಗಳನ್ನು ತಡೆದುಕೊಂಡು ಪ್ರಾಣಾಯಾಮದಲ್ಲಿಯೇ ತಾತ್ಪರ್ಯವುಳ್ಳವರಾಗಿ **ಕುಂಭಕ**ವೆಂಬ* ಪ್ರಾಣಾಯಾಮವನ್ನು ಮಾಡುತ್ತಾರೆಂದರ್ಥ.

ಮತ್ತು

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦**

೩೦. ಇನ್ನೂ ಕೆಲವರು ಆಹಾರದಲ್ಲಿ ನಿಯಮವುಳ್ಳವರಾಗಿ ಪ್ರಾಣಗಳನ್ನು ಪ್ರಾಣಗಳಲ್ಲಿ ಹೋಮಮಾಡುವರು. ಇವರೆಲ್ಲರೂ ಯಜ್ಞವನ್ನು ಬಲ್ಲವರು, ಯಜ್ಞಗಳಿಂದ ಕಲ್ಮಷವನ್ನು ಕಳೆದುಕೊಂಡಿರುವವರು.

[ಭಾಷ್ಯ]

ಆಹಾರದಲ್ಲಿ ನಿಯಮವುಳ್ಳವರು ಎಂದರೆ (ಶಾಸ್ತ್ರದಲ್ಲಿ) ಇಷ್ಟೆಂದು ಗೊತ್ತುಮಾಡಿರುವ† ಅಳತೆಯ ಆಹಾರವನ್ನು ತೆಗೆದುಕೊಳ್ಳುವರು. (ಇವರು) ಪ್ರಾಣಗಳೆಂಬ ವಾಯುಗಳನ್ನು ಪ್ರಾಣಗಳಲ್ಲಿಯೇ ಹೋಮಮಾಡುತ್ತಾರೆ; ಯಾವ ಯಾವ ವಾಯುವನ್ನು ಗೆದ್ದುಕೊಳ್ಳುವರೋ ಅದದರಲ್ಲಿ ಉಳಿದ ವಾಯುಗಳನ್ನೆಲ್ಲ ಹೋಮಮಾಡುವರು; ಅವು ಅದರಲ್ಲಿ ಸೇರಿಕೊಂಡಂತೆ ಆಗಿಬಿಡುತ್ತವೆ. ಇವರೆಲ್ಲರೂ ಯಜ್ಞದ (ತತ್ತ್ವವನ್ನು) ಬಲ್ಲವರು, ಮೇಲೆ ಹೇಳಿದ (ಬೇರೆ ಬೇರೆ) ಯಜ್ಞಗಳಿಂದ ಪಾಪವನ್ನು ನಾಶಗೊಳಿಸಿಕೊಂಡಿರುವರು.

ಹೀಗೆ ಮೇಲೆ ಹೇಳಿದ ಯಜ್ಞಗಳನ್ನು ಮಾಡಿ

**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥ ೩೧ ॥**

---

*. ಅಷ್ಟಾಂಗಯೋಗದಲ್ಲಿ ಪ್ರಾಣಾಯಾಮವೆಂಬುದು ಒಂದು ಅಂಗವಷ್ಟೆ; ಅದರಲ್ಲಿ ರೇಚಕ, ಪೂರಕ, ಕುಂಭಕಗಳು ಭಾಗಗಳು. ಈಚಿನ ಹಠಯೋಗಿಗಳು ಇದನ್ನು ಬಲಪಡಿಸಿರುತ್ತಾರೆ. ಈ ವಿಷಯದಲ್ಲಿ ಗೀತಾರ್ಥಸರ್ವಸ್ವದ ಧ್ಯಾನಯೋಗವನ್ನು ನೋಡಿ.

†. ಯೋಗವನ್ನು ಮಾಡುವವನು ಇಷ್ಟೇ ಆಹಾರವನ್ನು ತೆಗೆದುಕೊಳ್ಳಬೇಕೆಂಬ ನಿಯಮವುಂಟು.

೩೧. ಯಜ್ಞಗಳಲ್ಲಿ ಉಳಿದ ಅಮೃತವನ್ನು ಭೋಜನಮಾಡಿ, (ಇವರು) ಸನಾತನವಾದ ಬ್ರಹ್ಮವನ್ನು ಪಡೆಯುತ್ತಾರೆ; ಎಲೈ ಕುರುಶ್ರೇಷ್ಠನೆ, ಯಜ್ಞ ವಿಲ್ಲದಾತನಿಗೆ ಈ ಲೋಕವೆ ಇಲ್ಲ, ಮತ್ತೊಂದು ಎಲ್ಲಿ ಬಂತು ?

[ ಭಾಷ್ಯ ]

ಯಜ್ಞಗಳಲ್ಲಿ ಉಳಿದದ್ದು ಯಜ್ಞಶಿಷ್ಟ; ಯಜ್ಞಶಿಷ್ಟವಾದ ಅಮೃತವು ಯಜ್ಞಶಿಷ್ಟಾಮೃತವು. ಯಜ್ಞಶಿಷ್ಟವಾದ ಅಮೃತವನ್ನು ಭೋಜನಮಾಡುವ ವರು ಯಜ್ಞಶಿಷ್ಟಾಮೃತಭುಜರು. ಮೇಲೆ ಹೇಳಿದಂಥ ಯಜ್ಞಗಳನ್ನು ಮಾಡಿ ಅದನ್ನುಳಿದ ಕಾಲದಲ್ಲಿ ಶಾಸ್ತ್ರೋಕ್ತವಾಗಿ ವಿಧಿಸಿರುವ **ಅಮೃತವೆಂಬ*** ಅನ್ನ ವನ್ನು ಭೋಜನಮಾಡುತ್ತಾ ಇರುವವರು ಮೋಕ್ಷದಲ್ಲಿ ಅಪೇಕ್ಷೆಯುಳ್ಳವರಾಗಿ ದ್ದರೆ† ಸನಾತನವಾದ ಎಂದರೆ ಶಾಶ್ವತವಾಗಿರುವ ಬ್ರಹ್ಮವನ್ನು ಕಾಲಕ್ರಮದಲ್ಲಿ ಪಡೆಯುತ್ತಾರೆ, ಎಂದು (ವಾಕ್ಯ)ಸಾಮರ್ಥ್ಯದಿಂದ‡ ಇಟ್ಟುಕೊಳ್ಳಬೇಕು. ಈ ಮೇಲೆ ಹೇಳಿರುವ ಯಜ್ಞಗಳಲ್ಲಿ ಒಂದೂ ಯಾವಾತನಿಗೆ ಇಲ್ಲವೋ ಅವನು ಅಯಜ್ಞನು. ಎಲೈ ಕುರುಶ್ರೇಷ್ಠನೆ, ಅಂಥವನಿಗೆ ಎಲ್ಲಾ ಪ್ರಾಣಿಗಳಿಗೂ ಸಾಧಾರಣವಾಗಿರುವ§ ಈ ಲೋಕವೇ ಇಲ್ಲ, ವಿಶೇಷವಾದ ಸಾಧನವನ್ನು ಮಾಡಿ ಪಡೆಯಬೇಕಾಗಿರುವ ಪರಲೋಕವೆಂಬುದು ಎಲ್ಲಿ ಬಂತು ?

---

*. ಯಜ್ಞವನ್ನು ಮಾಡಿ ಭೋಜನಮಾಡುವವನ ಅನ್ನವು ಅಮೃತವು, ಏಕೆಂದರೆ ಅದು ಮೋಕ್ಷಕ್ಕೆ ಸಾಧಕವಾಗಿರುವದು.

†. ಇಲ್ಲದಿದ್ದರೆ ಆಯಾ ಯಜ್ಞದ ಯೋಗ್ಯತೆಗೆ ತಕ್ಕಂತೆ ಬೇರೆ ಬೇರೆ ಫಲಗಳು ಆಗುವವು.

‡. ಜ್ಞಾನದಿಂದ ಮಾತ್ರ ನೇರಾಗಿ ಮೋಕ್ಷವಾಗುವದು; ಮಿಕ್ಕ ಯಾವುದೂ ನೇರಾಗಿ ಮೋಕ್ಷಕ್ಕೆ ಸಾಧನವಾಗಲಾರದು. ಇಲ್ಲಿ ತಪಸ್ಸು, ದಾನ, ಯೋಗ– ಮುಂತಾದವುಗಳನ್ನೂ ಯಜ್ಞವೆಂದು ಕರೆದು ಅವುಗಳಿಂದ ಮೋಕ್ಷವಾಗುವದೆಂದು ಹೇಳಿರುವದರಿಂದ ಚಿತ್ತಶುದ್ಧಿ ಜ್ಞಾನ ಗಳುಂಟಾಗಿ ಕಾಲಾನುಕಾಲಕ್ಕೆ ಮೋಕ್ಷವೂ ಆಗುವದು ಎಂದು ಅರ್ಥಮಾಡಿಕೊಳ್ಳಬೇಕಾಗಿದೆ.

§. ಪುಣ್ಯಪಾಪಗಳ ಮಿಶ್ರದಿಂದ ಮನುಷ್ಯಜನ್ಮವು ಉಂಟಾಗುವದು. ಮೇಲೆ ಹೇಳಿದ ಯಜ್ಞಗಳಲ್ಲಿ ಒಂದಾದರೂ ಮಾಡಿದ್ದರೆ ಮಾತ್ರ ಅಂಥ ಪುಣ್ಯಮಿಶ್ರಣವಾಗುವದು, ಇಲ್ಲದಿದ್ದರೆ ಕೇವಲ ಪಾಪದಿಂದ ತಿರ್ಯಕ್ಪ್ರಾಣಿಗಳ ಜನ್ಮವೋ ಸ್ಥಾವರಜನ್ಮವೋ ಗತಿಯಾಗುವದು, ಹೀಗೆ ಮನುಷ್ಯತ್ವಪ್ರಾಪ್ತಿಯಾಗುವದಕ್ಕೇ ಯಜ್ಞವು ಅವಶ್ಯಕವಾಗಿರುವಾಗ ದೇವತ್ವಾದಿಗಳು ದೊರೆಯ ಬೇಕಾದರೆ ಇವು ಬೇಕೆಂದು ಹೇಳುವದೇನಿದೆ? –ಎಂದು ಭಾವ. ಸಾಮಾನ್ಯವಾಗಿ ಬಹುಜೀವರು ಮನುಷ್ಯತ್ವವನ್ನು ಪಡೆಯುವರು, ದೇವತ್ವಾದಿಗಳನ್ನು ಎಲ್ಲಿಯೋ ಕೆಲವರು ಹೊಂದುವರು– ಎಂಬು ದನ್ನು ಸೂಚಿಸುವದಕ್ಕೆ 'ಸರ್ವಪ್ರಾಣಿಸಾಧಾರಣವಾದ' ಎಂಬ ವಿಶೇಷಣವನ್ನು ಸೇರಿಸಿದೆ.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥**

೩೨. ಹೀಗೆ ಬಹುವಿಧವಾದ ಯಜ್ಞಗಳು ಬ್ರಹ್ಮದ ಮುಖದಲ್ಲಿ ವಿಸ್ತೃತವಾಗಿವೆ. ಅವುಗಳನ್ನೆಲ್ಲವನ್ನೂ ಕರ್ಮದಿಂದ ಹುಟ್ಟಿದವುಗಳೆಂದು ತಿಳಿ; ಹೀಗೆಂದು ತಿಳಿದರೆ ಮುಕ್ತಿಯನ್ನು ಹೊಂದುವೆ.

[ ಭಾಷ್ಯ ]

ಹೀಗೆ ಮೇಲೆ ಹೇಳಿದ ಬಲುಬಗೆಯ ಯಜ್ಞಗಳು 'ಬ್ರಹ್ಮದ ಮುಖದಲ್ಲಿ ವಿಸ್ತೃತವಾಗಿವೆ' ಎಂದರೆ ವೇದದ ದ್ವಾರದಲ್ಲಿ ಹರಡಿರುತ್ತವೆ. ವೇದದ ಮೂಲಕ ತಿಳಿಯಬರುವದರಿಂದ 'ಬ್ರಹ್ಮದ ಮುಖದಲ್ಲಿ ವಿಸ್ತೃತವಾಗಿವೆ' ಎಂದು ಹೇಳಿರುತ್ತದೆ. "ಮಾತಿನಲ್ಲಲ್ಲವೆ ಪ್ರಾಣವನ್ನು ಹೋಮಮಾಡುತ್ತೇವೆ." (ಐ. ಆ.) ಎಂಬುದೇ ಮುಂತಾದ (ವಚನಗಳು ಹೇಳುವ ಯಜ್ಞಗಳು* ಇದಕ್ಕೆ ಉದಾಹರಣೆ.) ಇವುಗಳೆಲ್ಲವೂ ಕರ್ಮದಿಂದ ಆದವುಗಳು, ಎಂದರೆ ಶರೀರದ, ವಾಕ್ಕಿನ, ಮತ್ತು ಮನಸ್ಸಿನ ಕರ್ಮದಿಂದ ಆದವುಗಳು, ಎಂದರೆ **ಅನಾತ್ಮದಿಂದ ಉಂಟಾದವುಗಳು ಎಂದು ತಿಳಿದುಕೊ**; ಏಕೆಂದರೆ ಆತ್ಮನಲ್ಲಿ ಯಾವ ವ್ಯಾಪಾರವೂ ಇರುವದಿಲ್ಲ. ಆದ್ದರಿಂದ ಹೀಗೆ ತಿಳಿದುಕೊಂಡರೆ, ಅಶುಭದಿಂದ ಬಿಡುಗಡೆಯನ್ನು ಹೊಂದುತ್ತೀಯೆ; 'ಇವು ನನ್ನ ಕೆಲಸಗಳಲ್ಲ, ನಾನು ಯಾವ ವ್ಯಾಪಾರವೂ ಇಲ್ಲದೆ ಸುಮ್ಮನೆ ಇರುತ್ತೇನೆ' ಎಂದೀ ಪರಿಯಲ್ಲಿ ತಿಳಿದುಕೊಳ್ಳುವದಾದರೆ ಈ ಸರಿಯಾದ ತಿಳಿವಳಿಕೆಯಿಂದ† ಸಂಸಾರದ ಬಂಧದಿಂದ ಬಿಡುಗಡೆಯನ್ನು ಹೊಂದುವೆ–ಎಂದರ್ಥ.

## ಜ್ಞಾನದ ಸ್ತುತಿ

'ಬ್ರಹ್ಮಾರ್ಪಣಮ್' (೪–೨೪) ಎಂದು ಮೊದಲಾಗಿರುವ ಶ್ಲೋಕದಲ್ಲಿ ಸರಿಯಾದ ಜ್ಞಾನಕ್ಕೆ ಯಜ್ಞವೆಂಬ ರೂಪವನ್ನು ಕೊಟ್ಟು ವರ್ಣಿಸಲಾಯಿತು. ಬಗೆಬಗೆಯ ಯಜ್ಞಗಳನ್ನೂ ತಿಳಿಸಿದ್ದಾಯಿತು. ಅವುಗಳಿಗೆ ಪುರುಷಾರ್ಥವೆಂಬ ಪ್ರಯೋಜನವು ಉಂಟೆಂದು ಗೊತ್ತಾಗಿರುವದರಿಂದ ಅವುಗಳ ಮೂಲಕ ಜ್ಞಾನವನ್ನು ಈಗ ಹೊಗಳುತ್ತಾನೆ. ಹೇಗೆಂದರೆ:—

*. ವೇದದ ಬ್ರಾಹ್ಮಣಭಾಗದಲ್ಲಿ ಇಲ್ಲಿ ವರ್ಣಿಸಿರುವ ಯಜ್ಞಗಳೆಲ್ಲ ಕಂಡುಬಂದಿವೆ.

†. ಕರ್ಮದಿಂದ ಯಜ್ಞಗಳು ಆಗುವವೆಂದು ತಿಳಿದಮಾತ್ರಕ್ಕೆ ಮುಕ್ತಿ ಹೇಗಾದೀತೆಂದು ಸಂಶಯಪಡಬಾರದು; ಕರ್ಮಗಳು ತನಗೆ ಸಂಬಂಧವಿಲ್ಲ– ಎಂಬ ಜ್ಞಾನವೇ ಸರಿಯಾದ ಜ್ಞಾನವಾದ್ದರಿಂದ ಈ ತಿಳಿವಳಿಕೆಯಿಂದ ಅಜ್ಞಾನದಿಂದಾಗಿದ್ದ ಕರ್ಮಬಂಧವು ಹೋಗಿಬಿಡುವದು.

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

೩೩. ಎಲೈ ಶತ್ರುಗಳನ್ನು ತಾಪಗೊಳಿಸುವ ಅರ್ಜುನನೆ, ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಉತ್ತಮವಾದದ್ದು. ಎಲೈ ಪಾರ್ಥನೆ, ಜ್ಞಾನದಲ್ಲಿ ಎಲ್ಲಾ ಕರ್ಮವೂ ಅಖಿಲವಾಗಿ ಕೊನೆಗಾಣುತ್ತದೆ.

[ ಭಾಷ್ಯ ]

ದ್ರವ್ಯಮಯವಾದ ಯಜ್ಞಕ್ಕಿಂತ ಎಂದರೆ ದ್ರವ್ಯವೆಂಬ ಸಾಧನದಿಂದ ಆಗುವ ಯಜ್ಞಕ್ಕಿಂತ ಜ್ಞಾನಯಜ್ಞವು ಉತ್ತಮವಾದದ್ದು. ಏಕೆಂದರೆ, ದ್ರವ್ಯಮಯವಾದ ಯಜ್ಞಕ್ಕೆ ಫಲವುಂಟಾಗುವದು, ಜ್ಞಾನಯಜ್ಞಕ್ಕೆ (ಬೇರೆ) ಫಲವಿಲ್ಲ *. ಆದ್ದರಿಂದ ಅದು (ದ್ರವ್ಯಮಯವಾದ ಯಜ್ಞಕ್ಕಿಂತ) ಉತ್ತಮವಾದದ್ದು. ಹೇಗೆ? ಎಂದರೆ, ಕರ್ಮವೆಲ್ಲವೂ ಅಖಿಲವಾಗಿ, ಎಂದರೆ ಅಡ್ಡಿಯಾವದೂ ಇಲ್ಲದೆ, ಎಲೈ ಪಾರ್ಥನೆ, ಮೋಕ್ಷಕ್ಕೆ ಸಾಧನವಾದ ಎಲ್ಲೆಲ್ಲಿಯೂ ನೀರು ತುಂಬಿರುವ (ಜಲಾಶಯ)ದಂತಿರುವ† ಜ್ಞಾನದಲ್ಲಿ ಕೊನೆಗಾಣುವದು ಎಂದರೆ ಅದರಲ್ಲಿ ಸೇರಿಕೊಳ್ಳುವದು– ಎಂದರ್ಥ. "ಹೇಗೆ ಕೃತ ಎಂಬ ಲೆತ್ತವನ್ನು ಗೆದ್ದುಕೊಂಡವನಿಗೆ ಕೆಳಗಿನ ಲೆತ್ತದ ಗರಗಳು ಸೇರಿಕೊಂಡು ಹೋಗುವವೋ ಹಾಗೆ ಪ್ರಜೆಗಳು ಮಾಡುವ ಪುಣ್ಯವೆಲ್ಲ ಆ (ರೈಕ್ವನು) ಅರಿತಿರುವದನ್ನು ಅರಿತುಕೊಂಡವನಿಗೆ ಸೇರಿಹೋಗುವದು" (ಛಾ) ಎಂಬ ಶ್ರುತಿಯೂ ಇದಕ್ಕೆ ಪ್ರಮಾಣವು.‡

ಆ ಇಂಥ ವಿಶೇಷರೂಪವಾದ ಜ್ಞಾನವು ಏತರಿಂದ ದೊರಕುವದು? ಎಂದರೆ ಹೇಳುತ್ತೇನೆ :–

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

೩೪. ಇದನ್ನು ಪ್ರಣಿಪಾತದಿಂದಲೂ ಪರಿಪ್ರಶ್ನದಿಂದಲೂ ಸೇವೆಯಿಂದಲೂ ಅರಿತುಕೊ; ತತ್ತ್ವದರ್ಶಿಗಳಾದ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶ ಮಾಡುತ್ತಾರೆ.

---

*. ಜನ್ಮಾಂತರಲೋಕಾಂತರರೂಪವಾದ ಫಲವಿಲ್ಲ; ಆತ್ಮಜ್ಞಾನವು ತಾನೇ ಫಲವಾಗಿರುವದು.

†. ೨–೪೬ನೆಯ ಶ್ಲೋಕದ ಭಾಷ್ಯವನ್ನು ನೋಡಿ.

‡. ೨–೪೬ರಲ್ಲಿ ಉದಾಹರಿಸಿರುವ ಈ ಶ್ರುತಿಯ ಭಾಷ್ಯವನ್ನೂ ಅದರ ಮೇಲಿನ ಟಿಪ್ಪಣಿಯನ್ನೂ ನೋಡಿ.

[ ಭಾಷ್ಯ ]

ಅದು ಯಾವ ರೀತಿಯಿಂದ ದೊರೆಯುವದೆಂಬುದನ್ನು ಹೇಳುತ್ತೇನೆ ತಿಳಿದುಕೊ. ಆಚಾರ್ಯರ ಬಳಿಗೆ ಹೋಗಿ ಪ್ರಣಿಪಾತಮಾಡುವದರಿಂದಲೂ ಪ್ರಣಿಪಾತವೆಂದರೆ ಪೂರ ಕೆಳಗೆ ಅಡ್ಡಬೀಳುವದು, ಎಂದರೆ ದೀರ್ಘನಮಸ್ಕಾರವು; (ಅಂಥ ನಮಸ್ಕಾರ)ದಿಂದಲೂ ಪರಿಪ್ರಶ್ನೆಯಿಂದಲೂ, ಎಂದರೆ 'ಬಂಧವು ಹೇಗಾಯಿತು? ಮೋಕ್ಷವು ಹೇಗಾದೀತು? ವಿದ್ಯೆಯೆಂದರೆ ಯಾವುದು? ಅವಿದ್ಯೆಯೆಂದರೆ ಯಾವದು?' ಎಂದು (ಕೇಳುವದರಿಂದಲೂ), ಸೇವೆಯಿಂದಲೂ ಎಂದರೆ ಗುರುಶುಶ್ರೂಷೆಯಿಂದಲೂ (ತಿಳಿದುಕೊ.) ಇದೇ ಮುಂತಾದ* ವಿನಯದಿಂದ ಅವರನ್ನು ಸ್ವಾಧೀನಪಡಿಸಿಕೊಂಡರೆ† (ಆ) ಆಚಾರ್ಯರು ಮೇಲೆ ಹೇಳಿದಂಥ ಜ್ಞಾನವನ್ನು ಹೇಳಿಕೊಡುವರು. **ಜ್ಞಾನಿಗಳಾದರೂ ತತ್ತ್ವವನ್ನು ಇದ್ದದ್ದು ಇದ್ದ ಹಾಗೆ ಕೆಲವರು ಕಂಡುಕೊಳ್ಳುವದರಲ್ಲಿಯೆ ನಿರತರಾಗಿರುವರು, ಮತ್ತೆ ಕೆಲವರು ಹಾಗಲ್ಲ‡**; ಆದ್ದರಿಂದ 'ತತ್ತ್ವದರ್ಶಿಗಳಾದ' ಎಂದು ವಿಶೇಷಣವನ್ನು ಸೇರಿಸಿರುತ್ತದೆ.

ಯಾರು ಸರಿಯಾಗಿ ತತ್ತ್ವವನ್ನು ಮನಗಂಡಿರುವರೋ ಅವರು ಉಪದೇಶಮಾಡಿದ ಜ್ಞಾನವೇ ಕಾರ್ಯಕಾರಿಯಾಗುವದೇ ಹೊರತು ಮಿಕ್ಕದ್ದು ಆಗಲಾರದು— ಎಂಬುದು ಭಗವಂತನ ಅಭಿಪ್ರಾಯವು. ಹೀಗೆಂದು ಇಟ್ಟುಕೊಂಡರೆ ಈ ಮುಂದಿನ§ ಮಾತೂ ಸಾರ್ಥಕವಾಗುವದು :—

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

---

*. ಪ್ರಣಿಪಾತವೇ ಮುಂತಾದವುಗಳು ಜ್ಞಾನಕ್ಕೆ ಹೇಗೆ ಸಹಕಾರಿಗಳೆಂಬುದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

†. ಪ್ರೇಮವನ್ನು ಸಂಪಾದಿಸಿದರೆ ಎಂದರ್ಥ ; ಜ್ಞಾನಿಗಳು ಸ್ವಭಾವದಿಂದಲೆ ಎಲ್ಲರನ್ನೂ ಪ್ರೀತಿಸುವರಾದರೂ ಯಾರು ಜ್ಞಾನವನ್ನು ಬಯಸುವರೋ ಯಾರು ಜ್ಞಾನಕ್ಕೆ ತಕ್ಕವರೋ ಅವರಿಗೆ ಮಾತ್ರ ಅದನ್ನು ಉಪದೇಶಿಸುವರು.

‡. ಕೆಲವರು ಬರಿಯ ಶಾಸ್ತ್ರಾರ್ಥವನ್ನರಿತಿರುವರು ; ಆದರೆ ತತ್ತ್ವವನ್ನು ಅರಿತಿರುವದಿಲ್ಲ. ಮುಂಡಕ(೧-೨-೧೨)ದಲ್ಲಿರುವ ಬ್ರಹ್ಮನಿಷ್ಠಶಬ್ದದ ಸೂಚನೆ.

§. 'ಯಜ್ಜ್ಞಾತ್ವಾ' ಎಂದು ಸಂಬಂಧಸರ್ವನಾಮವನ್ನುಪಯೋಗಿಸಿರುವದರಿಂದ ತತ್ತ್ವನಿಷ್ಠನಾದ ಗುರುವು ಉಪದೇಶಮಾಡಿದರೇ ಅಜ್ಞಾನವು ನಾಶವಾಗುವದೆಂದು ಹೇಳಿದಂತೆ ಆಯಿತೆಂದು ಭಾವ.

೩೫. ಅದನ್ನು ಅರಿತುಕೊಂಡರೆ, ಎಲೈ ಪಾಂಡವನೆ, ಇನ್ನು ಮೇಲೆ ಹೀಗೆ ಮೋಹವನ್ನು ಹೊಂದುವದಿಲ್ಲ. ಅದರಿಂದ ಭೂತಗಳೆಲ್ಲವನ್ನೂ ಆತ್ಮನಲ್ಲಿಯೂ ಮತ್ತು ನನ್ನಲ್ಲಿಯೂ ಕಾಣುವೆ.

[ಭಾಷ್ಯ]

ಅದನ್ನು ಅರಿತುಕೊಂಡರೆ, ಎಂದರೆ ಅವರು ಹೇಳಿಕೊಡುವ ಆ ಜ್ಞಾನವನ್ನು ಪಡೆದುಕೊಂಡರೆ ಮತ್ತೆ ಹೀಗೆ– ಈಗ ನಿನಗೆ ಭ್ರಾಂತಿಯುಂಟಾಗಿರುವದಷ್ಟೆ, ಇದರಂತೆ– ಮೋಹವನ್ನು ಹೊಂದುವದೇ ಇಲ್ಲ. ಎಲೈ ಪಾಂಡವನೆ, ಆ ಜ್ಞಾನದಿಂದ ಎಲ್ಲಾ ಭೂತಗಳನ್ನೂ ಎಂದರೆ ಬ್ರಹ್ಮನಿಂದ ಹಿಡಿದು ಸ್ಥಾವರದ ವರೆಗಿನ [ಬ್ರಹ್ಮಾದೀನಿ ಸ್ತಂಭಪರ್ಯಂತಾನಿ] ಪ್ರಾಣಿಗಳೆಲ್ಲವನ್ನೂ, ಆತ್ಮನಲ್ಲಿ* ಎಂದರೆ ನಿನ್ನೊಳಗಿನ ನೇರಾದ ಆತ್ಮನಲ್ಲಿ 'ಈ ಪ್ರಾಣಿಗಳು ನನ್ನಲ್ಲಿಯೇ ಇವೆ' ಎಂದು ಕಂಡುಕೊಳ್ಳುವೆ ; ಮತ್ತು 'ಪರಮೇಶ್ವರನಾದ ವಾಸುದೇವನಲ್ಲಿಯೂ ಇವು ಇವೆ' ಎಂದು ನನ್ನಲ್ಲಿಯೂ† ಕಂಡುಕೊಳ್ಳುವೆ. **ಕ್ಷೇತ್ರಜ್ಞ ಮತ್ತು ಈಶ್ವರ– ಎಂಬುದು ಒಂದೇ‡ ತತ್ತ್ವವೆಂದು ಸಕಲ ಉಪನಿಷತ್ತುಗಳಲ್ಲಿಯೂ ಪ್ರಸಿದ್ಧವಾಗಿರುವ ವಿಷಯವನ್ನು ಕಂಡುಕೊಳ್ಳುತ್ತೀಯೆ ಎಂದರ್ಥ.**

ಮತ್ತು ಈ ಜ್ಞಾನದ ಮಹಿಮೆ ಏನೆಂದರೆ:—

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥**

೩೬. ನೀನು ಎಲ್ಲಾ ಪಾಪಿಗಳಿಗಿಂತಲೂ ಹೆಚ್ಚಾಗಿ ಪಾಪವನ್ನು ಮಾಡಿದವನಾಗಿದ್ದರೂ ಸರಿ, ಆ ಪಾಪವನ್ನೆಲ್ಲ ಜ್ಞಾನವೆಂಬ ತೆಪ್ಪದಿಂದಲೇ ಪೂರ ದಾಟುವೆ.

[ಭಾಷ್ಯ]

ನೀನು ಪಾಪವನ್ನು ಮಾಡಿದವರೆಲ್ಲರಿಗಿಂತಲೂ ಹೆಚ್ಚಾಗಿ ಪಾಪವನ್ನು ಮಾಡಿದ್ದರೂ ಚಿಂತೆಯಿಲ್ಲ, ಆ ಪಾಪವೆಂಬ ಸಮುದ್ರವೆಲ್ಲವನ್ನೂ ಜ್ಞಾನವೆಂಬ

---

*. ಈಶ॥ ೬ನೆಯ ಮಂತ್ರದ ಸೂಚನೆ.

†. ಮುಂದೆ ೯–೪ರಲ್ಲಿ ಇದನ್ನು ಸ್ಪಷ್ಟವಾಗಿ ಹೇಳಿರುತ್ತದೆ.

‡. ಪರಮಾತ್ಮನೆ ಜ್ಞಾನಿಯ ಆತ್ಮನಾದ್ದರಿಂದ ಆತ್ಮನಲ್ಲಿ ಸಕಲವನ್ನೂ ಕಾಣುವದೆಂದರೂ ವಾಸುದೇವಪರಮೇಶ್ವರನಲ್ಲಿ ಸಕಲವನ್ನೂ ಕಾಣುವದೆಂದರೂ ಒಂದೇ. ಇದೇ ಎಲ್ಲಾ ಉಪನಿಷತ್ತುಗಳ ಸಿದ್ಧಾಂತವು. ಇದನ್ನು ಗೀತಾರ್ಥಸರ್ವಸ್ವದಲ್ಲಿ ವಿವರಿಸಿದೆ. ಈ ಶ್ಲೋಕದ ವಿಷಯಕ್ಕೆ ಮತಾಂತರದವರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ನೋಡಿ.

ತೆಪ್ಪದಿಂದಲೇ,* ಎಂದರೆ ಜ್ಞಾನವನ್ನೇ ತೆಪ್ಪವನ್ನಾಗಿ ಮಾಡಿಕೊಂಡು ಪೂರ ದಾಟಿಬಿಡಬಹುದು. ಮುಮುಕ್ಷುವಾದವನಿಗೆ ಧರ್ಮವೂ ಪಾಪವೇ† ಎಂದು ಇಲ್ಲಿ ಹೇಳಿರುತ್ತದೆ.

ಜ್ಞಾನವು ಪಾಪವನ್ನು ಹೇಗೆ ನಾಶಮಾಡುತ್ತದೆ? ಎಂಬುದಕ್ಕೆ ಒಂದು ದೃಷ್ಟಾಂತವನ್ನು ಹೇಳುತ್ತೇನೆ:—

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭ ॥**

೩೭. ಹತ್ತಿಕೊಂಡ ಬೆಂಕಿಯು ಕಟ್ಟಿಗೆಗಳನ್ನು ಹೇಗೆ ಬೂದಿಮಾಡುವದೋ, ಎಲೈ ಅರ್ಜುನನೆ, ಜ್ಞಾನಾಗ್ನಿಯು ಕರ್ಮಗಳೆಲ್ಲವನ್ನೂ ಹಾಗೆಯೇ ಬೂದಿಮಾಡಿಬಿಡುವದು.

[ ಭಾಷ್ಯ ]

ಚೆನ್ನಾಗಿ ಹತ್ತಿಕೊಂಡು ಉರಿಯುತ್ತಿರುವ ಬೆಂಕಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿಯಾಗಿ ಮಾಡಿಬಿಡುವದೋ, ಎಲೈ ಅರ್ಜುನನೆ, ಹಾಗೆಯೇ, ಜ್ಞಾನವೆಂಬ ಅಗ್ನಿಯು ಕರ್ಮಗಳೆಲ್ಲವನ್ನೂ ಬೂದಿಯಾಗಿ‡ ಮಾಡಿಬಿಡುತ್ತದೆ— ಎಂದರೆ ಅವುಗಳನ್ನು ಬೀಜವಿಲ್ಲದಂತೆ ಮಾಡುತ್ತದೆ ಎಂದರ್ಥ; ಏಕೆಂದರೆ ಬೆಂಕಿಯು ಕಟ್ಟಿಗೆಯನ್ನು ಹೇಗೆ ನೇರಾಗಿ ಸುಟ್ಟು ಬೂದಿಮಾಡುವದೋ ಹಾಗೆ ಜ್ಞಾನಾಗ್ನಿಯು ಕರ್ಮಗಳನ್ನು ಬೂದಿಮಾಡಲಾರದು.§ ಆದ್ದರಿಂದ ಸರಿಯಾದ ಜ್ಞಾನವು ಕರ್ಮಗಳೆಲ್ಲವೂ ನಿರ್ಬೀಜವಾಗುವಂತೆ ಮಾಡುವದಕ್ಕೆ ಕಾರಣವಾಗುವದೆಂದೇ ಅಭಿಪ್ರಾಯವು.

---

*. ಜ್ಞಾನವನ್ನು ಭಾರತದಲ್ಲಿ ಆಗಾಗ್ಗೆ ತೆಪ್ಪಕ್ಕೆ ಹೋಲಿಸಿರುತ್ತದೆ. ಸಮುದ್ರವು ಆಳವಾಗಿದ್ದರೂ ಅದರಲ್ಲಿರುವ ಪ್ರಾಣಿಗಳು ಭಯಂಕರವಾಗಿದ್ದರೂ ತೆಪ್ಪವು ಅಥವಾ ಹಡಗು ಯಾವ ತೊಂದರೆಯೂ ಇಲ್ಲದಂತೆ ಜನರನ್ನು ಕಡೆಹಾಯಿಸುವಂತೆ ಜ್ಞಾನವು ಸಂಸಾರದಿಂದ ಪಾರುಮಾಡುವದೆಂಬುದು ಇದರಿಂದ ಸೂಚಿತವಾಗುವದು.

†. ಬ್ರ॥ ಸೂ॥ ಭಾಷ್ಯ ೪–೧–೧೪ ನೋಡಿ.

‡. ಜ್ಞಾನವು ಹಡಗಿನಂತೆ ದಾಟಿಸುತ್ತದೆ ಎಂದದ್ದರಿಂದ ಸಂಸಾರದುಃಖವು ಹಾಗೆಯೇ ಹಿಂದೆ ಉಳಿದುಕೊಳ್ಳುವದೆಂದು ಭಾವಿಸಬಾರದು— ಎಂದು ತಿಳಿಸುವದಕ್ಕೆ ಬೆಂಕಿಯ ಹೋಲಿಕೆ.

§. ಬೆಂಕಿಯು 'ಕಾರಕವು' ಎಂದರೆ ಕಟ್ಟಿಗೆಯಲ್ಲಿ ರೂಪಾಂತರವನ್ನೆ ಮಾಡುವದು; ಜ್ಞಾನವು ಇದ್ದದ್ದನ್ನು ತಿಳಿಸುವದೇ ಹೊರತು ಇಲ್ಲದ್ದನ್ನು ಉಂಟುಮಾಡುವದಿಲ್ಲ. ಆದ್ದರಿಂದ 'ಕರ್ಮಗಳನ್ನು ಜ್ಞಾನವು ಸುಡುತ್ತದೆ' ಎಂದರೆ ಕರ್ತೃತ್ವದ ಅಭಿಮಾನವನ್ನು ಕಳೆಯುವದರ ಮೂಲಕ ಅವುಗಳಿಗೆ ಫಲವಿಲ್ಲದಂತೆ ಮಾಡುತ್ತದೆ ಎಂದೇ ಅರ್ಥ.

ಯಾವ ಕರ್ಮದಿಂದ (ಜ್ಞಾನಿಯ) ಶರೀರವು ಉಂಟಾಗಿರುವದೋ ಅದು ಫಲವನ್ನು ಕೊಡುವದಕ್ಕೆ ಪ್ರಾರಂಭಮಾಡಿಬಿಟ್ಟಿರುವದರಿಂದ* ಅನುಭವಿಸುವದರಿಂದಲೇ ಕ್ಷಯವಾಗಿ ಬಿಡುವದು. ಆದ್ದರಿಂದ ಜ್ಞಾನವುಂಟಾಗುವದಕ್ಕೆ ಮೊದಲು ಯಾವ ಕರ್ಮಗಳನ್ನು† ಮಾಡಿದ್ದನೋ ಮತ್ತು ಜ್ಞಾನವಿರುವಾಗ ಯಾವ ಕರ್ಮಗಳನ್ನು‡ ಮಾಡುತ್ತಾನೋ, ಹಿಂದೆ ಅನೇಕಜನ್ಮಗಳಲ್ಲಿ§ ಯಾವ ಯಾವ ಕರ್ಮಗಳನ್ನು ಮಾಡಿದ್ದನೋ, ಆ ಕರ್ಮಗಳೆಲ್ಲವನ್ನೂ (ಜ್ಞಾನವು) ಬೂದಿಮಾಡುವದು ಎಂದು ಸಾಮರ್ಥ್ಯದಿಂದ|| (ತಿಳಿಯಬೇಕಾಗಿರುತ್ತದೆ).

ಹೀಗಿರುವದರಿಂದ

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥**

೩೮. ಜ್ಞಾನಕ್ಕೆ ಸಮವಾದ ಪವಿತ್ರವಸ್ತು ಇಲ್ಲಿ ಇಲ್ಲವೇ ಇಲ್ಲ. ಅದನ್ನು ಯೋಗಸಿದ್ಧನಾಗಿ ಕಾಲಾನುಕಾಲಕ್ಕೆ ತನ್ನಲ್ಲಿ ತಾನೆ ಪಡೆದುಕೊಳ್ಳುವನು.

[ಭಾಷ್ಯ]

ಜ್ಞಾನಕ್ಕೆ ಸಮನಾಗಿರುವ ಪವಿತ್ರವಸ್ತು ಎಂದರೆ ಶುದ್ಧಿಗೊಳಿಸುವ ಪಾವನವಸ್ತು ಈ ಲೋಕದಲ್ಲಿ ಇಲ್ಲವೇ ಇಲ್ಲ. ಈ ಜ್ಞಾನವನ್ನು ಯೋಗಸಿದ್ಧನಾಗಿ ಎಂದರೆ ಕರ್ಮಯೋಗದಿಂದಲೂ ಸಮಾಧಿಯೋಗದಿಂದಲೂ ಸಿದ್ಧನಾಗಿ (ಅವುಗಳಿಂದ) ಸಂಸ್ಕಾರವನ್ನು ಹೊಂದಿ ಯೋಗ್ಯತೆಯನ್ನು ಪಡೆದುಕೊಂಡು ಮುಮುಕ್ಷುವಾದವನು ಬಹುಕಾಲದ ಮೇಲೆ ತನ್ನಲ್ಲಿ ತಾನೇ ಪಡೆಯುವನು, ಹೊಂದುವನು ಎಂದರ್ಥ.

## ಜ್ಞಾನಕ್ಕೆ ಮುಖ್ಯವಾದ ಉಪಾಯ

ಯಾವದರಿಂದ ನಿಯತವಾಗಿ ಜ್ಞಾನವು ದೊರಕಿಯೇ ದೊರಕುವದೋ ಅಂಥ ಉಪಾಯವನ್ನು (ಈಗ) ತಿಳಿಸಿಕೊಡುತ್ತಾನೆ:—

*. ಶರೀರವೇ ಪ್ರಾರಬ್ಧಕರ್ಮದ ಫಲವು : ಆದ್ದರಿಂದ ಪ್ರಾರಬ್ಧಕರ್ಮದಫಲವನ್ನು ನಿಲ್ಲಿಸುವದಕ್ಕೆ ಜ್ಞಾನದಿಂದ ಆಗಲಾರದು.

†. ಇವುಗಳಿಗೆ ಸಂಚಿತವೆಂದು ಹೆಸರು. ‡. ಇವಕ್ಕೆ ಆಗಾಮಿ ಎಂದು ಹೆಸರು.

§. ಇವೂ ಸಂಚಿತವೇ. ಸಂಚಿತಕರ್ಮವೂ ಆಗಾಮಿಕರ್ಮವೂ ಫಲವನ್ನು ಕೊಡುವದಕ್ಕೇ ಆಗುವದಿಲ್ಲವೆಂದು ಭಾವ. (ಅ||) ವ್ಯಾಖ್ಯಾನಕಾರರು ಜ್ಞಾನಿಗೂ ಸ್ವಲ್ಪ ಅಜ್ಞಾನವುಂಟೆಂಬ ಅರ್ಥವನ್ನು ಈ ಭಾಷ್ಯದಿಂದ ತೆಗೆದಿದ್ದಾರೆ. ಈ ವಿಷಯದಲ್ಲಿ ಪರಿಶಿಷ್ಟವನ್ನು ನೋಡಿ.

||. 'ಬ್ರಾಹ್ಮಣರೆಲ್ಲರೂ ಬಂದರು' ಎಂದರೆ ಪ್ರಕೃತಕ್ಕೆ ಬೇಕಾಗಿದ್ದ ಬ್ರಾಹ್ಮಣರೆಲ್ಲರೂ ಬಂದರೆಂದು ಅರ್ಥಮಾಡಿಕೊಳ್ಳುವಂತೆ ಇಲ್ಲಿಯೂ ಸರ್ವಕರ್ಮವೆಂದರೆ ಪ್ರಾರಬ್ಧಕರ್ಮವನ್ನು ಬಿಟ್ಟು ಎಂದರ್ಥಮಾಡಿಕೊಳ್ಳಬೇಕು.

**ಶ್ರದ್ಧಾವಾಲ್ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ　　॥ ೩೯ ॥**

೩೯. ಶ್ರದ್ಧೆಯುಳ್ಳವನೂ ತತ್ಪರನೂ ಇಂದ್ರಿಯಸಂಯಮವುಳ್ಳವನೂ ಆಗಿರುವಾತನು ಜ್ಞಾನವನ್ನು ಹೊಂದುವನು; ಜ್ಞಾನವನ್ನು ಪಡೆದರೆ ಹೆಚ್ಚಿನ ಶಾಂತಿಯನ್ನು ಬೇಗನೆ ಪಡೆಯುವನು.

[ಭಾಷ್ಯ]

ಶ್ರದ್ಧೆಯುಳ್ಳವನಿಗೆ ಜ್ಞಾನವು ದೊರಕುವದು. ಶ್ರದ್ಧಾಳುವಾಗಿದ್ದರೂ ಒಬ್ಬೊಬ್ಬನು (ಸಾಧನವನ್ನು ಮಾಡುವದಕ್ಕೆ) ಮೆಲ್ಲಗೆ ಹೊರಡುವದುಂಟು. ಆದ್ದರಿಂದ ತತ್ಪರನಾಗಿಯೂ ಇರಬೇಕೆಂದು ಹೇಳಿರುತ್ತಾನೆ. (ತತ್ಪರನೆಂದರೆ) ಗುರುವಿನ ಬಳಿಗೆ ಹೋಗಿ ಸೇರುವದೇ ಮುಂತಾದ, ಜ್ಞಾನವನ್ನು ಪಡೆಯುವದಕ್ಕೆ ಬೇಕಾದ, ಸಾಧನಗಳಲ್ಲಿ ಕುಶಲನಾದವನು. (ಹೀಗೆ) ತತ್ಪರನಾದರೂ ಅಜಿತೇಂದ್ರಿಯನಾಗಿರಬಹುದು; ಆದ್ದರಿಂದ 'ಸಂಯತೇಂದ್ರಿಯನಾಗಿಯೂ' (ಎಂಬ ವಿಶೇಷಣವನ್ನು ಹಾಕಿರುತ್ತಾನೆ.) ಯಾವನ ಇಂದ್ರಿಯಗಳು ವಿಷಯಗಳ ಕಡೆಯಿಂದ ಈಚೆಗೆಳೆದು ಹಿಡಿಯಲ್ಪಟ್ಟಿರುವವೋ ಅವನು ಸಂಯತೇಂದ್ರಿಯನು. ಯಾವನು ಈ ರೀತಿಯಾಗಿ ಶ್ರದ್ಧಾವಂತನೂ ಸಾಧನದಲ್ಲಿ ತತ್ಪರನೂ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡಿರುವವನೂ ಆಗಿರುವನೋ, ಅವನಿಗೆ ಅವಶ್ಯವಾಗಿ ಜ್ಞಾನವು ದೊರಕಿಯೇ ದೊರಕುವದು. (ಹಿಂದಿನ ಶ್ಲೋಕದಲ್ಲಿ ಹೇಳಿರುವ) ದಂಡಪ್ರಣಾಮವೇ ಮುಂತಾದದ್ದು ಹೊರಗಿನ* ಸಾಧನವು; ಅದು ನಿಯತವಾಗಿ ಕಾರ್ಯವನ್ನು ಉಂಟುಮಾಡದೆ ಹೋದರೂ ಹೋಗಬಹುದು; ಏಕೆಂದರೆ (ಗುರುನಮಸ್ಕಾರವನ್ನು ಮಾಡುವದೇ ಮುಂತಾದವುಗಳಲ್ಲಿ) ಮೋಸವೇ ಮುಂತಾದವೂ† ಇರಬಹುದು. ಆದರೆ ಶ್ರದ್ಧಾವಂತನಾಗಿರುವದೇ ಮುಂತಾದ (ಈ ಶ್ಲೋಕದಲ್ಲ ಹೇಳಿದ) ಸಾಧನಗಳಲ್ಲಿ (ಇವು ಇರುವ ಸಂಭವ)ವಿರುವದಿಲ್ಲ. ಆದ್ದರಿಂದ (ಇದು) ಜ್ಞಾನವನ್ನು ಪಡೆದುಕೊಳ್ಳುವದಕ್ಕೆ ನಿಯತವಾದ‡ ಸಾಧನವಾಗಿರುತ್ತದೆ.

---

*. ಶರೀರದಿಂದ ಮಾಡುವ ಪ್ರಣಿಪಾತ, ಪರಿಪ್ರಶ್ನ, ಸೇವೆ– ಇವುಗಳಿಗಿಂತಲೂ ಮನಸ್ಸಿನ ಯತ್ನದಿಂದ ಸಾಗುವ ಶ್ರದ್ಧೆ, ತಾತ್ಪರ್ಯ, ಇಂದ್ರಿಯನಿಗ್ರಹ– ಇವು ಹೆಚ್ಚಿನ ಸಾಧನಗಳೆಂದು ಭಾವ

†. ಮೋಸ, ತಟವಟ, ಆಸೆ– ಮುಂತಾದವು.

‡. ಶ್ರದ್ಧೆಯಿಂದ ತತ್ಪರನಾಗಿ ಸಂಯತೇಂದ್ರಿಯನಾಗಿ ಶ್ರವಣಾದಿಗಳನ್ನು ಮಾಡಿದವನು ತತ್ತ್ವವನ್ನು ತಿಳಿದೇ ತಿಳಿಯುವನು ಎಂದು ಭಾವ.

ಜ್ಞಾನವು ದೊರೆತರೆ ಏನಾಗುವದು? ಎಂದರೆ ಹೇಳುತ್ತಾನೆ: ಜ್ಞಾನವು ದೊರೆತರೆ ಮೋಕ್ಷವೆಂಬ ಶಾಂತಿಯನ್ನು ಎಂದರೆ ಉಪರತಿಯನ್ನು ಬೇಗನೆ ಪಡೆಯುತ್ತಾರೆ. ಸರಿಯಾದ ಜ್ಞಾನದಿಂದ ಕೂಡಲೇ ಮೋಕ್ಷವು ಆಗುವದೆಂಬುದು ಎಲ್ಲಾ ಶಾಸ್ತ್ರಗಳಿಂದಲೂ* ಯುಕ್ತಿಯಿಂದಲೂ† ಸಿದ್ಧವಾಗಿರುವದು; ಇದು ಅತ್ಯಂತವಾಗಿ ನಿಶ್ಚಿತವಾಗಿರುವ‡ ವಿಷಯವು.

ಈ ವಿಷಯದಲ್ಲಿ ಸಂಶಯವನ್ನು ಮಾಡಬಾರದು, ಏಕೆಂದರೆ ಸಂಶಯವು ಬಹಳ ಕೆಟ್ಟದ್ದು. ಅದು ಹೇಗೆಂದರೆ ಹೇಳುತ್ತಾನೆ:—

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥**

೪೦. ತಿಳಿಯದವನೂ ಶ್ರದ್ಧೆಯಿಲ್ಲದವನೂ ಸಂಶಯಾತ್ಮನೂ ನಾಶಹೊಂದುವನು; ಸಂಶಯಾತ್ಮನಾದವನಿಗೆ ಈ ಲೋಕವಿಲ್ಲ, ಪರಲೋಕವಿಲ್ಲ, ಸುಖವಿಲ್ಲ.

[ ಭಾಷ್ಯ ]

ತಿಳಿಯದವನು, ಎಂದರೆ ಆತ್ಮನನ್ನು ಅರಿತುಕೊಳ್ಳದವನು; ಶ್ರದ್ಧೆಯಿಲ್ಲದವನು ಎಂದರೆ ಗುರುವಾಕ್ಯದಲ್ಲಿಯೂ ಶಾಸ್ತ್ರದಲ್ಲಿಯೂ ವಿಶ್ವಾಸವಿಲ್ಲದವನು; ಇವರೂ ಮತ್ತು ಸಂಶಯಾತ್ಮನೂ ಎಂದರೆ ಮನಸ್ಸಿನಲ್ಲಿ ಸಂಶಯವುಳ್ಳವನೂ ನಾಶಹೊಂದುತ್ತಾರೆ. ತತ್ತ್ವವನ್ನು ತಿಳಿಯದವನೂ ಶ್ರದ್ಧೆಯಿಲ್ಲದವನೂ ಹಾಳಾಗುವದು ನಿಜ; ಆದರೆ ಸಂಶಯಚಿತ್ತನಾದವನು§ ಕೆಡುವಷ್ಟು ಅವರು

*. "ಎಲ್ಲಿಯವರೆಗೆ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ ತಡವು, ಆಮೇಲೆ ಮುಕ್ತಿಯನ್ನು ಪಡೆಯುವನು" (ಛಾ) ಎಂಬುದೇ ಮುಂತಾದ ಶ್ರುತಿಗಳು ಜ್ಞಾನದಿಂದ ಮುಕ್ತಿಯಾಗಿಯೇ ಆಗುವದೆಂಬುದನ್ನು ತಿಳಿಸುವವು.

†. ಅಜ್ಞಾನದಿಂದ ಆಗಿರುವ ಬಂಧವು ಜ್ಞಾನದಿಂದ ಹೋಗುವದು ನ್ಯಾಯವಾಗಿದೆ.

‡. ಕೆಲವರು ಜ್ಞಾನಿಗಳೂ ಜನ್ಮಾಂತರವನ್ನು ಹೊಂದಿದ್ದಾರೆಂದು ಪುರಾಣಗಳಲ್ಲಿ ಹೇಳಿರುತ್ತದೆ; ಆದ್ದರಿಂದ ಜ್ಞಾನವೂ ಮೋಕ್ಷಕ್ಕೆ ಗೊತ್ತಾದ ಸಾಧನವೂ ಅಲ್ಲವೋ ಎಂದು ಸಂಶಯವು ಬರಬಹುದು. ಆದರೆ ಈ ಸಂಶಯಕ್ಕೆ ಕಾರಣವಿರುವದಿಲ್ಲ; ಏಕೆಂದರೆ ಜ್ಞಾನದ ಫಲವು ಯಾವಾಗಲೂ ಎದುರಿಗೇ ಕಾಣುವದಾಗಿರುವದು —ಎಂದು ಬ್ರ॥ ಸೂ॥ (೩-೩-೩೨)ರಲ್ಲಿ ನಿರ್ಣಯಿಸಿರುತ್ತದೆ.

§. ತತ್ತ್ವವನ್ನು ತಿಳಿಯದವನು ಸಂಸಾರದಲ್ಲಿ ತೊಳಲುತ್ತಿರುತ್ತಾನೆ; ಶಾಸ್ತ್ರದಲ್ಲಿ ಶ್ರದ್ಧೆಯಿಲ್ಲದವನು ಶಾಸ್ತ್ರದಂತೆ ನಡೆಯುವದಿಲ್ಲವಾದ್ದರಿಂದ ಅವನೂ ತಾನು ಮಾಡುವ ಕರ್ಮಕ್ಕೆ ತಕ್ಕ ಫಲವನ್ನು ಹೊಂದುತ್ತಿರುತ್ತಾನೆ; ಇವರಿಬ್ಬರಿಗೂ ಜ್ಞಾನದ ಫಲವಾದ ಮೋಕ್ಷವಿಲ್ಲವೆಂಬ ದೃಷ್ಟಿಯಿಂದ ಇವರು ಕೆಟ್ಟುಹೋಗುವರೆಂದು ಹೇಳಬಹುದಾದರೂ ಸಂಶಯಚಿತ್ತನಾದವನ ಗತಿಗೆ ಹೋಲಿಸಿದರೆ ಇವರ ಗತಿಯು ಎಷ್ಟೋ ಉತ್ತಮವಾಗಿರುವದು.

ಕೆಡುವದಿಲ್ಲ. ಇವರಲ್ಲೆಲ್ಲ ಸಂಶಯಾತ್ಮನು ತೀರ ಪಾಪಿಷ್ಠನು; ಏಕೆಂದರೆ ಈ ಎಲ್ಲರಿಗೂ ಸೇರಿರುವ ಲೋಕವೆ ಸಂಶಯಾತ್ಮನಾದವನಿಗೆ ಇರುವದಿಲ್ಲ. ಮತ್ತು (ಅವನಿಗೆ) ಪರಲೋಕವೂ* ಇರುವದಿಲ್ಲ. ಅವನಿಗೆ ಸುಖವೆಂಬುದೂ ಇರುವದಿಲ್ಲ; ಏಕೆಂದರೆ (ಅವನಿಗೆ) ಅದರಲ್ಲಿಯೂ† ಸಂಶಯವುಂಟಾಗಬಹುದಾಗಿರುವದು. ಆದ್ದರಿಂದ ಸಂಶಯವನ್ನು ಮಾಡತಕ್ಕದ್ದಲ್ಲ.

ಏಕೆಂದರೆ,‡

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನನ್ತಿ ಧನಂಜಯ ॥ ೪೧ ॥**

೪೧. ಯೋಗದಿಂದ ಕರ್ಮಗಳನ್ನು ಸಂನ್ಯಾಸಮಾಡಿದವನೂ ಜ್ಞಾನದಿಂದ ಸಂಶಯವನ್ನು ಕತ್ತರಿಸಿಕೊಂಡವನೂ ಆಗಿ ಎಚ್ಚರಿಕೆಯಿಂದಿರುವಾತನನ್ನು, ಎಲೈ ಧನಂಜಯನೆ, ಕರ್ಮಗಳು ಕಟ್ಟಿ ಕೆಡಹುವದಿಲ್ಲ.

[ಭಾಷ್ಯ]

ಯೋಗದಿಂದ ಕರ್ಮಗಳನ್ನು ಸಂನ್ಯಾಸಮಾಡಿದವನು ಎಂದರೆ ಪರಮಾರ್ಥವನ್ನು§ ಕಂಡುಕೊಳ್ಳುವದೆಂಬ **ಯೋಗ**ದಿಂದ ಧರ್ಮ, ಅಧರ್ಮ ಎಂಬ ಕರ್ಮಗಳನ್ನು ಕೈಬಿಟ್ಟಿರುವಾತನು; ಹೀಗೆ ಯೋಗದಿಂದ ಕರ್ಮಗಳನ್ನು ಸಂನ್ಯಾಸಮಾಡಿದವನನ್ನೂ– ಇವನು ಯೋಗದಿಂದ ಕರ್ಮಗಳನ್ನು ಸಂನ್ಯಾಸ

*. ಕಠ (೧–೨–೬)ನ್ನು ನೋಡಿ.

†. ಮನುಷ್ಯನಿಗೆ ಸುಖವೆಂಬುದು ಸಿಗುವದೋ ಇಲ್ಲವೋ, ಸಿಕ್ಕರೆ ಅದು ನಿಜವಾಗಿ ಸುಖವೆನ್ನುವದಕ್ಕೆ ಪ್ರಮಾಣವೇನು? ಎಂದು ಅನುಭವವನ್ನು ಕೂಡ ಸಂಶಯದಿಂದ ಕಾಣುತ್ತಿರುವವನಿಗೆ ಸುಖವು ಹೇಗೆ ದೊರೆಯುವದು?

‡. 'ಸಂಶಯವನ್ನು ಮಾಡತಕ್ಕದ್ದಲ್ಲ' ಎಂದು ವಿಧಿಸುವದಕ್ಕೆ ಆಗುವದಿಲ್ಲ, ಏಕೆಂದರೆ ಸಂಶಯವೆಂಬುದು ತಾನೇ ಉಂಟಾಗತಕ್ಕದ್ದಾಗಿದೆ; ಜ್ಞಾನದಿಂದ ಮುಕ್ತಿಯು ಆಗಿಯೇ ತೀರುವದರಿಂದ ಅನುಭವಕ್ಕೆ ಬರತಕ್ಕ ಈ ವಿಷಯದಲ್ಲಿ ಯಾವ ಸಂದೇಹಕ್ಕೂ ಕಾರಣವಿಲ್ಲ– ಎಂಬುದು ಅಭಿಪ್ರಾಯ. ಇದನ್ನು ತಿಳಿಸುವದಕ್ಕೇ ಮುಂದಿನ ಶ್ಲೋಕದಲ್ಲಿ ಜ್ಞಾನದಿಂದ ಸರ್ವಸಂಶಯಗಳೂ ಹೋಗುವವೆಂದು ತಿಳಿಸಿರುವದು.

§. ಕರ್ಮಗಳನ್ನೆಲ್ಲ ಯೋಗದಿಂದ ಸಂನ್ಯಾಸಮಾಡುವದೆಂದರೆ ಕರ್ಮಯೋಗವನ್ನು ಫಲಾಪೇಕ್ಷೆಯಿಲ್ಲದೆ ಮಾಡುವದು ಎಂದೂ ಅರ್ಥಮಾಡಬಹುದು. ಆದರೆ ಇದು ಜ್ಞಾನವನ್ನು ಹೊಗಳುವ ಪ್ರಕರಣವಾದ್ದರಿಂದ ತಾನು ಕರ್ತೃವಲ್ಲವೆಂಬ ನಿಶ್ಚಯದಿಂದ ಕರ್ಮವೇ ತನಗೆ ಇಲ್ಲದಂತೆ ಮಾಡಿಕೊಳ್ಳುವದು– ಎಂಬ ಅರ್ಥವೇ ಹೆಚ್ಚು ಒಪ್ಪುತ್ತದೆ. ಯೋಗವೆಂಬ ಮಾತಿನ ಅರ್ಥಕ್ಕೆ ಮುಂದೆ (೫–೫ರಲ್ಲಿ) ಭಾಷ್ಯವನ್ನು ನೋಡಿ.

ಮಾಡಿರುವದು ಹೇಗೆ? ಎಂದರೆ ಹೇಳುತ್ತಾನೆ- 'ಜ್ಞಾನದಿಂದ ಸಂಶಯವನ್ನು ಕತ್ತರಿಸಿಕೊಂಡವನನ್ನೂ'- ಆತ್ಮನೂ ಈಶ್ವರನೂ ಒಂದೇ ಎಂಬುದನ್ನು ಕಂಡು ಕೊಳ್ಳುವದು ಜ್ಞಾನವು, ಇದರಿಂದ ಸಂಶಯವನ್ನು* ಕತ್ತರಿಸಿಕೊಂಡಿರುವನೆ ಜ್ಞಾನಸಂಛಿನ್ನಸಂಶಯನು. ಯಾವನು ಹೀಗೆ ಯೋಗದಿಂದ ಕರ್ಮಗಳನ್ನು ಸಂನ್ಯಾಸಮಾಡಿರುವನೋ ಅಂಥ- ಎಚ್ಚರದಪ್ಪದೆ ಇರುವಾತನನ್ನು† 'ಇವುಗಳು ಗುಣಗಳ ಕೆಲಸಗಳೇ' ಎಂದು‡ ಆತನು ಅರಿತಿರುವದರಿಂದ ಕರ್ಮಗಳು ಕಟ್ಟಿ ಹಾಕುವದಿಲ್ಲ, ಎಂದರೆ ಅನಿಷ್ಟವಾದದ್ದೇ§ ಮುಂತಾದ ಫಲವನ್ನು ಕೊಡದೆ ಇರುವದಯ್ಯ, ಅರ್ಜುನ.

ಕರ್ಮಯೋಗವನ್ನು ಮಾಡುವದರಿಂದ ( ಚಿತ್ತದ ) ಅಶುದ್ಧಿಯೆಲ್ಲವೂ ನಾಶವಾಗಿ ಅದರಿಂದ ಉಂಟಾಗುವ ಜ್ಞಾನದಿಂದ ಸಂಶಯವನ್ನು ತೊಲಗಿಸಿ ಕೊಂಡಾತನು ಕರ್ಮಗಳಿಗೆ ಕಟ್ಟುಬೀಳುವದಿಲ್ಲ, ಏಕೆಂದರೆ ಜ್ಞಾನಾಗ್ನಿಯಿಂದ ಅವನ ಕರ್ಮಗಳು ಸುಟ್ಟುಹೋಗಿರುತ್ತವೆ. ಆದ್ದರಿಂದಲೂ, ಜ್ಞಾನಕರ್ಮಗಳ ಅನುಷ್ಠಾನಗಳ ವಿಷಯದಲ್ಲಿ ಸಂಶಯವುಳ್ಳಾತನು ಕೆಟ್ಟುಹೋಗುವನಾದ್ದರಿಂದಲೂ-||

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

೪೨. ಆದ್ದರಿಂದ ಅಜ್ಞಾನದಿಂದ ಉಂಟಾಗಿ ತನ್ನ ವಿಷಯದಲ್ಲಿ ಹೃದಯದಲ್ಲಿದ್ದುಕೊಂಡಿರುವ ಸಂಶಯವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ ಯೋಗವನ್ನು ಮಾಡು, ಎಲೈ ಭಾರತನೆ, ಏಳು.

[ ಭಾಷ್ಯ ]

ಆದ್ದರಿಂದ ಅಜ್ಞಾನದಿಂದ ಉಂಟಾಗಿರುವದಾಗಿಯೂ, ಎಂದರೆ ಅವಿವೇಕದಿಂದ** ಹುಟ್ಟಿರುವದಾಗಿಯೂ, ಹೃದಯದಲ್ಲಿ ಎಂದರೆ ಬುದ್ಧಿಯಲ್ಲಿದ್ದುಕೊಂಡಿ

---

*. ಜ್ಞಾನದಿಂದ ಸರ್ವಸಂಶಯಗಳೂ ಹೋಗುವವು, ಕರ್ಮಗಳೂ ಸವೆದುಹೋಗುವವು— ಎಂಬ (ಮುಂಡಕ ೨-೨-೮) ಶ್ರುತಿಯ ಸೂಚನೆ.

†. ಪರಮಾತ್ಮನಿಷ್ಠನಾಗಿರುವವನನ್ನು.

‡. ೩-೨೮ರ ಭಾಷ್ಯವನ್ನು ನೋಡಿ.

§. ದೇವತೆಗಳ ಜನ್ಮವು ಇಷ್ಟಫಲ, ಸ್ಥಾವರಾದಿಜನ್ಮವು ಅನಿಷ್ಟ, ಮನುಷ್ಯಜನ್ಮವು ಮಿಶ್ರ.

||. ಈ ಅಧ್ಯಾಯದ ಸಾರಾಂಶವನ್ನು ಇಲ್ಲಿ ಉಪಸಂಹಾರಮಾಡಿದೆಯೆಂದು ಭಾವ.

**. ಆತ್ಮಾನಾತ್ಮಸ್ವರೂಪವನ್ನು ವಿಂಗಡಿಸಿ ತಿಳಿದುಕೊಳ್ಳದೆ ಇರುವದೇ ಅವಿವೇಕವು; ಅದರಿಂದ ಸಂಶಯವುಂಟಾಗಿರುವದು.

ರುವದಾಗಿಯೂ* ಇರುವ ಆತ್ಮನ ವಿಷಯವಾದ ಎಂದರೆ ನಿನ್ನ ಸ್ವರೂಪವಿಷಯವಾದ ಸಂಶಯವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿಕೊಂಡು – **ಶೋಕ**, ಮೋಹ- ಮುಂತಾದ ದೋಷಗಳನ್ನು ಹೋಗಲಾಡಿಸುವ ತಿಳಿವಳಿಕೆಯು ಜ್ಞಾನವು. ಅಂಥ ಜ್ಞಾನವೆಂಬ ಕತ್ತಿಯಿಂದ (ಕತ್ತರಿಸಿಕೊಂಡು ಎಂದರ್ಥ.) ಇಲ್ಲಿ ತನ್ನ ಸಂಶಯವನ್ನು, [ಆತ್ಮನಃ ಸಂಶಯಂ] ಎಂದಿದೆ, ಇದಕ್ಕೆ ತನ್ನ ವಿಷಯವಾದ† ಸಂಶಯವನ್ನು ಎಂದೇ ಅರ್ಥ; ಏಕೆಂದರೆ ಒಬ್ಬರ ಸಂಶಯವನ್ನು ಮತ್ತೊಬ್ಬರು ಪರಿಹರಿಸುವ ಹಾಗಿಲ್ಲ. ಹಾಗಿದ್ದರೆ 'ತಾನು ಮಾಡಿಕೊಂಡಿರುವ ಸಂಶಯವನ್ನು' ಎಂದೂ ['ಆತ್ಮನಃ ಸಂಶಯಂ' ಎಂಬುದಕ್ಕೆ] ಅರ್ಥಮಾಡಬಹುದಾಗಿತ್ತು. ಆದ್ದರಿಂದ ತನ್ನ ವಿಷಯವಾದ ಸಂಶಯವನ್ನೂ 'ತನ್ನ ಸಂಶಯ'ವೆಂದು ಕರೆಯಬಹುದು. ತನ್ನ ನಾಶಕ್ಕೆ ಕಾರಣವಾಗಿರುವ ಈ (ತನ್ನ ಸ್ವರೂಪ ವಿಷಯವಾದ) ಸಂಶಯವನ್ನು ಕಡಿದುಹಾಕಿ, ಸರಿಯಾದ ತಿಳಿವಳಿಕೆಗೆ ಕಾರಣವಾಗಿರುವ† ಕರ್ಮಾನುಷ್ಠಾನವೆಂಬ ಯೋಗವನ್ನು‡ ಸ್ವೀಕರಿಸು, ಎಂದರೆ ಮಾಡು ಎಂದರ್ಥ. ಮತ್ತು ಎಲೈ ಅರ್ಜುನನೆ, ಈಗ ಯುದ್ಧಕ್ಕೆ ಏಳು.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಜ್ಞಾನಯೋಗೋ** ನಾಮ
ಚತುರ್ಥೋಽಧ್ಯಾಯಃ

---

*. ಸಂಶಯವು ಬುದ್ಧಿಯಲ್ಲಿ ಉಂಟಾಗಿರುವದರಿಂದ ಇದನ್ನು ಪರಿಹರಿಸುವ ಜ್ಞಾನವೂ ಬುದ್ಧಿಯಲ್ಲಿ ಉಂಟಾಗಬೇಕು.

†. 'ನಿನ್ನ ಸಂಶಯವನ್ನು' ಎಂದರೆ 'ನೀನು ಮಾಡಿಕೊಂಡಿರುವ ಸಂಶಯವನ್ನು' ಎಂದಾದರೂ 'ನಿನ್ನ ವಿಷಯವಾಗಿ ನಿನಗೆ ಉಂಟಾಗಿರುವ ಸಂಶಯವನ್ನು' ಎಂದಾದರೂ ಅರ್ಥಮಾಡಬಹುದಷ್ಟೆ. ಅರ್ಜುನನಿಗೆ ತನ್ನ ಆತ್ಮನ ನಿಜವಾದ ಸ್ವರೂಪದ ವಿಷಯದಲ್ಲಿ ಸಂಶಯವುಂಟಾಗಿದೆ: ಆದ್ದರಿಂದ 'ನಿನ್ನ ವಿಷಯದಲ್ಲಿ' ಎಂಬರ್ಥವೇ ಸರಿ.

ಚಿತ್ತಶುದ್ಧಿಯ ಮೂಲಕವಾಗಿ ಕಾರಣವಾಗಿರುವ,

# ನಾಲ್ಕನೆಯ ಅಧ್ಯಾಯದ ಸಾರ

———o———

೧–೩. ಹಿಂದಿನ ಅಧ್ಯಾಯಗಳಲ್ಲಿ ಕರ್ಮಯೋಗವನ್ನೂ ಅದರಿಂದಾಗುವ ಜ್ಞಾನವನ್ನೂ ಸ್ವಲ್ಪದರಲ್ಲಿ ಭಗವಂತನು ತಿಳಿಸಿದನು. ಈ ಧರ್ಮವನ್ನು ಉಪದೇಶಿಸಿದ ಆಚಾರ್ಯರ ಪರಂಪರೆಯನ್ನು ಹೇಳಿ ಈ ಉಪದೇಶವನ್ನು ಉಪಸಂಹಾರಮಾಡೋಣವೆಂದು "ಅರ್ಜುನನೆ, ಈ ಕರ್ಮಯೋಗದಿಂದ ದೊರೆಯುವ ಜ್ಞಾನಯೋಗವನ್ನು ನಾನು ಹಿಂದೆ ವಿವಸ್ವಂತನಿಗೆ ಹೇಳಿದೆನು; ಆತನು ಮನುವಿಗೂ ಮನುವು ಇಕ್ಷ್ವಾಕುವಿಗೂ ತಿಳಿಸಿದ್ದನು. ಹೀಗೆ ರಾಜರ್ಷಿಗಳ ಪರಂಪರೆಯಿಂದ ಬಂದಿದ್ದ ಸಮ್ಯಗ್ದರ್ಶನವನ್ನು ಮುಂದೆ ಸಾಗಿಸುವ ತ್ರಾಣವು ಈಚಿನವರಿಗೆ ಸಾಲದೆ ಹೋದದ್ದರಿಂದ ಇದು ಬಹುಕಾಲದಿಂದ ಜನರಿಗೆ ದೊರಕದೆ ಇತ್ತು. ನೀನು ನನ್ನ ಭಕ್ತನೂ ಗೆಳೆಯನೂ ಆಗಿರುವೆ ಯೆಂಬ ಕಾರಣದಿಂದ ಈ ರಹಸ್ಯವಾದ ಯೋಗವನ್ನು ನಾನು ನಿನಗೆ ಮತ್ತೆ ಉಪದೇಶಮಾಡಿರುವೆನು" ಎಂದು ನುಡಿದನು.

೪–೯. ಅರ್ಜುನನು "ಶ್ರೀಕೃಷ್ಣನೆ, ನೀನು ಈಚೆಗೆ ಹುಟ್ಟಿದವನು, ಹಿಂದೆ ಹುಟ್ಟಿದ್ದ ವಿವಸ್ವಂತನಿಗೆ ಉಪದೇಶವನ್ನು ಮಾಡಿದ್ದು ಹೇಗೆ?" ಎನ್ನಲು ಶ್ರೀಕೃಷ್ಣನು ಹೇಳುತ್ತಾನೆ; "ನಮ್ಮೆಲ್ಲರಿಗೂ ಎಷ್ಟೋ ಜನ್ಮಗಳು ಆಗಿ ಹೋಗಿವೆ. ನಾನು ಸರ್ವಜ್ಞನಾದ ಪರಮೇಶ್ವರನಾದ್ದರಿಂದ ಅದೆಲ್ಲವನ್ನೂ ಬಲ್ಲೆನು, ನೀನರಿಯೆ. ನಿಜವಾಗಿ ನೋಡಿದರೆ ನನಗೆ ಜನ್ಮಗಳೂ ಇಲ್ಲ, ಧರ್ಮಾಧರ್ಮಗಳ ಕಟ್ಟೂ ಇಲ್ಲ; ಆದರೂ ಧರ್ಮವನ್ನು ಉದ್ಧಾರಮಾಡಿ ಸಾಧುಗಳನ್ನು ರಕ್ಷಿಸುವದಕ್ಕಾಗಿ ನನ್ನ ಮಾಯೆಯಿಂದ ಆಗಾಗ್ಗೆ ಅವತರಿಸುತ್ತಿರುವೆನು. ಈ ನನ್ನ ಅವತಾರದ ರಹಸ್ಯವನ್ನು ಯಾವನು ತಿಳಿದುಕೊಳ್ಳುವನೋ ಅವನು ಜನ್ಮರಹಿತವಾದ ನನ್ನ ಸ್ವರೂಪವನ್ನೇ ಪಡೆಯುವನು.

೧೦–೧೫. ಹೀಗೆ ಅನೇಕರು "ಜ್ಞಾನವೈರಾಗ್ಯಸಂಪನ್ನರಾಗಿ ನನ್ನ ಸ್ವರೂಪವನ್ನು ಹಿಂದೆಯೂ ಪಡೆದಿರುತ್ತಾರೆ. ಇಂಥ ಸ್ವರೂಪಪ್ರಾಪ್ತಿಯನ್ನು ಎಲ್ಲರಿಗೂ ನಾನು ಕೊಡುವದಕ್ಕೆ ಸಿದ್ಧನಾಗಿದ್ದರೂ ಜನರು ವರ್ಣಾಶ್ರಮಕರ್ಮಗಳನ್ನು ಮಾಡಿ ಅವುಗಳ ಫಲವನ್ನು ಪಡೆಯುವದಕ್ಕೇ ಬಹುವಾಗಿ ಯತ್ನಿಸುವರು; ಏಕೆಂದರೆ ಕರ್ಮಫಲವೆ ಬೇಗ ದೊರೆಯುವದು. ಈ ಚಾತುರ್ವರ್ಣ್ಯದ ವಿಭಾಗವೂ ನನ್ನಿಂದಲೇ ಆಗಿರುವದು; ಆದರೂ ಕರ್ಮಗಳನ್ನು ಮಾಡಿರುವೆನೆಂಬ ಅಭಿಮಾನವು ನನಗಿಲ್ಲವಾದ್ದರಿಂದ ಅವುಗಳು ನನಗೆ ಬಂಧಕವಾಗಿಲ್ಲ. ಹೀಗೆಂದು ತಿಳಿದವನಿಗೂ ಕರ್ಮದ ಬಂಧವು ಆಗುವದಿಲ್ಲ. ಹೀಗೆಂದು ತಿಳಿದುಕೊಂಡೇ ಹಿಂದಿನ ಮುಮುಕ್ಷುಗಳೂ ಕರ್ಮವನ್ನು ಮಾಡಿರುತ್ತಾರೆ: ಆದ್ದರಿಂದ ನೀನೂ ಈ ತಿಳಿವಳಿಕೆಯಿಂದ ಕೂಡಿ ಕರ್ಮವನ್ನೇ ಮಾಡು.

೧೬–೧೯. "ಕರ್ಮವೆಂದರೆ ಯಾವದು, ಅಕರ್ಮವೆಂದರೆ ಯಾವದು? ಎಂಬುದನ್ನು ಸರಿಯಾಗಿ ತಿಳಿದುಕೊಳ್ಳುವದು ಪಂಡಿತರಿಗೂ ಸುಲಭವಲ್ಲ. ಇದನ್ನು ತಿಳಿದುಕೊಳ್ಳುವದು ಅತ್ಯವಶ್ಯವೂ

ಆಗಿದೆ. ಆದ್ದರಿಂದ ಇದರ ತತ್ತ್ವವನ್ನು ತಿಳಿಸಿಕೊಡುತ್ತೇನೆ, ಕೇಳು:— ನಾವು ಕರ್ಮಗಳನ್ನು ಮಾಡುವವರೆಂದಲ್ಲವೆ ತಿಳಿದುಕೊಂಡಿರುವೆವು? ಆದರೆ ನಿಜವಾಗಿ ನೋಡಿದರೆ ನಮ್ಮ ನಿಜವಾದ ಸ್ವರೂಪದಲ್ಲಿ ಯಾವ ಕರ್ತೃತ್ವವೂ ಇರುವದಿಲ್ಲ; ಆದ್ದರಿಂದ ನಾವು ಕರ್ಮವನ್ನು ಮಾಡುತ್ತೇವೆಂದು ತಿಳಿಯುವದೇ ತಪ್ಪು. ಏನೂ ಮಾಡದೆ ಸುಮ್ಮನೆ ಕುಳಿತಿದ್ದರೆ ಅದೇ ಅಕರ್ಮವೆಂದು ನಾವು ತಿಳಿದಿರುವೆವಲ್ಲವೆ? ಇದೂ ತಪ್ಪು ತಿಳಿವಳಿಕೆ. 'ಸುಮ್ಮನೆ ಕುಳಿತಿದ್ದೇನೆ' ಎಂಬಲ್ಲಿ ಅಹಂಕಾರದ ಸಂಬಂಧವಿರುವದರಿಂದ ಹಾಗೆ ಸುಮ್ಮನಿರುವದೂ ಒಂದು ಬಗೆಯ ಕರ್ಮವೇ ಆಗಿರುವದು. ಹೀಗೆ ಜನರು ಕರ್ಮವನ್ನು ಅಕರ್ಮವೆಂದೂ ಅಕರ್ಮವನ್ನು ಕರ್ಮವೆಂದೂ ತಿಳಿದುಕೊಂಡಿರುವದರಿಂದ ಬುದ್ಧಿವಂತನಾದವನು ಇದನ್ನು ಸರಿಯಾಗಿ ಮಾರ್ಪಡಿಸಿ ತಿಳಿದುಕೊಳ್ಳಬೇಕು. ಅಂಥವನು ಕೃತಕೃತ್ಯನಾಗುವನು. ಅವನು ಮಾಡುವ ಕರ್ಮಗಳಿಗೆ ಬುಡದಲ್ಲಿ ಕಾಮವಾಗಲಿ ಸಂಕಲ್ಪವಾಗಲಿ ಇರುವದಿಲ್ಲ; ಜ್ಞಾನವೆಂಬ ಅಗ್ನಿಯಿಂದ ಅವನ ಕರ್ಮಗಳು ಸುಟ್ಟುಹೋಗಿರುವವಾದ್ದರಿಂದ ಅವು ತಮ್ಮ ತಮ್ಮ ಫಲವನ್ನು ಕೊಡಲಾರವು.

೨೦—೨೪. ''ಯಾವನು ಕರ್ಮವನ್ನು ಮಾಡುತ್ತಿದ್ದು ಈ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುವನೋ ಅವನು ಕರ್ಮವನ್ನು ಮೊದಲಿನಂತೆಯೇ ಲೋಕಸಂಗ್ರಹಕ್ಕಾಗಿ ಮಾಡುತ್ತಲೇ ಇದ್ದರೂ ಇರಬಹುದು; ಆ ಸಂದರ್ಭದಲ್ಲಿ ಅವನು ನಿಜವಾಗಿ ಏನನ್ನೂ ಮಾಡಿದವನಾಗುವದಿಲ್ಲ, ಏಕೆಂದರೆ ಜ್ಞಾನದೃಷ್ಟಿಯಿಂದ ಅವನ ಕರ್ಮವು ಅಕರ್ಮವೇ ಆಗಿರುತ್ತದೆ. ಯಾವನು ಕರ್ಮದಲ್ಲಿ ತೊಡಗುವದಕ್ಕೆ ಮೊದಲೆ ಈ ಜ್ಞಾನವನ್ನು ಸಂಪಾದಿಸಿಕೊಳ್ಳುವನೋ ಅವನಂತು ಯಾವ ಕರ್ಮವನ್ನು ಮಾಡುವದಕ್ಕೂ ಬಯಸುವದೇ ಇಲ್ಲ. ಅವನು ಸಕಲಕರ್ಮಗಳನ್ನೂ ಬಿಟ್ಟು ಶರೀರಸ್ಥಿತಿಗೆ ಬೇಕಾದಷ್ಟು ಮಟ್ಟಿನ ಕರ್ಮವನ್ನು ಮಾಡಿಕೊಂಡಿರುವನು. ಅವನಿಗೆ ತಾನು ಮಾಡುವ ಈ ಕರ್ಮದ ಲೇಪವೂ ಇರುವದಿಲ್ಲ. ಜ್ಞಾನಿಯ ದೃಷ್ಟಿಯಿಂದ ನೋಡಿದರೆ ಅವನಲ್ಲಿ ಯಾವ ಕರ್ಮವೂ ಇರುವದೇ ಇಲ್ಲ; ಉಳಿದವರ ದೃಷ್ಟಿಯಿಂದ ಅವನು ಕರ್ಮವನ್ನು ಮಾಡುವಂತೆ ಇದ್ದರೂ ನಿಜವಾಗಿ ಅವನಿಗೆ ಕರ್ಮದಿಂದ ಯಾವ ಫಲವೂ ಆಗುವ ಹಾಗಿಲ್ಲ. ಅವನ ಕರ್ಮವು ಅವನ ದೃಷ್ಟಿಯಲ್ಲಿ ಬ್ರಹ್ಮವೆ ಆಗಿರುವದು.

೨೫—೩೩. ''ಲೋಕದಲ್ಲಿ ದೇವತೆಗಳನ್ನು ಕುರಿತು ಯಜ್ಞವನ್ನು ಮಾಡುವವರು ಕೆಲವರು, ಬ್ರಹ್ಮವಿಷಯದ ಜ್ಞಾನವೆಂಬ ಯಜ್ಞವನ್ನು ಮಾಡುವವರು ಕೆಲವರು. ಜ್ಞಾನಯಜ್ಞವನ್ನು ಬಿಟ್ಟು ಉಳಿದ ಯಜ್ಞಗಳು ಬಗೆಬಗೆಯಾಗಿರುವವು. ಹೇಗೆಂದರೆ ಕೆಲವರು ಇಂದ್ರಿಯಗಳನ್ನು ಬಿಗಿಹಿಡಿಯುವರು, ಇದು ಸಂಯಮಯಜ್ಞ; ಕೆಲವರು ಯೋಗ್ಯವಾದ ವಿಷಯಗಳನ್ನು ಮಾತ್ರ ಇಂದ್ರಿಯಗಳಿಂದ ಸೇವಿಸುವರು, ಇದು ಇಂದ್ರಿಯಯಜ್ಞ; ಕೆಲವರು ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡು ಇಂದ್ರಿಯಕರ್ಮಗಳನ್ನೂ ಪ್ರಾಣದ ಕರ್ಮಗಳನ್ನೂ ಹಿಡಿತದಲ್ಲಿಡುವರು, ಇದು ಆತ್ಮಸಂಯಮಯಜ್ಞ; ಕೆಲವರು ಕೃಚ್ಛ್ರಚಾಂದ್ರಾಯಣಾದಿಗಳನ್ನು ಮಾಡುವರು, ಇದು ತಪೋಯಜ್ಞ; ಕೆಲವರು ವೇದವನ್ನು ನಿಯಮದಿಂದ ಅಧ್ಯಯನಮಾಡುವರು, ಇದು ಸ್ವಾಧ್ಯಾಯಯಜ್ಞ; ಕೆಲವರು ಉಸಿರನ್ನು ಹಿಡಿದು

ರೇಚಕ, ಪೂರಕ, ಕುಂಭಕಗಳನ್ನು ಮಾಡುವರು, ಇದು ಪ್ರಾಣಾಯಾಮಯಜ್ಞ. ಯಾವ ಯಜ್ಞವನ್ನೇ ಮಾಡಲಿ, ಯಜ್ಞದಿಂದ ಪಾಪನಿವೃತ್ತಿಯಾಗುವದು. ಯಜ್ಞವನ್ನು ಮಾಡುತ್ತಿರುವವರು ಭೋಗಿಸುವ ಆಹಾರವು ಅಮೃತವೆನಿಸುವದು. ಮನುಷ್ಯನಾದವನು ಯಾವದಾದರೊಂದು ಯಜ್ಞವನ್ನು ಮಾಡುತ್ತಲೆ ಇರಬೇಕು ; ಇಲ್ಲದಿದ್ದರೆ ಅವನಿಗೆ ಈ ಲೋಕದ ಸುಖವಾಗಲಿ, ಪರಲೋಕದ ಸುಖವಾಗಲಿ ದಕ್ಕಲಾರದು. ಆದರೆ ಈ ಯಜ್ಞಗಳೆಲ್ಲ ಕರ್ಮಮಯವಾಗಿರುವವು, ಜ್ಞಾನಯಜ್ಞವೊಂದು ಮಾತ್ರ ಕರ್ಮವನ್ನು ಮೀರಿರುವದು. ಇದನ್ನು ತಿಳಿದವನು ಮುಕ್ತನಾಗುತ್ತಾನೆ. ಮುಕ್ತಿಯ ಆನಂದದಲ್ಲಿ ಎಲ್ಲಾ ಆನಂದಗಳೂ ಸೇರಿಕೊಂಡಿರುವದರಿಂದ ಜ್ಞಾನಯಜ್ಞದ ಫಲದಲ್ಲಿ ಮಿಕ್ಕ ಎಲ್ಲಾ ಕರ್ಮಗಳೂ ಸೇರಿರುವವು. ಆದ್ದರಿಂದ ದ್ರವ್ಯಮಯವಾದ ಯಜ್ಞಕ್ಕಿಂತ ಜ್ಞಾನಯಜ್ಞವೇ ಹೆಚ್ಚಿನದು.

೩೪–೩೯. "ಈ ಯಜ್ಞವು ದೊರೆಯುವದಕ್ಕೆ ಸಾಧನವೇನೆಂದರೆ ತತ್ತ್ವವನ್ನು ತಿಳಿದು ಅದರಲ್ಲಿಯೇ ನಿಷ್ಠರಾಗಿರುವ ಸದ್ಗುರುಗಳ ಬಳಿಗೆ ಹೋಗಿ ದಂಡಪ್ರಣಾಮವನ್ನು ಮಾಡಿ ಅವರನ್ನು ಶುಶ್ರೂಷೆ ಮಾಡುತ್ತಾ ತತ್ತ್ವವನ್ನು ಕುರಿತ ಪ್ರಶ್ನೆಯನ್ನು ಮಾಡಿ ಅವರಿಂದ ಸರಿಯಾದ ಉತ್ತರವನ್ನು ಪಡೆದುಕೊಳ್ಳಬೇಕು. ಬರಿಯ ನಮಸ್ಕಾರವೇ ಮುಂತಾದ ಹೊರಗಿನ ಸಾಧನಗಳೇ ಸಾಲದು; ಮುಖ್ಯವಾಗಿ ಶ್ರದ್ಧೆಯೂ ಜ್ಞಾನದಲ್ಲಿಯೇ ತಾತ್ಪರ್ಯವೂ ಇಂದ್ರಿಯನಿಗ್ರಹವೂ ಇರಬೇಕು. ಇವುಗಳಿಂದ ಕೂಡಿದಾತನು ಗುರುಗಳ ಉಪದೇಶದಿಂದ ಪಡೆದುಕೊಂಡ ಜ್ಞಾನದಿಂದ ಭ್ರಾಂತಿಯೆಲ್ಲವೂ ತೊಲಗುವದು. 'ಸಕಲಭೂತಗಳಿಗೂ ಆತ್ಮನಾಗಿರುವ ಪರಮೇಶ್ವರನೇ ನನ್ನ ಆತ್ಮನು' ಎಂಬ ಉದಾರವಾದ ಉಪನಿಷತ್ತತ್ತ್ವವು ಮನಸ್ಸಿಗೆ ನಾಟಿ ಸಕಲ ಧರ್ಮಾಧರ್ಮಗಳೂ ಈ ಜ್ಞಾನದಿಂದ ಸುಟ್ಟು ಬೂದಿಯಾಗುವವು ; ಸಕಲವಿಧವಾದ ಸಂಸಾರಬಂಧದಿಂದಲೂ ಮುಕ್ತಿಯಾಗುವದು.

೪೦–೪೨. "ತತ್ತ್ವವನ್ನು ತಿಳಿಯದೆ ಗುರುವಾಕ್ಯದಲ್ಲಿಯೂ ಶಾಸ್ತ್ರದಲ್ಲಿಯೂ ಶ್ರದ್ಧೆಯಿಲ್ಲದೆ ಜ್ಞಾನದಿಂದ ಮೋಕ್ಷವಾದೀತೋ ಇಲ್ಲವೊ– ಎಂದು ಸಂಶಯಪಡುವವನು ಹಾಳಾಗುವನು. ಸಂಶಯವುಳ್ಳವನಿಗೆ ಈ ಲೋಕದ ವ್ಯವಹಾರದ ಫಲವಾದ ಸುಖವೇ ಇಲ್ಲ ; ಇನ್ನು ಪರಲೋಕದ ಸುಖವು ಹೇಗೆ ದಕ್ಕೀತು? ಆದರೆ ಜ್ಞಾನದಿಂದ ಸಂಶಯಗಳನ್ನೆಲ್ಲ ತೊಲಗಿಸಿಕೊಂಡು ಪರಮಾರ್ಥದರ್ಶನವೆಂಬ ಯೋಗದಿಂದ ಸಕಲಕರ್ಮಗಳನ್ನೂ ಮೀರಿ ಅಜ್ಞಾನವೆಂಬ ನಿದ್ರೆಗೆ ಬೀಳದೆ ಎಚ್ಚರವಾಗಿರುವವನನ್ನು ಕರ್ಮಗಳು ಎಂದಿಗೂ ಬಾಧಿಸಲಾರವು. ನಿನಗೆ ಆತ್ಮನ ವಿಷಯವಾಗಿ ಈಗ ಬಂದಿರುವ ಸಂಶಯವು ಅಜ್ಞಾನದಿಂದ ಆಗಿರುವದು ; ಆದ್ದರಿಂದ ಜ್ಞಾನವೆಂಬ ಕತ್ತಿಯಿಂದ ಇದನ್ನು ಕತ್ತರಿಸಿಹಾಕು ; ಆ ಜ್ಞಾನಕ್ಕೆ ಉಪಾಯವಾದ ಯೋಗವನ್ನು ಮಾಡು. ಪ್ರಕೃತಕ್ಕೆ ಯುದ್ಧವನ್ನು ಮಾಡು, ಏಳು."

---

# ಐದನೆಯ ಅಧ್ಯಾಯ

(ಸಂನ್ಯಾಸಯೋಗ)

---

## ಅರ್ಜುನನ ಪ್ರಶ್ನೆ: ಕರ್ಮಯೋಗ, ಕರ್ಮಸಂನ್ಯಾಸ–ಇವುಗಳಲ್ಲಿ ಯಾವದು ಒಳ್ಳೆಯದು?

"ಕರ್ಮದಲ್ಲಿ ಯಾವಾತನು ಅಕರ್ಮವನ್ನು ಕಾಣುವನೋ" (೪–೧೮) ಎಂದು ಪ್ರಾರಂಭಿಸಿ "ಅವನು ಯುಕ್ತನು, ಎಲ್ಲಾ ಕರ್ಮಗಳನ್ನೂ ಮಾಡಿದವನು" (೪–೧೮), "ಜ್ಞಾನವೆಂಬ ಅಗ್ನಿಯಿಂದ ಸುಟ್ಟುಹೋದ ಕರ್ಮವುಳ್ಳ" (೪–೧೯), "ಬರಿಯ ಶಾರೀರಕರ್ಮವನ್ನು ಮಾಡುತ್ತಿರುವ" (೪–೨೧), "ಅಕಸ್ಮಾತ್ತಾಗಿ ಸಿಕ್ಕುವಷ್ಟರಿಂದ ತೃಪ್ತನಾಗಿ" (೪–೨೨), "ಅರ್ಪಣವು ಬ್ರಹ್ಮವೆ, ಹವಿಸ್ಸು ಬ್ರಹ್ಮವೆ" (೪–೨೪), 'ಅವುಗಳೆಲ್ಲವೂ ಕರ್ಮದಿಂದಾದವುಗಳೆಂದು ತಿಳಿ" (೪–೩೨), "ಎಲೈ ಪಾರ್ಥನೆ, ಕರ್ಮವೆಲ್ಲವೂ ಅಖಿಲವಾಗಿ ಜ್ಞಾನದಲ್ಲಿ (ಕೊನೆಗಾಣುತ್ತದೆ)" (೪–೩೩), "ಜ್ಞಾನವೆಂಬ ಬೆಂಕಿಯು ಕರ್ಮಗಳೆಲ್ಲವನ್ನೂ (ಬೂದಿಗೈಯುವದು)" (೪–೩೭), "ಯೋಗದಿಂದ ಕರ್ಮಗಳನ್ನು ಸಂನ್ಯಾಸ ಮಾಡಿದವನಾಗಿಯೂ" (೪–೪೧)– ಎಂಬೀ (ಶ್ಲೋಕಗಳ) ವಚನಗಳಿಂದ ಭಗವಂತನು ಸರ್ವಕರ್ಮಸಂನ್ಯಾಸವನ್ನು ಹೇಳಿರುತ್ತಾನೆ. "ಈ ಸಂಶಯವನ್ನು ಕತ್ತರಿಸಿ ಯೋಗವನ್ನು ಕೈಕೊಳ್ಳು" (೪–೪೨)– ಎಂಬ ವಚನದಿಂದ ಕರ್ಮಾನುಷ್ಠಾನರೂಪವಾದ ಯೋಗವನ್ನು ಮಾಡೆಂದೂ ಹೇಳಿರುತ್ತಾನೆ. ಕರ್ಮವನ್ನು ಮಾಡುವದು, ಕರ್ಮವನ್ನು ಬಿಡುವದು– ಈ ಎರಡೂ ನಿಂತಿರುವದು, ಓಡಾಡುವದು– ಇವುಗಳ ಹಾಗೆ ಒಂದಕ್ಕೊಂದು ವಿರೋಧವಾಗಿರುವದರಿಂದ ಒಬ್ಬನೇ ಏಕಕಾಲದಲ್ಲಿ ಮಾಡಲು ಅಶಕ್ಯವಾಗಿರುವದರಿಂದಲೂ ಬೇರೆಬೇರೆಯ ಕಾಲದಲ್ಲಿ ಇವನ್ನು ಮಾಡತಕ್ಕದ್ದೆಂದೂ ಹೇಳಿರುವದಿಲ್ಲವಾದ್ದರಿಂದಲೂ ಈ ಎರಡರಲ್ಲಿ ಒಂದನ್ನು ಮಾಡಬೇಕೆಂದು ಹೇಳಿದಂತೆ ಆಯಿತು. ಆದ್ದರಿಂದ ಕರ್ಮಗಳನ್ನು ಮಾಡುವದು, ಕರ್ಮಗಳನ್ನು ಬಿಡುವದು– ಇವೆರಡರಲ್ಲಿ ಯಾವುದು ಹೆಚ್ಚು ಒಳ್ಳೆಯದೊ ಅದನ್ನು ಮಾಡಬೇಕು, ಉಳಿದದ್ದನ್ನು ಮಾಡಬಾರದು ಎಂದೆಣಿಸಿ ಅರ್ಜುನನು ಇವುಗಳಲ್ಲಿ ಯಾವುದು ಹೆಚ್ಚೆಂದು ತಿಳಿದುಕೊಳ್ಳುವದಕ್ಕಾಗಿ "ಕರ್ಮಗಳ ಸಂನ್ಯಾಸವನ್ನೂ ಮತ್ತು ಯೋಗವನ್ನೂ ಹೇಳುತ್ತಿದ್ದೀಯೆ" (೫–೧) ಎಂದು ಮುಂತಾದ ವಾಕ್ಯವನ್ನು ಆಡಿರುತ್ತಾನೆ.

೨೦೮ ಅರ್ಜುನನ ಪ್ರಶ್ನೆ: ಕರ್ಮಯೋಗ, ಕರ್ಮಸಂನ್ಯಾಸ-ಇವುಗಳಲ್ಲಿ ಯಾವದು ಒಳ್ಳೆಯದು?

(ಆಕ್ಷೇಪ):- ಆತ್ಮಜ್ಞಾನಿಗೆ ಜ್ಞಾನಯೋಗದಿಂದಲೇ ನಿಷ್ಠೆಯನ್ನು ಹೇಳುವದಕ್ಕಾಗಿ ಭಗವಂತನು ಮೇಲೆ ಉದಾಹರಿಸಿರುವ ವಚನಗಳಲ್ಲಿ ಸರ್ವಕರ್ಮಸಂನ್ಯಾಸವನ್ನು ಹೇಳಿರುತ್ತಾನೆಯೇ ಹೊರತು ಆತ್ಮವನ್ನರಿಯದವನಿಗಾಗಿ ಹೇಳಿರುವದಿಲ್ಲ. ಆದ್ದರಿಂದ ಕರ್ಮವನ್ನು ಮಾಡುವದು ಮತ್ತು ಕರ್ಮವನ್ನು ಬಿಡುವದು- ಇವೆರಡೂ ಬೇರೆಬೇರೆಯ ಜನರಿಗೆ ಹೇಳಿದವುಗಳಾಗಿರುವದರಿಂದ ಇವೆರಡರಲ್ಲಿ ಯಾವದು ಹೆಚ್ಚು ಒಳ್ಳೆಯದೆಂದು ತಿಳಿದುಕೊಳ್ಳುವದಕ್ಕೆ ಈ ಪ್ರಶ್ನೆಯನ್ನು ಹಾಕಿರುತ್ತಾನೆಂಬುದು ಹೊಂದುಗಡೆಯಾಗುವದಿಲ್ಲ.

(ಪರಿಹಾರ)- ನಿಜ, ನಿಮ್ಮ ಅಭಿಪ್ರಾಯದಂತೆ ಪ್ರಶ್ನೆಯು ಹೊಂದುಗಡೆಯಾಗುವದೇ ಇಲ್ಲ. ಆದರೆ (ಪ್ರಶ್ನೆಯನ್ನು) ಕೇಳುತ್ತಿರುವ (ಅರ್ಜುನನ) ಅಭಿಪ್ರಾಯದಿಂದ ಹೊಂದುಗಡೆಯಾಗಿಯೇ ಆಗುತ್ತದೆಯೆಂದು ನಾವೆನ್ನುತ್ತೇವೆ. ಅದು ಹೇಗೆ? ಎಂದರೆ "ಮೇಲೆ ಹೇಳಿದ ವಚನಗಳಿಗೆ ಕರ್ಮಗಳನ್ನು ಸಂನ್ಯಾಸ ಮಾಡಬೇಕೆಂಬುದರಲ್ಲಿಯೇ ಭಗವಂತನ ತಾತ್ಪರ್ಯವಿರುವದರಿಂದ [ಕರ್ತವ್ಯತಯಾ ವಿವಕ್ಷಿತತ್ವಾತ್] ಅದೇ (ಆ ವಾಕ್ಯಗಳಲ್ಲಿ) ಮುಖ್ಯವಾಗಿರುತ್ತದೆ.* ಕರ್ತನಿಲ್ಲದೆ [ಅಂತರೇಣ ಚ ಕರ್ತಾರಂ] ಅದನ್ನು ಮಾಡುವದು ಆಗಬಾರದಾದ್ದರಿಂದ ಅನಾತ್ಮಜ್ಞನಾದ ಕರ್ತೃವೂ ಒಂದು ಪಕ್ಷದಲ್ಲಿ† ಆಗಬಹುದು. ಆದ್ದರಿಂದ (ಈ ವಾಕ್ಯದಲ್ಲಿ ಕರ್ತೃವನ್ನು) ಅನುವಾದಮಾಡಿರುತ್ತದೆಯೇ‡ ಹೊರತು, ಆತ್ಮಜ್ಞಾನಿಯೊಬ್ಬನೇ ಸಂನ್ಯಾಸವನ್ನು ಮಾಡಬೇಕೆಂಬುದೇನೂ (ಭಗವಂತನ) ತಾತ್ಪರ್ಯವಲ್ಲ." ಹೀಗೆಂದು ಅರ್ಜುನನು ತಿಳಿದುಕೊಂಡಿರುತ್ತಾನೆ (ಅವನ) ಅಭಿಪ್ರಾಯದಲ್ಲಿ ಕರ್ಮವನ್ನು ಮಾಡುವದು, ಕರ್ಮವನ್ನು ಬಿಡುವದು- ಇವೆರಡೂ ಅಜ್ಞಾನಿಗೂ ಉಂಟು. ಆದ್ದರಿಂದ ಮೇಲೆ ಹೇಳಿದ ರೀತಿಯಲ್ಲಿ ಅವೆರಡೂ

* ಯಾವದನ್ನು ವಾಕ್ಯದಲ್ಲಿ ವಿಧಿಸಿರುತ್ತದೆಯೋ ಅದಕ್ಕೇ ಪ್ರಾಧಾನ್ಯವಿರುವದು. ಒಂದೇ ವಾಕ್ಯದಲ್ಲಿ ಎರಡುಮೂರರ್ಥಗಳಿಗೆ ಪ್ರಾಧಾನ್ಯವಿರುವದಿಲ್ಲ. ಇಲ್ಲಿ ಸಂನ್ಯಾಸವನ್ನು ಮಾಡಬೇಕೆಂಬುದು ಮುಖ್ಯ, ಕರ್ತೃವೇನೂ ಮುಖ್ಯವಲ್ಲವೆಂದು ಭಾವ. ಮೂಲದಲ್ಲಿ 'ಪ್ರಾಧಾನ್ಯಮ್' ಎಂಬಲ್ಲಿಗೆ ವಾಕ್ಯವು ಮುಗಿಯಿತು.

† 'ಹತ್ತು ಘಂಟೆಗೆ ಅಡಿಗೆಯಾಗಬೇಕು' ಎಂಬ ವಾಕ್ಯದಲ್ಲಿ ಅಡಿಗೆಯಾಗುವದು ಮುಖ್ಯವೇ ಹೊರತು ಅಡಿಗೆಯನ್ನು ಇಂಥವರೇ ಮಾಡಬೇಕೆಂಬ ಕಡೆಗೇನೂ ಮಾತಾಡುವವನ ಲಕ್ಷ್ಯವಿರುವದಿಲ್ಲ. ಅದರಂತೆ ಸಂನ್ಯಾಸವನ್ನು ಮಾಡಬೇಕೆಂಬ ವಿಧಿಗೂ ಕರ್ತೃವಿನ ಕಡೆಗೆ ಲಕ್ಷ್ಯವಿಲ್ಲ; ಆತ್ಮನನ್ನು ತಿಳಿದವನೂ ತಿಳಿಯದವನೂ ಇಬ್ಬರೂ ಸಂನ್ಯಾಸವನ್ನು ಮಾಡಬಹುದು. ಹೀಗಿರುವದರಿಂದ ಆತ್ಮಜ್ಞರಲ್ಲದ ನನ್ನಂಥವರೂ ಸಂನ್ಯಾಸವನ್ನು ಮಾಡಬಹುದೆಂದಾಯಿತು- ಎಂದು ಅರ್ಜುನನ ಅಭಿಪ್ರಾಯ.

‡ ಪ್ರಧಾನವಾಗಿ ಹೇಳುವದು ಪ್ರತಿಪಾದನೆ, ಗೊತ್ತಿದ್ದದ್ದನ್ನೆ ಹೇಳುವದು ಅನುವಾದ

ಒಂದಕ್ಕೊಂದು ವಿರುದ್ಧವಾಗಿರುವದರಿಂದ ಇವೆರಡರಲ್ಲಿ ಒಂದನ್ನೇ ಮಾಡಬೇಕೆಂದಾಯಿತಷ್ಟೆ; ಇವೆರಡರಲ್ಲಿ ಯಾವದು ಉತ್ತಮವಾದದ್ದೋ ಅದನ್ನೇ ಮಾಡಬೇಕು, ಉಳಿದದ್ದನ್ನು ಮಾಡಬಾರದು– ಎಂಬ (ಅಭಿಪ್ರಾಯದಿಂದ ಇವೆರಡರಲ್ಲಿ) ಹೆಚ್ಚು ಉತ್ತಮವಾದದ್ದು ಯಾವದೆಂಬುದನ್ನು ತಿಳಿಯುವದಕ್ಕಾಗಿ ಪ್ರಶ್ನೆಯನ್ನು ಕೇಳಿದ್ದು ಹೊಂದುಗಡೆಯಿಲ್ಲದೆ ಹೋಗುವದಿಲ್ಲ.

## ಅರ್ಜುನನ ಪ್ರಶ್ನೆಯು ಜ್ಞಾನಿಯ ವಿಷಯವಲ್ಲ

ಕೇಳುವಾತನ ಅಭಿಪ್ರಾಯವು ಮೇಲೆ ಹೇಳಿದಂತೆಯೇ ಇರುವದೆಂಬುದು ಇದಕ್ಕೆ ಉತ್ತರವಾಗಿ ಭಗವಂತನು ಹೇಳಿರುವ ಮಾತಿನ ಸಮಾಲೋಚನೆಯಿಂದಲೂ ಗೊತ್ತಾಗುವಂತಿದೆ. ಅದು ಹೇಗೆಂದರೆ, "ಸಂನ್ಯಾಸ, ಕರ್ಮಯೋಗ– ಈ ಎರಡೂ ಮುಕ್ತಿಗೆ ಕಾರಣವಾಗಿರುವವು, ಆದರೆ ಇವುಗಳಲ್ಲಿ ಕರ್ಮಯೋಗವು ಹೆಚ್ಚಿನದು." (೫–೨) ಎಂದಲ್ಲವೆ ಪ್ರತಿವಚನವು? ಇಲ್ಲಿ ಗೊತ್ತುಪಡಿಸಬೇಕಾಗಿರುವದೇನೆಂದರೆ, ಇಲ್ಲಿ ಆತ್ಮಜ್ಞಾನಿಯು ಮಾಡಬೇಕಾದ ಸಂನ್ಯಾಸಕರ್ಮಯೋಗಗಳು (ಎರಡೂ) ಮುಕ್ತಿಯನ್ನು ಉಂಟುಮಾಡುವವು– ಎಂದು ಅವುಗಳ ಪ್ರಯೋಜನವನ್ನು ಹೇಳಿ ಅವೆರಡರಲ್ಲಿಯೇ ಯಾವುದೋ ಒಂದು ವಿಶೇಷಕಾರಣದಿಂದ ಕರ್ಮಯೋಗವು ಕರ್ಮಸಂನ್ಯಾಸಕ್ಕಿಂತ ಹೆಚ್ಚಿನದೆಂದು ಹೇಳಿದೆಯೋ, ಅಥವಾ ಆತ್ಮನನ್ನು ಅರಿತುಕೊಳ್ಳದವನು ಮಾಡಬೇಕಾದ ಕರ್ಮಸಂನ್ಯಾಸಕರ್ಮಯೋಗಗಳನ್ನು ಕುರಿತು ಈ ಎರಡನ್ನೂ (ಎಂದರೆ ಇವುಗಳೆರಡೂ ಮುಕ್ತಿಗೆ ಕಾರಣವಾಗಿರುವವೆಂದೂ ಇವುಗಳಲ್ಲಿ ಕರ್ಮಸಂನ್ಯಾಸಕ್ಕಿಂತಲೂ ಕರ್ಮಯೋಗವೇ ಹೆಚ್ಚಿನದೆಂದೂ) ಹೇಳಿದೆಯೊ?

(ಪ್ರಶ್ನೆ):– ಈ (ವಿಚಾರದಿಂದ) ಏನು (ಪ್ರಯೋಜನ)? ಆತ್ಮಜ್ಞಾನಿಯು ಮಾಡಬೇಕಾದ ಕರ್ಮಸಂನ್ಯಾಸಕರ್ಮಯೋಗಗಳು ಮುಕ್ತಿಗೆ ಕಾರಣವೆಂದೂ ಆದರೆ ಅವುಗಳಲ್ಲಿ ಕರ್ಮಯೋಗವು ಹೆಚ್ಚಿನದೆಂದೂ ಹೇಳಿದ್ದರೇನು, ಆತ್ಮವನ್ನರಿಯದವನು ಮಾಡಬೇಕಾದ ಸಂನ್ಯಾಸಕರ್ಮಯೋಗಗಳ ವಿಷಯದಲ್ಲಿ ಈ ಎರಡನ್ನೂ ಹೇಳಿದ್ದರೇನು?

(ಉತ್ತರ):– ಇದಕ್ಕೆ ಹೇಳುತ್ತೇವೆ, ಕೇಳಿ. ಆತ್ಮವನ್ನರಿತವನು ಮಾಡಬೇಕಾದ ಸಂನ್ಯಾಸಕರ್ಮಯೋಗಗಳೆಂಬವೇ ಇಲ್ಲವಾದ್ದರಿಂದ ಅವುಗಳೆರಡೂ*

* ಜ್ಞಾನವಾದ ಮೇಲೆ ಸಂನ್ಯಾಸ ಮತ್ತು ಕರ್ಮಯೋಗ– ಎಂಬ ಎರಡು ಮಾರ್ಗಗಳು ಇರುವವೆಂದು ಬಾಲಗಂಗಾಧರ ತಿಲಕರವರು ಗೀತಾರಹಸ್ಯದಲ್ಲಿ ತೆಗೆದಿರುವ ಹೊಸ ಸಿದ್ಧಾಂತವು ಆಚಾರ್ಯರಿಗಾಗಲಿ ಅವರ ಕಾಲದ ಬೇರೆ ವೇದಾಂತಿಗಳಿಗಾಗಲಿ ಸಮ್ಮತವಿರಲಿಲ್ಲ. ಈ ವಿಷಯದಲ್ಲಿ ಗೀತಾರ್ಥಸರ್ವಸ್ವವನ್ನು ನೋಡಿ.

ಮುಕ್ತಿಗೆ ಕಾರಣವೆಂಬುದು, ಮತ್ತು ಆತನು ಮಾಡುವ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದೆಂಬುದು– ಈ ಎರಡೂ ಯುಕ್ತವಾಗುವದಿಲ್ಲ. ಆತ್ಮವನ್ನರಿಯದಾತನಿಗೆ ಕರ್ಮಸಂನ್ಯಾಸವೂ ಅದಕ್ಕೆ ವಿರೋಧವಾಗಿ ಕರ್ಮವನ್ನು ಮಾಡುವದೆಂಬ ಕರ್ಮಯೋಗವೂ ಕೂಡುವದಾದರೆ ಅವೆರಡೂ ಮುಕ್ತಿಗೆ ಕಾರಣವೆಂಬುದು, ಕರ್ಮಯೋಗವು ಕರ್ಮಸಂನ್ಯಾಸಕ್ಕಿಂತ ಹೆಚ್ಚಿನದೆಂದು ಹೇಳಿದ್ದು-ಇವೆರಡೂ ಯುಕ್ತವಾಗುವದು.

## ಜ್ಞಾನಿಗೆ ಕರ್ಮಯೋಗವೆಂಬುದೇ ಇಲ್ಲ.

(ನಿಜವಾಗಿ) ಆತ್ಮಜ್ಞಾನಿಗೆ * ಸಂನ್ಯಾಸಕರ್ಮಯೋಗಗಳೇ ಇಲ್ಲದ್ದರಿಂದ ಅವೆರಡೂ ಮುಕ್ತಿಗೆ ಕಾರಣವೆಂದೂ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದೆಂದೂ ಹೇಳಿದ್ದು ಯುಕ್ತವಾಗುವದೇ ಇಲ್ಲ.

(ಪ್ರಶ್ನೆ):– ಆತ್ಮಜ್ಞಾನಿಗೆ ಸಂನ್ಯಾಸ, ಕರ್ಮಯೋಗ– ಇವೆರಡೂ ಇರಲಾರವೊ, ಇವೆರಡರಲ್ಲಿ ಒಂದು ಇರಲಾರದೊ? ಅದು ಇರಲಾರದೆಂಬುದಕ್ಕೆ ಕಾರಣವನ್ನೂ (ನೀವು) ಹೇಳಬೇಕು.

(ಉತ್ತರ):– ಆತ್ಮಜ್ಞಾನಿಗೆ ತಪ್ಪಾದ ತಿಳಿವಳಿಕೆಯೆಲ್ಲ ಹೋಗಿರುವದರಿಂದ ತಪ್ಪುತಿಳಿವಿನಿಂದಾಗಿರುವ ಕರ್ಮಯೋಗವು ಅವನಲ್ಲಿರಲಾರದು. ಹುಟ್ಟುವದೇ ಮುಂತಾದ ಯಾವ ಬಗೆಯ ವಿಕಾರವೂ ಇಲ್ಲವೆಂಬ ಕಾರಣದಿಂದ, 'ನಿಷ್ಕ್ರಿಯನಾದ ಆತ್ಮನೇ ತಾನು' ಎಂದು ಯಾವಾತನು ಅರಿತಿರುವನೋ ಆ ಆತ್ಮಜ್ಞಾನಿಗೆ ಸರಿಯಾದ ತಿಳಿವಳಿಕೆಯಿಂದ ತಪ್ಪುತಿಳಿವಳಿಕೆಯು ಹೋಗಿಬಿಟ್ಟಿರುವದರಿಂದ **ನಿಷ್ಕ್ರಿಯನಾದ ಆತ್ಮನ ಸ್ವರೂಪದಲ್ಲಿದ್ದುಬಿಡುವದೆಂಬ ಸರ್ವಕರ್ಮಸಂನ್ಯಾಸವನ್ನೂ ಹೇಳಿ** ಅದಕ್ಕೆ ವಿರುದ್ಧವಾಗಿ ತಪ್ಪುತಿಳಿವಿನಿಂದಾಗಿರುವ 'ತಾನು ಕರ್ತೃ' ಎಂಬ ಅಭಿಮಾನದಿಂದೊಡಗೂಡಿ ಸಕ್ರಿಯನಾದ ಆತ್ಮನ ಸ್ವರೂಪದಲ್ಲಿರುವದೆಂಬ ಕರ್ಮಯೋಗವು ಇರಲಾರದು; ಏಕೆಂದರೆ ಸರಿಯಾದ ತಿಳಿವಳಿಕೆಗೂ ತಪ್ಪುತಿಳಿವಳಿಕೆಗೂ ಮತ್ತು ಇವೆರಡರ ಕಾರ್ಯಗಳಿಗೂ ಒಂದಕ್ಕೊಂದಕ್ಕೆ ವಿರೋಧವುಂಟು- ಎಂದು ಈ (ಗೀತಾ), ಶಾಸ್ತ್ರದಲ್ಲಿ ಆತ್ಮಸ್ವರೂಪವನ್ನು ಗೊತ್ತುಮಾಡಿ ಹೇಳತಕ್ಕ ಬೇರೆಬೇರೆಯ ಕಡೆಗಳಲ್ಲಿ ತಿಳಿಸಿರುತ್ತದೆ. ಆದ್ದರಿಂದ ತಪ್ಪುತಿಳಿವಳಿಕೆಯನ್ನು ತೊಲಗಿಸಿಕೊಂಡಿರುವ ಆತ್ಮಜ್ಞಾನಿಗೆ ತಪ್ಪುತಿಳಿವಿನ

* ಈ ಭಾಗದ ಭಾಷ್ಯದ ಪಙ್ಕ್ತಿಯು ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುತ್ತದೆ. ಒಂದೇ ಅರ್ಥದ ಎರಡು ವಾಕ್ಯಗಳು ಇಲ್ಲಿ ಅನವಶ್ಯಕವಾಗಿ ಬಂದಿರುತ್ತವೆ. ಮೈ|| ಪಾಠದಲ್ಲಿ 'ಯದ್ಯನಾತ್ಮವಿದಃ' ಎಂಬುದಕ್ಕೆ 'ಯದ್ಯಾತ್ಮವಿದಃ' ಎಂದಿದೆ.

ಕಾರಣದಿಂದಾಗುವ ಕರ್ಮಯೋಗವು ಸಂಭವಿಸುವದಿಲ್ಲವೆಂದು ಹೇಳುವದು ಯುಕ್ತವಾಗಿರುತ್ತದೆ.

(ಪ್ರಶ್ನೆ):- ಹಾಗಾದರೆ ಆತ್ಮಸ್ವರೂಪವನ್ನು ಗೊತ್ತುಪಡಿಸಿ ಹೇಳಿರುವ ಯಾವ ಯಾವ ಕಡೆಗಳಲ್ಲಿ ಆತ್ಮಜ್ಞಾನಿಗೆ ಕರ್ಮವಿಲ್ಲವೆಂಬುದನ್ನು ತಿಳಿಸಿರುತ್ತದೆ?

(ಉತ್ತರ) :- ಇದಕ್ಕೆ ಹೇಳುತ್ತೇವೆ, ಕೇಳಿ. "ಅದನ್ನು ಅವಿನಾಶಿಯೆಂದು ತಿಳಿದುಕೋ" (೨-೧೭) ಎಂದು ಪ್ರಾರಂಭಿಸಿ "ಈತನು ಕೊಲ್ಲುವವನೆಂದು ಯಾವನು ತಿಳಿಯುತ್ತಾನೋ (ಅವನು ತಿಳಿಯನು)" (೨-೧೯), "ಈತನು ನಾಶವಿಲ್ಲದವನೆಂದೂ ನಿತ್ಯನೆಂದೂ ಯಾವನು ತಿಳಿದಿರುವನೋ" (ಅವನು ಯಾರನ್ನು ಹೇಗೆ ಕೊಲ್ಲುವನು?" (೨-೨೧)- ಎಂದು ಮುಂತಾಗಿ ಹೇಳಿರುವ ವಚನಗಳಲ್ಲಿ ಆತ್ಮಜ್ಞಾನಿಗೆ ಕರ್ಮವು ಇಲ್ಲವೆಂದು ತಿಳಿಸಿರುತ್ತದೆ.

(ಪ್ರಶ್ನೆ):- ಆತ್ಮಸ್ವರೂಪವನ್ನು ಗೊತ್ತುಪಡಿಸುವ ಕಡೆಗಳಲ್ಲಿ ಕರ್ಮಯೋಗವನ್ನೂ ಹೇಳಿಯೇ ಇರುತ್ತದೆಯಲ್ಲ? ಉದಾಹರಣೆಗೆ "ಆದ್ದರಿಂದ ಎಲೈ ಭಾರತನೆ, ಯುದ್ಧಮಾಡು" (೨-೧೮), "ಸ್ವಧರ್ಮವನ್ನು ಲಕ್ಷ್ಯದಲ್ಲಿಟ್ಟಾದರೂ (ನೀನು ಎದೆಗುಂದಬಾರದು)" (೨-೩೧), "ನಿನಗೆ ಕರ್ಮದಲ್ಲಿಯೇ ಅಧಿಕಾರವು" (೨-೪೭)- ಮುಂತಾದ ಕಡೆಯಲ್ಲಿ (ಕರ್ಮವನ್ನೂ ಹೇಳಿದೆಯಲ್ಲ?) ಹೀಗಿರುವಲ್ಲಿ ಆತ್ಮಜ್ಞಾನಿಗೆ ಕರ್ಮಯೋಗವು ಸಂಭವಿಸುವದಿಲ್ಲವೆಂಬುದು ಹೇಗೆ?

(ಉತ್ತರ):-ಏಕೆಂದರೆ ಸರಿಯಾದ ತಿಳಿವಳಿಕೆಗೂ, ತಪ್ಪುತಿಳಿವಳಿಕೆಗೂ ಇವೆರಡರ ಕಾರ್ಯಗಳಿಗೂ ಪರಸ್ಪರವಿರೋಧವಿದೆ. "ಜ್ಞಾನಯೋಗದಿಂದ ಸಾಂಖ್ಯರಿಗೂ" (೩-೩) ಎಂಬಲ್ಲಿ ಆತ್ಮತತ್ತ್ವವನ್ನು ಬಲ್ಲ ಸಾಂಖ್ಯರಿಗೆ ಆತ್ಮವನ್ನರಿಯದವರು ಮಾಡಬೇಕಾದ ಕರ್ಮಯೋಗನಿಷ್ಠೆಗಿಂತ ನಿಷ್ಕ್ರಿಯನಾದ ಆತ್ಮನ ಸ್ವರೂಪದಲ್ಲಿದ್ದುಕೊಂಡಿರುವದೆಂಬ ಜ್ಞಾನಯೋಗನಿಷ್ಠೆಯನ್ನು ಬೇರ್ಪಡಿಸಿರುವದರಿಂದಲೂ ಆತ್ಮಜ್ಞಾನಿಯು ಕೃತಕೃತ್ಯನಾಗಿರುವದರಿಂದ ಆತ್ಮಜ್ಞಾನಿಗೆ ಆಗಬೇಕಾದದ್ದು ಮತ್ತೇನೂ ಇರುವದಿಲ್ಲವಾದ್ದರಿಂದಲೂ "ಆತನಿಗೆ ಮಾಡತಕ್ಕದ್ದು ಏನೂ ಇರುವದಿಲ್ಲ" (೩-೧೭) ಎಂಬ ವಾಕ್ಯದಿಂದ ಬೇರೆಯ ಕರ್ತವ್ಯವೇ ಇರುವದಿಲ್ಲವೆಂದು ಹೇಳಿರುವದರಿಂದಲೂ "ಕರ್ಮವನ್ನು ಪ್ರಾರಂಭಿಸದೆ ಇರುವದರಿಂದ (ಮನುಷ್ಯನಿಗೆ) ನೈಷ್ಕರ್ಮ್ಯವು ದೊರಕುವದಿಲ್ಲ"(೩-೪), "ಎಲೈ ಮಹಾಬಾಹುವೆ, ಸಂನ್ಯಾಸವೆಂಬುದನ್ನು ಯೋಗವಿಲ್ಲದೆ ಪಡೆಯುವದು ಕಷ್ಟ" (೫-೬)- ಮುಂತಾದ ವಚನಗಳಿಂದ ಆತ್ಮಜ್ಞಾನಕ್ಕೆ ಕರ್ಮಯೋಗವು ಒಂದು ಸಾಧನವೆಂದು [ಅಂಗತ್ವೇನ] ತಿಳಿಸಿರುವದರಿಂದಲೂ "ಆತನೇ ಯೋಗಾರೂಢನಾದರೆ ಅವನಿಗೆ ಶಮವು ಕಾರಣ

ವೆನಿಸುವದು" (೬-೩)–ಎಂಬ ವಾಕ್ಯದಿಂದ ಸರಿಯಾದ ತಿಳಿವಳಿಕೆಯುಂಟಾದವನಿಗೆ ಕರ್ಮಯೋಗವಿಲ್ಲವೆಂದು ಹೇಳಿರುವದರಿಂದಲೂ "ಬರಿಯ ಶಾರೀರಕರ್ಮವನ್ನು ಮಾಡುವವನಾದ್ದರಿಂದ ಆವನು ಕಿಲ್ಬಿಷವನ್ನು ಹೊಂದುವದಿಲ್ಲ" (೪-೨೧) ಎಂಬ ವಾಕ್ಯದಲ್ಲಿ ಶರೀರವು ಇರುವ ಮಟ್ಟಿಗೆ ಬೇಕಾದ ಕರ್ಮವನ್ನು ಬಿಟ್ಟರೆ ಬೇರೆಯ ಕರ್ಮವು (ಜ್ಞಾನಿಗೆ) ಇಲ್ಲವೆಂದು ಹೇಳಿರುವದರಿಂದಲೂ "ತತ್ತ್ವವನ್ನರಿತವನು ನಾನು ಏನನ್ನೂ ಮಾಡುವದೇ ಇಲ್ಲ ಎಂದೆಣಿಸುವನು" (೫-೮) ಎಂಬ ವಾಕ್ಯದಲ್ಲಿ ಶರೀರವು ಇರುವ ಮಟ್ಟಿಗೆ ಮಾಡಬೇಕಾದ ನೋಡುವದು, ಕೇಳುವದು - ಮುಂತಾದ ಕೆಲಸಗಳಲ್ಲಿ ಕೂಡ ಆತ್ಮನ ನಿಜವನ್ನು ಅರಿತುಕೊಂಡಿರುವಾತನು 'ನಾನು ಇವುಗಳನ್ನು ಮಾಡುವದಿಲ್ಲ' ಎಂಬ ಬುದ್ಧಿಯನ್ನೇ ಯಾವಾಗಲೂ ಚಿತ್ತಸಮಾಧಾನದಿಂದ ಮಾಡುತ್ತಿರಬೇಕೆಂದು * ತಿಳಿಸಿರುವದರಿಂದಲೂ ಆತ್ಮತತ್ತ್ವವನ್ನರಿತಿರುವಾತನಿಗೆ ಸರಿಯಾದ ತಿಳಿವಳಿಕೆಗೆ ವಿರುದ್ಧವಾಗಿಯೂ ತಪ್ಪು ತಿಳಿವಳಿಕೆಯಿಂದ ಉಂಟಾದದ್ದಾಗಿಯೂ ಇರುವ ಕರ್ಮಯೋಗವು ಕನಸಿನಲ್ಲಿ ಕೂಡ ಹೊಂದಲಾರದು. ಆದ್ದರಿಂದ **ಆತ್ಮವನ್ನರಿಯದವನು ಮಾಡಬೇಕಾದ ಸಂನ್ಯಾಸಕರ್ಮಯೋಗಗಳೇ ಮುಕ್ತಿಗೆ ಕಾರಣವೆಂದು ಇಲ್ಲಿ ಹೇಳಿರುತ್ತದೆ ಎಂತಲೂ, ಆತನು ಮಾಡುವ ಕರ್ಮಸಂನ್ಯಾಸವು ಆತ್ಮನನ್ನು ಅರಿತುಕೊಂಡವನು ಮಾಡುವ ಸಂನ್ಯಾಸಕ್ಕಿಂತಲೂ ಬೇರೆಯ ತರದ್ದಾಗಿಯೂ ತಾನು ಕರ್ತೃವೆಂಬ ಅರಿವು† ಇರುವಾಗಲೇ ಕೆಲವು ಕರ್ಮಗಳನ್ನು‡ ಮಟ್ಟಿಗೆ ಬಿಡತಕ್ಕದ್ದಾಗಿಯೂ ಯಮನಿಯಮಾದಿಗಳಿಂದ ಕೂಡಿಯೇ ಇರಬೇಕಾದ್ದರಿಂದ ಮಾಡುವದಕ್ಕೆ ಕಷ್ಟವಾಗಿರುವದರಿಂದಲೂ ಕರ್ಮಯೋಗವು ಅದಕ್ಕಿಂತ ಮಾಡುವದಕ್ಕೆ ಸುಲಭವಾಗಿರುವದರಿಂದ ಅದೇ ಹೆಚ್ಚಿನದೆಂದು ಹೇಳಿರುತ್ತದೆ ಎಂತಲೂ (ನಿರ್ಣಯಿಸಬೇಕು.)** ಹೀಗೆ

---

* 'ನಾಹಂ ಕರೋಮೀತಿ ಪ್ರತ್ಯಯಸ್ಯ ಸಮಾಹಿತಚೇತಸ್ತಯಾ ಸದಾ ಕರ್ತವ್ಯತ್ವೋಪದೇಶಾತ್'— ಎಂಬ ಮೂ|| ಪಾಠದಂತೆ ಕನ್ನಡಿಸಿದೆ.

† 'ನಾನು ಆತ್ಮನನ್ನರಿಯೆನು, ಅರಿತುಕೊಳ್ಳಬೇಕು' ಎಂಬ ಬುದ್ಧಿಯಿರುವಾಗಲೇ ಮುಮುಕ್ಷುವಾದವನು ಯತ್ಯಾಶ್ರಮವನ್ನು ಕೈಕೊಂಡು ಯಮನಿಯಮಾದಿಗಳಿಂದ ಕೂಡಿ, ಶ್ರವಣಮನನನಿದಿಧ್ಯಾಸನಗಳನ್ನು ಮಾಡುವನು; ಇದು ಗೌಣಸಂನ್ಯಾಸ. ಆತ್ಮವನ್ನರಿತ ಮೇಲೆ ತಾನು ಕರ್ತೃವೇ ಅಲ್ಲ ಎಂಬ ಬುದ್ಧಿಯುಂಟಾದಾಗ ಆತನು ವ್ಯವಹಾರದೃಷ್ಟಿಯಿಂದ ಏನು ಮಾಡುತ್ತಿದ್ದರೂ ಮಾಡಿದವನೇ ಆಗುವದಿಲ್ಲ, ಅದು ಮುಖ್ಯಸಂನ್ಯಾಸ.

‡ ಗೃಹಸ್ಥನು ಮಾಡಬೇಕಾದ ಕರ್ಮಗಳನ್ನು ಮಾತ್ರ. ಎಲ್ಲಾ ಕರ್ಮಗಳನ್ನೂ ಬಿಡುವದು ಜ್ಞಾನಿಗೆ ಮಾತ್ರ ಸಾಧ್ಯ.

(ಶ್ರೀಕೃಷ್ಣನು ಹೇಳಿರುವ) ಉತ್ತರರೂಪವಾಗಿರುವ ವಾಕ್ಯದ ಅರ್ಥವನ್ನು ವಿಮರ್ಶೆ ಮಾಡುವದರಿಂದಲೂ ಮೇಲೆ ನಾವು ಹೇಳಿದ್ದೇ ಪ್ರಶ್ನೆಯನ್ನು ಕೇಳಿದ (ಅರ್ಜುನನ) ಅಭಿಪ್ರಾಯವೆಂದು ನಿಶ್ಚಯವಾಗುತ್ತದೆ ಎಂಬು ಸಿದ್ಧವಾಯಿತು.

## ಅಧ್ಯಾಯದ ಸಂಬಂಧ

"ಕರ್ಮಕ್ಕಿಂತ ಜ್ಞಾನವು ಹೆಚ್ಚೆಂದು ನಿನ್ನ ಮತವಾದರೆ" (೩-೧) ಎಂಬಲ್ಲಿ ಜ್ಞಾನಕರ್ಮಗಳೆರಡೂ ಒಟ್ಟಿಗೆ ಒಬ್ಬನಲ್ಲಿರಲಾರವೆಂಬುದರ ಮೇಲೆ ಅರ್ಜುನನು "ಇವೆರಡರಲ್ಲಿ ಯಾವದು ಉತ್ತಮವೋ ಅದನ್ನು ಹೇಳು" (೩-೨) ಎಂದು ಕೇಳಲು ಭಗವಂತನು "ಸಾಂಖ್ಯರಾದ ಸಂನ್ಯಾಸಿಗಳಿಗೆ ಜ್ಞಾನಯೋಗದಿಂದ ನಿಷ್ಠೆಯನ್ನೂ ಕರ್ಮಯೋಗಿಗಳಿಗೆ ಕರ್ಮಯೋಗದಿಂದ ನಿಷ್ಠೆಯನ್ನೂ ನಾನು ಹೇಳಿರುತ್ತೇನೆ" * (೩-೩)—ಎಂದು ನಿರ್ಣಯವನ್ನು ಮಾಡಿದನು. "ಬರಿಯ ಸಂನ್ಯಾಸದಿಂದಲೇ ಸಿದ್ಧಿಯನ್ನು ಪಡೆಯುವದೂ ಇಲ್ಲ" (೩-೪) ಎಂದು ಹೇಳಿರುವದರಿಂದ ಜ್ಞಾನದಿಂದ ಕೂಡಿದ (ಸಂನ್ಯಾಸವು) ಸಿದ್ಧಿಗೆ ಸಾಧನವಾಗಿರುವದೆಂದು ಹೇಳಿದಂತೆ ಆಯಿತು; ಕರ್ಮಯೋಗವನ್ನು ವಿಧಿಸಿರುವದರಿಂದ (ಅದೂ ಸಿದ್ಧಿಗೆ ಸಾಧನವಾಗಿರುವದೆಂದು ಹೇಳಿದಂತೆ ಆಯಿತು). ಜ್ಞಾನವಿಲ್ಲದವನಿಗೆ ಸಂನ್ಯಾಸವೇ ಉತ್ತಮವೋ, ಕರ್ಮಯೋಗವೇ ಉತ್ತಮವೋ ? ಎಂದು ವಿಶೇಷವನ್ನು ತಿಳಿಯುವದಕ್ಕಾಗಿ—

**ಅರ್ಜುನ ಉವಾಚ —**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧ ॥**

ಅರ್ಜುನನು ಹೇಳಿದ್ದು :—

೧. ಕೃಷ್ಣನೆ, ಕರ್ಮಗಳ ಸಂನ್ಯಾಸವನ್ನೂ ಮತ್ತೆ ಯೋಗವನ್ನೂ ಹೊಗಳುತ್ತಿದ್ದೀಯೆ. ಇವೆರಡರಲ್ಲಿ ಯಾವದು ಒಳ್ಳೆಯದೊ ಅದನ್ನು ಸುನಿಶ್ಚಿತವಾಗಿ ನನಗೆ ಹೇಳು.

[ ಭಾಷ್ಯ ]

ಕರ್ಮಗಳ ಸಂನ್ಯಾಸವನ್ನು ಎಂದರೆ ಶಾಸ್ತ್ರದಲ್ಲಿ† ಮಾಡೆಂದು ಹೇಳಿರುವ ಕರ್ಮಗಳನ್ನು ಬಿಟ್ಟುಬಿಡುವಿಕೆಯನ್ನೂ (ಹೊಗಳುತ್ತಿದ್ದೀಯೆ) ಮತ್ತೆ ಅವು

* ಇದು ೩-೩ರ ತಾತ್ಪರ್ಯಮಾತ್ರವಾಗಿರುತ್ತದೆ. ಈ ವಾಕ್ಯದಲ್ಲಿ ಮೂಲದಲ್ಲಿರುವ 'ಪುನಃ' ಎಂಬ ಮಾತು ಮು|| ಪಾಠದಲ್ಲಿಲ್ಲ, ಬೇಕಾಗಿಯೂ ಇಲ್ಲ.

† ಕರ್ಮವೆಂಬ ಮಾತು ಇಲ್ಲಿ ಶಾಸ್ತ್ರೀಯಕರ್ಮಕ್ಕೆ ಮಾತ್ರ ಹತ್ತುವದು. ಗೀತಾರ್ಥ ದರ್ಪಣದಲ್ಲಿ ಸಂನ್ಯಾಸವಿಚಾರದ ಚರ್ಚೆಯಲ್ಲಿ ಈ ವಿಷಯವನ್ನು ವಿವರಿಸಿದೆ.

ಗಳ ಯೋಗವನ್ನೂ ಎಂದರೆ ಅದೇ ಕರ್ಮಗಳನ್ನು ಅವಶ್ಯವಾಗಿ ಮಾಡಬೇಕೆಂಬುದನ್ನೂ ಹೇಳುತ್ತಿರುವೆ. ಆದ್ದರಿಂದ ಇವುಗಳಲ್ಲಿ ಯಾವದು ಉತ್ತಮವೆಂಬುವ ವಿಷಯದಲ್ಲಿ ಸಂದೇಹವಾಗಿರುವದು. ಕರ್ಮಗಳನ್ನು ಮಾಡುವದು ಮೇಲೊ, ಅವುಗಳನ್ನು ಕೈಬಿಡುವದೇ ಮೇಲೊ? ಯಾವದು ಮೇಲಾದದ್ದೋ ಅದನ್ನೇ ಮಾಡತಕ್ಕದ್ದು. ಆದ್ದರಿಂದ ಇವುಗಳಲ್ಲಿ ಯಾವದು ಒಳ್ಳೆಯದೋ ಕರ್ಮಸಂನ್ಯಾಸ, ಕರ್ಮಯೋಗ– ಈ ಎರಡರಲ್ಲಿ ಯಾವದು ಮೇಲಾದದ್ದೋ, ಯಾವದನ್ನು ಮಾಡಿದರೆ ನನಗೆ ಒಳ್ಳೆಯದಾಗುವದೆಂದು ನಿನ್ನ ಅಭಿಪ್ರಾಯವೋ ಇವೆರಡರಲ್ಲಿ ಆ ಒಂದನ್ನೇ– ಏಕೆಂದರೆ ಎರಡನ್ನೂ ಒಬ್ಬ ಪುರುಷನೇ ಮಾಡುವದಕ್ಕೆ ಆಗುವಂತಿಲ್ಲ, (ಒಂದನ್ನೇ)— ಸುನಿಶ್ಚಿತವಾಗಿ 'ಇದೇ ನನ್ನ ಅಭಿಪ್ರಾಯವು' ಎಂದು ಹೇಳಿಬಿಡು.

ಆತ್ಮವನ್ನರಿಯದವನಿಗೆ ಕರ್ಮಯೋಗವೇ ಹೆಚ್ಚಿನದು

**ಶ್ರೀ ಭಗವಾನುವಾಚ—**

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ೨ ॥**

೨. ಭಗವಂತನು ಹೇಳಿದ್ದೇನೆಂದರೆ:—

ಸಂನ್ಯಾಸವೂ ಕರ್ಮಯೋಗವೂ ಈ ಎರಡೂ ನಿಃಶ್ರೇಯಸವನ್ನುಂಟುಮಾಡುತ್ತವೆ. ಆದರೆ ಇವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಹೆಚ್ಚಿನದಾಗಿರುವದು.

[ಭಾಷ್ಯ]

ತನ್ನ ಅಭಿಪ್ರಾಯವನ್ನು ಕೇಳಿ ನಿರ್ಣಯಮಾಡುವದಕ್ಕಾಗಿ ಭಗವಂತನು ಹೇಳಿದ್ದೇನೆಂದರೆ, ಸಂನ್ಯಾಸವು ಎಂದರೆ ಕರ್ಮಗಳನ್ನು ಬಿಡುವದು, ಕರ್ಮಯೋಗವು ಎಂದರೆ ಅವುಗಳನ್ನು ಮಾಡುವದು– ಈ ಎರಡೂ ನಿಃಶ್ರೇಯಸವನ್ನು ಉಂಟುಮಾಡುತ್ತವೆ. ಜ್ಞಾನವುಂಟಾಗುವದರ ಕಾರಣವಾಗಿ (ಆ ಮೂಲಕ) ಮೋಕ್ಷವನ್ನು ಕೊಡುತ್ತವೆ. ಆದರೆ ಈ ಎರಡೂ ನಿಃಶ್ರೇಯಸವನ್ನುಂಟುಮಾಡುವವುಗಳಾಗಿದ್ದಾಗ್ಯೂ, ನಿಃಶ್ರೇಯಸಕ್ಕೆ ಕಾರಣವಾಗಿರುವ ಈ ಎರಡರಲ್ಲಿ, ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು- ಎಂದು ಕರ್ಮಯೋಗವನ್ನು ಹೊಗಳುತ್ತಿದ್ದಾನೆ.*

* ಕರ್ಮಯೋಗವನ್ನು ಹೊಗಳುವದಕ್ಕೆ ಈ ಮಾತನ್ನು ಹೇಳಿದೆಯೇ ಹೊರತು, ಸಂನ್ಯಾಸವು ಕಡಿಮೆಯೆನ್ನುವದಕ್ಕಲ್ಲ. ಮುಂದಿನ ಅಧ್ಯಾಯದ ೧ನೆಯ ಶ್ಲೋಕದ ಭಾಷ್ಯವನ್ನು ನೋಡಿರಿ. ಕರ್ಮಯೋಗದ ಅಧಿಕ್ಯದ ವಿಷಯದಲ್ಲಿ ಹೇಳಿರುವ ವಾಕ್ಯಗಳ ತಾತ್ಪರ್ಯವನ್ನು ಗೀತಾರ್ಥಸರ್ವಸ್ವದಲ್ಲಿ ನಿರ್ಣಯಿಸಿದೆ.

ಅದೇಕೆ ? ಎಂದರೆ ಹೇಳುತ್ತಾನೆ :—

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ ಪ್ರಮುಚ್ಯತೇ ॥ ೩ ॥**

೩. ಯಾವನು ದ್ವೇಷಿಸುವದಿಲ್ಲವೋ ಆಶಿಸುವದಿಲ್ಲವೋ ಅವನು ನಿತ್ಯ ಸಂನ್ಯಾಸಿಯೆಂದು ತಿಳಿಯತಕ್ಕದ್ದು ; ಏಕೆಂದರೆ ಎಲೈ ಮಹಾಬಾಹುವೆ, ದ್ವಂದ್ವ ಗಳಿಲ್ಲದವನಾದ್ದರಿಂದ ಅವನು ಸುಖವಾಗಿ ಬಂಧದಿಂದ ಮುಕ್ತನಾಗುತ್ತಾನೆ.

[ಭಾಷ್ಯ]

ಯಾವ ಕರ್ಮಯೋಗಿಯು ಹಗೆಮಾಡುವದಿಲ್ಲವೋ ಯಾವದನ್ನೂ ಬಯ ಸುವದೆ ಇಲ್ಲವೋ ಎಂದರೆ ದುಃಖಸುಖಗಳನ್ನಾಗಲಿ ಅವುಗಳಿಗೆ ಕಾರಣವಾಗಿರು ವವನ್ನಾಗಲಿ (ಯಾವನು ಹಗೆಮಾಡದೆ ಬಯಸದೆ ಇರುವನೋ) ಅವನು ಕರ್ಮ ದಲ್ಲಿಯೇ ಇರುತ್ತಿದ್ದರೂ ನಿತ್ಯಸಂನ್ಯಾಸಿಯೆಂದೇ ತಿಳಿಯಬೇಕು. ಏಕೆಂದರೆ ಅವನು ದ್ವಂದ್ವಗಳಿಲ್ಲದವನಾದ ಕಾರಣ, ಎಲೈ ಮಹಾಬಾಹುವಾದ (ಅರ್ಜುನನೆ), ಸುಖವಾಗಿ ಎಂದರೆ ಯಾವ ಆಯಾಸವೂ ಇಲ್ಲದೆಯೇ ಬಂಧದಿಂದ ಬಿಡುಗಡೆ ಯನ್ನು ಹೊಂದುತ್ತಾನೆ.

## ಸಾಂಖ್ಯಯೋಗಗಳಿಗೆ ಇರುವ ಸಂಬಂಧ.

ಸಂನ್ಯಾಸ, ಕರ್ಮಯೋಗ-ಇವು ಬೇರೆಬೇರೆಯ ಜನರು ಮಾಡತಕ್ಕವು ಗಳು, ಮತ್ತು ಒಂದಕ್ಕೊಂದು ವಿರುದ್ಧವಾಗಿವೆ. (ಆದ್ದರಿಂದ) ಇವುಗಳ ಫಲ ಗಳು (ಒಂದಕ್ಕೊಂದು) ವಿರೋಧವಾಗಿರುವವೆಂಬುದೇ ನ್ಯಾಯವೇ ಹೊರತು ಎರಡೂ ನಿಃಶ್ರೇಯಸಕ್ಕೆ ಕಾರಣವೆಂಬುದು ನ್ಯಾಯವಲ್ಲ-ಎಂಬ ಆಕ್ಷೇಪಕ್ಕೆ ಈ (ಉತ್ತರವನ್ನು) ಹೇಳುತ್ತಾನೆ :—

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿನ್ದತೇ ಫಲಮ್ ॥ ೪ ॥**

೪. ಸಾಂಖ್ಯಯೋಗಗಳು ಬೇರೆಬೇರೆಯೆಂದು ಹುಡುಗರು ಹೇಳುವರೇ ಹೊರತು ಪಂಡಿತರು (ಹೇಳರು.) (ಇವುಗಳಲ್ಲಿ) ಒಂದನ್ನೆ ಆಗಲಿ ಚೆನ್ನಾಗಿ ಇಟ್ಟುಕೊಂಡಿರುವವನು ಎರಡರ ಫಲವನ್ನೂ ಪಡೆಯುತ್ತಾನೆ.

[ ಭಾಷ್ಯ ]

ಸಾಂಖ್ಯಯೋಗಗಳು ಬೇರೆಬೇರೆ, ವಿರುದ್ಧವಾದ ಫಲವುಳ್ಳವು- ಎಂದು (ತಿಳಿಯದ) ಹುಡುಗರು ಹೇಳುತ್ತಾರೆಯೇ ಹೊರತು ಪಂಡಿತರು ಹೇಳರು. ತಿಳಿದವರಾದ ಪಂಡಿತರು (ಇವೆರಡಕ್ಕೆ) ಒಂದೇ ಫಲ, (ಇವುಗಳಿಗೆ) ಯಾವ

ವಿರೋಧವೂ ಇಲ್ಲ–ಎಂದು ಹೇಳುತ್ತಾನೆ. ಅದು ಹೇಗೆಂದರೆ, (ಈ) ಸಾಂಖ್ಯ ಯೋಗಗಳಲ್ಲಿ (ಯಾವದಾದ)ರೊಂದನ್ನು ಚೆನ್ನಾಗಿಟ್ಟುಕೊಂಡಿದ್ದರೂ ಎಂದರೆ ಸರಿಯಾಗಿ ನಡೆಸುತ್ತಿದ್ದರೂ ಎಂದರ್ಥ; ಎರಡರ ಫಲವನ್ನೂ ಪಡೆಯುತ್ತಾನೆ ಇವೆರಡಕ್ಕೂ ಫಲವು ಅದೇ ಮೋಕ್ಷವು; ಆದ್ದರಿಂದ ಫಲದಲ್ಲಿ ಯಾವ ವಿರೋಧವೂ ಇಲ್ಲ.

(ಆಕ್ಷೇಪ):—'ಸಂನ್ಯಾಸ', 'ಕರ್ಮಯೋಗ'– ಎಂಬ ಮಾತುಗಳಿಂದ ಪ್ರಾರಂಭಿಸಿ "ಸಾಂಖ್ಯಯೋಗಗಳೆರಡಕ್ಕೂ ಫಲವೊಂದೇ" ಎಂದು ಪ್ರಕೃತವಲ್ಲದ್ದನ್ನು ಹೇಳಿದನಲ್ಲ, ಇದು ಹೇಗೆ (ಸರಿ)?

(ಪರಿಹಾರ):—ಇದೇನೂ ತಪ್ಪಲ್ಲ. ಅರ್ಜುನನು ಬರಿಯ ಸಂನ್ಯಾಸವನ್ನೂ ಕರ್ಮವನ್ನೂ ಇಟ್ಟುಕೊಂಡು ಪ್ರಶ್ನೆಮಾಡಿದ್ದು ನಿಜ; ಆದರೆ ಭಗವಂತನು ಅವನು ಕೇಳಿದ್ದನ್ನೂ ಬಿಡದೆ ತನ್ನ ಅಭಿಪ್ರಾಯವಾದ ವಿಶೇಷವನ್ನೂ ಸೇರಿಸಿ (ಬೇರೆ ಮಾತುಗಳಿಂದ ಅವನ್ನೇ) ಸಾಂಖ್ಯಯೋಗಗಳೆಂದು ಕರೆದು ಉತ್ತರವನ್ನು ಹೇಳಿರುತ್ತಾನೆ. ಅದೇ ಸಂನ್ಯಾಸಕರ್ಮಯೋಗಗಳೇ * ಜ್ಞಾನ ಮತ್ತು ಅದರ ಸಾಧನವಾದ ಸಮಬುದ್ಧಿ ಮುಂತಾದವುಗಳಿಂದ ಕೂಡಿದರೆ 'ಸಾಂಖ್ಯ', 'ಯೋಗ'- ಎಂಬ ಹೆಸರಿಗೆ ತಕ್ಕವುಗಳಾಗುವವು ಎಂಬುದು ಭಗವಂತನ ಮತವು. ಆದ್ದರಿಂದ ಇಲ್ಲಿ ಪ್ರಕೃತವಲ್ಲದ್ದನ್ನೇನೂ ಹೇಳಿದಂತೆ ಆಗಲಿಲ್ಲ.

ಒಂದನ್ನು ಚೆನ್ನಾಗಿ ನಡೆಸಿದರೆ ಎರಡರ ಫಲವನ್ನೂ ಪಡೆಯುವನೆಂಬುದು ಹೇಗೆ? ಎಂದರೆ ಹೇಳುತ್ತಾನೆ:—

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

೫. ಸಾಂಖ್ಯರಿಗೆ ದೊರೆಯುವ ಸ್ಥಾನವು ಯಾವದೋ ಅದು ಯೋಗಿಗಳಿಗೂ ದೊರಕುವದು; ಸಾಂಖ್ಯವೂ ಯೋಗವೂ ಒಂದೆಂದು ಯಾವನು ಅರಿಯುವನೋ ಅವನೇ ಅರಿತವನು.

[ಭಾಷ್ಯ]

ಜ್ಞಾನನಿಷ್ಠರೂ ಸಂನ್ಯಾಸಿಗಳೂ ಆದ ಸಾಂಖ್ಯರಿಗೆ ಮೋಕ್ಷವೆಂಬ ಯಾವ ಸ್ಥಾನವು ದೊರೆಯುವದೋ ಅದು ಯೋಗಿಗಳಿಗೂ- ಜ್ಞಾನಪ್ರಾಪ್ತಿಗೆ ಇದು ಸಾಧನವೆಂದು ಈಶ್ವರನಿಗೆ ಕರ್ಮಗಳನ್ನು ಸಮರ್ಪಿಸಿ ಫಲವನ್ನು ಮನಸ್ಸಿಗೆ

* ಸಂನ್ಯಾಸಕ್ಕೆ ಜ್ಞಾನವೂ ಸೇರಿದರೆ ಅದಕ್ಕೆ ಸಾಂಖ್ಯವೆಂದು ಹೆಸರಾಗುವದು; ಕರ್ಮಕ್ಕೆ ಸಮಬುದ್ಧಿಯೂ ಸಂಗವಾಗಲಿ ಫಲಾಶೆಯಾಗಲಿ ಇಲ್ಲದಿರುವದೂ ಸೇರಿದರೆ ಅದಕ್ಕೆ ಯೋಗವೆಂದು ಹೆಸರಾಗುವದು–ಎಂದು ಭಾವ.

ತರದೆ (ಕರ್ಮವನ್ನು) ಮಾಡುವವರು ಯೋಗಿಗಳು ; ಅವರಿಗೂ - ಪರಮಾರ್ಥ ಜ್ಞಾನವನ್ನೂ ಸಂನ್ಯಾಸವನ್ನೂ ಪಡೆಯುವ ಮೂಲಕ- ದೊರೆಯುವದು ಎಂದಭಿಪ್ರಾಯ. ಆದ್ದರಿಂದ ಇವೆರಡಕ್ಕೂ ಫಲವು ಒಂದೇ ಎಂಬ ಕಾರಣದಿಂದ ಸಾಂಖ್ಯವೂ ಯೋಗವೂ ಒಂದೇ ಎಂದು ಯಾವನು ಅರಿಯುವನೋ ಅವನು ಅರಿತವನು, ಸರಿಯಾಗಿ ತಿಳಿದವನು ಎಂದರ್ಥ.

(ಆಕ್ಷೇಪ):—ಹಾಗಾದರೆ ಯೋಗಕ್ಕಿಂತಲೂ ಸಂನ್ಯಾಸವೇ ಹೆಚ್ಚಿನದೆಂದಾಯಿತು. ಹೀಗಿರುವಲ್ಲಿ "ಇವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತಲೂ ಕರ್ಮಯೋಗವೇ ಹೆಚ್ಚಿನದು" (೫-೨) ಎಂದು ಹೇಳಿದೆಯಲ್ಲ, ಇದು ಹೇಗೆ ಸರಿ?

(ಪರಿಹಾರ):—ಅದಕ್ಕೆ ಕಾರಣವನ್ನು ಕೇಳು. ನೀನು ಬರಿಯ ಕರ್ಮಸಂನ್ಯಾಸವನ್ನೂ ಕರ್ಮಯೋಗವನ್ನೂ ಮನಸ್ಸಿನಲ್ಲಿಟ್ಟುಕೊಂಡು "ಇವೆರಡರಲ್ಲಿ ಯಾವದು ಒಳ್ಳೆಯದು ?" ಎಂದು ಕೇಳಿದೆ. ಅದಕ್ಕೆ ತಕ್ಕಂತೆ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲೆಂದು, ನಾನೂ ಜ್ಞಾನವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆಯೇ ಉತ್ತರಕೊಟ್ಟೆನು. ಆದರೆ **ಜ್ಞಾನದಿಂದೊಡಗೂಡಿದ ಸಂನ್ಯಾಸವು 'ಸಾಂಖ್ಯವು' ಎಂದು ನನ್ನ ಅಭಿಪ್ರಾಯವು. ನಿಜವಾಗಿ ನೋಡಿದರೆ ಇದೇ ಯೋಗವು. ವೇದದಲ್ಲಿ ವಿಧಿಸಿರುವ ಕರ್ಮಯೋಗವೂ ಎಂದರೆ, ಈ ಯೋಗಕ್ಕೆ ಕಾರಣವಾಗಿರುವದೆಂಬುದರ ಮೇಲೆ ಅದನ್ನೂ ಯೋಗವೆಂದೂ ಸಂನ್ಯಾಸವೆಂದೂ ಉಪಚಾರಕ್ಕೆ ಕರೆದಿರುತ್ತದೆ.**

ಈ (ಯೋಗಕ್ಕೆ ಕರ್ಮಯೋಗವು) ಕಾರಣವೆಂಬುದು ಹೇಗೆ ? ಎಂದರೆ ಹೇಳುತ್ತೇನೆ ಕೇಳು :—

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

೬. ಆದರೆ, ಎಲೈ ಮಹಾಬಾಹುವೆ, ಸಂನ್ಯಾಸವು ಯೋಗವಿಲ್ಲದೆ ದೊರಕುವದು ಕಷ್ಟ; ಯೋಗದಿಂದ ಕೂಡಿರುವ ಮುನಿಯು ಬ್ರಹ್ಮವನ್ನು ಬೇಗನೆ ಪಡೆಯುತ್ತಾನೆ.

[ಭಾಷ್ಯ]

ಆದರೆ ಪರಮಾರ್ಥವಾದ ಸಂನ್ಯಾಸವು, ಎಲೈ ಮಹಾಬಾಹುವಾದ (ಅರ್ಜುನನೆ), ಯೋಗವಿಲ್ಲದೆ ದೊರೆಯುವದು ಕಷ್ಟ. ಫಲದಲ್ಲಿ ಆಶೆಯಿಲ್ಲದೆ ಈಶ್ವರನಿಗೆ ಅರ್ಪಣೆಮಾಡುವಂಥ ವೈದಿಕವಾದ ಕರ್ಮಯೋಗದಿಂದ ಕೂಡಿದ ಮುನಿಯು— ಈಶ್ವರಸ್ವರೂಪವನ್ನು ಕುರಿತು ಮನನಮಾಡುತ್ತಿರುವಾತನು ಮುನಿಯೆನಿಸುವನು. (ಅಂಥ ಮುನಿಯು)—ಬ್ರಹ್ಮವನ್ನು ಬೇಗನೆ ಪಡೆಯು

ತ್ತಾನೆ. ಈ ಪ್ರಕರಣದಲ್ಲಿ ಬಂದಿರುವ ಸಂನ್ಯಾಸವನ್ನೆ ಇಲ್ಲಿ ಬ್ರಹ್ಮವೆಂದು ಕರೆದಿರುತ್ತದೆ; ಪರಮಾತ್ಮನ ಜ್ಞಾನರೂಪವಾಗಿರುವದರಿಂದ (ಇದನ್ನು ಬ್ರಹ್ಮವೆಂದು ಕರೆಯಬಹುದಾಗಿದೆ.) "ನ್ಯಾಸವೆಂದರೆ ಬ್ರಹ್ಮವು. ಬ್ರಹ್ಮವೇ ಹೆಚ್ಚಿನದು" (ತೈ. ಆ.) ಎಂಬ ಶ್ರುತಿಯೂ (ಸಂನ್ಯಾಸವನ್ನು ಬ್ರಹ್ಮವೆಂದು ಕರೆಯಬಹುದೆಂಬುದಕ್ಕೆ) ಪ್ರಮಾಣವು. ಪರಮಾತ್ಮಜ್ಞಾನದಲ್ಲಿಯೇ ನಿಲ್ಲುವದೆಂಬ ಪರಮಾರ್ಥಸಂನ್ಯಾಸವನ್ನು (ಕರ್ಮಯೋಗದಿಂದ ಕೂಡಿದಾತನು) ಬೇಗನೆ ಪಡೆಯುತ್ತಾನೆ; ಆದ್ದರಿಂದ ಕರ್ಮಯೋಗವು ಹೆಚ್ಚಿನದೆಂದು ನಾನು ಹೇಳಿದೆನು.

## ಕರ್ಮಯೋಗಿಗಾಗಲಿ ಜ್ಞಾನಿಗಾಗಲಿ ಕರ್ಮದ ಲೇಪವಿಲ್ಲ

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

೭. ಯೋಗದಿಂದ ಕೂಡಿದವನು ವಿಶುದ್ಧಾತ್ಮನಾಗಿಯೂ ವಿಜಿತಾತ್ಮನಾಗಿಯೂ ಜಿತೇಂದ್ರಿಯನಾಗಿಯೂ ಸರ್ವಭೂತಗಳಿಗೂ ಆತ್ಮನಾಗಿರುವ ಆತ್ಮವುಳ್ಳವನಾಗಿಯೂ ಆಗಿ ಕರ್ಮವನ್ನು ಮಾಡುತ್ತಿದ್ದರೂ ಅವನಿಗೆ ಲೇಪವಾಗುವದಿಲ್ಲ.

[ಭಾಷ್ಯ]

ಯಾವಾಗ ಈ ಸಾಧಕನು ಸರಿಯಾದ ಜ್ಞಾನಕ್ಕೆ ಸಾಧನವಾಗಿ ಯೋಗದಿಂದ ಕೂಡಿರುವನೋ, (ಆಗ) ವಿಶುದ್ಧಾತ್ಮನಾಗಿ ಎಂದರೆ ಸತ್ತ್ವವು ಚೆನ್ನಾಗಿ ಶುದ್ಧಿಯಾದವನಾಗಿ; ವಿಜಿತಾತ್ಮನಾಗಿ ಎಂದರೆ ದೇಹವನ್ನು ಚೆನ್ನಾಗಿ ತನ್ನ ವಶದಲ್ಲಿ ಇಟ್ಟುಕೊಂಡು; ಜಿತೇಂದ್ರಿಯನಾಗಿ (ಎಂದರೆ ಇಂದ್ರಿಯಗಳನ್ನು ಗೆದ್ದುಕೊಂಡು;) ಸರ್ವಭೂತಾತ್ಮಭೂತಾತ್ಮನಾಗಿ ಎಂದರೆ ಬ್ರಹ್ಮನಿಂದ ಹಿಡಿದು ಸ್ತಂಬದವರೆಗಿನ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿರುವವನೇ ತನ್ನೊಳಗಿರುವ ಚೇತನರೂಪನಾದ ಆತ್ಮನೆಂದು ಸರಿಯಾದ ಜ್ಞಾನವನ್ನು ಹೊಂದಿ ಎಂದರ್ಥ. ಹೀಗೆ ಇರುವ ಈತನು ಲೋಕಸಂಗ್ರಹಕ್ಕೆಂದು ಕರ್ಮವನ್ನು ಮಾಡುತ್ತಿದ್ದರೂ ಅವನಿಗೆ ಲೇಪವಾಗುವದಿಲ್ಲ, ಎಂದರೆ ಅವನು ಕರ್ಮಗಳಿಗೆ ಕಟ್ಟುಬೀಳುವದಿಲ್ಲ ಎಂದರ್ಥ.

ನಿಜವಾಗಿ ನೋಡಿದರೆ ಇವನು ಕರ್ಮವನ್ನು ಮಾಡುವದೂ ಇಲ್ಲ. ಆದ್ದರಿಂದ,—

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯಞ್ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥೮॥**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥ ೯ ॥**

೮-೯. ತತ್ತ್ವಜ್ಞಾನಿಯು (ತಾನು) ನೋಡುವಾಗಲೂ ಕೇಳು ವಾಗಲೂ ಮುಟ್ಟುವಾಗಲೂ ಮೂಸುವಾಗಲೂ ತಿನ್ನುವಾಗಲೂ ನಡೆ ಯುವಾಗಲೂ ನಿದ್ರಿಸುವಾಗಲೂ ಉಸಿರುಬಿಡುವಾಗಲೂ ಮಾತಾಡುವಾಗಲೂ ಬಿಡುವಾಗಲೂ ತೆಗೆದುಕೊಳ್ಳುವಾಗಲೂ ಕಣ್ಣುಬಿಡುವಾಗಲೂ ಕಣ್ಣುಮುಚ್ಚು ವಾಗಲೂ ಇಂದ್ರಿಯಗಳು ಇಂದ್ರಿಯಾರ್ಥಗಳಲ್ಲಿ ತೊಡಗಿವೆ ಎಂದು ಯುಕ್ತ ನಾಗೆಣಿಸಿಕೊಂಡು ನಾನು ಏನೂ ಮಾಡುವದಿಲ್ಲ ಎಂದು ತಿಳಿಯಬೇಕು.

[ಭಾಷ್ಯ]

ಯುಕ್ತನಾಗಿ ಎಂದರೆ ಸಮಾಹಿತನಾಗಿ. ತತ್ತ್ವಜ್ಞಾನಿಯು ಎಂದರೆ ಆತ್ಮನ ನಿಜವನ್ನು ಬಲ್ಲವನಾಗಿ ಪರಮಾರ್ಥವನ್ನು ಕಂಡುಕೊಂಡಿರುವಾತನು ಎಂದರ್ಥ. (ಆತನು) 'ನಾನೇನೂ ಮಾಡುತ್ತಿರುವದಿಲ್ಲ' ಎಂದು ತಿಳಿದುಕೊಳ್ಳಬೇಕು.*

ಯಾವಾಗ, ಹೇಗೆ ತತ್ತ್ವವನ್ನು ನಿಶ್ಚಯಿಸಿಕೊಂಡವನಾಗಿ ( 'ನಾನೇನೂ ಮಾಡುವದಿಲ್ಲ' ಎಂದು) ತಿಳಿದುಕೊಳ್ಳಬೇಕು? ಎಂದರೆ ಇದಕ್ಕೆ ಉತ್ತರ: ನೋಡು ವಾಗಲೂ ಇತ್ಯಾದಿ. ('ಪಶ್ಯನ್' ನೋಡುವಾಗಲೂ ಎಂಬುದೇ ಮುಂತಾ ಪದಗಳನ್ನು) 'ಮನ್ಯೇತ' ಎಂಬ ಹಿಂದಿನ ಮಾತಿಗೆ ಅನ್ವಯಿಸಿಕೊಳ್ಳಬೇಕು. ಹೀಗೆ ಯಾವನು ತತ್ತ್ವವನ್ನು ಬಲ್ಲವನಾಗಿ ಸಕಲವಿಧವಾದ ದೇಹೇಂದ್ರಿಯಗಳ ವ್ಯಾಪಾರರೂಪವಾಗಿರುವ ಕರ್ಮಗಳೂ ಅಕರ್ಮವೇ ಎಂದು ತಿಳಿದುಕೊಂಡಿರು ವನೋ ಅಂಥ ಸರಿಯಾದ ತಿಳಿವಳಿಕೆಯುಳ್ಳಾತನಿಗೆ ಸರ್ವಕರ್ಮಸಂನ್ಯಾಸದಲ್ಲಿ ಯೇ ಅಧಿಕಾರವು; ಏಕೆಂದರೆ ಆತನು (ತನಗೆ) ಕರ್ಮವೇ ಇಲ್ಲವೆಂಬುದನ್ನು ಕಂಡುಕೊಂಡಿರುತ್ತಾನೆ. ಬಿಸಿಲುಕುದುರೆಯಲ್ಲಿ ಅದು ನೀರೆಂಬ ಬುದ್ಧಿಯಿಂದ ಕುಡಿಯುವದಕ್ಕೆ ಹೊರಟಾತನು ಅದು ನೀರಲ್ಲವೆಂಬ ಅರಿವು ಉಂಟಾದ ಮೇಲೂ ನೀರುಕುಡಿಯುವದೆಂಬ ಪ್ರಯೋಜನವು ತನಗೆ ಆಗಬೇಕೆಂದು ಅದರಲ್ಲಿಯೇ (ಮತ್ತೆ) ಪ್ರವರ್ತಿಸಲಾರನಲ್ಲವೆ? (ಅದರಂತೆಯೇ ಇಲ್ಲಿಯೂ ತಿಳಿಯಬೇಕು.)

---

* ಜ್ಞಾನಿಗೆ ಹೀಗೆ ನೀನು ತಿಳಿಯಬೇಕೆಂದು ಕಟ್ಟುಮಾಡುವದಕ್ಕೆ ಆಗುವದಿಲ್ಲ. ಆದ್ದ ರಿಂದ ಅವನು ಸರ್ವಕರ್ಮಸಂನ್ಯಾಸಕ್ಕೇ ತಕ್ಕವನೆಂದು ಜ್ಞಾನದ ಫಲವನ್ನೇ ಇಲ್ಲಿ ತಿಳಿಸಿದೆಯೆಂದು ಭಾವಿಸಬೇಕು. ಇದು ವಿದ್ಯಾಸಾಮರ್ಥ್ಯದಿಂದ ತಾನೇ ಉಂಟಾಗುವ ಸಂನ್ಯಾಸವಾದ್ದರಿಂದ ಪ್ರತಿ ಪತ್ತಿಕರ್ಮದಂತೆ ಇದನ್ನು ತಿಳಿಯಬೇಕು– ಎಂದು ಆ॥ ವ್ಯಾಖ್ಯಾನಕಾರರು ತಿಳಿಸುತ್ತಾರೆ. ಜ್ಞಾನಿಯ ಸಂಬಂಧದಲ್ಲಿ ಬರುವ ವಿಧಿವಾಕ್ಯಗಳ ತಾತ್ಪರ್ಯವನ್ನು ಗೀತಾರ್ಥಸರ್ವಸ್ವದಲ್ಲಿ ವಿವರಿಸಿದೆ.

ಆದರೆ ಯಾವನು ತತ್ತ್ವವನ್ನರಿತವನಲ್ಲದೆ ಕರ್ಮಯೋಗದಲ್ಲಿ ತೊಡಗಿರುವನೋ, (ಆತನು)—

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ ॥ ೧೦ ॥**

೧೦. ಬ್ರಹ್ಮದಲ್ಲಿ ಕರ್ಮಗಳನ್ನು ಇಟ್ಟು ಸಂಗವನ್ನು ಬಿಟ್ಟು ಯಾವಾತನು ಕರ್ಮವನ್ನು ಮಾಡುತ್ತಿರುವನೋ ಅವನಿಗೆ ತಾವರೆಯೆಲೆಗೆ ನೀರಿನ ಲೇಪವಿಲ್ಲದಿರುವಂತೆ ಪಾಪದ ಲೇಪವಾಗುವದಿಲ್ಲ.

[ ಭಾಷ್ಯ ]

ಬ್ರಹ್ಮದಲ್ಲಿ ಎಂದರೆ ಈಶ್ವರನಲ್ಲಿ ಸಕಲಕರ್ಮಗಳನ್ನು ಇಟ್ಟು ಅವನಿಗಾಗಿ ಮಾಡುತ್ತಿದ್ದೇನೆಂದು ಧಣಿಗಾಗಿ ಕೆಲಸಮಾಡುವ ಆಳಿನಂತೆ ಮೋಕ್ಷವೆಂಬ ಫಲದಲ್ಲಿಯೂ ಸಂಗವನ್ನು ಬಿಟ್ಟು ಯಾವನು ಸರ್ವಕರ್ಮಗಳನ್ನೂ ಮಾಡುತ್ತಿರುವನೋ, ಅವನಿಗೆ ಕಮಲದೆಲೆಗೆ ನೀರು ಅಂಟಿಕೊಳ್ಳದೆ ಇರುವ ಹಾಗೆ ಪಾಪವು ಅಂಟಿಕೊಳ್ಳದೆ ಇರುವದು. ಬರಿಯ ಸತ್ತ್ವಶುದ್ಧಿಯೆಂಬ ಫಲವೊಂದೇ ಆತನ ಕರ್ಮಕ್ಕೆ ಆಗುವದು.

ಏಕೆಂದರೆ,

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂ ತ್ಯಕ್ತ್ವಾತ್ಮಶುದ್ಧಯೇ ॥ ೧೧ ॥**

೧೧. ಕಾಯದಿಂದಲೂ ಮನಸ್ಸಿನಿಂದಲೂ ಬುದ್ಧಿಯಿಂದಲೂ ಕೇವಲ ಇಂದ್ರಿಯಗಳಿಂದಲೂ ಯೋಗಿಗಳು ಸಂಗವನ್ನು ಬಿಟ್ಟು ಆತ್ಮಶುದ್ಧಿಗಾಗಿ ಕರ್ಮವನ್ನು ಮಾಡುತ್ತಿರುವರು.

[ ಭಾಷ್ಯ ]

ಕಾಯದಿಂದಲೂ ಎಂದರೆ ಶರೀರದಿಂದಲೂ ಮನಸ್ಸಿನಿಂದಲೂ ಬುದ್ಧಿಯಿಂದಲೂ ಕೇವಲ ಇಂದ್ರಿಯಗಳಿಂದಲೂ ಎಂದರೆ 'ಈಶ್ವರನಿಗಾಗಿಯೇ ಕರ್ಮವನ್ನು ಮಾಡುತ್ತಿದ್ದೇನೆ, ನನಗೆ ಫಲವಾಗಬೇಕೆಂದು (ಮಾಡುತ್ತ)ಲಿಲ್ಲ' ಎಂದು ತನ್ನದೆಂಬ ಬುದ್ಧಿಯಿಲ್ಲದೆ ಇಂದ್ರಿಯಗಳಿಂದಲೂ—ಇಲ್ಲಿ 'ಕೇವಲ' ಎಂಬ ಮಾತನ್ನು ಕಾಯವೇ ಮುಂತಾದವುಗಳಿಗೂ ಬೇರೆಬೇರೆಯಾಗಿ* ಸೇರಿಸಿಕೊಳ್ಳಬೇಕು; ಏಕೆಂದರೆ ಯಾವ ಕರ್ಮದಲ್ಲಿಯೂ (ಯೋಗಿಗಳಿಗೆ) ನನ್ನದೆಂಬ

* 'ಕೇವಲ ಕಾಯದಿಂದ, ಕೇವಲ ಮನಸ್ಸಿನಿಂದ, ಕೇವಲ ಬುದ್ಧಿಯಿಂದ' ಎಂದು ಸೇರಿಸಿಕೊಂಡು ಯಾವ ಕರ್ಮವನ್ನು ಮಾಡಿದರೂ ಅಭಿಮಾನವಿಲ್ಲದೆ ಮಾಡುವರು—ಎಂಬರ್ಥವನ್ನು ಮಾಡಿಕೊಳ್ಳಬೇಕು—ಎಂದು ಭಾವ.

ಬುದ್ಧಿಯು ಇರುವದಿಲ್ಲವೆಂದು ತಿಳಿಸುವದಕ್ಕೇ (ಈ ವಾಕ್ಯವು ಹೊರಟಿದೆ.) ಯೋಗಿಗಳು ಎಂದರೆ ಕರ್ಮಿಗಳು ಫಲವಿಷಯದಲ್ಲಿ ಸಂಗವನ್ನು ಬಿಟ್ಟು ಆತ್ಮಶುದ್ಧಿಗಾಗಿ ಎಂದರೆ ಸತ್ತ್ವಶುದ್ಧಿಗಾಗಿ ಕರ್ಮವನ್ನು ಮಾಡುತ್ತಿರುವರು. ಆದ್ದರಿಂದ ನಿನಗೆ ಅದರಲ್ಲಿಯೇ ಅಧಿಕಾರವಿದ್ದರಿಂದ ನೀನು ಕರ್ಮವನ್ನೇ ಮಾಡು.

ಮತ್ತೂ ಏಕೆಂದರೆ,

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

೧೨. ಯುಕ್ತನಾದವನು ಕರ್ಮಫಲವನ್ನು ಬಿಟ್ಟು ನಿಷ್ಠೆಯ ಶಾಂತಿಯನ್ನು ಹೊಂದುವನು. ಯುಕ್ತನಲ್ಲದವನು ಕಾಮಕಾರದಿಂದ ಫಲದಲ್ಲಿ ಆಸಕ್ತನಾಗಿ ಕಟ್ಟುಬೀಳುತ್ತಾನೆ.

[ ಭಾಷ್ಯ ]

ಯುಕ್ತನಾದವನು ಎಂದರೆ 'ಈಶ್ವರನಿಗೋಸ್ಕರ ಕರ್ಮವನ್ನು ಮಾಡುತ್ತೇನೆ, ನನಗೆ ಫಲವಾಗಬೇಕೆಂದಲ್ಲ' ಎಂದು ಮನಸ್ಸಮಾಧಾನವುಳ್ಳವನಾಗಿ ಕರ್ಮಫಲವನ್ನು ಬಿಡುವದರಿಂದ ನಿಷ್ಠೆಯ ಶಾಂತಿಯನ್ನು ಎಂದರೆ ನಿಷ್ಠೆಯಿಂದ ಆಗುವ ಮೋಕ್ಷವೆಂಬ ಶಾಂತಿಯನ್ನು ಹೊಂದುವನು; ಸತ್ತ್ವಶುದ್ಧಿಯಾಗುವದು, ಆಮೇಲೆ ಜ್ಞಾನವನ್ನು ಸಂಪಾದಿಸಿಕೊಳ್ಳುವದು, ಆದರಿಂದ ಸರ್ವಕರ್ಮಸಂನ್ಯಾಸವನ್ನು ಮಾಡುವದು, ಆಮೇಲೆ ಜ್ಞಾನನಿಷ್ಠನಾಗಿರುವದು—ಈ ಕ್ರಮದಿಂದ (ಶಾಂತಿಯನ್ನು ಹೊಂದುವನು) ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

ಆದರೆ ಯಾವನು ಯುಕ್ತನಲ್ಲವೋ (ಮೇಲೆ ಹೇಳಿದಂತೆ) ಮನಸ್ಸಮಾಧಾನವಿಲ್ಲದವನೋ ಅವನು ಕಾಮಕಾರದಿಂದ – ಕಾರವೆಂದರೆ ಮಾಡುವದು, ಕಾಮವು ಮಾಡುವದು ಕಾಮಕಾರವು; ಆ ಕಾಮಕಾರದಿಂದ ಎಂದರೆ– ಕಾಮದಿಂದ ಪ್ರೇರಿತನಾಗಿರುವದರಿಂದ ಎಂದರ್ಥ. 'ನನ್ನ ಪ್ರಯೋಜನಕ್ಕಾಗಿ ಈ ಕರ್ಮವನ್ನು ಮಾಡುತ್ತೇನೆ' ಎಂದು ಫಲದಲ್ಲಿ ಆಸಕ್ತನಾಗಿರುವದರಿಂದ (ಕರ್ಮಕ್ಕೆ) ಕಟ್ಟುಬೀಳುತ್ತಾನೆ, ಆದ್ದರಿಂದ ನೀನು ಯುಕ್ತನಾಗು ಎಂದರ್ಥ

## ಜ್ಞಾನಿಗೆ ಯಾವ ಕರ್ಮವೂ ಇಲ್ಲ

ಆದರೆ ಪರಮಾರ್ಥವನ್ನು ಕಂಡವನೋ ಎಂದರೆ—

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

೧೩. ಸರ್ವಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿ ವಶಿಯಾಗಿ, ನವದ್ವಾರದ ಪುರದಲ್ಲಿ ದೇಹಿಯು (ಏನೂ) ಮಾಡದೆಯೆ (ಏನೂ) ಮಾಡಿಸದೆಯೇ, ಸುಖವಾಗಿ ಇರುತ್ತಿರುವನು.

[ ಭಾಷ್ಯ ]

ಸರ್ವಕರ್ಮಗಳನ್ನೂ ಎಂದರೆ **ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರತಿಷಿದ್ಧ**- ಎಂಬ **ಎಲ್ಲಾ ಬಗೆಯ ಕರ್ಮಗಳನ್ನೂ**,* ಮನಸ್ಸಿನಿಂದ ಸಂನ್ಯಾಸಮಾಡಿ ಎಂದರೆ ವಿವೇಕಬುದ್ಧಿಯಿಂದ ಕರ್ಮದಲ್ಲಿ ಅಕರ್ಮವನ್ನು ಕಾಣುವದು ಮುಂತಾದದ್ದರಿಂದ † ಕೈಬಿಟ್ಟು ಎಂಬರ್ಥ. ಸುಖವಾಗಿರುವನು ; ವಾಕ್ಕು, ಮನಸ್ಸು, ಶರೀರ- ಇವುಗಳ ವ್ಯಾಪಾರವನ್ನೆಲ್ಲ ಬಿಟ್ಟು ಯಾವ ಆಯಾಸವೂ ‡ ಇಲ್ಲದೆ ಚಿತ್ತದಲ್ಲಿ ಪ್ರಸನ್ನತೆಯನ್ನು § ಹೊಂದಿ, ಆತ್ಮನನ್ನು ಬಿಟ್ಟು ಬೇರೆಯ ಕಡೆಯಲ್ಲಿ ಯಾವದೊಂದು ಹೊರಗಿನ ಪ್ರಯೋಜನವೂ || ಇಲ್ಲದೆ (ಇರುವನೆಂದು ತಿಳಿಸುವದಕ್ಕೆ) 'ಸುಖವಾಗಿರುವನು' ಎಂದು ಹೇಳಿರುತ್ತದೆ. ವಶಿಯಾಗಿ ಎಂದರೆ ಇಂದ್ರಿಯಗಳನ್ನು ಗೆದ್ದು ಎಂಬರ್ಥ. ಎಲ್ಲಿರುವನು, ಹೇಗೆ (ಇರುವನು)? ಎಂದರೆ ಹೇಳುತ್ತಾನೆ:—**ನವದ್ವಾರದ ಪುರದಲ್ಲಿ** ; ತಲೆಯಲ್ಲಿದ್ದುಕೊಂಡು ಆತ್ಮನಿಗೆ ಜ್ಞಾನಕ್ಕೆ ದ್ವಾರಗಳಾಗಿರುವ ಏಳು, ಮೂತ್ರಪುರೀಷಗಳನ್ನು ಹೊರಕ್ಕೆ ಬಿಡುವದಕ್ಕೆ ಕೆಳಗಿರುವ ಎರಡು- ಹೀಗೆ ಒಂಬತ್ತು ದ್ವಾರಗಳಿರುವದರಿಂದ ಶರೀರವನ್ನು ನವದ್ವಾರದ ಪುರವೆಂದು ಕರೆದಿದೆ. ಇದು ಪುರದಂತೆ ಇರುವದರಿಂದ ಪುರವೆನಿಸಿರುವದು. ಹೇಗೆಂದರೆ, ಆತ್ಮನೊಬ್ಬನೆ ಇದಕ್ಕೆ ಒಡೆಯನು ; ಅವನಿಗೆ ಪ್ರಯೋಜನವನ್ನುಂಟುಮಾಡುತ್ತಿರುವವಾಗಿಯೂ ಬಗೆಬಗೆಯ** ಫಲವನ್ನುಂಟುಮಾಡುವವಾಗಿಯೂ, ಇರುವ ಇಂದ್ರಿಯ, ಮನಸ್ಸು, ಬುದ್ಧಿ, ವಿಷಯ- ಇವುಗಳು ಪುರದ ಪ್ರಜೆಗಳಂತೆ ಇದರಲ್ಲಿ ವಾಸಮಾಡುತ್ತಿರುವವು.

---

* ಇದರಲ್ಲಿ ಲೌಕಿಕಕರ್ಮಗಳೂ ಅಡಕವಾಗಿಯೆ ಇಲ್ಲವೆ- ಎಂಬುದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

† 'ಕರ್ಮಾದಾವಕರ್ಮದರ್ಶನೇನ' ಎಂಬ ಮೂಲದಲ್ಲಿದೆ: 'ಕರ್ಮಾದಾವಕರ್ಮಾದಿದರ್ಶನೇನ' ಎಂದಿದ್ದರೆ ಹೆಚ್ಚು ಸರಿಯಾಗಿರುವದೆಂದು ತೋರುವದು. ೪—೧೮ನೆಯ ಶ್ಲೋಕದ ಭಾಷ್ಯವನ್ನು ನೋಡಿ. ತಾನು ಕರ್ತೃವಲ್ಲವೆಂಬ ಬುದ್ಧಿಯನ್ನು ಪಡೆದಿರುವದರಿಂದ ಇವನು ಎಲ್ಲಾ ಕರ್ಮಗಳನ್ನೂ ಕೈಬಿಟ್ಟಂತಾಯಿತೆಂದು ಭಾವ.

‡ ಕರ್ಮವನ್ನು ಬಿಟ್ಟು ಯಾವ ಆಯಾಸವೂ ಇಲ್ಲದೆ ಇರುವೆವೆಂದು ತಿಳಿದುಕೊಂಡಿರುವ ಮೂಢರಿಗೆ ಜ್ಞಾನಿಯ ಈ ನಿರಾಯಾಸದ ಸ್ಥಿತಿಯು ದೊರೆತಿರುವದಿಲ್ಲ.

§ ಮಿಕ್ಕವರಿಗೆ ವಿಷಯಗಳ ವಾಸನೆಯಿಂದ ಚಿತ್ತವು ಬಗ್ಗಡವಾಗಿರುವದು.

|| ಹೆಂಡಿರು, ಮಕ್ಕಳು, ಹಣ- ಎಂಬ ವಿಷಪಾತ್ರಯವನ್ನು ಬಿಟ್ಟು.

** ಒಂದೊಂದು ಇಂದ್ರಿಯದಿಂದಾಗುವ ಜ್ಞಾನದಿಂದ ಒಂದೊಂದು ಬಗೆಯ ಸುಖದುಃಖಗಳು ಆಗುವವು

ಇಂಥ ಒಂಬತ್ತು ಬಾಗಿಲಿನ ಪುರದಲ್ಲಿ* ಈ) ದೇಹಿಯು ಕರ್ಮವನ್ನೆಲ್ಲ ಸಂನ್ಯಾಸ ಮಾಡಿ ಇರುತ್ತಿರುವನು.

(ಆಕ್ಷೇಪ):—(ಸಂನ್ಯಾಸಿಯಾದ ದೇಹಿಯು ದೇಹದಲ್ಲಿರುವನು ಎಂದು) ವಿಶೇಷಣವನ್ನು ಹಾಕಿದ್ದರಿಂದ ಪ್ರಯೋಜನವೇನು? ದೇಹಿಯಾದವನು ಪ್ರತಿಯೊಬ್ಬನೂ ಸಂನ್ಯಾಸಿಯಾಗಿರಲಿ ಬಿಡಲಿ, ದೇಹದಲ್ಲಿಯೇ ಇರುತ್ತಾನಲ್ಲವೆ? ಹೀಗಿರುವದರಿಂದ ( 'ಸಂನ್ಯಾಸಿಯಾದ' ಎಂಬ) ವಿಶೇಷಣವು ವ್ಯರ್ಥ.

(ಪರಿಹಾರ):—ಇದಕ್ಕೆ ಉತ್ತರವನ್ನು ಹೇಳುತ್ತೇನೆ. ಯಾವ ಅಜ್ಞನಾದ ದೇಹಿಯು ದೇಹೇಂದ್ರಿಯಗಳ ಗುಂಪೇ ತಾನೆಂದು ತಿಳಿದಿರುವನೋ ಅವನು ಪ್ರತಿಯೊಬ್ಬನೂ 'ಮನೆಯಲ್ಲಿ ಅಥವಾ ನೆಲದ ಮೇಲೆ ಅಥವಾ ಆಸನದ ಮೇಲೆ ಕೂತಿದ್ದೇನೆ' ಎಂದೀ ಪರಿಯಾಗಿ ತಿಳಿದುಕೊಂಡಿರುತ್ತಾನೆ; ದೇಹವೇ ಆತ್ಮ ಎಂದು ತಿಳಿದಿರುವವನಿಗೆ ಮನೆಯಲ್ಲಿ ಹೇಗೋ ಹಾಗೆ 'ದೇಹದಲ್ಲಿರುತ್ತೇನೆ' ಎಂಬ ತಿಳಿವು ಉಂಟಾಗುವದೇ ಇಲ್ಲ. ಆದರೆ ದೇಹವೇ ಮುಂತಾದವುಗಳ ಗುಂಪಿಗಿಂತ ಬೇರೆಯಾದ ಆತ್ಮನನ್ನು ಅರಿತಿರುವವನಿಗೋ ಎಂದರೆ 'ದೇಹದಲ್ಲಿರುತ್ತೇನೆ' ಎಂಬ ಅರಿವು ಉಂಟಾಗಬಹುದು. ಬೇರೊಂದು ವಸ್ತುವಿನ † ಕರ್ಮಗಳಾಗಿದ್ದರೂ ಅವುಗಳನ್ನು ಅವಿದ್ಯೆಯಿಂದ ಅದಕ್ಕಿಂತ ಬೇರೆಯಾಗಿರುವ (ಆತ್ಮನಲ್ಲಿ) ಆರೋಪಮಾಡುತ್ತಾರಷ್ಟೆ; ಇವುಗಳನ್ನು ವಿದ್ಯೆಯಿಂದ ವಿವೇಕಜ್ಞಾನವುಂಟಾಗಿರುವ ಮನಸ್ಸಿನಿಂದ ಸಂನ್ಯಾಸಮಾಡುವದೆಂಬುದೂ ( ಈ ಜ್ಞಾನಿಗೆ ) ಹೊಂದುತ್ತದೆ. ಮತ್ತು ವಿವೇಕಜ್ಞಾನವುಂಟಾಗಿ ಸರ್ವಕರ್ಮಗಳನ್ನೂ ಸಂನ್ಯಾಸಮಾಡಿದವನು ಮನೆಯಲ್ಲಿ(ರುವನು ಎಂದು ಮಿಕ್ಕವರು ಅರಿಯುವ) ಹಾಗೆ ನವದ್ವಾರದ ಪುರವಾದ ದೇಹದಲ್ಲಿರುವದೆಂಬುದು ಫಲವು ಪ್ರಾರಂಭವಾಗಿರುವ ಕರ್ಮದ ಸಂಸ್ಕಾರವು ‡ ಉಳಿದುಕೊಂಡುಬಂದಿರುವದರಿಂದ (ಹೊಂದುತ್ತದೆ);

* ಶರೀರವನ್ನು ಪುರಕ್ಕೆ ಹೋಲಿಸುವದು ವೇದದಲ್ಲಿ ರೂಢಿ; ಉದಾಹರಣೆಗೆ ಕಠ ೨-೨-೧ನ್ನೂ ಇದರ ಭಾಷ್ಯವನ್ನೂ ನೋಡಿ.

† ದೇಹ, ಇಂದ್ರಿಯ, ಮನಸ್ಸು, ಬುದ್ಧಿ- ಇವುಗಳಲ್ಲಿ ಒಂದರ.

‡ ನಿಜವಾಗಿ ನೋಡಿದರೆ ಜ್ಞಾನಿಯು ದೇಹದಲ್ಲಿಯೂ ಇರುವದಿಲ್ಲ; ಏಕೆಂದರೆ ಜ್ಞಾನಿಯ ದೃಷ್ಟಿಯಿಂದ ದೇಹವೇ ಇರುವದಿಲ್ಲ. ಆದರೂ ಮಿಕ್ಕವರ ದೃಷ್ಟಿಯಿಂದ ಜ್ಞಾನಿಗೆ ದೇಹವುಂಟು. ಆ ದೇಹದಲ್ಲಿ ತಾನು ಇರುವದಾಗಿ ಜ್ಞಾನಿಯು ಅರಿತಾನೇ ಹೊರತು ದೇಹವೇ ತಾನೆಂದು ಅರಿಯುವ ಸಂಭವವಿಲ್ಲವೆಂದು ಭಾವ. ಪ್ರಾರಬ್ಧಕರ್ಮವು ಜ್ಞಾನಿಗೆ ಇರುವದೆಂದೂ ದೇಹಜ್ಞಾನದ ಸಂಸ್ಕಾರವು ಅವನಿಗೆ ಇರುವದೆಂದೂ ಹೇಳಿದ್ದು ವ್ಯವಹಾರದೃಷ್ಟಿಯಿಂದ.

ದೇಹದಲ್ಲಿಯೇ ವಿಶೇಷಜ್ಞಾನವು* ಉಂಟಾಗುವದರಿಂದ ದೇಹದಲ್ಲಿಯೇ ಅವನು ಇರುತ್ತಾನೆ (ಎನ್ನಬಹುದು). ಆದ್ದರಿಂದ ('ಸಂನ್ಯಾಸಿಯಾದವನು' ದೇಹದಲ್ಲಿರುತ್ತಾನೆ) ಎಂದು ವಿಶೇಷಣವನ್ನು ಕೊಟ್ಟದ್ದಕ್ಕೆ ಪ್ರಯೋಜನವು ಇದ್ದೇ ಇದೆ; ಏಕೆಂದರೆ ಜ್ಞಾನಿಯ ಮತ್ತು ಅಜ್ಞಾನಿಯ ಅರಿವುಗಳಿಗಿರುವ ಭೇದವನ್ನು † ಅನುಸರಿಸಿ ಹೀಗೆ ಹೇಳಿದ್ದಾಗಿರುತ್ತದೆ.

ಅವಿದ್ಯೆಯಿಂದ ಆತ್ಮನಲ್ಲಿ ಆರೋಪಿತವಾಗಿರುವ ದೇಹೇಂದ್ರಿಯಗಳ ಕರ್ಮಗಳನ್ನು ಸಂನ್ಯಾಸಮಾಡಿ ಇರುತ್ತಾನೆ- ಎಂದು ಹೇಳಿದ್ದೇನೋ ಆಯಿತು; ಆದರೂ ತನ್ನಲ್ಲಿಯೇ ಇದ್ದುಕೊಂಡಿರುವ ಕರ್ತೃತ್ವವೂ ಕಾರಯಿತೃತ್ವವೂ ಹಾಗೆಯೆ ಇರಬಹುದಲ್ಲ? ಎಂದರೆ ಅದಕ್ಕೆ ಹೇಳುತ್ತಾನೆ: ತಾನೂ ಮಾಡದೆ, ದೇಹೇಂದ್ರಿಯಗಳಿಂದಲೂ ಮಾಡಿಸದೆ ಎಂದರೆ ಅವನ್ನು ಕೆಲಸಕ್ಕೆ ಹಚ್ಚದೆ ಇರುತ್ತಾನೆ. (ಆದ್ದರಿಂದ ಆತನಲ್ಲಿ ಕರ್ಮವನ್ನು ಮಾಡುವ ಕರ್ತೃತ್ವವಾಗಲಿ, ಮತ್ತೊಬ್ಬರಿಂದ ಕರ್ಮವನ್ನು ಮಾಡಿಸುವ ಕಾರಯಿತೃತ್ವವಾಗಿ ಇರುವದಿಲ್ಲ.)

(ಪ್ರಶ್ನೆ) :— ದೇಹಿಯಾದವನಿಗೆ ಕರ್ತೃತ್ವವೂ ಕಾರಯಿತೃತ್ವವೂ- ಓಡಾಡುವನ ಓಡಾಟವು ಓಡಾಡುವದೆಂಬ ಕೆಲಸವನ್ನು ಬಿಟ್ಟರೆ ಇಲ್ಲದೆ ಹೋಗುವಂತೆ- ತನ್ನ ಆತ್ಮನಲ್ಲಿದ್ದುಕೊಂಡಿದ್ದು ಸಂನ್ಯಾಸದಿಂದ ಸಂಭವಿಸದೆ ಹೋಗುವದೋ, ಅಥವಾ ನಿಜವಾಗಿ ಆತ್ಮನಲ್ಲಿ ಈ (ಕರ್ತೃತ್ವವಾಗಲಿ ಕಾರಯಿತೃತ್ವವಾಗಲಿ) ಇಲ್ಲವೇ ಇಲ್ಲವೋ?

(ಉತ್ತರ) :— ಇದಕ್ಕೆ ಹೇಳುತ್ತೇವೆ, ಕೇಳಿ. **ಆತ್ಮನಲ್ಲಿ ನಿಜವಾಗಿ ಕರ್ತೃತ್ವವಾಗಲಿ ಕಾರಯಿತೃತ್ವವಾಗಲಿ ಇರುವದೇ ಇಲ್ಲ.** 'ಈ ಆತ್ಮನು ಅವಿಕಾರಿಯೆನಿಸಿರುವನು' (೨-೨೫) ಎಂದು ಹಿಂದೆಯೇ ಹೇಳಿರುತ್ತದೆ; "ಎಲೈ ಕೌಂತೇಯನೆ, ಇವನು ಶರೀರದಲ್ಲಿದ್ದರೂ ಕರ್ಮವನ್ನು ಮಾಡುವದಿಲ್ಲ, ಕರ್ಮದ ಲೇಪವು ಇವನಿಗೆ ಆಗುವದೂ ಇಲ್ಲ" (೧೩-೩೧) ಎಂದು (ಮುಂದೆಯೂ ಹೇಳಿರುತ್ತದೆ). "(ಆತ್ಮನು) ಯೋಚಿಸುತ್ತಿರುವಂತೆಯೂ ಚಲಿಸುತ್ತಿರುವಂತೆಯೂ ತೋರುವನು" (ಬೃ) ಎಂಬ ಶ್ರುತಿಯೂ ಇದಕ್ಕೆ ‡ ಪ್ರಮಾಣವು.

* ಇದು ಇಂಥದ್ದೆಂದು ಅರಿಯುವದು ವಿಶೇಷಜ್ಞಾನವು; ಇಂದ್ರಿಯಮನಸ್ಸುಗಳ ವ್ಯಾಪಾರವು ಬೇಕಾಗಿರುವದರಿಂದ ಜ್ಞಾನಿಯು ಹೀಗೆ ಅರಿಯುವದಕ್ಕೂ ದೇಹವು ಬೇಕಾಗಿರುವದು.

† ಜ್ಞಾನಿಯು ದೇಹವೇ ಮುಂತಾದದ್ದಕ್ಕಿಂತ ತಾನು ಬೇರೆ ಎಂದು ತಿಳಿದಿರುವನು ಅಜ್ಞಾನಿಯು ತಿಳಿದಿರುವದಿಲ್ಲ. ಆದ್ದರಿಂದ ಅವರಿಬ್ಬರ ವ್ಯವಹಾರವು ಬೇರೆಬೇರೆ

‡ ಆತ್ಮನಲ್ಲಿ ಕರ್ಮವು ನಿಜವಾಗಿಲ್ಲ, ಆರೋಪಿತವಾಗಿರುವದು- ಎಂಬುದಕ್ಕೆ.

## ಜ್ಞಾನಿಗೂ ಅಜ್ಞಾನಿಗೂ ಭೇದ

ಮತ್ತು

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥**

೧೪. ಪ್ರಭುವು ಜನರಿಗೆ ಕರ್ತೃತ್ವವನ್ನಾಗಲಿ ಕರ್ಮಗಳನ್ನಾಗಲಿ ಸೃಷ್ಟಿಸಿರುವದಿಲ್ಲ; ಕರ್ಮಫಲಸಂಯೋಗವನ್ನೂ (ಸೃಷ್ಟಿಸಿರುವದಿಲ್ಲ). ಆದರೆ ಸ್ವಭಾವವು ಕೆಲಸಮಾಡುತ್ತಿರುವದು.

[ಭಾಷ್ಯ]

ಪ್ರಭುವು ಎಂದರೆ ಆತ್ಮನು * ನೀನು ಮಾಡು ಎಂದು ಜನರಿಗೆ ತಾನೇ ಕರ್ತೃತ್ವವನ್ನು ಉಂಟುಮಾಡುವದಿಲ್ಲ; ಬಂಡಿ, ಮಡಕೆ, ಉಪ್ಪರಿಗೆ-ಮುಂತಾದ ಅತ್ಯಂತವಾಗಿ† ಬೇಕಾದ ಕರ್ಮಗಳನ್ನೂ ಸೃಷ್ಟಿಸಿರುವದಿಲ್ಲ; ಬಂಡಿ ಮುಂತಾದವುಗಳನ್ನು ಮಾಡಿದಾತನಿಗೆ ಕರ್ಮಫಲದ ಸಂಬಂಧವನ್ನೂ‡ ಉಂಟು ಮಾಡುವದಿಲ್ಲ.

(ಪ್ರಶ್ನೆ):—ದೇಹಿಯಾದವನು ತಾನೇ ಯಾವದೊಂದನ್ನೂ ಮಾಡುವದಿಲ್ಲ, ಮಾಡಿಸುವದೂ ಇಲ್ಲ- ಎಂಬುದೇ (ನಿಜ)ವಾದರೆ, ಮಾಡುತ್ತಲೂ, ಮಾಡಿಸುತ್ತಲೂ, ಇರುವವರು ಯಾರು ? §

(ಉತ್ತರ):—ಹೇಳುತ್ತೇನೆ, ಕೇಳು. ಆದರೆ ಸ್ವಭಾವವೇ ಕೆಲಸಮಾಡುತ್ತಿರುವದು; 'ಸ್ವ' ಎಂದರೆ ತನ್ನ ಭಾವವು 'ಸ್ವಭಾವ'ವೆನಿಸುವದು. "(ಗುಣಗಳಿಂದಾಗಿರುವ) ದೇವ(ಮಾಯೆಯೇ)" (೭–೧೪) ಎಂದು ಮುಂದೆ ಹೇಳಿರುವ ಅವಿದ್ಯೆಯಿಂದಾಗಿರುವ ಪ್ರಕೃತಿಯೇ, ಮಾಯೆಯೆ, || ಕೆಲಸಮಾಡುತ್ತಿರುವದು.

ಆದರೆ ನಿಜವಾಗಿ ನೋಡಿದರೆ,

---

* ಆತ್ಮನಲ್ಲಿ ಸ್ವತಃ ಕರ್ತೃತ್ವವಾಗಲಿ ಕಾರಯಿತೃತ್ವವಾಗಲಿ, ಭೋಕ್ತೃತ್ವವಾಗಲಿ ಭೋಜಯಿತೃತ್ವವಾಗಲಿ ಇಲ್ಲವೆಂಬುದನ್ನು ಈ ಶ್ಲೋಕದಲ್ಲಿಯೂ ಮುಂದಿನ ಶ್ಲೋಕದಲ್ಲಿಯೂ ವಿವರಿಸಿದೆ.

† ಕರ್ತೃವಿನ ಕೆಲಸವು ಮುಖ್ಯವಾಗಿ ಯಾವದನ್ನು ಸೇರುವದೋ ಅದು ಕರ್ಮವು. ಕರ್ಮವೆಂಬ ಮಾತಿಗೆ ಕ್ರಿಯೆ ಎಂಬ ಅರ್ಥವೂ ಇದೆ, ಆದರೆ ಈ ಅರ್ಥವನ್ನು ಇಲ್ಲಿ ತೆಗೆದುಕೊಂಡರೆ ಕರ್ತೃತ್ವವೆಂಬುದರಲ್ಲಿಯೇ ಇದು ಸೇರಿರುವದರಿಂದ ಅರ್ಥವಿಶೇಷವೇನೂ ಆಗುವದಿಲ್ಲ. ಆತ್ಮನಿಗೆ ತಾನು ಮಾಡಬೇಕಾದ ಕೆಲಸವೂ ಇಲ್ಲ, ಹೊಂದಬೇಕಾದ ಫಲವೂ ಇಲ್ಲ.

‡ ಮತ್ತೊಬ್ಬನಿಗೆ ಇವನು ಫಲವನ್ನು ಕೊಡುವದೂ ಇಲ್ಲ

§ ಕರ್ಮಕ್ಕೂ ಉಪಾಸನೆಗೂ ಆಶ್ರಯವು ಯಾವದು? ಫಲವನ್ನು ಕೊಡುವವನು ಯಾರು?

|| ಕ್ರಿಯೆ, ಕಾರಕ, ಫಲ್ಗ ಇವು ಯಾವವೂ ನಿಜವಾಗಿ ಇಲ್ಲ.

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥ ೧೫ ॥**

೧೫. ವಿಭುವು ಯಾವನೊಬ್ಬನ ಪಾಪವನ್ನಾಗಲಿ ಪುಣ್ಯವನ್ನಾಗಲಿ ತೆಗೆದುಕೊಳ್ಳುವದಿಲ್ಲ; ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟಿರುವದು, ಆದ್ದರಿಂದ ಪ್ರಾಣಿಗಳು ಮೋಹಗೊಳ್ಳುತ್ತಿರುವರು.

[ಭಾಷ್ಯ]

ವಿಭುವು (ಎಂದರೆ) ಈಶ್ವರನು ಯಾವನೊಬ್ಬನ- ಭಕ್ತನೇ ಆಗಿರಲಿ ಅವನ- ಪಾಪವನ್ನಾಗಲಿ ಪುಣ್ಯವನ್ನಾಗಲಿ ಸ್ವೀಕರಿಸುವದಿಲ್ಲ. ಹಾಗಾದರೆ ಭಕ್ತರು ಪೂಜೆಯೇ ಮುಂತಾದ, ಮತ್ತು ಯಾಗ, ದಾನ, ಹೋಮ- ಮುಂತಾದ ಪುಣ್ಯ ಕರ್ಮವನ್ನು ಏಕೆ ಮಾಡುತ್ತಿರುವರು? ಎಂದರೆ ಹೇಳುತ್ತಾನೆ:- ಜ್ಞಾನವು ಎಂದರೆ ವಿವೇಕದ ಅರಿವು ಅಜ್ಞಾನದಿಂದ ಮರೆಯಾಗಿರುವದು; ಆದ್ದರಿಂದ 'ಮಾಡುತ್ತೇನೆ, ಮಾಡಿಸುತ್ತೇನೆ, ಅನುಭವಿಸುತ್ತೇನೆ, ಅನುಭವಿಸುವಂತೆ ಮಾಡುತ್ತೇನೆ' ಎಂದೀ ಪರಿಯಾಗಿ ಅವಿವೇಕಿಗಳಾದ ಸಂಸಾರಿಜೀವರು ಮೋಹವನ್ನು ಹೊಂದುತ್ತಿರುವರು. *

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬ ॥**

೧೬. ಆದರೆ ಯಾರಿಗೆ ಆ ಆತ್ಮನ ಅಜ್ಞಾನವು ಜ್ಞಾನದಿಂದ ನಾಶವಾಗಿರುವದೋ, ಅವರಿಗೆ ಸೂರ್ಯನಂತೆ ಜ್ಞಾನವು ಆ ಪರ(ವಸ್ತು)ವನ್ನು ಬೆಳಗುವದು.

[ಭಾಷ್ಯ]

ಯಾವ ಅಜ್ಞಾನದ ಮುಸುಕಿನಿಂದ ಜೀವರು ಮೋಹಗೊಳ್ಳುತ್ತಿರುವರೋ, ಆ ಅಜ್ಞಾನವು ಯಾವ ಜೀವರಿಗೆ ಆತ್ಮವಿಷಯವಾದ ಜ್ಞಾನದಿಂದ ನಾಶವಾಗಿರುವದೋ, ಅವರಿಗೆ ಸೂರ್ಯನಂತೆ ಎಂದರೆ ಸೂರ್ಯನು ಎಲ್ಲಾ ರೂಪಗಳನ್ನೂ ಹೇಗೆ ತೋರಿಸಿಕೊಡುವನೋ, ಅದರಂತೆ ಜ್ಞಾನವು ಜ್ಞೇಯವಾದ ಆ ಪರಮಾರ್ಥತತ್ತ್ವವೆಂಬ ಹೆಚ್ಚಿನ ವಸ್ತುವನ್ನು ಪೂರ್ಣವಾಗಿ ತಿಳಿಸಿಕೊಡುವದು.

ಜ್ಞಾನಿಗಳ ವ್ಯವಹಾರ.

ಜ್ಞಾನದಿಂದ † ಯಾವ ಪರವಸ್ತು ಬೆಳಗುವದೋ,

---

* ಕರ್ತೃತ್ವವೂ ಭೋಕ್ತೃತ್ವವೂ ಕೇವಲ ಭ್ರಾಂತಿಯಿಂದ ತೋರುತ್ತಿರುವವು, ಪರಮಾರ್ಥವಲ್ಲ.

† 'ಜ್ಞಾನಪ್ರಕಾಶಿತಂ' ಎಂಬ ಮು॥ ಮೈ॥ ಪಾಠವೇ ಸರಿಯಾದದ್ದು.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛನ್ತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

೧೭. ಅದರಲ್ಲಿಯೇ ಬುದ್ಧಿಯನ್ನಿಟ್ಟವರಾಗಿ, ಅದರ ಸ್ವರೂಪರಾಗಿ, ಅದರಲ್ಲಿಯೇ ನಿಷ್ಠೆಯುಳ್ಳವರಾಗಿ, ಅದೇ ಪರಾಯಣವಾದವರಾಗಿ, ಜ್ಞಾನದಿಂದ ಕಲ್ಮಷವನ್ನೆಲ್ಲ ತೊಳೆದುಕೊಂಡು ಮತ್ತೆ ಹಿಂತಿರುಗದೆ ಇರುವಿಕೆಯನ್ನು ಪಡೆಯುತ್ತಾರೆ.

[ಭಾಷ್ಯ]

ಆ ಬ್ರಹ್ಮದಲ್ಲಿಯೇ ಇಟ್ಟ ಬುದ್ಧಿಯುಳ್ಳವರಾಗಿ, ಅದರ ಸ್ವರೂಪರಾಗಿ ಎಂದರೆ ಆ ಪರಬ್ರಹ್ಮವೇ ತಮ್ಮ ಆತ್ಮನೆಂದು ಕಂಡುಕೊಂಡವರಾಗಿ; ಅದರಲ್ಲಿಯೇ ನಿಷ್ಠೆಯುಳ್ಳವರಾಗಿ. ನಿಷ್ಠೆಯೆಂದರೆ ಅಭಿನಿವೇಶವು, ತಾತ್ಪರ್ಯವುಳ್ಳವರಾಗಿ; ಅದೇ ಪರಾಯಣವಾದವರಾಗಿ, ಎಂದರೆ ಅದೇ ಹೆಚ್ಚಿನ ಗತಿಯೆಂದು ತಿಳಿದವರಾಗಿ; ಆತ್ಮನೊಬ್ಬನಲ್ಲಿಯೇ ರತಿಯುಳ್ಳವರಾಗಿ ಎಂದರ್ಥ. ಯಾರಿಗೆ ಆತ್ಮವಿಷಯವಾದ ಅಜ್ಞಾನವು ಜ್ಞಾನದಿಂದ ನಾಶವಾಗಿರುವದೋ, ಅವರು ಈ ರೀತಿಯಲ್ಲಿದ್ದುಕೊಂಡು * ಜ್ಞಾನದಿಂದ ಕಲ್ಮಷವನ್ನು ತೊಳೆದುಕೊಂಡು ಎಂದರೆ ಮೇಲೆ ಹೇಳಿದಂಥ ಜ್ಞಾನದಿಂದ ಪಾಪವೇ ಮುಂತಾದ ಸಂಸಾರಕ್ಕೆ ಕಾರಣವಾಗಿರುವ ದೋಷವನ್ನೆಲ್ಲ ತೊಲಗಿಸಿಕೊಂಡು ಯತಿಗಳಾಗಿ ಅಪುನರಾವೃತ್ತಿಯನ್ನು ಹೊಂದುವರು, ಎಂದರೆ ಮತ್ತೆ † ದೇಹಸಂಬಂಧವನ್ನು ಹೊಂದುವದಿಲ್ಲ, ಎಂದರ್ಥ.

ಯಾರಿಗೆ ಜ್ಞಾನದಿಂದ ಆತ್ಮವಿಷಯವಾದ ಅಜ್ಞಾನವು ಹೋಗಿರುವದೋ ಅಂಥ ಪಂಡಿತರು ತತ್ತ್ವವನ್ನು ಹೇಗೆ ಕಾಣುವರು ? ಎಂದರೆ ಹೇಳುತ್ತಾನೆ:–

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ॥ ೧೮ ॥**

೧೮. ವಿದ್ಯಾವಿನಯಗಳಿಂದ ಕೂಡಿರುವ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ, ಪಂಡಿತರು ಸಮದರ್ಶಿಗಳಾಗಿರುವರು.

---

* ಜ್ಞಾನಿಗಳು ಈ ರೀತಿಯಲ್ಲಿರುವರು ಎಂದದ್ದರಿಂದ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕೆಂಬುವನೂ ಹೀಗೆಯೇ ಆತ್ಮನಲ್ಲಿ ನೆಟ್ಟಮನಸ್ಸುಳ್ಳವನಾಗಿರಬೇಕು ಎಂದು ಹೇಳಿದಂತಾಯಿತು.

† ಈಗ ದೇಹವಿರುವದೆಂಬುದೂ ವ್ಯವಹಾರದ ದೃಷ್ಟಿಯಿಂದಲೇ, ೨೧೮ ನೆಯ ಶ್ಲೋಕವನ್ನು ನೋಡಿ.

[ ಭಾಷ್ಯ ]

ವಿನಯವೆಂದರೆ ಉಪಶಾಂತಿಯು. ವಿದ್ಯೆಯಿಂದಲೂ, ವಿನಯದಿಂದಲೂ, ಕೂಡಿರುವ ಎಂದರೆ ವಿದ್ಯಾವಂತನೂ ಸರಿಯಾದ ನಡತೆಯುಳ್ಳವನೂ ಆಗಿರುವ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಪಂಡಿತರು ಸಮದರ್ಶಿಗಳಾಗಿರುವರು.

ವಿದ್ಯಾವಿನಯಗಳಿಂದ ಕೂಡಿ ಉತ್ತಮವಾದ ಸಂಸ್ಕಾರವುಳ್ಳವನಾಗಿರುವ ಸಾತ್ತ್ವಿಕನಾದ ಬ್ರಾಹ್ಮಣನಲ್ಲಿಯೂ, ಸಂಸ್ಕಾರವಿಲ್ಲದ ನಡುತರದ ರಾಜಸ ಪ್ರಾಣಿಯಾದ ಹಸುವಿನಲ್ಲಿಯೂ, ಅತ್ಯಂತವಾಗಿ ಬರಿಯ ತಾಮಸವೇ ಆಗಿರುವ ಆನೆಯೇ ಮುಂತಾದ (ಪ್ರಾಣಿ)ಯಲ್ಲಿಯೂ, ಪಂಡಿತರು ಸತ್ತ್ವವೇ ಮುಂತಾದ ಗುಣಗಳಾಗಲಿ ಅವುಗಳಿಂದುಂಟಾದ ಸಂಸ್ಕಾರಗಳಾಗಲಿ, ರಾಜಸವಾದ ಅಥವಾ ತಾಮಸವಾದ ಸಂಸ್ಕಾರಗಳಾಗಲಿ ಸ್ವಲ್ಪವೂ ಸೋಕದೆ ಇರುವ, ಸಮವಾಗಿ ಒಂದೇ ಒಂದಾಗಿ ಯಾವ ವಿಕಾರವೂ ಇಲ್ಲದೆ ಇರುವ ಬ್ರಹ್ಮವನ್ನು ಅರಿಯುವ ಸ್ವಭಾವವುಳ್ಳವರು ಪಂಡಿತರು. (ಇವರು ಬ್ರಾಹ್ಮಣನೇ ಮುಂತಾದ ಪ್ರಾಣಿಗಳಲ್ಲೆಲ್ಲ) ಸಮದರ್ಶಿಗಳಾಗಿರುವರು.

(ಆಕ್ಷೇಪ):-ಅವರು ದೋಷವಂತರಾದ್ದರಿಂದ ಅವರ ಅನ್ನವನ್ನು ಊಟ ಮಾಡಬಾರದು ; ಏಕೆಂದರೆ "ಸಮಾನರಾದವರನ್ನು ವಿಷಮವಾಗಿಯೂ, ಸಮಾನರಲ್ಲದವರನ್ನು ಸಮವಾಗಿಯೂ, ಪೂಜಿಸುವದರಿಂದ (ಅಭೋಜ್ಯಾನ್ನನಾಗುವನು)" ಎಂದು (ಗೌತಮ)ಸ್ಮೃತಿಯಲ್ಲಿ ಹೇಳಿರುತ್ತದೆ.

(ಪರಿಹಾರ):-ಅವರು ದೋಷವಂತರಲ್ಲ. ಅದು ಹೇಗೆಂದರೆ—

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ ೧೯ ॥**

೧೯. ಯಾರ ಮನಸ್ಸು ಸಾಮ್ಯದಲ್ಲಿ ನಿಂತಿರುವದೋ ಅವರಿಂದ ಸರ್ಗವು ಇಲ್ಲಿಯೇ ಜಿತವಾಯಿತು. ಬ್ರಹ್ಮವು ನಿರ್ದೋಷವಾಗಿಯೂ ಸಮವಾಗಿಯೂ ಇರುವದಲ್ಲವೆ? ಆದ್ದರಿಂದ ಅವರು ಬ್ರಹ್ಮದಲ್ಲಿಯೇ ನಿಂತಿರುವರು.

[ಭಾಷ್ಯ]

ಯಾರ ಮನಸ್ಸು ಎಂದರೆ ಅಂತಃಕರಣವು, ಸಾಮ್ಯದಲ್ಲಿ ಎಂದರೆ ಸಕಲ ಪ್ರಾಣಿಗಳಲ್ಲಿಯೂ * ಸಮವಾಗಿರುವ ಬ್ರಹ್ಮದಲ್ಲಿ ನಿಂತಿರುವದೋ ಅಲುಗಾಡದೆ ಇರುವದೋ ಆ ಸಮದರ್ಶಿಗಳಾದ ಪಂಡಿತರಿಂದ ಇಲ್ಲಿಯೇ ಎಂದರೆ ಬದುಕಿರು

* ೧೩-೨೭ರ ಸೂಚನೆ.

ವಾಗಲೇ * ಸರ್ಗವು ಜಿತವಾಯಿತು, (ಅವರು) ಜನ್ಮವನ್ನು ಗೆದ್ದಂತೆ ಆಯಿತು. (ಬ್ರಹ್ಮವು) ನಿರ್ದೋಷವು, ದೋಷವುಳ್ಳ ಚಂಡಾಲನೇ ಮುಂತಾದವರಲ್ಲಿರುವ ಆಯಾ ದೋಷಗಳಿಂದ (ಬ್ರಹ್ಮವು) ದೋಷವುಳ್ಳದ್ದೆಂದು ಮೂಢರು ತಿಳಿದುಕೊಂಡಿರುತ್ತಾರಾದರೂ, ಆ ದೋಷಗಳು ಅದಕ್ಕೆ ಸೋಂಕಿರುವದಿಲ್ಲ; ಆದ್ದರಿಂದ ಅದು ನಿರ್ದೋಷವಾಗಿಯೇ ಎಂದರೆ ದೋಷಗಳಿಲ್ಲದ್ದಾಗಿಯೇ (ಇರುವದು). ಅವರಲ್ಲಿರುವ ಬೇರೆಬೇರೆ ಗುಣಗಳಿಂದ (ಇದು) ಬೇರೆಬೇರೆಯಾಗಿದೆಯೆಂಬುದೂ ಸರಿಯಲ್ಲ; ಏಕೆಂದರೆ ಚೈತನ್ಯದಲ್ಲಿ ಯಾವ ಗುಣವೂ ಇರುವದಿಲ್ಲ.† ಇಚ್ಛೆಯೇ ‡ ಮುಂತಾದವು ಕ್ಷೇತ್ರದ ಗುಣಗಳೆಂದು ಮುಂದೆ (೧೩-೬) ಭಗವಂತನು ಹೇಳಿಯೂ ಇರುತ್ತಾನೆ; "ಆದಿಯಿಲ್ಲದಿರುವದರಿಂದಲೂ ನಿರ್ಗುಣನಾಗಿರುವದರಿಂದಲೂ, (ಈ ಪರಮಾತ್ಮನು ಅವ್ಯಯನು)" (೧೩-೩೧) ಎಂದೂ (ಹೇಳಿರುತ್ತಾನೆ.) ಆತ್ಮನನ್ನು ಬೇರೆಬೇರೆಯಾಗಿ ಮಾಡಿ ತಿಳಿಸುವದಕ್ಕೆ **ಅಂತ್ಯವಿಶೇಷಗಳೂ** § ಇರುವದಿಲ್ಲ; ಏಕೆಂದರೆ ಒಂದೊಂದು ಶರೀರದಲ್ಲಿಯೂ || ಅವು ಇರುವದಕ್ಕೆ ಪ್ರಮಾಣವೇನೂ ಇರುವದಿಲ್ಲ. ಆದ್ದರಿಂದ ಬ್ರಹ್ಮವು ಸಮವಾಗಿ ಇರುವದು, ಎಂದರೆ ಒಂದೇ ಆಗಿ ಇರುವದು. ಆದ್ದರಿಂದ ಅವರು ಬ್ರಹ್ಮದಲ್ಲಿಯೇ ಇರುತ್ತಿರುವರು.

* ಅವರ ದೃಷ್ಟಿಯಲ್ಲಿ ಹುಟ್ಟುವದೆಂಬುದೇ ಇರುವದಿಲ್ಲ. ಆದ್ದರಿಂದ ಅವರು ಈಗಲೇ ಜನ್ಮವನ್ನು ಗೆದ್ದಂತೆಯೆ, ಸತ್ತ ಮೇಲೆ ಅವರು ಮತ್ತೆ ಹುಟ್ಟುವದಿಲ್ಲವೆಂದು ಹೇಳಬೇಕಾದದ್ದೇನಿದೆ? ಎಂದರ್ಥ

† ಚೈತನ್ಯವೆಂದರೆ ಜ್ಞಾನವು; ಎಲ್ಲಾ ಗುಣವೂ ತನಗೆ ವಿಷಯವಾಗಿರುವದರಿಂದ ಅವುಗಳನ್ನು ಅರಿಯುವ ವಿಷಯಿಯಾದ ಜ್ಞಾನದಲ್ಲಿ ಯಾವ ಗುಣವೂ ಇರುವ ಸಂಭವವಿರುವದಿಲ್ಲ.

‡ ಆತ್ಮನಲ್ಲಿ ಇಚ್ಛೆಯೇ ಮುಂತಾದ ಒಂಬತ್ತು ಗುಣಗಳು ಇರುವವೆಂದು ವೈಶೇಷಿಕರು ಹೇಳುತ್ತಾರೆ; ಆದರೆ ಇದು ಭಗವಂತನ ಮತಕ್ಕೆ ವಿರುದ್ಧ, ವಿಷಯದ ಧರ್ಮವು ವಿಷಯಿಗೆ ಹತ್ತಲಾರದೆಂಬ ಯುಕ್ತಿಗೂ ವಿರುದ್ಧ.

§ ಪರಮಾಣು, ಆಕಾಶ, ಕಾಲ, ದಿಕ್ಕು, ಆತ್ಮ, ಮನಸ್ಸು– ಎಂಬಿವು ನಿತ್ಯವಸ್ತುಗಳೆಂದೂ ಇವುಗಳನ್ನು ಬೇರ್ಪಡಿಸಿ ತಿಳಿಸುವದಕ್ಕೆ ಅಂತ್ಯವಿಶೇಷವೆಂಬ ಪದಾರ್ಥವು ಇರುವದೆಂದೂ ವೈಶೇಷಿಕರು ಇಟ್ಟುಕೊಂಡಿರುತ್ತಾರೆ. ಗೀತಾರ್ಥಸರ್ವಸ್ವದ ಜ್ಞಾನಯೋಗದಲ್ಲಿ ಇದನ್ನು ಚರ್ಚಿಸಿದೆ.

|| ಒಂದೊಂದು ಶರೀರಕ್ಕೆ ಒಬ್ಬೊಬ್ಬ ಆತ್ಮನೆಂದೂ ಒಬ್ಬೊಬ್ಬ ಆತ್ಮನಲ್ಲಿ ಒಂದೊಂದು ವಿಶೇಷವಿರುವದೆಂದೂ ಇವರು ಹೇಳುವದು ಪ್ರಮಾಣವಿರುದ್ಧವಾಗಿದೆ– ಎಂದು ಭಾವ. ಕನಸಿನಲ್ಲಿ ಕಾಣುವ ಅನೇಕ ದೇಹಗಳಿಗೆ ಅನೇಕ ಆತ್ಮರು ಇರುವಂತೆ ಆಗ್ಗೆ ತೋರಿದರೂ ನಿಜವಾಗಿ ಅಲ್ಲಿ ಆತ್ಮರು ಅನೇಕರು ಇರುವದಿಲ್ಲ; ಆತ್ಮರು ಅನೇಕರೆಂಬುದಕ್ಕೇ ಪ್ರಮಾಣವಿಲ್ಲದಿರುವಾಗ ಅವರಲ್ಲಿ ಅಂತ್ಯವಿಶೇಷಗಳಿವೆ ಎಂಬ ಕಲ್ಪನೆಗೆ ಅವಕಾಶವೆಲ್ಲಿ?

ಇದ್ದುದರಿಂದ ಅವರಿಗೆ ದೋಷದ ಕಂಪು ಕೂಡ ಸೋಂಕದು ; ಏಕೆಂದರೆ ಅವರಿಗೆ ದೇಹವೇ ಮುಂತಾದದ್ದರ ಗುಂಪೇ ತಾವೆಂಬ ಅಭಿಮಾನವು ಇರುವದಿಲ್ಲ. “ಸಮಾಸಮಾಭ್ಯಾಂ ವಿಷಮಸಮೇ ಪೂಜಾತಃ” ಎಂಬ ಈ ಸೂತ್ರವಾದರೂ ದೇಹವೇ ಮುಂತಾದವುಗಳ ಗುಂಪೇ ತಾವೆಂದು ತಿಳಿಯುವ ಅಭಿಮಾನಿಗಳ ವಿಷಯವಾದದ್ದು; ಏಕೆಂದರೆ ಆ ಸೂತ್ರದಲ್ಲಿ ಗೌರವಿಸುವ ವಿಷಯವಾದ [ಪೂಜಾವಿಷಯತ್ವ] ವಿಶೇಷಣವಿದೆ. ಗೌರವಿಸಬೇಕಾಗಿರುವಲ್ಲಿಯೂ, ದಾನಮಾಡಬೇಕಾಗಿರುವಲ್ಲಿಯೂ, (ಒಂದು) ವೇದವನ್ನು* ಬಲ್ಲವನು, ಆರು ಅಂಗಗಳನ್ನೂ ಬಲ್ಲವನು, ನಾಲ್ಕು ವೇದಗಳನ್ನೂ ಬಲ್ಲವನು- ಎಂದು ಬೇರೆ ಬೇರೆ ಗುಣಗಳ† ಸಂಬಂಧಗಳನ್ನು ಕಾರಣವಾಗಿ (ತೆಗೆದುಕೊಂಡಿರುವದು) ಕಂಡುಬರುತ್ತದೆಯಲ್ಲವೆ? ಆದರೆ ಬ್ರಹ್ಮದಲ್ಲಿ ಯಾವ ಗುಣವಾಗಲಿ ದೋಷವಾಗಲಿ ಸೇರಿರುವದಿಲ್ಲ ; ಆದ್ದರಿಂದ ಅವರು ಬ್ರಹ್ಮದಲ್ಲಿಯೇ ಇರುವರು, (ಅವರಲ್ಲಿ ಯಾವ ದೋಷವೂ ಇರುವದಿಲ್ಲ)- ಎಂಬುದು ಯುಕ್ತವೇ ಆಗಿದೆ. ಇದೂ ಅಲ್ಲದೆ “ಸಮಾಸಮಾಭ್ಯಾಂ” ಎಂಬ (ಮೇಲೆ ಹೇಳಿದ) ಸೂತ್ರವು ಕರ್ಮಕ್ಕೆ ಸಂಬಂಧಪಟ್ಟದ್ದು; ಆದರೆ ‘ಸರ್ವಕರ್ಮಗಳನ್ನೂ ಮನಸ್ಸಿನಿಂದ (ಸಂನ್ಯಾಸಮಾಡಿ)’ (೫-೧೩)-ಎಂಬಲ್ಲಿಂದ ಈ ಅಧ್ಯಾಯವು ಮುಗಿಯುವವರೆಗೂ ಇಲ್ಲಿ ಸರ್ವಕರ್ಮಸಂನ್ಯಾಸದ ವಿಷಯವಾಗಿ ಹೇಳುವದಕ್ಕೆ ಪ್ರಾರಂಭಿಸಿರುತ್ತದೆ. (ಆದ್ದರಿಂದಲೂ) ಸೂತ್ರದಲ್ಲಿ ಹೇಳಿದ ದೋಷವು ಸಮದರ್ಶಿಗಳಿಗೆ ಹತ್ತಲಾರದು.

ಬ್ರಹ್ಮವು (ಎಂದರೆ) ಆತ್ಮನು ನಿರ್ದೋಷವಾಗಿಯೂ ಸಮನಾಗಿಯೂ ಇರುವನಷ್ಟೆ ; ಆದಕಾರಣ,

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**
**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥ ೨೧ ॥**

೨೦-೨೧ ಪ್ರಿಯವಾದದ್ದನ್ನು ಪಡೆದರೆ ಹಿಗ್ಗದೆ ಅಪ್ರಿಯವಾದದ್ದನ್ನು ಪಡೆದರೆ ತಗ್ಗದೆ ಸ್ಥಿರಬುದ್ಧಿಯಾಗಿ ಮೋಹಗೊಳ್ಳದೆ ಬ್ರಹ್ಮವನ್ನು ತಿಳಿದು ಬ್ರಹ್ಮ

* ಇಲ್ಲಿ ಬ್ರಹ್ಮವಿತ್ ಎಂದರೆ (ಒಂದು) ವೇದವನ್ನು ಅಧ್ಯಯನಮಾಡಿದಾತನು ಎಂದೇ ಪ್ರಕರಣಕ್ಕೆ ಅನುಗುಣವಾಗಿ ಅರ್ಥಮಾಡಬೇಕೆಂದು ತೋರುವದು.

† ಹೆಚ್ಚಿನ ಗುಣದವನಿದ್ದರೆ ಅವನಿಗೆ ಮಿಕ್ಕವರಿಗಿಂತ ಹೆಚ್ಚಿನ ಗೌರವವನ್ನು ತೋರಿಸಬೇಕೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ.

ದಲ್ಲಿಯೇ ಇರುವಾತನು ಹೊರಗಿನ ವಿಷಯಗಳಲ್ಲಿ ಆಸಕ್ತಿಯಿಲ್ಲದ ಮನಸ್ಸುಳ್ಳ ವನಾಗಿ ಸುಖವೆಂಬುದು ಯಾವದೋ ಅದನ್ನು ಆತ್ಮನಲ್ಲಿಯೆ ಪಡೆಯುತ್ತಾನೆ. ಬ್ರಹ್ಮಯೋಗದಿಂದ ಕೂಡಿದ ಆತನು ಅಂತಃಕರಣವುಳ್ಳ ಅಕ್ಷಯವಾದ ಸುಖ ವನ್ನು ಹೊಂದುತ್ತಾನೆ.

[ಭಾಷ್ಯ]

ಪ್ರಿಯವಾದದ್ದನ್ನು ಪಡೆದರೆ, ತನಗೆ ಬೇಕಾದದ್ದು ಸಿಕ್ಕರೆ, ಹಿಗ್ಗಲಾ ರನು; ಅಪ್ರಿಯವಾದದ್ದನ್ನು ಪಡೆದರೆ, ತನಗೆ ಬೇಡವಾದದ್ದು ಒದಗಿದರೆ, ತಗ್ಗ ಲಾರನು. ದೇಹವೇ ಆತ್ಮನೆಂದು ತಿಳಿದವರಿಗೆ ಪ್ರಿಯಾಪ್ರಿಯಗಳು * ಹಿಗ್ಗುತಗ್ಗು ಗಳನ್ನುಂಟುಮಾಡುವವೇ ಹೊರತು ಆತ್ಮನೊಬ್ಬನೇ (ಸತ್ಯವೆಂಬುದನ್ನು) ಅರಿತು ಕೊಂಡವನಿಗೆ ಉಂಟುಮಾಡಲಾರವು; ಏಕೆಂದರೆ ಆತನಿಗೆ ಪ್ರಿಯಾಪ್ರಿಯಗಳು ಬರಲಾರವು. ಮತ್ತು, ಸಕಲಪ್ರಾಣಿಗಳಲ್ಲಿ ಸ್ಥಿರಬುದ್ಧಿಯಾಗಿ ಸಮನಾಗಿಯೂ ದೋಷವಿಲ್ಲದವನಾಗಿಯೂ ಇರುವ ಒಬ್ಬನೇ ಆತ್ಮನಿರುವನೆಂದು ಸ್ಥಿರವಾದ ಎಂದರೆ ಸಂದೇಹವಿಲ್ಲದೆ ಇರುವ ಬುದ್ಧಿಯುಳ್ಳವನಾಗಿ– ಮೋಹಗೊಳ್ಳದೆ ಯಾವ ಮೋಹವೂ ಇಲ್ಲದೆ, ಇರುವನು. ಮೇಲೆ ಹೇಳಿದಂತೆ ಬ್ರಹ್ಮದಲ್ಲಿಯೆ ಇದ್ದು ಕೊಂಡಿರುವ ಬ್ರಹ್ಮಜ್ಞಾನಿಯು ಎಂದರೆ ಯಾವ ಕರ್ಮವನ್ನೂ ಮಾಡದ ಸರ್ವ ಕರ್ಮಸಂನ್ಯಾಸಿಯು ಎಂದರ್ಥ.

ಮತ್ತು (ಹೀಗೆ) ಬ್ರಹ್ಮದಲ್ಲಿಯೇ ಇರುವಾತನು ಬಾಹ್ಯಸ್ಪರ್ಶಗಳಲ್ಲಿ ಎಂದರೆ– ಹೊರಗೆ (ಇಂದ್ರಿಯಗಳಿಂದ) ಮುಟ್ಟಿ ಅರಿಯಬೇಕಾದ ಶಬ್ದವೇ ಮುಂತಾದ ವಿಷಯಗಳು **ಸ್ಪರ್ಶ**ಗಳೆನಿಸುವವು†. ಆ– ಹೊರಗಿನ ವಿಷಯಗಳಲ್ಲಿ ಆಸಕ್ತಿಯಿಲ್ಲದ ಅಂತಃಕರಣವುಳ್ಳವನಾಗಿ ಎಂದರೆ ವಿಷಯಗಳಲ್ಲಿ ಪ್ರೇಮವಿಲ್ಲದೆ ಸುಖವೆಂಬುದು ಯಾವದುಂಟೋ ಅದನ್ನು ಆತ್ಮನಲ್ಲಿಯೇ ಪಡೆದುಕೊಳ್ಳುತ್ತಾನೆ ಎಂದು ಅಭಿಪ್ರಾಯ. ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ– ಬ್ರಹ್ಮದಲ್ಲಿ ಯೋಗಮಾಡುವದು ಎಂದರೆ ಮನಸ್ಸಿಡುವದು **ಬ್ರಹ್ಮಯೋಗವು**; ಅಂಥ ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ ಎಂದರೆ ಅದರಲ್ಲಿಯೇ ಕೆಲಸಮಾಡು ತ್ತಿರುವ ಅಂತಃಕರಣವುಳ್ಳ ಆತನು ನಾಶವಿಲ್ಲದ ಸುಖವನ್ನು ಪಡೆಯುತ್ತಾನೆ.

ಆದ್ದರಿಂದ ಆತ್ಮನಲ್ಲಿರುವ ಅಕ್ಷಯಸುಖವನ್ನು ಬಯಸುವಾತನು ಹೊರ ಗಿನ ವಿಷಯಗಳಲ್ಲಿ ಉಂಟಾಗುವ ಕ್ಷಣಿಕಸುಖದಿಂದ ಇಂದ್ರಿಯಗಳನ್ನು ಹಿಮ್ಮೆ ಟ್ಟಿಸಬೇಕು ಎಂದರ್ಥವು.

ಮತ್ತು ಈ ಕಾರಣದಿಂದಲೂ ಹಿಂತಿರುಗಿಸಿಕೊಳ್ಳಬೇಕು:—

* ಛಾಂ. ೮–೧೨–೧ರ ಸೂಚನೆ. † ೨–೧೪ನೆಯ ಶ್ಲೋಕವನ್ನು ನೋಡಿ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥ ೨೨ ॥**

೨೨. ಎಲೈ ಕುಂತೀಕುಮಾರನೆ, ಯಾವ ಭೋಗಗಳು ಸಂಸ್ಪರ್ಶದಿಂದ ಆಗುವವೋ ಅವು ದುಃಖಕ್ಕೆ ಕಾರಣವಾಗಿಯೇ ಇರುವವು, ಆದ್ಯಂತವುಳ್ಳವುಗಳಾಗಿರುವವು. ತಿಳಿದವನು ಅವುಗಳಲ್ಲಿ ಪ್ರೀತಿಯಿಡುವದಿಲ್ಲ.

[ ಭಾಷ್ಯ ]

ಏಕೆಂದರೆ, ಯಾವವು ಸಂಸ್ಪರ್ಶದಿಂದ ಆಗುವವೋ ಎಂದರೆ ವಿಷಯಗಳ ಮತ್ತು ಇಂದ್ರಿಯಗಳ ಸಂಬಂಧದಿಂದ ಉಂಟಾಗುವವೋ ಆ ಭೋಗಗಳು, ಅವಿದ್ಯೆಯಿಂದ ಆಗಿರುವದರಿಂದ ದುಃಖಕ್ಕೆ ಕಾರಣವೇ ಆಗಿರುವವು. ಏಕೆಂದರೆ ಅವುಗಳಿಂದಲೇ ಆಧ್ಯಾತ್ಮಿಕವೇ * ಮುಂತಾದ ದುಃಖಗಳು ಉಂಟಾಗುತ್ತಿರುವದನ್ನು ಕಂಡಿದೇವೆ. ಏ['ಏವ] ಎಂಬ (ಅವಧಾರಣಾರ್ಥಕವಾದ) ಮಾತಿನ ಪದದಿಂದ ಈ ಲೋಕದಲ್ಲಿ ಹೇಗೆ (ಅವು ದುಃಖಕ್ಕೆ ಕಾರಣವಾಗಿರುವವೋ) ಅದರಂತೆ ಪರಲೋಕದಲ್ಲಿಯೂ (ಆಗಿರುವವು ಎಂದು ನಿಶ್ಚಯವಾಗುತ್ತದೆ). ಸಂಸಾರದಲ್ಲಿ ಸುಖದ ವಾಸನೆಯೂ ಕೂಡ ಇರುವದಿಲ್ಲವೆಂಬುದನ್ನು ತಿಳಿದುಕೊಂಡು ವಿಷಯಗಳೆಂಬ ಬಿಸಿಲುಕುದುರೆಯಿಂದ ಇಂದ್ರಿಯಗಳನ್ನು ಹಿಂಜಗ್ಗಬೇಕು.

ಇವು ದುಃಖಕ್ಕೆ ಕಾರಣವಾಗಿರುವವೆಂಬುದೊಂದೇ ಅಲ್ಲ, ಆದ್ಯಂತವುಳ್ಳವೂ ಆಗಿರುವವು. ಭೋಗಗಳಿಗೆ ಆದಿಯೆಂದರೆ ವಿಷಯಕ್ಕೂ ಇಂದ್ರಿಯಕ್ಕೂ ಆಗುವ ಸಂಬಂಧವು, ಅಂತವೆಂದರೆ ಅವುಗಳು ಒಂದನ್ನೊಂದು ಅಗಲುವದು; ಆದ್ದರಿಂದ ಅವು ಆದ್ಯಂತವುಳ್ಳವು, ನಡುವೆ ಎಲ್ಲಿಯೋ ಒಂದು ಕ್ಷಣವಿರುವದರಿಂದ ಅವು ಅನಿತ್ಯವಾಗಿರುವವು ಎಂದರ್ಥ. ಎಲೈ ಕುಂತೀಕುಮಾರನೆ, ಈ ಭೋಗಗಳಲ್ಲಿ ಬುಧನು ಎಂದರೆ ಪರಮಾರ್ಥತತ್ತ್ವವನ್ನು ಅರಿತುಕೊಂಡಿರುವ ವಿವೇಕಿಯು ಪ್ರೀತಿ ಮಾಡನು, ಅತ್ಯಂತ ಮೂಢರಾದವರಿಗೆ ಮಾತ್ರ ಪಶುಗಳೇ ಮುಂತಾದವುಗಳಿಗಿರುವಂತೆ ವಿಷಯಗಳಲ್ಲಿ ಪ್ರೀತಿಯಿರುವದು ಕಂಡುಬರುತ್ತದೆ.

ಮತ್ತು ಇದು ಮುಕ್ತಿಯ ಹಾದಿಗೆ ಅಡ್ಡಲಾಗಿರುವ ಬಹು ಕೆಟ್ಟದೋಷವು; ಇದು ಸಕಲ ಅನರ್ಥಗಳೂ ಉಂಟಾಗುವದಕ್ಕೆ ಕಾರಣವು; ಇದನ್ನು ಪರಿಹರಿಸಿ

* ಆಧ್ಯಾತ್ಮಿಕ— ಎಂದರೆ ಶರೀರದಲ್ಲಿ ಆಗುವ ದುಃಖವು; ಆದಿಭೌತಿಕ— ಎಂದರೆ ಹೊರಗಿನ ಪ್ರಾಣಿಗಳೇ ಮುಂತಾದವುಗಳಿಂದ ಆಗುವ ದುಃಖವು ; ಆಧಿದೈವಿಕ— ಎಂದರೆ ಅಂತರಿಕ್ಷದ ಸಿಡಿಲು ಮುಂತಾದವುಗಳ ಸಂಬಂಧದಿಂದ ಆಗುವ ದುಃಖವು ಇವು ಮೂರೂ ವಿಷಯೇಂದ್ರಿಯಗಳ ಸಂಬಂಧದಿಂದ ಆಗುವ ಅನುಭವಗಳು.

ಕೊಳ್ಳುವದೂ ಕಷ್ಟ. ಆದ್ದರಿಂದ ಇದನ್ನು ಕಳೆದುಕೊಳ್ಳುವದಕ್ಕೆ ಹೆಚ್ಚಿನ ಯತ್ನವನ್ನು ಮಾಡಬೇಕು— ಎಂದು ಭಗವಂತನು ಈ ಮಾತನ್ನು ಹೇಳುತ್ತಿದ್ದಾನೆ:—

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩ ॥**

೨೩. ಶರೀರದಿಂದ ಬಿಡುಗಡೆಯಾಗುವವರೆಗೂ ಯಾವಾತನು ಕಾಮಕ್ರೋಧಗಳಿಂದಾಗುವ ವೇಗವನ್ನು ಮೊದಲು ಇಲ್ಲಿಯೇ ತಡೆದುಕೊಳ್ಳಲಾಪನೋ ಅವನು ಯುಕ್ತನು, ಆ ಮನುಷ್ಯನೇ ಸುಖಿಯು.

[ಭಾಷ್ಯ]

ಇಲ್ಲಿಯೇ ಎಂದರೆ ಬದುಕಿರುವಾಗಲೇ, ಮೊದಲು ಮುಂಚೆಯೇ * ದೇಹದಿಂದ ಬಿಡುಗಡೆಯಾಗುವವರೆಗೂ† ಮರಣವಾಗುವವರೆಗೂ ಎಂದರ್ಥ. ಸಾವನ್ನೇ ಮೇರೆಯನ್ನಾಗಿಟ್ಟುಕೊಂಡು (ಹೇಳಿರುವ)ದೇಕೆಂದರೆ ಬದುಕಿರುವವನಿಗೆ ಕಾಮಕ್ರೋಧಗಳಿಂದಾಗುವ ವೇಗವು ಅವಶ್ಯವಾಗಿ ಆಗಿಯೇ ತೀರುವದು, ಏಕೆಂದರೆ ಅದಕ್ಕೆ ಲೆಕ್ಕವಿಲ್ಲದಷ್ಟು ಕಾರಣಗಳಿರುವವು—ಎಂಬ ಅಭಿಪ್ರಾಯದಿಂದ; ಸಾಯುವವರೆಗೂ ಇದನ್ನು ನೆಚ್ಚಕೂಡದು ಎಂದರ್ಥ. ಕಾಮವೂ— ಮೊದಲು ಅನುಭವಿಸಿ ಸುಖಕ್ಕೆ ಕಾರಣವಾಗಿದ್ದದ್ದರಿಂದ ತನಗೆ ಇಷ್ಟವಾಗಿರುವ ವಿಷಯವು ಇಂದ್ರಿಯಗೋಚರವಾದರೆ, ಅಥವಾ ಅದರ ವಿಷಯವಾಗಿ ಕೇಳಿದರೆ, ಅಥವಾ ಅದು ನೆನಪಿಗೆ ಬಂದರೆ ಯಾವ ಬಯಕೆಯು ಹಂಬಲಿಕೆಯು ಉಂಟಾಗುವದೋ ಅದು ಕಾಮವು; ಅದೂ— ಕ್ರೋಧವೂ— ತನಗೆ ಬೇಡದ ದುಃಖಕ್ಕೆ ಕಾರಣವಾದ ವಸ್ತುಗಳನ್ನು ಕಂಡರೆ ಅಥವಾ ಕೇಳಿದರೆ ಅಥವಾ ಅವು ನೆನಪಿಗೆ ಬಂದರೆ ಯಾವ ಹಗೆತನವು ಉಂಟಾಗುವದೋ, ಅದು ಕ್ರೋಧವು (ಅದೂ); ಕಾಮಕ್ರೋಧಗಳೆಂಬಿವು ಯಾವ ವೇಗಕ್ಕೆ ಹುಟ್ಟುವ ಕಾರಣಗಳೋ ಅದು ಕಾಮಕ್ರೋಧೋದ್ಭವವೇಗವೆನಿಸುವದು. ಕೂದಲು ನೆಟ್ಟಗಾಗುವದು, ಅರಳಿದ ಕಣ್ಣಿನ ಮುಖ— ಮುಂತಾದ ಗುರುತುಗಳಿಂದ ಗೊತ್ತಾಗುವ ಅಂತಃಕರಣದ ಒಲಿದಾಟವೇ ಕಾಮದಿಂದುಂಟಾಗುವ ವೇಗವು; ಮೈ ನಡುಗುವದು, ಮೈ ಬೆವರು

* ಕಾಮಕ್ರೋಧಗಳ ವೇಗವು ಅನರ್ಥರೂಪವಾಗಿ ಪರಿಣಮಿಸುವದಕ್ಕೆ ಮೊದಲೇ ತಡೆದುಕೊಳ್ಳುವದಕ್ಕೆ ಯತ್ನಿಸಬೇಕು : ತನ್ನಲ್ಲಿ ಅದು ಉಂಟಾಗುತ್ತಲೂ ಕೂಡಲೆ ಚಿಗುಟಿಹಾಕಬೇಕು ಎಂದರ್ಥ.

† ಕಠ ೨-೩-೪ನ್ನು ನೋಡಿ.

ವದು, ಔಡುಕಚ್ಚುವದು, ಕಣ್ಣು ಕೆಂಪೇರುವದು– ಮುಂತಾದ ಗುರುತು ಗಳಿಂದ ಗೊತ್ತಾಗುವ (ಅಂತಃಕರಣದ ಒಲವೇ) ಕ್ರೋಧದಿಂದಾಗುವ ವೇಗವು. ಈ ಕಾಮಕ್ರೋಧಗಳ ಹೊಡೆತವನ್ನು ಯಾವಾತನು (ಬದುಕಿರುವಾಗಲೇ) ಸಹಿ ಸುವದಕ್ಕೆ ಎಂದರೆ ತಡೆದುಕೊಳ್ಳುವದಕ್ಕೆ ಶಕ್ತನಾಗಿರುವನೋ (ತಡೆದುಕೊಳ್ಳ) ಲಾಪನೋ, ಅವನು ಯುಕ್ತನು, ಯೋಗಿಯು ; ಈ ಲೋಕದಲ್ಲಿ ಅವನೇ ಸುಖಿ ಯಾದ ಮನುಷ್ಯನು.

ಬ್ರಹ್ಮದಲ್ಲಿ ಮತ್ತು ಹೇಗಿರುವವನು ಬ್ರಹ್ಮವನ್ನು ಪಡೆಯುವನು? ಎಂದರೆ ಭಗವಂತನು ಹೇಳುತ್ತಾನೆ:—

**ಯೋಽನ್ತಃಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

೨೪. ಯಾವನು ಒಳಗೆ ಸುಖವುಳ್ಳಾತನೋ ಒಳಗೇ ಪ್ರೀತಿಯುಳ್ಳ ವನೋ ಮತ್ತು ಯಾವಾತನು ಒಳಗಿನ ಬೆಳಕುಳ್ಳವನೋ ಆ ಯೋಗಿಯು ಬ್ರಹ್ಮನಾಗಿ ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆ.

[ ಭಾಷ್ಯ ]

ಯಾವನು ಒಳಗೆ ಆತ್ಮನಲ್ಲಿಯೇ* ಸುಖವುಳ್ಳವನೋ, ಮತ್ತು ಒಳಗೇ ಪ್ರೀತಿಯುಳ್ಳವನೋ, ಎಂದರೆ ಆತ್ಮನಲ್ಲಿಯೇ ಕ್ರೀಡೆಯುಳ್ಳವನೋ,† ಅದ ರಂತೆಯೇ ಒಳಗೇ ಜ್ಯೋತಿಯುಳ್ಳವನೋ,‡ ಎಂದರೆ ಪ್ರಕಾಶವುಳ್ಳವನಾಗಿರು ವವನೋ,–ಯಾವನು ಈ ರೀತಿಯಲ್ಲಿರುವನೋ ಆ ಯೋಗಿಯು **ಬ್ರಹ್ಮನಿರ್ವಾಣ** ವನ್ನು ಎಂದರೆ ಬ್ರಹ್ಮದಲ್ಲಿಯೇ ಆಗುವ ಸುಖವಾದ ಮೋಕ್ಷವನ್ನು ಈ ಲೋಕ ದಲ್ಲಿರುವಾಗಲೇ ಬ್ರಹ್ಮನಾಗಿದ್ದು§ ಪಡೆಯುವನು.

ಮತ್ತು:—

**ಲಭನ್ತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

೨೫. ಕಲ್ಮಷಗಳೆಲ್ಲ ನಾಶವಾಗಿರುವವರಾಗಿಯೂ ಸಂಶಯಗಳನ್ನೆಲ್ಲ ಕತ್ತರಿಸಿಕೊಂಡವರಾಗಿಯೂ, ಯತಾತ್ಮರಾಗಿಯೂ, ಸರ್ವಭೂತಗಳ ಹಿತದಲ್ಲ ನಿರತರಾಗಿಯೂ, ಇರುವ ಋಷಿಗಳು ಬ್ರಹ್ಮನಿರ್ವಾಣವನ್ನು ಪಡೆಯುವರು.

* ತೈ. ೨–೭. † ಛಾಂ. ೭–೨೫–೨. ‡ ಬೃ. ೪–೩–೬.

§ ಸತ್ತ ಮೇಲೆ ಮೋಕ್ಷವಾಗುವದೆಂದು ಭಾವಿಸಕೂಡದು ; ಜ್ಞಾನಿಗಳಿಗೆ ಯಾವಾಗಲೂ ಮುಕ್ತಿಯೇ.

[ ಭಾಷ್ಯ. ]

ಕಲ್ಮಷಗಳೆಲ್ಲ ನಾಶವಾಗಿರುವವರಾಗಿಯೂ ಎಂದರೆ ಪಾಪವನ್ನು ಕಳೆದುಕೊಂಡಿರುವವರಾಗಿಯೂ, ಸಂಶಯಗಳನ್ನೆಲ್ಲ ಕತ್ತರಿಸಿಕೊಂಡಿರುವವರಾಗಿಯೂ ಎಲ್ಲಾ ಬಗೆಯ ಸಂದೇಹಗಳನ್ನೂ ನಿವಾರಣೆಮಾಡಿಕೊಂಡಿರುವವರಾಗಿಯೂ * ಯತಾತ್ಮರಾಗಿಯೂ ಎಂದರೆ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡಿರುವವರಾಗಿಯೂ, ಸರ್ವಭೂತಗಳ ಹಿತದಲ್ಲಿ ನಿರತರಾಗಿಯೂ ಎಂದರೆ ಸಕಲ ಪ್ರಾಣಿಗಳಿಗೂ ಅನುಕೂಲವಾದದ್ದನ್ನು ಉಂಟುಮಾಡುವದರಲ್ಲಿಯೇ ಆಸಕ್ತರಾಗಿಯೂ ಅಹಿಂಸಕರಾಗಿಯೂ ಎಂದರ್ಥ; ಹೀಗಿರುವ ಋಷಿಗಳು ಎಂದರೆ ಸರಿಯಾದ ತಿಳಿವಳಿಕೆಯನ್ನು ಸಂಪಾದಿಸಿಕೊಂಡಿರುವ ಸಂನ್ಯಾಸಿಗಳು ಬ್ರಹ್ಮನಿರ್ವಾಣವನ್ನು ಎಂದರೆ ಮೋಕ್ಷವನ್ನು ಪಡೆಯುವರು.

ಮತ್ತು,

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬ ॥**

೨೬. ಕಾಮಕ್ರೋಧಗಳಿಲ್ಲದವರಾಗಿಯೂ ಯತಚಿತ್ತರಾಗಿಯೂ ಆತ್ಮವನ್ನು ತಿಳಿದವರಾಗಿಯೂ ಇರುವ ಯತಿಗಳಿಗೆ ಬ್ರಹ್ಮನಿರ್ವಾಣವು ಎಲ್ಲೆಲ್ಲಿಯೂ ಇರುವದು.

[ ಭಾಷ್ಯ ]

ಕಾಮಕ್ರೋಧಗಳು ಎಂದರೆ ಆಸೆ ಮತ್ತು ಸಿಟ್ಟು; ಇವುಗಳಿಲ್ಲದೆ ಇರುವ ಯತಿಗಳಿಗೆ ಎಂದರೆ ಸಂನ್ಯಾಸಿಗಳಿಗೆ. ಯತಚಿತ್ತರಾಗಿರುವವರು ಎಂದರೆ ಅಂತಃಕರಣವನ್ನು ವಶದಲ್ಲಿಟ್ಟುಕೊಂಡಿರುವವರು ಆತ್ಮವನ್ನು ತಿಳಿದವರು ಎಂದರೆ ಆತ್ಮಸ್ವರೂಪವನ್ನು ಅರಿತುಕೊಂಡಿರುವವರು, ಸರಿಯಾದ ಜ್ಞಾನವುಳ್ಳವರು. ಅಂಥವರಿಗೆ ಎಲ್ಲೆಲ್ಲಿಯೂ ಎಂದರೆ ಬದುಕಿರುವಾಗಲೂ ಸತ್ತ ಮೇಲೂ ಎರಡು ಕಡೆಯಲ್ಲಿಯೂ ಬ್ರಹ್ಮನಿರ್ವಾಣವು ಎಂದರೆ ಮೋಕ್ಷವು ಇದ್ದುಕೊಂಡಿರುವದು.

## ಜ್ಞಾನಕ್ಕೆ ಧ್ಯಾನಯೋಗವು ಅಂತರಂಗಸಾಧನ

ಸರಿಯಾದ ಜ್ಞಾನದಲ್ಲಿಯೇ ನಿಂತಿರುವ ಸಂನ್ಯಾಸಿಗಳಿಗೆ ಕೂಡಲೆ ಮುಕ್ತಿಯಾಗುವದೆಂದು [ಸದ್ಯೋಮುಕ್ತಿಃ] ಹೇಳಿದ್ದಾಯಿತು : ಮತ್ತು ಸರ್ವಭಾವಗಳನ್ನೂ ಈಶ್ವರನಲ್ಲಿ ಅರ್ಪಣೆಮಾಡಿ ನಡೆಯಿಸಬೇಕಾದ ಕರ್ಮಯೋಗವನ್ನೂ

* ಮುಂಡಕ ೨-೨-೮.

(ಹೇಳಿದ್ದಾಯಿತು. ಇದನ್ನು) **ಈಶ್ವರನೆಂಬ ಬ್ರಹ್ಮದಲ್ಲಿ ಅರ್ಪಣೆಮಾಡಿದರೆ * ಮೊದಲು ಸತ್ತ್ವಶುದ್ಧಿ, ಆಮೇಲೆ ಜ್ಞಾನಪ್ರಾಪ್ತಿ, ಆದರಿಂದ ಸರ್ವಕರ್ಮಗಳ ಸಂನ್ಯಾಸ– ಈ ಕ್ರಮದಿಂದ ಮೋಕ್ಷಕ್ಕೆ ಕಾರಣ**ವಾಗುವದೆಂದು ಭಗವಂತನು ಮತ್ತೆಮತ್ತೆ † ಹೇಳಿರುತ್ತಾನೆ. ಮುಂದೆಯೂ ಹೇಳುತ್ತಾನೆ. ಇನ್ನು ಈಗ **ಸರಿಯಾದ ತಿಳಿವಳಿಕೆಗೆ ಒಳಸಾಧನವಾದ ಧ್ಯಾನಯೋಗವನ್ನು** ವಿಸ್ತಾರವಾಗಿ ಹೇಳಬೇಕೆಂದು ಆ (ಧ್ಯಾನಯೋಗದ) ಸೂತ್ರಗಳಂತಿರುವ ಶ್ಲೋಕಗಳನ್ನು ಹೇಳಿರುತ್ತಾನೆ.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರಚಾರಿಣೌ ॥ ೨೭ ॥**

**ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥**

೨೭–೨೮. ಹೊರಗಿನ ಸ್ಪರ್ಶಗಳನ್ನು ಹೊರಗಟ್ಟುಮಾಡಿ, ಕಣ್ಣನ್ನು ಹುಬ್ಬುಗಳ ನಡುವೆ ಇಟ್ಟು, ಮೂಗಿನಲ್ಲಿ ಸರಿದಾಡುವ ಪ್ರಾಣಾಪಾನಗಳನ್ನು ಸಮವಾಗಿ ಮಾಡಿಕೊಂಡು, ಇಂದ್ರಿಯಗಳನ್ನೂ, ಮನಸ್ಸನ್ನೂ, ಬುದ್ಧಿಯನ್ನೂ ಸ್ವಾಧೀನದಲ್ಲಿಟ್ಟುಕೊಂಡು, ಮೋಕ್ಷವೇ ಹೆಚ್ಚಿನ ಗತಿಯೆಂದು ತಿಳಿದು, ಇಚ್ಛಾಭಯಕ್ರೋಧಗಳು ಇಲ್ಲದೆ ಇರುವ ಮುನಿಯು ಯಾರೋ ಅವನು ಯಾವಾಗಲೂ ಮುಕ್ತನೇ.

[ ಭಾಷ್ಯ ]

ಹೊರಗಿನ ಸ್ಪರ್ಶಗಳನ್ನು ಎಂದರೆ ಶಬ್ದವೇ ಮುಂತಾದವುಗಳನ್ನು ‡ ಹೊರಗಟ್ಟುಮಾಡಿ ಕಿವಿಯೇ ಮುಂತಾದವುಗಳ ಮೂಲಕ ಒಳಗಿರುವ ಬುದ್ಧಿಯನ್ನು ಹೊಕ್ಕಿರುವ ಶಬ್ದವೇ ಮುಂತಾದ ವಿಷಯಗಳಿರುವವಷ್ಟೆ, ಅವುಗಳನ್ನು ಚಿಂತಿಸದೆ ಇದ್ದರೆ ಅವುಗಳನ್ನು ಹೊರಕ್ಕೇ ಹಾಕಿದಂತೆ ಆಯಿತು ; ಹೀಗೆ ಅವುಗಳನ್ನು ಹೊರಕ್ಕೆ ಹಾಕಿ, ಕಣ್ಣನ್ನು ಹುಬ್ಬುಗಳ § ನಡುವೆ (ಮಾಡಿ) 'ಇಟ್ಟುಕೊಂಡು' ಎಂದು ಸೇರಿಸಿಕೊಳ್ಳಬೇಕು ; ಮೂಗಿನಲ್ಲಿ ಓಡಾಡುತ್ತಿರುವ ಪ್ರಾಣವನ್ನು ಅಪಾನವನ್ನೂ ಸಮವಾಗಿ ಮಾಡಿಕೊಂಡು, ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ವಶದಲ್ಲಿಟ್ಟುಕೊಂಡು, ಮುನಿಯಾಗಿ ಎಂದರೆ ಮನನ

* ೫–೧೦ ನೆಯ ಶ್ಲೋಕವನ್ನೂ ಅದರ ಭಾಷ್ಯವನ್ನೂ ನೋಡಿ.

† ಕರ್ಮವು ತಾನೇ ಮೋಕ್ಷಸಾಧನವಲ್ಲ, ಪರಂಪರೆಯಿಂದ ಸಾಧನವಾಗಿದೆ– ಎಂಬುದನ್ನು ಮತ್ತೆಮತ್ತೆ ಹೇಳಿರುತ್ತಾನೆಂದು ಭಾವ.

‡ ಶಬ್ದ, ಸ್ಪರ್ಶ, ರೂಪ, ರಸ, ಗಂಧ–ಇವುಗಳನ್ನು

§ ೬–೧೩, ೮–೧೦ ಈ ಶ್ಲೋಕಗಳನ್ನು ನೋಡಿ.

ಮಾಡುತ್ತಾ, ಎಂದರೆ ಸಂನ್ಯಾಸಿಯಾಗಿ (ಎಂದರ್ಥ); ಮೋಕ್ಷಪರಾಯಣನಾಗಿ ಎಂದರೆ ಹೀಗೆ ದೇಹವನ್ನಿಟ್ಟುಕೊಂಡು ಮೋಕ್ಷವೇ ಹೆಚ್ಚಿನ ಗತಿಯೆಂದು ನಂಬಿ ಮುನಿಯಾಗಿರಬೇಕು. ಆಸೆಯೂ, ಹೆದರಿಕೆಯೂ, ಸಿಟ್ಟೂ ಯಾವನನ್ನು ಬಿಟ್ಟು ತೊಲಗಿರುವವೋ ಅವನು ವಿಗತೇಚ್ಛಾಭಯಕ್ರೋಧನು. ಯಾವ ಸಂನ್ಯಾಸಿಯು ಯಾವಾಗಲೂ ಹೀಗೆ ಇರುವನೋ ಅವನು ಮುಕ್ತನೆ, ಅವನು ಮುಕ್ತಿಗಾಗಿ* ಮತ್ತೇನೂ ಮಾಡಬೇಕಾದ್ದಿಲ್ಲ.

ಹೀಗೆ ಮನಸ್ಸನ್ನು ಸಮಾಧಿಯಲ್ಲಿಟ್ಟುಕೊಂಡವನು ತಿಳಿಯತಕ್ಕದ್ದು ಏನು? ಎಂದರೆ ಹೇಳುತ್ತೇನೆ, ಕೇಳು:—

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥ ೨೯ ॥**

೨೯. ನಾನು ಯಜ್ಞತಪಸ್ಸುಗಳ ಭೋಕ್ತೃವೂ ಸರ್ವಲೋಕಕ್ಕೂ ಮಹೇಶ್ವರನೂ ಸರ್ವಭೂತಗಳಿಗೂ ಸ್ನೇಹಿತನೂ ಆದವನೆಂದು ತಿಳಿದು (ಆಮೇಲೆ) ಶಾಂತಿಯನ್ನು ಹೊಂದುತ್ತಾನೆ.

[ಭಾಷ್ಯ]

ಯಜ್ಞಗಳ ಮತ್ತು ತಪಸ್ಸುಗಳ (ಫಲವನ್ನು) ಕರ್ತೃರೂಪದಿಂದಲೂ † ದೇವತೆಯ ರೂಪದಿಂದಲೂ ಭೋಗಿಸುವವನೂ, ಸರ್ವಲೋಕಮಹೇಶ್ವರನೂ ಎಂದರೆ ಸರ್ವಲೋಕಗಳಿಗೂ ದೊಡ್ಡವನಾದ ಈಶ್ವರನೂ, ಸರ್ವಭೂತಗಳಿಗೂ ಸ್ನೇಹಿತನೂ ಎಂದರೆ ಎಲ್ಲಾ ಪ್ರಾಣಿಗಳಿಗೂ (ಯಾವ) ಉಪಕಾರವನ್ನೂ ಬಯಸದೆಯೇ ಉಪಕಾರಿಯಾಗಿರುವವನೂ- ಸರ್ವಪ್ರಾಣಿಗಳ ಹೃದಯದಲ್ಲಿದ್ದುಕೊಂಡು ಎಲ್ಲಾ ಕರ್ಮಗಳ ಫಲಕ್ಕೂ ಒಡೆಯನಾಗಿರುವವನೂ ಎಲ್ಲಾ ಅರಿವುಗಳಿಗೂ‡ ಸಾಕ್ಷಿಯೂ ಆಗಿರುವ **ನಾರಾಯಣ**ನೆಂದು ನನ್ನನ್ನು ಅರಿತುಕೊಂಡರೆ ಶಾಂತಿಯನ್ನು ಎಂದರೆ ಸರ್ವಸಂಸಾರದಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

ಇತಿ ಶ್ರೀ ಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಸಂನ್ಯಾಸಯೋಗೋ** ನಾಮ
ಪಂಚಮೋಽಧ್ಯಾಯಃ

---

* ಶ್ರವಣಮನನನಿದಿಧ್ಯಾಸನಗಳನ್ನು ಮಾಡುವವನಿಗೆ ಅಗತ್ಯವಾಗಿ ಮುಕ್ತಿಯಾಗುವದು.

† ಗೀ.೪-೨೪; ೯-೨೪; ೫-೧೪. ‡. ಗೀ.೧೩-೨೨; ೧೮-೬೧; ಬ್ರ.ಸೂ.೩-೨-೬.

# ಐದನೆಯ ಅಧ್ಯಾಯದ ಸಾರವು.

೧—೩. ಅರ್ಜುನನು "ಕರ್ಮಗಳನ್ನು ಮಾಡಬೇಕೆಂದು ಒಮ್ಮೆ, ಬಿಡಬೇಕೆಂದು ಒಮ್ಮೆ ಹೇಳುತ್ತೀಯಲ್ಲ ; ಇವೆರಡರಲ್ಲಿ ನನಗೆ ಯಾವದು ಒಳ್ಳೆಯದೋ ಅದನ್ನು ಗೊತ್ತಾಗಿ ಹೇಳಿಬಿಡು" ಎಂದು ಕೇಳಲು, ಭಗವಂತನು ಇಂತೆಂದನು:—"ಸಂನ್ಯಾಸವೂ ಕರ್ಮಯೋಗವೂ ಎರಡೂ ಮೋಕ್ಷಕ್ಕೆ ಬೇಕಾದದ್ದೇ ; ಆದರೆ ಕರ್ಮವನ್ನು ಬಿಡುವದಕ್ಕಿಂತ ಮಾಡುವದೇ ಮೇಲು. ಅದೇಕೆಂದರೆ ರಾಗ ದ್ವೇಷಗಳಿಲ್ಲದೆ ಕರ್ಮವನ್ನು ಮಾಡುವವನು ನಿತ್ಯಸಂನ್ಯಾಸಿಯೆನಿಸಿರುವನು, ಅವನಿಗೆ ಬಂಧವು ಸುಲಭವಾಗಿ ಕಳಚಿಹೋಗುವದು.

೪—೭. "ಕರ್ಮಕ್ಕೆ ಸಮಬುದ್ಧಿಯೇ ಮುಂತಾದವೂ ಸೇರಿದರೆ ಅದಕ್ಕೆ 'ಯೋಗ'ವೆಂದು ಹೆಸರು ; ಸಂನ್ಯಾಸಕ್ಕೆ ಜ್ಞಾನವೇ ಮುಂತಾದವು ಸೇರಿದರೆ 'ಸಾಂಖ್ಯ'ವೆಂದು ಹೆಸರು. ಇವೆರಡೂ ಮೋಕ್ಷಕ್ಕೆ ಎರಡು ಸ್ವತಂತ್ರವಾದ ಮಾರ್ಗಗಳಲ್ಲ ; ಇವುಗಳಲ್ಲಿ ಯಾವದೊಂದನ್ನು ಚೆನ್ನಾಗಿ ನಡೆಸಿ ದರೂ ಎರಡಕ್ಕೂ ಫಲವಾದ ಮೋಕ್ಷವು ದೊರತೇ ದೊರೆಯುವದು. ಆದರೂ ನಿಜವಾದ ಸಂನ್ಯಾಸ ವೆಂಬುದು ಯೋಗವಿಲ್ಲದೆ ದಕ್ಕುವದಿಲ್ಲ ; ಯೋಗದಿಂದ ಚಿತ್ತಶುದ್ಧಿಯನ್ನು ಪಡೆದವನು ಜಿತೇಂದ್ರಿ ಯನಾಗಿ ಜ್ಞಾನವನ್ನು ಪಡೆದು ನಿಷ್ಕರ್ಮವಾದ ಬ್ರಹ್ಮವನ್ನೆ ಪಡೆಯುವನು. ಆದ್ದರಿಂದ ಕರ್ಮ ಯೋಗಿಗಾಗಲಿ ಜ್ಞಾನಿಗಾಗಲಿ ಕರ್ಮವು ಬಂಧಕವಾಗುವದಿಲ್ಲ.

೮—೧೩. "ನಿಜವಾಗಿ ನೋಡಿದರೆ ಜ್ಞಾನಿಯು ಯಾವ ಕರ್ಮವನ್ನೂ ಮಾಡುವದಿಲ್ಲ. ವ್ಯವಹಾರದೃಷ್ಟಿಯಿಂದ ಮಾತ್ರವೇ ಅವನು ದೇಹದಲ್ಲಿ ನಡೆಯುವ ನೋಡುವದು, ಕೇಳುವದು— ಮುಂತಾದ ವ್ಯಾಪಾರಗಳಿಗೆ ಕರ್ತೃವಾಗಿರುವನು ಅವನು 'ನಾನೇನೂ ಮಾಡುವದಿಲ್ಲ' ಎಂದೇ ಅರಿ ತಿರುವನು. ಇನ್ನು ಅವನಿಗೆ ಕರ್ಮದ ಲೇಪವೆಂಬುದಲ್ಲಿ ಬಂತು? ಕರ್ಮಯೋಗಿಯೋ ಎಂದರೆ ಅವನು ತಾನು ಮಾಡುವ ಕರ್ಮಗಳನ್ನೆಲ್ಲ ಈಶ್ವರನಲ್ಲಿ ಅರ್ಪಿಸಿ ಸಂಗರಹಿತನಾಗಿ ಮಾಡುತ್ತಿರುವದರಿಂದ ಅವನಿಗೂ ಕರ್ಮವು ಬಂಧಕವಾಗುವದಿಲ್ಲ ; ಅವನ ಕರ್ಮದಿಂದ ಚಿತ್ತಶುದ್ಧಿಯೊಂದೇ ಫಲವಾಗು ವದು. ಅದರಿಂದ ಜ್ಞಾನವಾಗಿ ಮುಕ್ತಿಯೂ ಆಗುವದು. ಕರ್ಮದ ಫಲದಲ್ಲಿ ಆಶೆಯುಳ್ಳವನು ಮಾತ್ರ ಸಂಸಾರಕ್ಕೆ ಕಟ್ಟುಬೀಳುತ್ತಾನೆ.

೧೩—೧೫. "ಜ್ಞಾನಿಯಾದವನಿಗೆ ಕರ್ಮವೇ ಇರುವದಿಲ್ಲವೆಂದು ಹೇಳಿದೆನಲ್ಲವೆ? ಅವನ ಮನಃಸ್ಥಿತಿಯನ್ನು ಹೇಳುವೆನು ಕೇಳು. ಅವನು ಉಳಿದವರ ಹಾಗೆ ತಾನು ದೇಹವೆಂದು ತಿಳಿದು ಕೊಂಡಿರುವದಿಲ್ಲ ; ತಾನು ಏನೂ ಮಾಡದ, ಮತ್ತೊಬ್ಬರಿಂದ ಏನೂ ಮಾಡಿಸದ ಅಸಂಗನಾದ ಆತ್ಮನೇ ಎಂದರಿತಿರುತ್ತಾನೆ. ಆದ್ದರಿಂದ ಅವನು ಪರಮಾರ್ಥಸಂನ್ಯಾಸಿಯು, ಎಂದರೆ ಎಲ್ಲಾ ಕರ್ಮಗಳನ್ನೂ ನಿಜವಾಗಿ ಬಿಟ್ಟವನು. ನಿಜವಾಗಿ ನೋಡಿದರೆ ಕರ್ತೃತ್ವವು ಯಾರಿಗೂ ಇರುವದಿಲ್ಲ. ಆದರೆ ಸ್ವಭಾವದಿಂದ ಅಜ್ಞರಾಗಿರುವದರಿಂದ ಜನರು ತಾವು ಕರ್ಮವನ್ನು ಮಾಡುತ್ತಿರುವೆವೆಂದು ಅರಿ ಯುತ್ತಿರುವರು. ನಿಜವಾದ ದೃಷ್ಟಿಯಲ್ಲಿ ಕ್ರಿಯೆಯಿಲ್ಲ, ಕ್ರಿಯೆಗೆ ಸಾಧನವಾದ ದ್ರವ್ಯಗಳಿಲ್ಲ, ಅವುಗಳನ್ನು ಅರ್ಪಿಸುವದಕ್ಕೆ ಬೇಕಾದ ದೇವತೆಯೂ ಇಲ್ಲ ; ಇವೆಲ್ಲವೂ ನಿಷ್ಕರ್ಮವಾದ ಬ್ರಹ್ಮವೆ.

೧೬–೨೧. ''ಜ್ಞಾನಿಗಳು ಆತ್ಮನ ಸ್ವರೂಪವನ್ನರಿತುಕೊಂಡು ಅದರಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿರುವರು. ಅವರಿಗೆ ಅದಕ್ಕಿಂತ ಹೆಚ್ಚಿನ ಪದಾರ್ಥವು ಯಾವದೂ ಇರುವದಿಲ್ಲ. ಲೋಕದಲ್ಲಿ ಗುಣಗಳ ಭೇದದಿಂದ ತೋರುವ ಸಾತ್ತ್ವಿಕರಾಜಸತಾಮಸಜೀವರೆಲ್ಲ ಅವರಿಗೆ ಪರಬ್ರಹ್ಮರೂಪರಾಗಿಯೇ ತೋರುವರು. ಹೀಗೆ ಅವರು ಎಲ್ಲರನ್ನೂ ಒಂದೇ ಬಗೆಯಾಗಿ ಕಂಡದ್ದರಿಂದ ಹೆಚ್ಚಾದವರನ್ನು ಕಡಿಮೆಯಾಗಿ ಕಂಡ ದೋಷವಾಗಲಿ ಕಡಿಮೆಯವರನ್ನು ಮೇಲಕ್ಕೇರಿಸಿದ ದೋಷವಾಗಲಿ ಆ ಜ್ಞಾನಿಗಳಿಗೆ ಬರುವದಿಲ್ಲ; ಏಕೆಂದರೆ ನಿರ್ದೋಷವಾದ ಬ್ರಹ್ಮವೇ ಸಕಲ ಜೀವರ ರೂಪದಲ್ಲಿಯೂ ತಮ್ಮರೂಪದಲ್ಲಿಯೂ ಇರುವದೆಂಬ ತತ್ತ್ವವನ್ನು ಅವರು ಕಂಡುಕೊಂಡಿರುವರು. ಇಂಥ ಜ್ಞಾನದಿಂದ ಕಂಡದ್ದೆಲ್ಲ ಬ್ರಹ್ಮವೇ ಆಗಿರುವದರಿಂದ ಅವರಿಗೆ ಪ್ರಿಯವಾದದ್ದನ್ನು ಕಂಡು ಹಿಗ್ಗುವ ಅಥವಾ ಅಪ್ರಿಯವಾದದ್ದನ್ನು ಕಂಡು ಕುಗ್ಗುವ ಸಂಭವವೇ ಬೀಳುವದಿಲ್ಲ. ಅವರಿಗೆ ಸುಖವೆಂದರೆ ಆತ್ಮನೆ, ಆ ಸುಖಕ್ಕೆ ನಾಶವೇ ಇಲ್ಲ.

೨೨–೨೪. ''ಆದ್ದರಿಂದ ಜಾಣನಾದವನು ವಿಷಯಗಳ ಸುಖವೆಲ್ಲ ದುಃಖಕ್ಕೆ ಕಾರಣವೆಂದರಿತು ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸಿಕೊಳ್ಳಬೇಕು; ಶರೀರವಿರುವವರೆಗೂ ಕಾಮಕ್ರೋಧಗಳ ಹುಯಿಲಿಗೆ ಸಿಕ್ಕದಂತೆ ಎಚ್ಚರವಾಗಿರಬೇಕು. ಯಾವನು ಹೀಗೆ ವಿಷಯಗಳಿಂದ ಮನಸ್ಸನ್ನು ಹಿಡಿದೆಳೆದು ಆತ್ಮನಲ್ಲಿಯೇ ಪ್ರೀತಿಯಿಟ್ಟು, ಆತ್ಮನೇ ತನ್ನ ಬೆಳಕೆಂದೂ ಆತ್ಮನೇ ತನ್ನ ಸುಖವೆಂದೂ ನಂಬುವನೋ ಅವನು ಬದುಕಿರುವಾಗಲೇ ಬ್ರಹ್ಮವಾಗಿದ್ದು ಬಳಿಕ ಬ್ರಹ್ಮವನ್ನೇ ಹೊಂದುವನು.

೨೫–೨೬. ''ಮುಕ್ತಿಯನ್ನು ಪಡೆಯಬೇಕೆಂಬವನು ಪಾಪವನ್ನೆಲ್ಲ ತೊಳೆದುಕೊಳ್ಳಬೇಕು; ವಿಚಾರದಿಂದ ಸಂಶಯಗಳನ್ನೆಲ್ಲ ತೊಲಗಿಸಿಕೊಳ್ಳಬೇಕು; ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರಬೇಕು; ಸಕಲ ಪ್ರಾಣಿಗಳಿಗೂ ಹಿತವನ್ನೇ ಕೋರುತ್ತಿರಬೇಕು. ಕಾಮಕ್ರೋಧಗಳನ್ನು ಗೆದ್ದ ಇಂಥ ಆತ್ಮಜ್ಞಾನಿಗಳಿಗೆ ಈ ಲೋಕದಲ್ಲಿಯೂ ಮುಕ್ತಿಯೆ, ಪರಲೋಕದಲ್ಲಿಯೂ ಮುಕ್ತಿಯೆ.

೨೭–೨೯. ''ಇಂಥ ಜ್ಞಾನಕ್ಕೆ ಧ್ಯಾನಯೋಗವೇ ತೀರ ಹತ್ತಿರದ ಸಾಧನವು. ಧ್ಯಾನಯೋಗಿಯು ಹೊರಗಿನ ವಿಷಯಗಳನ್ನು ಕುರಿತು ಚಿಂತಿಸದೆ, ಶರೀರವನ್ನು ಸ್ವಾಧೀನದಲ್ಲಿಟ್ಟುಕೊಂಡು, ಪ್ರಾಣಾಯಾಮವನ್ನು ಮಾಡುತ್ತಾ, ಇಂದ್ರಿಯಮನೋಬುದ್ಧಿಗಳನ್ನು ಹಿಡಿತದಲ್ಲಿಟ್ಟಿರಬೇಕು. ಹೀಗೆ ಧ್ಯಾನಮಾಡುತ್ತಿದ್ದರೆ 'ಪರಮಾತ್ಮನೇ ಯಜ್ಞಾದಿಕರ್ಮಗಳನ್ನು ಮಾಡುವವನು, ಕರ್ತೃರೂಪದಿಂದಲೂ ದೇವತಾರೂಪದಿಂದಲೂ ಅದರ ಫಲವನ್ನು ಅನುಭವಿಸುವವನು, ಎಲ್ಲಾ ಪ್ರಾಣಿಗಳ ಹೃದಯದಲ್ಲಿದ್ದುಕೊಂಡು ಕರ್ತೃತ್ವಭೋಕ್ತೃತ್ವಗಳಿಗೂ ಅರಿವುಗಳಿಗೂ ಸಾಕ್ಷಿಯಾಗಿರುವವನು' ಎಂಬ ಜ್ಞಾನವು ಹುಟ್ಟಿ ಶಾಂತಿಯುಂಟಾಗುತ್ತದೆ.''

---

# ಆರನೆಯ ಅಧ್ಯಾಯ

## (ಧ್ಯಾನಯೋಗ)

### ಕರ್ಮಕ್ಕೂ ಧ್ಯಾನಕ್ಕೂ ಸಂಬಂಧ

ಇದರ ಹಿಂದಿನ ಅಧ್ಯಾಯದ ಕೊನೆಯಲ್ಲಿ ಸರಿಯಾದ ಜ್ಞಾನಕ್ಕೆ ತೀರ ಹತ್ತಿರದ* ಸಾಧನವಾದ [ಅನ್ತರಙ್ಗಸ್ಯ] ಧ್ಯಾನಯೋಗಕ್ಕೆ ಸೂತ್ರರೂಪವಾಗಿ "ಸ್ಪರ್ಶಾನ್ ಕೃತ್ವಾ ಬಹಿಃ" (೫–೨೭) ಎಂಬುದೇ ಮುಂತಾದ ಶ್ಲೋಕಗಳನ್ನು ಹೇಳಿರುತ್ತದೆಯಷ್ಟೆ; ಅವುಗಳಿಗೆ ವೃತ್ತಿಯು† ಆಗಿರುವ ಈ ಆರನೆಯ ಅಧ್ಯಾಯವನ್ನು ಈಗ ಪ್ರಾರಂಭಿಸಿರುತ್ತದೆ. ಅದರಲ್ಲಿಯೂ ಧ್ಯಾನಯೋಗಕ್ಕೆ ಕರ್ಮವು ಹೊರಗಿನ ಸಾಧನವಾಗಿರುವದರಿಂದ [ಬಹಿರಙ್ಗಂ] ಧ್ಯಾನಯೋಗವನ್ನು ಏರುವದಕ್ಕೆ ಶಕ್ತಿಯು ಬರುವವರೆಗೂ ಕರ್ಮಕ್ಕೆ ಅಧಿಕಾರಿಯಾದ ಗೃಹಸ್ಥನು ಕರ್ಮವನ್ನು ಮಾಡಲೇಬೇಕಾಗಿರುವದರಿಂದ ಅದನ್ನು (ಈಗ) ಹೊಗಳುತ್ತಾನೆ.

(ಆಕ್ಷೇಪ):— ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವನ್ನು ಬದುಕಿರುವವರೆಗೂ‡ ಮಾಡಲೇಬೇಕಲ್ಲವೆ? ಹೀಗಿರುವಲ್ಲಿ 'ಧ್ಯಾನಯೋಗವನ್ನು ಏರುವದಕ್ಕೆ ಆಗುವವರೆಗೆ' ಎಂದು ಅವಧಿಯನ್ನು ಇಡುವದೇತಕ್ಕೆ?

(ಪರಿಹಾರ):— ಹಾಗಲ್ಲ. ಏಕೆಂದರೆ "ಯೋಗವನ್ನು ಏರಲೆಳಸುವ ಮುನಿಗೆ ಕರ್ಮವು ಕಾರಣವೆನಿಸುವದು" (೬–೩) ಎಂದು ವಿಶೇಷಣವನ್ನು ಹಾಕಿರುತ್ತದೆ; (ಯೋಗವನ್ನು) ಏರಿರುವಾತನಿಗೆ ಶಮವೊಂದನ್ನೇ ಸಂಬಂಧಪಡಿಸಿರುತ್ತದೆ. (ಯೋಗವನ್ನು) ಏರಲೆಳಸುವವನೂ ಏರಿರುವವನೂ ಶಮವನ್ನೂ ಕರ್ಮವನ್ನೂ ಎರಡನ್ನೂ ಮಾಡತಕ್ಕದ್ದೆಂದು ಅಭಿಪ್ರಾಯವಿದ್ದರೆ 'ಆರುರುಕ್ಷು

* ಕರ್ಮಫಲದ ಕಡೆಗೆ ಲಕ್ಷ್ಯವಿಲ್ಲದೆ ಕರ್ಮವನ್ನು ಮಾಡುವದರಿಂದ ವಿಷಯಸಂಪರ್ಕವಿಲ್ಲದೆ ಸಮಾಧಾನದಿಂದಿರುವದನ್ನು ಮನಸ್ಸಿಗೆ ಕಲಿಸಿದಂತಾಗುವದು; ಧ್ಯಾನಯೋಗದಲ್ಲಿಯೋ ಎಂದರೆ ಮನಸ್ಸು ಆತ್ಮನನ್ನು ಹೊರತು ಮತ್ತೇನನ್ನೂ ಕುರಿತು ಚಿಂತಿಸದೆ ಇರುವದು. ಆದ್ದರಿಂದ ಕರ್ಮಯೋಗಕ್ಕಿಂತ ಧ್ಯಾನಯೋಗವು ಜ್ಞಾನಕ್ಕೆ ಹೆಚ್ಚು ಹತ್ತಿರದ ಸಾಧನವು.

† ಸೂತ್ರವನ್ನು ವಿವರಿಸುವ ಗ್ರಂಥಕ್ಕೆ ವೃತ್ತಿಯೆಂದೂ ಭಾಷ್ಯವೆಂದೂ ಹೆಸರು.

‡ ಈಶ. ೨ನೆಯ ಮಂತ್ರವನ್ನು ನೋಡಿ. ಕರ್ಮವನ್ನು ಬದುಕಿರುವವರೆಗೂ ಮಾಡುತ್ತಲೇ ಇರಬೇಕೆಂದು ಕೆಲವು ಶ್ರುತಿಗಳಲ್ಲಿ ಹೇಳಿದೆ; ಆದರೆ ಆತ್ಮಜ್ಞಾನಕ್ಕೆ ಮನಸ್ಸು ಹಾಕದ ಅಥವಾ ಹಾಕಿದರೂ ಅದು ಆಳವಾಗದ ಸ್ಥಿತಿಯಲ್ಲಿರುವವರಿಗಾಗಿ ಈ ಶ್ರುತಿವಚನಗಳು ಹುಟ್ಟಿವೆ. ಕರ್ಮವು ಎಲ್ಲರಿಗೂ ಬೇಕೆಂಬುದೇ ಇವುಗಳ ತಾತ್ಪರ್ಯವೆಂದು ಮೀಮಾಂಸಕರೂ ಕೆಲವು ವೇದಾಂತಿಗಳೂ ಹೇಳುತ್ತಿದ್ದರು.

ನಿಗೆ' 'ಆರೂಢನಿಗೆ' ಎಂದು ಕರ್ಮವೂ* ಶಮವೂ ಬೇರೆ ಬೇರೆಯವರ ವಿಷಯವೆಂದು ವಿಶೇಷಣವನ್ನು ಕೊಟ್ಟಿರುವದೂ ವಿಂಗಡಿಸಿ† ಹೇಳಿರುವದೂ ವ್ಯರ್ಥವಾಗುವದು.

(ವೃತ್ತಿಕಾರ):— (ಬೇರೆಬೇರೆ) ಆಶ್ರಮದಲ್ಲಿರುವವರೊಳಗೆ‡ ಕೆಲವರು ಯೋಗವನ್ನು ಏರಲೆಳಸುವವರು, ಕೆಲವರು ಏರಿದವರು– ಹೀಗೆ ಇರುತ್ತಾರೆ; ಉಳಿದವರು ಏರಬೇಕೆನ್ನುವವರೂ ಅಲ್ಲ, ಏರಿದವರೂ ಅಲ್ಲ. ಆದ್ದರಿಂದ (ಎರಡು ಗುಂಪಿಗೆ ಸೇರದೆ ಇರುವವರ ದೃಷ್ಟಿಯಿಂದ) ಯೋಗವನ್ನು 'ಏರಬೇಕೆನ್ನುವವನಿಗೆ', 'ಏರಿರುವವನಿಗೆ'– ಎಂದು ವಿಶೇಷಣವನ್ನು ಹಾಕಿರುವದೂ (ಕರ್ಮಶಮಗಳನ್ನು) ವಿಂಗಡಿಸಿ ಹೇಳಿರುವದೂ ಹೊಂದುತ್ತದೆಯಲ್ಲವೆ? §

(ಸಿದ್ಧಾಂತಿ):— ಹೊಂದುವದಿಲ್ಲ, ಏಕೆಂದರೆ 'ಅವನಿಗೇ'||– ಎಂಬ ಮಾತನ್ನು ಇಲ್ಲಿ ಉಪಯೋಗಿಸಿರುತ್ತದೆ ಮತ್ತು 'ಯೋಗವನ್ನು ಏರಿರುವ' ಎಂದು ಮತ್ತೆ ಯೋಗವೆಂಬ** ಮಾತನ್ನು ಉಪಯೋಗಿಸಿರುತ್ತದೆ. ಯಾವನು ಮೊದಲು ಯೋಗವನ್ನು ಏರಲೆಳಸಿದ್ದನೋ ಅವನೇ ಏರಿದ ಮೇಲೆ ಶಮವನ್ನೇ†† ಮಾಡತಕ್ಕದ್ದು, ಅದು ಯೋಗದ ಫಲಕ್ಕೆ ಕಾರಣ ಎಂದಲ್ಲವೆ ಹೇಳಿದೆ? ಆದ್ದರಿಂದ ಯಾವ ಕರ್ಮವನ್ನೂ ಬದುಕಿರುವವರೆಗೆ ಮಾಡಬೇಕಾದದ್ದಿರುವದಿಲ್ಲ.

---

* 'ಶಮಕರ್ಮ' ಎಂದು ಮೂಲದಲ್ಲಿದೆ; ಆದರೆ ಅರ್ಥಕ್ಕೆ ಅನುಸಾರವಾಗಿ ಕರ್ಮ, ಶಮ–ಎಂಬ ಕ್ರಮದಲ್ಲಿ ಪರಿವರ್ತನೆಮಾಡಿರುತ್ತದೆ.

† ಆರುರುಕ್ಷು, ಆರೂಢ– ಎಂಬ ವಿಶೇಷಣ, ಕರ್ಮಶಮಗಳನ್ನು ವಿಂಗಡಿಸಿರುವದು.

‡ ಎಲ್ಲಾ ಆಶ್ರಮದವರೂ ಯೋಗಕ್ಕೂ ವೇದಾಂತಜ್ಞಾನಕ್ಕೂ ಅಧಿಕಾರಿಗಳೆಂದೂ ಅವರು ಯೋಗವನ್ನು ಮಾಡಿದರೆ ಮಾತ್ರ ಅವರಿಗೆ ಮೋಕ್ಷವು ದೊರೆಯುವದೆಂದೂ ಹೇಳುವ ವೃತ್ತಿಕಾರರ ಮತವಿದು. ಆಚಾರ್ಯರು ಗೀತಾಭಾಷ್ಯದ ಪ್ರಾರಂಭದಲ್ಲಿಯೇ ಇವರ ವಚನವನ್ನು ಅನುವಾದ ಮಾಡಿರುತ್ತಾರೆ.

§ ಯಾರು ಕೇವಲ ಆಶ್ರಮಕರ್ಮವನ್ನು ಮಾಡಿಕೊಂಡಿರುತ್ತಾರೋ ಅವರು ಆರುರುಕ್ಷುಗಳೂ ಅಲ್ಲ, ಆರೂಢರೂ ಅಲ್ಲ; ಆರುರುಕ್ಷುಗಳು ಕರ್ಮವನ್ನು ಮಾಡುತ್ತಾ ಯೋಗವನ್ನು ಪ್ರಾರಂಭಿಸಬೇಕು, ಆರೂಢರು ಕರ್ಮವನ್ನೂ ಮಾಡುತ್ತಿರಬೇಕು, ಜ್ಞಾನವನ್ನೂ ಅನುಷ್ಠಾನ ಮಾಡಬೇಕು–ಎಂದು ವೃತ್ತಿಕಾರರ ಅಭಿಪ್ರಾಯ.

|| 'ಆರುರುಕ್ಷುವಿಗೆ ಕರ್ಮವು ಕಾರಣ, ಅವನಿಗೇ ಆರೂಢನಾದಾಗ ಶಮವು ಕಾರಣ' ಎಂದು ಹೇಳಿರುವದರಿಂದ ಆರೂಢನಿಗೆ ಕರ್ಮವಿಲ್ಲವೆಂದಂತೆ ಆಗುವದು.

** ಯೋಗವೆಂಬ ಮಾತನ್ನು ಎರಡು ಸಲ ಉಪಯೋಗಿಸಿರುವದರಿಂದ ಆರುರುಕ್ಷು, ಆರೂಢ– ಎಂದು ವಿಂಗಡಿಸಿರುವದು ಮೂರನೆಯ ಪಂಗಡದವರ ದೃಷ್ಟಿಯಿಂದಲ್ಲವೆಂಬುದನ್ನು ಸ್ಪಷ್ಟಗೊಳಿಸುವದು.

†† ಸರ್ವಕರ್ಮಸಂನ್ಯಾಸವನ್ನೇ.

ಯೋಗದಿಂದ ಭ್ರಷ್ಟನಾದವನ ಮಾತು ಬಂದಿರುವದರಿಂದಲೂ (೬–೩೭) (ಇದೇ ಸರಿಯಾದ ನಿರ್ಣಯವಾಗಿರುತ್ತದೆ.) ಆರನೆಯ ಅಧ್ಯಾಯದಲ್ಲಿ ಕರ್ಮಿಯಾದ ಗೃಹಸ್ಥನಿಗೇ ಯೋಗವನ್ನು ವಿಧಿಸಿರುವದು (ನಿಜ)ವಾದರೆ, ಅವನು (ಒಂದು ವೇಳೆ) ಯೋಗದ (ಪೂರ್ಣ ಫಲವನ್ನು ಪಡೆಯದೆ) ತಪ್ಪಿದರೂ ಕರ್ಮಗತಿಯನ್ನು–ಕರ್ಮಫಲವನ್ನು–ಪಡೆಯುತ್ತಾನಾದ್ದರಿಂದ "(ಅವನಿಗೆ ಗತಿಯೇನು?) ಅವನು ನಾಶವಾಗುವದಿಲ್ಲವಷ್ಟೆ? (೬–೩೮)–ಎಂದು (ಅರ್ಜುನನು) ಶಂಕೆಯನ್ನು ತೆಗೆದಿರುವದು ಹೊಂದುವದಿಲ್ಲ. ಕಾಮ್ಯವೇ ಆಗಲಿ ನಿತ್ಯವೇ ಆಗಲಿ–ಮಾಡಿದ ಕರ್ಮವು ತನ್ನ ಫಲವನ್ನು ಕೊಟ್ಟೇ ತೀರಬೇಕು; ಮೋಕ್ಷವಂತು* ನಿತ್ಯವಾದದ್ದಾದ ಕಾರಣ ಕರ್ಮದಿಂದ ಉಂಟಾಗುವ ಹಾಗಿಲ್ಲ.† ನಿತ್ಯಕರ್ಮವು ವೇದಪ್ರಮಾಣದಿಂದ ತಿಳಿಯಬಂದಿರುವದಾದ್ದರಿಂದ ಅದಕ್ಕೂ ಫಲವು ಇದ್ದೇ ಇರಬೇಕು, ಹಾಗಿಲ್ಲದಿದ್ದರೆ ವೇದವೇ ವ್ಯರ್ಥವಾಗಬೇಕಾಗುವದು– ಎಂದು ಹಿಂದೆಯೇ (೪–೧೮) ಹೇಳಿರುತ್ತೇವೆ. ಕರ್ಮವು ಇರುವಾಗ "ಎರಡರಿಂದಲೂ ತಪ್ಪಿಹೋಗುವನೇನು?" (೬–೩೮)- ಎಂದು ಕೇಳಿರುವದೂ ಸರಿಯಾಗುವದಿಲ್ಲ, ಏಕೆಂದರೆ ಕರ್ಮ(ಫಲ)ವು ಅವನಿಗೆ ತಪ್ಪುವದಕ್ಕೆ ಕಾರಣವೇನೂ ಇರುವದಿಲ್ಲ.‡

(ವೃತ್ತಿಕಾರ):— ಮಾಡಿದ ಕರ್ಮವನ್ನು ಈಶ್ವರನಲ್ಲಿ ಸಮರ್ಪಣೆಮಾಡಬೇಕೆಂದು (೩–೩೦) ಹೇಳಿರುವದರಿಂದ (ಹಾಗೆ)ಮಾಡಿದಾತನಿಗೆ (ನಿತ್ಯ)ಕರ್ಮದ ಫಲವು ಆಗುವದಿಲ್ಲ.§

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಈಶ್ವರನಲ್ಲಿ ಸಮರ್ಪಿಸಿರುವದರಿಂದ ಇನ್ನೂ ಹೆಚ್ಚಿನ|| ಫಲವಾಗಬೇಕು.

(ವೃತ್ತಿಕಾರ):—ಇದರಿಂದ ಮೋಕ್ಷವೇ** ಆಗುವದು. ಯೋಗಸಹಿತವಾಗಿ ಸ್ವಕರ್ಮವನ್ನು ಮಾಡಿ ಈಶ್ವರನಿಗೆ ಸಮರ್ಪಿಸಿದರೆ ಮೋಕ್ಷವೇ ಫಲವಾ

---

* ಕಲ್ಪಕೋಟಿಶತವಾದರೂ ಕರ್ಮವು ಫಲವನ್ನುಣ್ಣಿಸದೆ ಬಿಡುವದಿಲ್ಲ– ಎಂದು ಸ್ಮೃತಿ ಇರುವದು.

† ನಿತ್ಯಕರ್ಮಕ್ಕೆ ಮೋಕ್ಷವೇ ಫಲವಾಗಲಿ ಎಂಬ ಶಂಕೆಗೆ ಇದು ಪರಿಹಾರ.

‡ ಹೀಗೆ ಕರ್ಮಫಲವು ಇದ್ದೇ ಇರುವದರಿಂದ, ನಿಮ್ಮ ವ್ಯಾಖ್ಯಾನದಲ್ಲಿ, 'ಅವನಿಗೇನು ಗತಿ?' ಎಂಬ ಪ್ರಶ್ನೆಯು ಹೊಂದುವದಿಲ್ಲ.

§ 'ನಿತ್ಯಕರ್ಮಕ್ಕೆ ಫಲವಿಲ್ಲ; ಆದ್ದರಿಂದ ಯೋಗದಿಂದ ಭ್ರಷ್ಟನಾದರೆ ಗತಿಯೇನು?' ಎಂದು ಕೇಳಿದ್ದು ಸರಿಯಾಯಿತು– ಎಂದು ವೃತ್ತಿಕಾರರ ಆಶಯ.

|| ಕರ್ಮವನ್ನು ಮಾಡಿದ್ದರ ಫಲವೇ ಅಲ್ಲದೆ ಈಶ್ವರನಿಗೆ ಸಮರ್ಪಣೆಮಾಡಿದ್ದರ ಫಲವೂ ಬರಬೇಕು.

** ನೀವು ಹೇಳುವ ಆ ಹೆಚ್ಚಿನ ಫಲವೇ ಮೋಕ್ಷವಾಗಲಿ– ಎಂದು ಭಾವ.

ಗುವದೇ ಹೊರತು ಬೇರೆಯ ಫಲವಿಲ್ಲ; (ಆದ್ದರಿಂದ) 'ಯೋಗಮಾರ್ಗದಲ್ಲಿ ತಪ್ಪಿಹೋದರೆ ಅವನು ನಾಶವಾಗುವನೇನು' ಎಂದು ಕೇಳಬಹುದಲ್ಲ?

(ಸಿದ್ಧಾಂತಿ):— ಹಾಗಲ್ಲ. ಏಕೆಂದರೆ, "ಒಬ್ಬನೆ ಇದ್ದು ಚಿತ್ತವನ್ನೂ ಆತ್ಮವನ್ನೂ ಬಿಗಿಹಿಡಿದುಕೊಂಡು, ಯಾವ ಆಶೆಯೂ ಇಲ್ಲದೆ, ತನ್ನದೆಂಬುದಿಲ್ಲದೆ" (೬-೧೦) "ಬ್ರಹ್ಮಚಾರಿವ್ರತದಲ್ಲಿದ್ದುಕೊಂಡು" (೬-೧೪) ಎಂದು ಕರ್ಮಸಂನ್ಯಾಸವನ್ನು ಇಲ್ಲಿ ವಿಧಿಸಿರುತ್ತದೆ. ಇಲ್ಲಿ ಧ್ಯಾನಮಾಡುವಾಗ ಸ್ತ್ರೀಯು ಜೊತೆಯಲ್ಲಿದ್ದುಕೊಂಡಿರುವಳೆಂದು ಯೋಚಿಸುವದಕ್ಕೂ ಬರುವಹಾಗಿಲ್ಲ; ಹಾಗಿದ್ದರೆ (ಸ್ತ್ರೀಯು ಜೊತೆಯಲ್ಲಿರಕೂಡದೆಂದು ತಿಳಿಸುವದಕ್ಕೆ) "ಒಬ್ಬನೇ" ಇರಬೇಕೆಂದು ವಿಧಿಸಿದೆ ಎನ್ನಬಹುದಾಗಿತ್ತು.* ಗೃಹಸ್ಥನಾದವನಿಗೆ 'ಆಶೆಯಿಲ್ಲದೆ' "ತನ್ನದೆಂಬುದಿಲ್ಲದೆ" ಎಂಬುದೇ ಮುಂತಾಗಿ ಹೇಳಿರುವದೂ ಹೊಂದುವದಿಲ್ಲ. "ಎರಡರಿಂದಲೂ ತಪ್ಪಿದರೆ" ಎಂಬ† ಪ್ರಶ್ನೆಯೂ ಹೊಂದುವದಿಲ್ಲ.

(ಆಕ್ಷೇಪ):—"ಕರ್ಮಫಲವನ್ನು ಆಶ್ರಯಿಸದೆ" (೬-೧) ಎಂಬ ಶ್ಲೋಕದಲ್ಲಿ ಕರ್ಮಿಯೇ ಸಂನ್ಯಾಸಿಯೆಂದೂ ಯೋಗಿಯೆಂದೂ ಹೇಳಿರುವದಲ್ಲದೆ ಅಗ್ನಿಯನ್ನಿಡದೆ ಕರ್ಮವನ್ನೂ ಮಾಡದೆ ಇರುವಾತನು ಸಂನ್ಯಾಸಿಯೂ ಅಲ್ಲ ಯೋಗಿಯೂ ಅಲ್ಲ— ಎಂದು ಹೇಳಿಯೂ ಇದೆಯಲ್ಲ?

(ಪರಿಹಾರ):—ಹಾಗಲ್ಲ. ಏಕೆಂದರೆ ಧ್ಯಾನಯೋಗಕ್ಕೆ ಹೊರಗಿನ ಸಾಧನವಾದ ಕರ್ಮವನ್ನು ಫಲದಾಶೆಯಿಲ್ಲದೆ ಮಾಡಬೇಕೆಂದು ಹೊಗಳುವದೇ (ಆ ವಚನಕ್ಕೆ) ತಾತ್ಪರ್ಯವು. ಅಗ್ನಿಯನ್ನು ಬಿಟ್ಟು ಕರ್ಮವನ್ನು ಮಾಡದೆ ಇರುವಾತನು ಮಾತ್ರವೇ ಸಂನ್ಯಾಸಿಯೂ ಯೋಗಿಯೂ ಆಗಿರುವದಿಲ್ಲ, ಕರ್ಮಿಯೂ (ಸಂನ್ಯಾಸಿಯು, ಯೋಗಿಯು), ಕರ್ಮಫಲದಲ್ಲಿ ಆಸಕ್ತಿಯನ್ನು ಕೈಬಿಟ್ಟು ಕರ್ಮಯೋಗವನ್ನು ಚಿತ್ತಶುದ್ಧಿಗಾಗಿ ಮಾಡುತ್ತಿರುವವನು "ಸಂನ್ಯಾಸಿಯೂ ಯೋಗಿಯೂ ಆಗಿರುವನು" ಎಂದು (ಇಲ್ಲಿ) ಹೊಗಳಿರುತ್ತದೆ. ಕರ್ಮಫಲದಲ್ಲಿ ಆಸಕ್ತಿಯನ್ನು ಬಿಡುವದನ್ನೂ ಹೊಗಳುವದು, ನಾಲ್ಕನೆಯ ಆಶ್ರಮ(ವಾದ

---

* ಅಗ್ನಿಹೋತ್ರಾದಿಕರ್ಮಗಳನು ಗೃಹಸ್ಥನೊಬ್ಬನೇ ಮಾಡುವದಕ್ಕಾಗುವದಿಲ್ಲ, ಅದಕ್ಕೆ ಅವನ ಹೆಂಡತಿಯೂ ಇರಲೇಬೇಕು. ಆದರೆ ಧ್ಯಾನಕ್ಕೆ ಹೆಂಡತಿಯು ಜೊತೆಯಲ್ಲಿರುವದಕ್ಕೇ ಆಗುವದಿಲ್ಲ; ಹೀಗಿರುವಾಗ 'ಏಕಾಕಿಯಾಗಿ' ಎಂಬ ಮಾತನ್ನು ಹೆಂಡತಿಯು ಜೊತೆಯಲ್ಲಿರಕೂಡದೆಂಬ ಅರ್ಥವನ್ನು ಸೂಚಿಸಿರುವದಕ್ಕಾಗಿ ಉಪಯೋಗಿಸಿದೆ ಎಂದು ಹೇಳುವದಕ್ಕಿಲ್ಲ. ಸಂನ್ಯಾಸಿಯು ಒಂಟಿಗನಾಗಿರಬೇಕೆಂಬುದು ಅವನಿಗೆ ಧರ್ಮವು; ಅದನ್ನು ಹೇಳುವದಕ್ಕೇ ಈ ಮಾತು ಬಂದಿದೆ.

† ಗೃಹಸ್ಥನಿಗೆ ಕರ್ಮದ ಫಲವು ತಪ್ಪುವದಕ್ಕೆ ಕಾರಣವೇ ಇಲ್ಲ. ವೃತ್ತಿಕಾರರು ಹೇಳಿದಂತೆ ಕರ್ಮವನ್ನು ಈಶ್ವರಾರ್ಪಣೆಮಾಡಿದರೆ ಅದಕ್ಕೆ ಫಲವಾಗುವದಿಲ್ಲವೆಂದಾಗಲಿ ಯೋಗದೊಡನೆ ಬೆರಸಿಕೊಂಡು ಮಾಡಿದರೆ ಮೋಕ್ಷವಾಗುವದೆಂದಾಗಲಿ ಯಾವ ಶ್ರುತಿವಚನವೂ ಇರುವದಿಲ್ಲ.

ಸಂನ್ಯಾಸ)ವನ್ನು ಇಲ್ಲವೆಂದೂ ಹೇಳುವನು. (ಇವೆರಡೂ) ಒಂದೇ ವಾಕ್ಯಕ್ಕೆ ತಾತ್ಪರ್ಯವಾಗಲಾರದು.* **ಅಗ್ನಿಯಿಲ್ಲದೆಯೂ ಕರ್ಮವನ್ನುಮಾಡದೆಯೂ ಇರುವ ಪರಮಾರ್ಥಸಂನ್ಯಾಸಿಯು ಸಂನ್ಯಾಸಿಯೂ ಯೋಗಿಯೂ ಆಗಿರುವನೆಂದು ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಯೋಗಶಾಸ್ತ್ರ–ಇವುಗಳಲ್ಲಿ† ಹೇಳಿದ್ದರೂ ಅದನ್ನು ಭಗವಂತನು ನಿರಾಕರಿಸುತ್ತಾನೆಂದು ಹೇಳುವದಕ್ಕೆ ಆಗುವದಿಲ್ಲ.** ಮತ್ತು (ಹೀಗೆಹೇಳುವದು) ತನ್ನ ಮಾತಿಗೂ ವಿರೋಧವಾಗುವದು. "ಕರ್ಮಗಳನ್ನೆಲ್ಲ ಮನಸ್ಸಿನಿಂದ ಸಂನ್ಯಾಸಮಾಡಿ–ಏನನ್ನೂ ಮಾಡದೆ, ಏನನ್ನೂ ಮಾಡಿಸದೆ ಇರುವನು"(೫–೧೩)"ಮೌನಿಯಾಗಿ, ಯಾವುದೆಂದರೆ ಅದರಿಂದ ತೃಪ್ತನಾಗಿ, ಮನೆಯಿಲ್ಲದೆ, ಮನಸ್ಸನ್ನು ಸ್ಥಿರವಾಗಿಟ್ಟುಕೊಂಡಿರುವ" (೧೨–೧೯) "ಯಾವ ಪುರುಷನು ಕಾಮಗಳನ್ನೆಲ್ಲ ಬಿಟ್ಟು, ಆಶೆಯಿಲ್ಲದೆ ಸಂಚರಿಸುತ್ತಿರುವನೋ" (೨–೭೧) "ಸಕಲಕರ್ಮಗಳನ್ನೂ ಪರಿತ್ಯಾಗಮಾಡಿದವನು" (೧-೧೬) ಎಂದು ಅಲ್ಲಲ್ಲಿ ಭಗವಂತನು ಹೇಳಿರುವನಷ್ಟೆ; ನಾಲ್ಕನೆಯ ಆಶ್ರಮವೇ ಇಲ್ಲವೆಂದು ಹೇಳುವದೂ ಆ ತನ್ನ ಮಾತುಗಳಿಗೂ ವಿರುದ್ಧವಾಗುವದು.

ಆದ್ದರಿಂದ ಯೋಗವನ್ನು ಬಯಸುವ ಮುನಿಯು ಗೃಹಸ್ಥಾಶ್ರಮವನ್ನು ಹೊಂದಿರುವಾಗ ಅಗ್ನಿಹೋತ್ರವೇ ಮುಂತಾದ ಕರ್ಮವನ್ನು ಫಲದ ಅಪೇಕ್ಷೆಯಿಲ್ಲದೆ ಮಾಡಿದರೆ ಚಿತ್ತಶುದ್ಧಿಯಾಗುವದರ ಮೂಲಕ ಧ್ಯಾನಯೋಗವನ್ನು ಏರುವದಕ್ಕೆ ಸಾಧನವಾಗುವದೆಂಬ ಕಾರಣದಿಂದ "ಅವನೇ ಸಂನ್ಯಾಸಿಯು ಮತ್ತು ಯೋಗಿಯು" ಎಂದು ಹೇಳಿರುತ್ತದೆ (ಎಂಬುದೇ ಸರಿ.)

---

* ಒಂದು ವಾಕ್ಯವು ಒಂದು ವಿಷಯವನ್ನೇ ತಾತ್ಪರ್ಯದಿಂದ ಹೇಳುವದು– ಎಂಬುದು ಮೀಮಾಂಸಕರ ಸಿದ್ಧಾಂತವು, ಇದನ್ನು ವೇದವಾದಿಗಳೆಲ್ಲರೂ ಒಪ್ಪಿರುತ್ತಾರೆ. ಕರ್ಮವನ್ನು ಹೊಗಳುವದಕ್ಕೆ ಬಂದಿರುವ ವಾಕ್ಯವು ಸಂನ್ಯಾಸಾಶ್ರಮವೇ ಇಲ್ಲವೆಂದು ತಿಳಿಸುವದಕ್ಕೂ ಬಂದಿದೆ ಎಂದರೆ ಒಂದು ವಾಕ್ಯವನ್ನು ಕಾರಣವಿಲ್ಲದೆ ಎರಡು ವಾಕ್ಯವಾಗಿ ಒಡೆದ ತಪ್ಪು ಗಂಟುಬೀಳುವದು ಎಂದು ಭಾವ

† ಬೃಹದಾರಣ್ಯಕ, ಜಾಬಾಲ. ಮುಂತಾದ ಶ್ರುತಿ, ಆಪಸ್ತಂಬ, ಗೌತಮ, ಮನು–ಮುಂತಾದ ಸ್ಮೃತಿಗಳು, ವಿಷ್ಣುಪುರಾಣವೇ ಮುಂತಾದ ಪುರಾಣಗಳು, ಮೋಕ್ಷಧರ್ಮವೇ ಮುಂತಾದ ಇತಿಹಾಸ, ಪಾತಂಜಲವೇ ಮುಂತಾದ ಯೋಗಶಾಸ್ತ್ರ – ಇವುಗಳಲ್ಲಿ ಸಂನ್ಯಾಸವನ್ನು ವಿಧಿಸಿದೆ. ಸಂನ್ಯಾಸಾಶ್ರಮದ ವಿಷಯವಾಗಿ ಗೀತಾರ್ಥಸರ್ವಸ್ವದಲ್ಲಿ ವಿಸ್ತಾರವಾಗಿ ಚರ್ಚಿಸಿರುತ್ತದೆ.

## ಕರ್ಮಫಲದ ಆಶೆಯನ್ನು ಬಿಡುವದರ ಮಹತ್ತ್ವ

**ಶ್ರೀ ಭಗವಾನುವಾಚ:—**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥ ೧ ॥**

ಶ್ರೀಭಗವಂತನು ಹೇಳಿದನೇನೆಂದರೆ:—

೧. ಕರ್ಮಫಲವನ್ನು ಆಶ್ರಯಿಸದೆ ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಿರುವನೋ, ಅವನೇ ಸಂನ್ಯಾಸಿಯು, ಯೋಗಿಯು; ಅಗ್ನಿಯಿಲ್ಲದವನೂ ಕರ್ಮಗಳಿಲ್ಲದವನೂ ಅಲ್ಲ.

[ ಭಾಷ್ಯ ]

ಅನಾಶ್ರಿತನಾಗಿ ಎಂದರೆ ಆಶ್ರಯಿಸದೆ (ಎಂದರ್ಥ); ಏನನ್ನು (ಆಶ್ರಯಿಸದೆ)? ಎಂದರೆ ಕರ್ಮಫಲವನ್ನು. ಕರ್ಮದ ಫಲವೆಂಬುದು ಯಾವದೋ ಅದನ್ನು ಆಶ್ರಯಿಸದೆ ಎಂದರೆ ಕರ್ಮಫಲದಲ್ಲಿ ಆಶೆಯಿಲ್ಲದೆ ಎಂದರ್ಥ. ಯಾವನು ಕರ್ಮಫಲದಲ್ಲಿ ಆಶೆಯುಳ್ಳವನಾಗಿರುವನೋ ಅವನು ಕರ್ಮಫಲವನ್ನು ಆಶ್ರಯಿಸಿರುವನು; ಆದರೆ ಇವನು, ಅದಕ್ಕೆ ವಿರುದ್ಧವಾಗಿ ಕರ್ಮಫಲವನ್ನು ಆಶ್ರಯಿಸದೆ ಇರುವವನು. ಇಂಥವನಾಗಿ ಮಾಡಬೇಕಾದ* ಕರ್ಮವನ್ನು ಎಂದರೆ ಕಾಮ್ಯಕ್ಕೆ ವಿರುದ್ಧವಾದ ಅಗ್ನಿಹೋತ್ರವೇ ಮುಂತಾದ **ನಿತ್ಯಕರ್ಮ**ವನ್ನು ಯಾವನು ಮಾಡುತ್ತಿರುವನೋ ಅಂಥ ಕರ್ಮಿಯು, ಮಿಕ್ಕ ಕರ್ಮಿಗಳಿಗಿಂತ ಹೆಚ್ಚಿನವನೆಂದು ತಿಳಿಸುವದಕ್ಕಾಗಿ ಹೇಳುತ್ತಾನೆ– 'ಅವನೆ ಸಂನ್ಯಾಸಿಯು, ಯೋಗಿಯು.' ಸಂನ್ಯಾಸವೆಂದರೆ, (ಕರ್ಮವನ್ನು) ಬಿಡುವದು, ಅದನ್ನುಳ್ಳವನು ಸಂನ್ಯಾಸಿಯು; 'ಮತ್ತು (ಅವನೇ) ಯೋಗಿಯು,'– ಯೋಗವೆಂದರೆ ಚಿತ್ತವನ್ನು ಸಮಾಧಾನದಲ್ಲಿಟ್ಟುಕೊಂಡಿರುವದು, ಅದು ಯಾವನಿಗೆ ಉಂಟೋ ಅವನು ಯೋಗಿಯು. ಅವನು ಇಂಥ ಗುಣವುಳ್ಳವನೆಂದು ತಿಳಿಯಬೇಕು. ಅಗ್ನಿಯಿಲ್ಲದವನೂ ಕರ್ಮವಿಲ್ಲದವನೂ ಆಗಿರುವವನೇ ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬಾರದು.

* 'ಕಾರ್ಯಕರ್ಮ'– ಎಂದರೆ ಮಾಡಬೇಕಾದ ಕರ್ಮವು. ಕರ್ಮವೆಲ್ಲ ಮಾಡತಕ್ಕದ್ದೇ ಆದರೂ ಕಾಮ್ಯಕರ್ಮವು ಕಾಮವನ್ನನುಸರಿಸಿ ಮಾಡಬೇಕಾದದ್ದಾಗುವದು ; ನಿತ್ಯಕರ್ಮವು ಯಾವ ಫಲವನ್ನೂ ಲಕ್ಷಿಸದೆ ಮಾಡಬೇಕಾದದ್ದು. ಆದ್ದರಿಂದ ಇಲ್ಲಿ ಕಾರ್ಯಕರ್ಮವೆಂದರೆ ಅವಶ್ಯವಾಗಿ ಮಾಡಲೇಬೇಕಾದ ನಿತ್ಯಕರ್ಮ.

ಅಗ್ನಿಯಿಲ್ಲದವನು ಎಂದರೆ ಕರ್ಮಕ್ಕೆ ಬೇಕಾದ ಅಗ್ನಿಗಳು* ಇಲ್ಲದವನು ; ಅಕ್ರಿಯನು, ಎಂದರೆ ಅಗ್ನಿಯಿಂದ ಆಗಬೇಕಾದವುಗಳಲ್ಲದ ತಪಸ್ಸು, ದಾನ— ಮುಂತಾದ ಕ್ರಿಯೆಗಳಿಲ್ಲದವನು† (ಅಂಥವನು ಮಾತ್ರ ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬಾರದು.)

(ಆಕ್ಷೇಪ):— ಅಗ್ನಿಯಿಲ್ಲದೆಯೂ ಕ್ರಿಯೆಗಳನ್ನು ಮಾಡದೆಯೂ ಇರುವವನೆ ಸಂನ್ಯಾಸಿಯೆಂದೂ ಯೋಗಿಯೆಂದೂ ಶ್ರುತಿಸ್ಮೃತಿಯೋಗಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವದು ; ಹೀಗಿರುವಲ್ಲಿ ಅಗ್ನಿಯುಳ್ಳವನಾಗಿ ಕರ್ಮವನ್ನು ಮಾಡುವವನೇ ಸಂನ್ಯಾಸಿಯೆಂದೂ ಯೋಗಿಯೆಂದೂ ಅಪ್ರಸಿದ್ಧವಾದ ಸಂಗತಿಯನ್ನು ಹೇಳಿರುವನಲ್ಲ, ಇದು ಹೇಗೆ ಸರಿ ?

(ಪರಿಹಾರ):— ಇದೇನೂ ತಪ್ಪಲ್ಲ, ಏಕೆಂದರೆ ಯಾವುದೋ ಒಂದು ಗೌಣವೃತ್ತಿಯಿಂದ ಈ ಎರಡನ್ನೂ (ಕರ್ಮಿಯಲ್ಲಿ) ಹೇಳಬೇಕೆಂದು ಹೊರಟಿದೆ. ಅದು ಹೇಗೆಂದರೆ, ಕರ್ಮಫಲವನ್ನು ಬಿಟ್ಟದ್ದರಿಂದ (ಕರ್ಮಿಯೂ) ಸಂನ್ಯಾಸಿಯಾಗುವನು ; ಯೋಗಕ್ಕೆ ಅಂಗವಾಗಿ ಕರ್ಮವನ್ನು ಮಾಡುವದರಿಂದಲೂ ಚಿತ್ತವು ಹರಿದಾಡುವದಕ್ಕೆ ಕಾರಣವಾಗಿರುವ ಕರ್ಮಫಲದ ಯೋಜನೆಯನ್ನು ಬಿಡುವದರಿಂದಲೂ ಯೋಗಿಯಾಗುವನು. ಹೀಗೆ ಎನ್ನೆರಡೂ ಗೌಣವೆ;‡ (ಇಲ್ಲಿ) ಮುಖ್ಯವಾದ ಸಂನ್ಯಾಸವನ್ನಾಗಲಿ ಯೋಗವನ್ನಾಗಲಿ (ಕರ್ಮಿಗೆ ಹೇಳಬೇಕೆಂಬ) ಅಭಿಪ್ರಾಯವಿಲ್ಲ. ಈ ವಿಷಯವನ್ನು ತಿಳಿಸುವದಕ್ಕೆ (ಭಗವಂತನು ಈ ಮುಂದಿನ ಮಾತನ್ನು) ಹೇಳಿರುತ್ತಾನೆ:—

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

---

* ಗಾರ್ಹಪತ್ಯ, ಆಹವನೀಯ, ಅನ್ವಾಹಾರ್ಯಪಚನ— ಮುಂತಾದ ಅಗ್ನಿಗಳು ಕರ್ಮಕ್ಕೆ ಬೇಕು.

† "ಜಪದಿಂದಲೇ ಸಿದ್ಧಿಯಾಗುವದು ; ಬೇರೆ ಕರ್ಮವನ್ನು ಮಾಡಲಿ ಬಿಡಲಿ, ಅಷ್ಟರಿಂದಲೇ ಬ್ರಾಹ್ಮಣನೆನಿಸುವನು" ಎಂದು ಸ್ಮೃತಿಯುಂಟು. ಆದ್ದರಿಂದ ಅಗ್ನಿಯ ಸಹಾಯವಿಲ್ಲದೆ ಮಾಡಬಹುದಾದ ಜಪ, ಉಪವಾಸ, ದೇವಪೂಜೆಯೇ ಮುಂತಾದ ಕರ್ಮಗಳನ್ನೂ ಇಲ್ಲಿ 'ಕ್ರಿಯೆ' ಎಂಬ ಮಾತಿನಲ್ಲಿ ಅಡಗಿಸಿರುತ್ತದೆ. ಪರಮಾರ್ಥಸಂನ್ಯಾಸಿಗೆ ಬ್ರಹ್ಮಚಿಂತನೆಯೊಂದನ್ನು ಬಿಟ್ಟು ಮತ್ತೆ ಯಾವದೊಂದು ಕರ್ಮವೂ ಇರುವದಿಲ್ಲ

‡ ಕರ್ಮವನ್ನು ಬಿಡದಿದ್ದರೂ ಫಲವನ್ನು ಬಿಟ್ಟನೆಂಬ ಸಾದೃಶ್ಯದಿಂದ 'ಸಂನ್ಯಾಸಿಯು' ; ಧ್ಯಾನವನ್ನು ಮಾಡದಿದ್ದರೂ ಚಿತ್ತವನ್ನು ತಳಮಳವಿಲ್ಲದೆ ಇಟ್ಟುಕೊಂಡದ್ದರಿಂದ 'ಯೋಗಿಯು'.

೨. ಎಲೈ ಪಾಂಡವನೆ, ಯಾವದನ್ನು ಸಂನ್ಯಾಸವೆಂದು ಕರೆಯುವರೋ ಅದು ಯೋಗವೆಂದು ತಿಳಿ; ಏಕೆಂದರೆ ಸಂಕಲ್ಪವನ್ನು ಸಂನ್ಯಾಸಮಾಡದೆ ಯಾವನೂ ಯೋಗಿಯಾಗಲಾರನು.

[ ಭಾಷ್ಯ ]

ಎಲೈ ಅರ್ಜುನನೆ, ಸಕಲ ಕರ್ಮಗಳನ್ನೂ ಅವುಗಳ ಫಲವನ್ನೂ ಬಿಡುವದೆಂಬ ಯಾವ **ಪರಮಾರ್ಥಸಂನ್ಯಾಸವನ್ನು*** ಶ್ರುತಿಸ್ಮೃತಿಗಳನ್ನು ಬಲ್ಲವರು ಸಂನ್ಯಾಸವೆಂದು ಕರೆಯುವರೋ ಅದೇ ಯೋಗವೆಂದು ತಿಳಿ.

ಕರ್ಮದಲ್ಲಿ ತೊಡಗುವ ರೂಪವಾದ ಕರ್ಮಯೋಗಕ್ಕೂ, ಅದಕ್ಕೆ ವಿರುದ್ಧವಾಗಿ (ಕರ್ಮವನ್ನು ಬಿಟ್ಟು) ಹಿಂತಿರುಗುವ ರೂಪವಾದ ಪರಮಾರ್ಥಸಂನ್ಯಾಸಕ್ಕೂ ಯಾವ ಬಗೆಯ ಹೋಲಿಕೆಯನ್ನು ಇಟ್ಟುಕೊಂಡು (ಕರ್ಮಯೋಗ, ಸಂನ್ಯಾಸ ಈ ಎರಡಕ್ಕೆ) ಐಕ್ಯವನ್ನು ಹೇಳಿರುತ್ತದೆ? ಎಂದರೆ ಹೇಳುತ್ತೇವೆ. ಕರ್ಮಯೋಗಕ್ಕೆ ಕರ್ತೃವಿನ ಮೂಲಕವಾಗಿ ಪರಮಾರ್ಥಸಂನ್ಯಾಸದ ಹೋಲಿಕೆಯು ಇದ್ದೇ ಇರುವದು. ಹೇಗೆಂದರೆ, ಯಾವನು ಪರಮಾರ್ಥಸಂನ್ಯಾಸಿಯೋ ಅವನು ಸಕಲ ಕರ್ಮಗಳನ್ನೂ ಅವುಗಳ ಸಾಧನವನ್ನೂ ಬಿಟ್ಟಿರುವದರಿಂದ ಸಕಲ ಕರ್ಮಗಳ ಮತ್ತು ಅವುಗಳ ಫಲದ ವಿಷಯವಾದ ಸಂಕಲ್ಪವನ್ನು ಬಿಟ್ಟಿರುವನು; (ಆ ಸಂಕಲ್ಪವೇ) ಕರ್ಮದಲ್ಲಿ ತೊಡಗುವದಕ್ಕೆ ಕಾರಣವಾದ ಕಾಮಕ್ಕೆ ಮೂಲವು. ಈ ಕರ್ಮಯೋಗಿಯೂ ಕರ್ಮವನ್ನು ಮಾಡುತ್ತಿದ್ದರೂ ಫಲವಿಷಯವಾಗಿ ಸಂಕಲ್ಪಮಾಡುವದನ್ನು ಬಿಟ್ಟುಬಿಟ್ಟಿರುತ್ತಾನೆ.† ಈ ವಿಷಯವನ್ನು ತಿಳಿಸುವದಕ್ಕೆ ಈ ಮುಂದಿನ ಮಾತನ್ನು (ಭಗವಂತನು) ಆಡಿರುತ್ತಾನೆ:—

ಏಕೆಂದರೆ ಸಂಕಲ್ಪವನ್ನು ಎಂದರೆ ಫಲವಿಷಯವಾಗಿ ಹಂಬಲಿಸಿಕೊಳ್ಳುವದನ್ನು ಸಂನ್ಯಾಸಮಾಡದೆ ಎಂದರೆ ಬಿಡದೆ ಇರುವವನು ಯಾವನೋ ಅಂಥ ಯಾವ ಕರ್ಮಿಯೂ ಯೋಗಿಯಾಗಲಾರನು; (ಅವನು) ಯೋಗಿಯಾಗುವ ಸಂಭವವಿರುವದಿಲ್ಲವೆಂದರ್ಥ; ಏಕೆಂದರೆ ಫಲವನ್ನು ಕುರಿತು ಯೋಚಿಸುತ್ತಿರುವದು ಚಿತ್ತವು ಹರಿದಾಡುವದಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಯಾವ ಕರ್ಮಿಯು ಫಲದ ಸಂಕಲ್ಪವನ್ನು ಬಿಡುವನೋ ಅವನು ಯೋಗಿಯಾಗುವನು, ಸಮಾಧಾನ

* ತಾನು ಅಕರ್ತೃವೆಂಬ ಜ್ಞಾನವನ್ನು ಸಂಪಾದಿಸಿಕೊಂಡಿರುವದೇ ಪರಮಾರ್ಥಸಂನ್ಯಾಸವು.

† ಸಂಕಲ್ಪವನ್ನೂ ಪೂರ್ಣವಾಗಿ ಬಿಡುವದಕ್ಕೆ ಅಜ್ಞನಿಗೆ ಆಗುವದಿಲ್ಲ; ಅವನು ಸಂಕಲ್ಪವನ್ನು ಬಿಡುವದಕ್ಕೆ ಯತ್ನಿಸುತ್ತಿರುತ್ತಾನೆ— ಎಂದಭಿಪ್ರಾಯ.

ವುಳ್ಳವನಾಗಿ ಎಂದರೆ ಚಿತ್ತವು ಹರಿದಾಡದವನಾಗಿ ಆಗುವನು ; ಏಕೆಂದರೆ ಚಿತ್ತದ ಹರಿದಾಟಕ್ಕೆ ಕಾರಣವಾದ ಫಲದ ಸಂಕಲ್ಪವನ್ನು ಅವನು ಬಿಟ್ಟಿರುತ್ತಾನೆ ಎಂದಭಿಪ್ರಾಯ.

ಹೀಗೆ ಪರಮಾರ್ಥಸಂನ್ಯಾಸಕ್ಕೂ ಕರ್ಮಯೋಗಕ್ಕೂ ಕರ್ತೃವಿನ ಮೂಲಕವಾಗಿ (ಸಂಕಲ್ಪ)ಸಂನ್ಯಾಸವೆಂಬುದು ಸಮಾನವಾಗಿರುವದೆಂಬುದರ ಮೇಲೆ "ಎಲೈ ಪಾಂಡವನೆ, ಸಂನ್ಯಾಸವೆಂದು ಯಾವದನ್ನು ಕರೆಯುವರೋ ಅದೇ ಯೋಗವೆಂದು ತಿಳಿ" ಎಂದು ಕರ್ಮಯೋಗವನ್ನು ಹೊಗಳುವದಕ್ಕಾಗಿ ಅದನ್ನು ಸಂನ್ಯಾಸವೆಂದು ಕರೆದದ್ದಾಯಿತು. (ಹೀಗೆ) ಧ್ಯಾನಯೋಗಕ್ಕೆ ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮಯೋಗವೇ ಹೊರಗಿನ ಸಾಧನವಾದದ್ದರಿಂದ ಅದನ್ನು ಸಂನ್ಯಾಸವೆಂದು ಹೊಗಳಿ, ಕರ್ಮಯೋಗವು ಧ್ಯಾನಯೋಗಕ್ಕೆ ಕಾರಣವೆಂಬುದನ್ನು ಈಗ ತಿಳಿಸುತ್ತಾನೆ:—

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

೩. ಯೋಗವನ್ನು ಹತ್ತಬೇಕೆಂದಿರುವ ಮುನಿಗೆ ಕರ್ಮವು ಕಾರಣವೆನಿಸುವದು; ಯೋಗವನ್ನು ಹತ್ತಿದ ಮೇಲೆ ಅವನಿಗೇ ಶಮವು ಕಾರಣವೆನಿಸುವದು.

[ಭಾಷ್ಯ]

ಯೋಗವನ್ನು ಹತ್ತಬೇಕೆಂದಿರುವವನಿಗೆ ಎಂದರೆ (ಅದನ್ನು)ಏರಲೆಳಸುವವನಿಗೆ, ಇನ್ನೂ ಏರದೆ ಇರುವವನಿಗೆ, ಧ್ಯಾನಯೋಗದಲ್ಲಿ ನಿಲ್ಲಲಾರದವನಿಗೇ ಎಂದರ್ಥ. ನಿಲ್ಲಲಾರದ ಯಾರಿಗೆ ? 'ಮುನಿಗೆ' ಎಂದರೆ ಕರ್ಮಫಲಸಂನ್ಯಾಸಿಗೆ* ಎಂದರ್ಥ. ಏನನ್ನು ಹತ್ತಬೇಕೆಂದಿರುವವನಿಗೆ ? ಯೋಗದ (ಮೆಟ್ಟಲನ್ನು) ಹತ್ತಬೇಕೆಂದಿರುವವನಿಗೆ); ಕರ್ಮವು ಕಾರಣವು (ಅದಕ್ಕೆ) ಕರ್ಮಕ್ಕೆ ಸಾಧನವೆನಿಸುವದು. ಆದರೆ ಯೋಗವನ್ನು ಹತ್ತಿದ ಮೇಲೆ, ಅವನಿಗೇ† ಶಮವು ಎಂದರೆ ಉಪ

* ಕರ್ಮಫಲಸಂನ್ಯಾಸವನ್ನು ಮಾಡಿದವನಾದ್ದರಿಂದ ಮುಂದೆ ಮುನಿಯಾಗುವನು— ಎಂಬ ಭವಿಷ್ಯದ್ವೃತ್ತಿಯಿಂದ 'ಮುನಿ' ಎಂಬ ಮಾತನ್ನುಪಯೋಗಿಸಿದೆ ಎಂದು ಭಾವ; ಕರ್ಮವು ಧ್ಯಾನಯೋಗಕ್ಕೆ ಕಾರಣ.

† ತಸ್ಯೈವ ಶಮಃ— ಎಂಬುದನ್ನು 'ತಸ್ಯ ಶಮ ಏವ' ಎಂದು ಅನ್ವಯಮಾಡಿಕೊಳ್ಳಬೇಕೆಂದು (ಆ||) ಟೀಕಾಕಾರರು ಬರೆದಿರುತ್ತಾರೆ; ಇದು ವಿರುದ್ಧವೆಂದು ತೋರುವದು ; ೨೪೧ ನೆಯ ಪುಟದಲ್ಲಿ 'ತಸ್ಯೈವ' ಎಂಬುದರ ಭಾಷ್ಯವನ್ನು ನೋಡಿ.

ಶಾಂತಿಯು, ಸರ್ವಕರ್ಮಗಳನ್ನೂ ಬಿಡುವದು, ಕಾರಣವು ಎಂದರೆ ಯೋಗಾರೂಢನಾಗುವದಕ್ಕೆ* ಸಾಧನವು ಎನಿಸುವದು.

ಎಷ್ಟೆಷ್ಟು ಕರ್ಮಗಳನ್ನು ಬಿಡುವನೋ ಅಷ್ಟಷ್ಟು ಸುಲಭವಾಗಿ ಇಂದ್ರಿಯಗಳನ್ನು ಗೆದ್ದು ಚಿತ್ತವನ್ನು ಸಮಾಧಾನಗೊಳಿಸಬಹುದು. ಆದರಿಂದ ಅವನು ಬೇಗ ಯೋಗಕ್ಕೆ ಹತ್ತಿದವನಾಗುವನು. ಆದ್ದರಿಂದಲೆ **ವ್ಯಾಸರು** ಹೀಗೆಂದು ಹೇಳಿರುತ್ತಾರೆ:—ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ ಯಥೈಕತಾ ಸಮತಾ ಸತ್ಯತಾ ಚ । ಶೀಲಂ ಸ್ಥಿತಿರ್ದಣ್ಡನಿಧಾನಮಾರ್ಜವಂ ತತಸ್ತತಶ್ಚೋಪರಮಃ ಕ್ರಿಯಾಭ್ಯಃ ॥ (ಮೋ) (ಒಂಟಿಯಾಗಿರುವದು, ಸರ್ವರಲ್ಲಿಯೂ ಸಮಬುದ್ಧಿಯುಳ್ಳವನಾಗಿರುವದು, ಸತ್ಯವನ್ನು ನುಡಿಯುವದು, ಒಳ್ಳೆಯ ನಡೆ, ಸ್ಥಿರಚಿತ್ತನಾಗಿರುವದು, ಒಬ್ಬರನ್ನು ಹಿಂಸೆಮಾಡದೆ ಇರುವದು, ಸರಳತನ, ಆಯಾ ಕ್ರಿಯೆಗಳನ್ನು ಬಿಟ್ಟಿರುವದು- ಇಂಥ ಧನವು ಬ್ರಾಹ್ಮಣನಿಗೆ ಮತ್ತೊಂದಿಲ್ಲ.)

## ಯೋಗಾರೂಢನೆಂದರೆ ಯಾವನು?

ಇನ್ನು ಯೋಗಾರೂಢನಾಗುವದು ಯಾವಾಗ? ಎಂಬುದನ್ನು ಈಗ ಹೇಳುತ್ತಾನೆ:—

**ಯದಾ ಹಿ ನೇನ್ದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

೪. ಇಂದ್ರಿಯಾರ್ಥಗಳಲ್ಲಾಗಲಿ ಕರ್ಮಗಳಲ್ಲಾಗಲಿ ಯಾವಾಗ ಆಸಕ್ತಿಯುಳ್ಳವನಾಗಿರುವದಿಲ್ಲವೋ, ಸರ್ವಸಂಕಲ್ಪಗಳನ್ನೂ (ಯಾವಾಗ) ಸಂನ್ಯಾಸ ಮಾಡಿರುವನೋ ಆಗ ಯೋಗಾರೂಢನೆನಿಸುವನು.

[ಭಾಷ್ಯ]

ಮನಸ್ಸನ್ನು ಸಮಾಧಾನಗೊಳಿಸುತ್ತಿರುವ ಯೋಗಿಯು ಯಾವಾಗ ಇಂದ್ರಿಯಾರ್ಥಗಳಲ್ಲಿ ಎಂದರೆ ಇಂದ್ರಿಯಗಳ ವಿಷಯವಾಗಿರುವ ಶಬ್ದವೇ ಮುಂತಾದವುಗಳಲ್ಲಾಗಲಿ, ನಿತ್ಯ ನೈಮಿತ್ತಿಕ, ಕಾಮ್ಯ ಪ್ರತಿಷಿದ್ಧ–ಎಂಬ ಕರ್ಮಗಳಲ್ಲಾಗಲಿ, (ಅವುಗಳಿಂದ) ಯಾವ ಪ್ರಯೋಜನವೂ (ತನಗೆ ಆಗಬೇಕಾದದ್ದು) ಇಲ್ಲವೆಂಬ ಬುದ್ಧಿಯಿಂದ ಆಸಕ್ತನಾಗದೆ ಇರುವನೋ, ಎಂದರೆ ಇವನ್ನು ನಾನು ಮಾಡತಕ್ಕದ್ದೆಂಬ ಬುದ್ಧಿಯನ್ನು ಮಾಡದೆ ಇರುವನೋ, ಎಂಬರ್ಥ.

* ಯೋಗದ ಫಲವನ್ನು ಪಡೆಯುವದಕ್ಕೆ ಎಂದರ್ಥ. ೨೪೮ನೆಯ ಪುಟದಲ್ಲಿ ಭಾಷ್ಯವನ್ನು ನೋಡಿ. ಈ ಶ್ಲೋಕದರ್ಥವನ್ನು ಕುರಿತು ಗೀತಾರ್ಥಸರ್ವಸ್ವದಲ್ಲಿ ವಿಸ್ತಾರವಾಗಿ ಚರ್ಚಿಸಿರುತ್ತೇವೆ.

ಯಾವಾಗ ಸರ್ವಸಂಕಲ್ಪಗಳನ್ನೂ ಸಂನ್ಯಾಸಮಾಡುವನೋ, ಎಂದರೆ ಈ ಲೋಕದ ಮತ್ತು ಪರಲೋಕದ ವಸ್ತುಗಳಲ್ಲಿ ಆಶೆಯುಂಟಾಗುವದಕ್ಕೆ ಕಾರಣವಾಗುವ ಸಂಕಲ್ಪಗಳನ್ನೆಲ್ಲ ಬಿಟ್ಟುಬಿಡುವನೋ, ಆಗ ಆ ಕಾಲದಲ್ಲಿ, ಅವನು ಯೋಗಾರೂಢನೆನಿಸುವನು, ಎಂದರೆ ಯೋಗವನ್ನು ಪಡೆದವನಾಗುವನು* ಎಂದಭಿಪ್ರಾಯವು.

“ಸರ್ವಸಂಕಲ್ಪಗಳನ್ನೂ ಸಂನ್ಯಾಸಮಾಡಿರುವನು” ಎಂದದ್ದರಿಂದ ಸಕಲ ಕಾಮಗಳನ್ನೂ ಸಕಲ ಕರ್ಮಗಳನ್ನೂ ಬಿಡತಕ್ಕದ್ದೆಂದು ಹೇಳಿದಂತೆ ಆಯಿತು ; ಏಕೆಂದರೆ ಕಾಮಗಳಿಗೆ ಸಂಕಲ್ಪವೇ ಮೂಲವು. “ಸಂಕಲ್ಪಮೂಲಃ ಕಾಮೋ ವೈ ಯಜ್ಞಾಃ ಸಂಕಲ್ಪಸಂಭವಾಃ । (ಮನು) (ಕಾಮಕ್ಕೆ ಸಂಕಲ್ಪವೇ ಕಾರಣವು, ಸಂಕಲ್ಪದಿಂದಲೇ ಯಜ್ಞಗಳು ಹುಟ್ಟಿರುವವು) ಎಂಬ ಸ್ಮೃತಿಯೂ, “ಕಾಮ ಜಾನಾಮಿ ತೇ ಮೂಲಂ ಸಂಕಲ್ಪಾತ್ ಕಿಲ ಜಾಯಸೇ । ನ ತ್ವಾಂ ಸಂಕಲ್ಪಯಿಷ್ಯಾಮಿ ತೇನ† ಮೇ ನ ಭವಿಷ್ಯಸಿ” (ಮೋ) (“ಎಲೈ ಕಾಮವೆ, ನಿನ್ನ ಮೂಲವನ್ನು ತಿಳಿದುಕೊಂಡೆನು. ಸಂಕಲ್ಪದಿಂದಲ್ಲವೆ (ನೀನು) ಹುಟ್ಟುವೆ? ಇನ್ನು ನಿನ್ನನ್ನು ಸಂಕಲ್ಪಮಾಡುವದಿಲ್ಲ ; ಅದರಿಂದ ಇನ್ನೇಲೆ ನನಗೆ ಉಂಟಾಗಲಾರೆ”) ಎಂಬುದೇ ಮುಂತಾದ ಸ್ಮೃತಿಯೂ ಇದಕ್ಕೆ ಪ್ರಮಾಣವು. “ಅವನು ಎಂಥ ಕಾಮವುಳ್ಳವನಾಗುವನೋ ಅಂಥ ಸಂಕಲ್ಪವನ್ನು ಮಾಡುವನು, ಎಂಥ ಸಂಕಲ್ಪವನ್ನು ಮಾಡುವನೋ ಅಂಥ ಕರ್ಮವನ್ನೇ ಮಾಡುವನು’ (ಬೃ) ಮುಂತಾದ ಶ್ರುತಿಗಳಿಂದಲೂ “ಯದ್ಯದ್ಧಿ ಕುರುತೇ ಜನ್ತುಃ‡ ತತ್ತತ್ಕಾಮಸ್ಯ ಚೇಷ್ಟಿತಮ್ ।” (ಮ) (ಜೀವನು ಏನೇನು ಮಾಡುತ್ತಾನೋ ಅದೆಲ್ಲವೂ ಕಾಮದ ಚೇಷ್ಟೆಯೆ) ಮುಂತಾದ ಸ್ಮೃತಿಗಳಿಂದಲೂ, **ಸರ್ವಕಾಮಗಳನ್ನೂ ಬಿಟ್ಟರೆ ಸರ್ವಕರ್ಮಗಳನ್ನೂ ಬಿಟ್ಟಂತೆ ಆಗುವದೆಂದು ಸಿದ್ಧವಾಗುವದು.** ಇದಕ್ಕೆ ಯುಕ್ತಿಯೂ (ಹೊಂದುತ್ತದೆ). ಏಕೆಂದರೆ ಸಂಕಲ್ಪಗಳನ್ನೆಲ್ಲ ಬಿಟ್ಟರೆ

---

* ಯೋಗದ ಫಲವನ್ನು ಪಡೆದವನಾಗುವನು ಎಂದರ್ಥ.

† ಈ ಶ್ಲೋಕದ ಉತ್ತರಾರ್ಧವು ಮ॥ ಪಾಠದಲ್ಲಿಲ್ಲ. ಭಾರತದಲ್ಲಿ ‘ಸಮೂಲೋ ನ ಭವಿಷ್ಯಸಿ’ ಎಂದಿದೆ ; ಇದಕ್ಕೆ ‘ಬೇರುಸಹಿತವಾಗಿ ನಾಶವಾಗುವೆ’ ಎಂದರ್ಥ. ಇದು ಮೈ॥ ಪಾಠಕ್ಕೆ ಹೊಂದುವದು.

‡ ಇದು ಮೈ॥ ಪಾಠದಲ್ಲಿಲ್ಲ ; ಮ॥ ಪಾಠದಲ್ಲಿರುವ ‘ಜನ್ತುಃ’ ಎಂಬುದಕ್ಕೆ ಬದಲು ಮಿಕ್ಕ ಪಾಠಗಳಲ್ಲಿ ‘ಕರ್ಮ’ ಎಂದಿದೆ ; ಆದರೆ ಭಾಷ್ಯಕಾರರು ಬೇರೆ ಕಡೆಗಳಲ್ಲಿ ಈ ಶ್ಲೋಕವನ್ನು ಉದಾಹರಿಸುವಾಗ ‘ಜನ್ತುಃ’ ಎಂದೇ ಬರೆದಿರುತ್ತಾರೆ.

ಮನುಷ್ಯನು ಅಲುಗಾಡುವುದೂ* ಕೂಡ ಆಗುವದಿಲ್ಲ; ಆದ್ದರಿಂದ "ಸರ್ವಸಂಕಲ್ಪಗಳನ್ನೂ ಸಂನ್ಯಾಸಮಾಡುವವನೋ" ಎಂಬ ಮಾತಿನಿಂದ ಭಗವಂತನು ಸರ್ವಕಾಮಗಳನ್ನೂ ಸರ್ವಕರ್ಮಗಳನ್ನೂ ಬಿಟ್ಟುಬಿಡಬೇಕೆಂದೇ ಹೇಳಿರುತ್ತಾನೆ(ಎಂದು ಸಿದ್ಧವಾಯಿತು.)

ಹೀಗೆ ಯಾವಾಗ ಯೋಗಾರೂಢನಾಗುವನೋ, ಆಗ ಅನರ್ಥಗಳ ಗುಂಪಾದ ಸಂಸಾರದಿಂದ ತನ್ನನ್ನು ತಾನು ಬಿಡುಗಡೆಮಾಡಿಕೊಂಡಂತೆ ಆಗುವದು. ಆದ್ದರಿಂದ,

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ॥ ೫ ॥**

೫. ತಾನು ತನ್ನನ್ನು ಉದ್ಧಾರಮಾಡಿಕೊಳ್ಳಬೇಕು, ತನ್ನನ್ನು ತಗ್ಗಿಸಿಕೊಳ್ಳಬಾರದು; ಏಕೆಂದರೆ ತನಗೆ ತಾನೇ ಬಂಧು, ತನಗೆ ತಾನೇ ಶತ್ರು.

[ಭಾಷ್ಯ]

ಸಂಸಾರಸಾಗರದಲ್ಲಿ ಮುಳುಗಿರುವ ತನ್ನನ್ನು ತಾನೆ ಉದ್ಧಾರಮಾಡಿಕೊಳ್ಳಬೇಕು; ಅಲ್ಲಿಂದ ಮೇಲಕ್ಕೆ ಹಿಡಿದೆತ್ತಿಕೊಳ್ಳಬೇಕು, ಎಂದರೆ ಯೋಗಾರೂಢನನ್ನಾಗಿ† ಮಾಡಿಕೊಳ್ಳಬೇಕು ಎಂದರ್ಥ. ತನ್ನನ್ನು ತಾನು ತಗ್ಗಿಸಿಕೊಳ್ಳಬಾರದು, ಕೆಳಕ್ಕೆ ನೂಕಿಕೊಳ್ಳಬಾರದು. ಏಕೆಂದರೆ ತನಗೆ ತಾನೇ ಮಿತ್ರನು, ತನ್ನನ್ನು ಸಂಸಾರದಿಂದ ಬಿಡುಗಡೆಮಾಡಿಸುವದಕ್ಕೆ ಮತ್ತೆ ಯಾವನೂ‡ ಮಿತ್ರನೂ ಇರುವದಿಲ್ಲ. (ನಿಜವಾಗಿ ನೋಡಿದರೆ) ಮಿತ್ರನೆಂಬುವನೂ ಪ್ರೀತಿಯೇ ಮುಂತಾದ ಕಟ್ಟಿಗೆ (ಒಳಗೆ ಮಾಡುವ) ಸ್ಥಾನವಾಗಿರುವದರಿಂದ ಮೋಕ್ಷಕ್ಕೆ ಪ್ರತಿಕೂಲನೆ; ಆದ್ದರಿಂದ 'ತನಗೆ ತಾನೇ ಮಿತ್ರನು' ಎಂದು ಒತ್ತಿ ಹೇಳಿದ್ದು ಸರಿಯೆ. ತನಗೆ ತಾನೇ ಶತ್ರುವು; ತನಗೆ ಅಪಕಾರವನ್ನು ಮಾಡುವ ಬೇರೆ ಹೊರಗಿನ ಶತ್ರು

---

* ಮನುಷ್ಯನು ಸಂಕಲ್ಪಮಾಡದೆಯೇ ಕೆಲವು ಕರ್ಮಗಳು ನಡೆಯುವಂತೆ ತೋರಿದರೂ ಸಂಕಲ್ಪಶಕ್ತಿಯು ನಡೆಯುತ್ತಿರುವಾಗಲೇ ಅವೂ ತೋರಿಕೊಳ್ಳುವವು; ಸಂಕಲ್ಪವಿಲ್ಲದ ನಿದ್ರೆಯೇ ಮುಂತಾದ ಅವಸ್ಥೆಗಳಲ್ಲಿ ಯಾವ ಕರ್ಮವೂ ತೋರಿಕೊಳ್ಳುವದಿಲ್ಲ.

† ವಿಷಯಾಸಕ್ತನಾದರೆ ಸಂಸಾರದಲ್ಲಿ ಮುಳುಗಿದಂತೆ ಆಯಿತು, ಕಾಮಗಳನ್ನು ಗೆದ್ದು ಯೋಗಾರೂಢನಾದರೆ ತನ್ನನ್ನು ಮೇಲಕ್ಕೆ ಎತ್ತಿಕೊಂಡಂತೆ ಆಯಿತು

‡ ಗುರುಗಳು ಕೂಡ ತತ್ತ್ವವನ್ನು ಬೋಧಿಸುವರೇ ಹೊರತು, ತತ್ತ್ವವನ್ನು ಮನಗಾಣುವಂತೆ ನೇರಾಗಿ ಸಹಾಯಮಾಡಲಾರರು. ತಾನೇ ಸಾಧನವನ್ನು ಮಾಡಿ, ತಾನೆ ವಿಚಾರವನ್ನು ಮಾಡಿ, ಸಂಸಾರದಿಂದ ಪಾರಾಗಬೇಕು.

ವೆಂಬುವನೂ ತನ್ನಿಂದಲೇ* (ಶತ್ರು)ವಾಗುವನು, ಆದ್ದರಿಂದ 'ತನಗೆ ತಾನೇ ಶತ್ರುವು' ಎಂದು ಒತ್ತಿ ಹೇಳಿದ್ದು ಸರಿಯೆ.

ತನಗೆ ತಾನೇ ಮಿತ್ರನೆಂದೂ ತನಗೆ ತಾನೇ ಶತ್ರುವೆಂದೂ ಹೇಳಿತಷ್ಟೆ. ಇಲ್ಲಿ ಎಂಥವನು ತನಗೆ ತಾನೇ ಮಿತ್ರನು, ಮತ್ತು ಎಂಥವನು ತನಗೆ ತಾನೇ ಶತ್ರುವು ? ಎಂದರೆ ಹೇಳುತ್ತಾನೆ:—

**ಬನ್ಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

೬. ಯಾವನು ತನ್ನನ್ನು ತಾನೇ ಜಯಿಸಿಕೊಂಡಿರುವನೋ ಅವನು ತನಗೆ ತಾನೇ ಮಿತ್ರನು, ಯಾವನು ಅನಾತ್ಮನೋ ಅವನು ತನಗೆ ತಾನೇ ಶತ್ರುವಾಗಿ ಶತ್ರುವಿನಂತಿರುವನು.

[ಭಾಷ್ಯ]

ಅಂಥವನು ತನಗೆ ತಾನೇ ಮಿತ್ರನು; (ಯಾರೆಂದರೆ) ಯಾವನು ತನ್ನನ್ನು ತಾನೇ ಜಯಿಸಿಕೊಂಡಿರುವನೋ ಅವನು. (ಇಲ್ಲಿ) 'ತಾನು' ಎಂದರೆ ದೇಹೇಂದ್ರಿಯಗಳ ಗುಂಪು; ಅದನ್ನು ಯಾವನು ವಶದಲ್ಲಿಟ್ಟುಕೊಂಡಿರುವನೋ ಎಂದರೆ ಯಾವನು ಜಿತೇಂದ್ರಿಯನಾಗಿರುವನೋ(ಅವನು ತನಗೆ ತಾನೇ ಮಿತ್ರನು) ಎಂದರ್ಥ. ಆದರೆ ಯಾವನು ಅನಾತ್ಮನೋ ಎಂದರೆ ತನ್ನನ್ನು ತಾನೇ ಗೆದ್ದುಕೊಂಡಿರುವದಿಲ್ಲವೋ (ಅವನು) ಶತ್ರುವಾಗಿ ತಾನೇ ಶತ್ರುವಿನಂತೆ ವರ್ತಿಸುವನು, ತನಗಿಂತ ಬೇರೆಯಾದ ಶತ್ರುವು ತನಗೆ ಹೇಗೆ ಅಪಕಾರವನ್ನು ಮಾಡುವನೋ ಅದರಂತೆ ತನಗೆ ತಾನೇ ಅಪಕಾರವಮಾಡಿಕೊಳ್ಳುತ್ತಿರುವನು ಎಂದರ್ಥ.

**ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಞ್ಚನಃ ॥ ೮ ॥**

೭–೮. ಜಿತಾತ್ಮನಾಗಿ ಪ್ರಶಾಂತನಾಗಿರುವಾತನಿಗೆ ಪರಮಾತ್ಮನು ಸಮಾಹಿತನಾಗಿರುವನು. ಶೀತೋಷ್ಣಸುಖದುಃಖಗಳಲ್ಲಿಯೂ ಮಾನಾಪಮಾನಗಳಲ್ಲಿಯೂ, ಜ್ಞಾನವಿಜ್ಞಾನಗಳಿಂದ ತೃಪ್ತವಾದ ಮನಸ್ಸುಳ್ಳವನಾಗಿ ಕೂಟಸ್ಥ

* ತನ್ನ ಸ್ವಾರ್ಥಬುದ್ಧಿಯಿಂದಲೇ ಆಸ್ವಾರ್ಥಸಾಧನೆಗೆ ಅಡ್ಡಿಯಾಗಿರುವವನನ್ನು ಶತ್ರುವೆಂದು ಭಾವಿಸುತ್ತಾನೆ.

ನಾಗಿ ವಿಜಿತೇಂದ್ರಿಯನಾಗಿ ಮಣ್ಣಿನ ಹೆಂಟೆ, ಕಲ್ಲು, ಚಿನ್ನ– ಇವುಗಳಲ್ಲಿ ಸಮವಾಗಿರುವಾತನು ಯುಕ್ತನೆನಿಸುವನು.

[ಭಾಷ್ಯ]

ಆತ್ಮನೆಂದರೆ ದೇಹೇಂದ್ರಿಯಗಳ ಗುಂಪು; (ಅದನ್ನು) ವಶದಲ್ಲಿಟ್ಟುಕೊಂಡಿರುವವನು ಜಿತಾತ್ಮನು. ಹಾಗೆ ಜಿತಾತ್ಮನಾಗಿ, ಪ್ರಶಾಂತನಾಗಿ ಎಂದರೆ ಅಂತಃಕರಣದಲ್ಲಿ ಪ್ರಸನ್ನತೆಯನ್ನು ಹೊಂದಿರುವ ಸಂನ್ಯಾಸಿಗೆ ಪರಮಾತ್ಮನು ಸಮಾಹಿತನಾಗಿರುವನು, ಎಂದರೆ ನೇರಾಗಿ ಅವನ ಆತ್ಮನಾಗಿಯೇ ಇದ್ದುಕೊಂಡಿರುವನು ಎಂದರ್ಥ.

ಮತ್ತು ಶೀತ ಉಷ್ಣ, ಸುಖ ದುಃಖ, ಮಾನ ಅಪಮಾನ–ಎಂದರೆ ಗೌರವಿಸುವದು ಅನಾದರಮಾಡುವದು– (ಮುಂತಾದ ದ್ವಂದ್ವಗಳು ಬಂದೊದಗಿದರೂ),* ಜ್ಞಾನವಿಜ್ಞಾನಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನಾಗಿ– ಜ್ಞಾನವೆಂದರೆ ಶಾಸ್ತ್ರದಲ್ಲಿ ಹೇಳಿರುವ ಪದಾರ್ಥಗಳನ್ನು ತಿಳಿದುಕೊಂಡಿರುವದು, ವಿಜ್ಞಾನವೆಂದರೆ ಶಾಸ್ತ್ರದಲ್ಲಿ ಹೇಳಿರುವ (ಪದಾರ್ಥಗಳನ್ನು) ಹಾಗೆಯೇ ತನ್ನ ಅನುಭವಕ್ಕೆ† ತಂದುಕೊಳ್ಳುವದು– ಈ ಜ್ಞಾನವಿಜ್ಞಾನಗಳಿಂದ ತೃಪ್ತಿಹೊಂದಿದ ಎಂದರೆ ('ಇದೇ ಸರಿ') 'ಇಷ್ಟು ಸಾಕು' ಎಂಬ ತಿಳಿವನ್ನು ಹೊಂದಿರುವ ಮನಸ್ಸುಳ್ಳವನಾಗಿ ಕೂಟಸ್ಥನಾಗಿ ಸ್ವಲ್ಪವೂ ಚಲಿಸದೆ ಇರುವವನು ಎಂದರ್ಥ. ಇಂದ್ರಿಯಗಳನ್ನು ಜಯಿಸಿದವನೂ (ಆಗಿರುವವನು). ಯಾವನು ಹೀಗೆ (ಶೀತೋಷ್ಣಾದಿಗಳಲ್ಲಿ ಸಮನಾಗಿಯೂ ಜಿತೇಂದ್ರಿಯನಾಗಿಯೂ) ಇರುವನೋ ಅವನು ಯುಕ್ತನು,‡ ಎಂದರೆ ಸಮಾಧಿಯನ್ನು ಹೊಂದಿದವನು ಎನ್ನಿಸುವನು, ಮತ್ತು

* ಇಲ್ಲಿ "ಸಮಃ ಸ್ಯಾತ್" ಎಂಬ ಮಾತು ಆ|| ಮ|| ಪಾಠಗಳಲ್ಲಿದೆ. ಇದು ಭಾಷ್ಯದಲ್ಲಿ ಲೇಖಕರ ಕೈತಪ್ಪಿನಿಂದ ಬಿದ್ದಿರಬೇಕು. "ಸಮಃ ಸ್ಯಾತ್ ಇತಿ ವಾಕ್ಯಶೇಷಃ" ಎಂಬ ಆ|| ಟೀಕೆಯನ್ನು ನೋಡಿ ಯಾರೋ ಕೈಪ್ರತಿಯಲ್ಲಿ ಭಾಷ್ಯದಲ್ಲಿಯೂ ಸೇರಿಸಿಕೊಂಡಿರಬೇಕೆಂದು ತೋರುವದು. ನಿಜವಾಗಿ ೭ನೆಯ ಶ್ಲೋಕದ ಉತ್ತರಾರ್ಧವೂ ೮ನೆಯ ಶ್ಲೋಕವೂ ಸೇರಿ ಅನ್ವಯಿಸಬೇಕೆಂಬುದು ಸ್ಪಷ್ಟವೇ ಆಗಿದೆ "ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥಃ ವಿಜಿತೇಂದ್ರಿಯಃ ಸಮಲೋಷ್ಟಾಶ್ಮಕಾಂಚನಃ ಯೋಗೀ ಯುಕ್ತ ಇತ್ಯುಚ್ಯತೇ" ಎಂದು ಅನ್ವಯ.

† ಜ್ಞಾನವೆಂಬುದು ಪರೋಕ್ಷ, ವಿಜ್ಞಾನವು ಅಪರೋಕ್ಷ.

‡ 'ಯುಕ್ತ ಇತ್ಯುಚ್ಯತೇ' ಎಂಬುದೇ ಇಲ್ಲಿ ಮುಖ್ಯವಾದ ವಿಧೇಯವು; ಜಿತೇಂದ್ರಿಯನಾಗಿ ಯೋಗಿಯಾಗಿರುವವನು ತನ್ನನ್ನು ತಾನು ಉದ್ಧಾರಮಾಡಿದಂತಾಗುವದರಿಂದ ಪ್ರತಿಯೊಬ್ಬನೂ ಯೋಗಾರೂಢನಾಗುವದಕ್ಕೆ ಯತ್ನಿಸಬೇಕು ಎಂಬುದು ವಾಕ್ಯದ ಒಟ್ಟರ್ಥವು.

ಆ ಯೋಗಿಯು * ಮಣ್ಣುಹೆಂಟೆ, ಕಲ್ಲು, ಚಿನ್ನ– ಇವುಗಳಲ್ಲಿ ಒಂದೇ ಬುದ್ಧಿಯಿಂದಿರುವವನು, ಅವುಗಳು (ಇವನಿಗೆ) ಒಂದೇ ಸಮವಾಗಿರುವವು.†

ಮತ್ತು—

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

೯. ಉಪಕಾರಿ, ಮಿತ್ರ, ಶತ್ರು, ಉದಾಸೀನ, ಮಧ್ಯಸ್ಥನು, ದ್ವೇಷ್ಯನು, ಬಂಧು– ಇವರಲ್ಲಿಯೂ ಸಾಧುಗಳು, ಪಾಪಿಗಳು– ಇವರಲ್ಲಿಯೂ ಸಮಬುದ್ಧಿಯಾಗಿರುವವನು ಹೆಚ್ಚಿನವನು.

[ಭಾಷ್ಯ]

ಈ ಶ್ಲೋಕದಲ್ಲಿ ಅರ್ಧಭಾಗವು ಒಂದೇ ಪದವು. ಸುಹೃತ್– ಎಂದರೆ ಪ್ರತ್ಯುಪಕಾರವನ್ನು ಬಯಸದೆ ಉಪಕಾರವನ್ನು ಮಾಡುವವನು ; 'ಮಿತ್ರನೆಂದರೆ ಸ್ನೇಹಿತನು ; 'ಅರಿ' ಎಂದರೆ ಶತ್ರು ; ಉದಾಸೀನನು ಎಂದರೆ ಯಾರ ಪಕ್ಷವನ್ನೂ ವಹಿಸದವನು ; ಮಧ್ಯಸ್ಥನು ಎಂದರೆ ಜಗಳವಾಡುತ್ತಿರುವವರಿಬ್ಬರಿಗೂ ಹಿತವನ್ನು ಬಯಸುವವನು ; ದ್ವೇಷ್ಯನೆಂದರೆ ತನಗೆ ಪ್ರಿಯನಲ್ಲದವನು ; ಬಂಧುವೆಂದರೆ ನೆಂಟನು– ಇವರಲ್ಲಿಯೂ ಸಾಧುಗಳಲ್ಲಿ ಎಂದರೆ ಶಾಸ್ತ್ರದಲ್ಲಿ ಹೇಳಿರುವಂತೆ ನಡೆಯುವವರು, ಪಾಪಿಗಳು ಎಂದರೆ ಶಾಸ್ತ್ರದಲ್ಲಿ ಮಾಡಬಾರದೆಂದಿರುವ 'ಕರ್ಮ'ವನ್ನು ಮಾಡುವವರು– ಇವರೆಲ್ಲರಲ್ಲಿಯೂ ಸಮಬುದ್ಧಿಯುಳ್ಳವನು ಎಂದರೆ ಯಾವನು ಏನು ಮಾಡುತ್ತಿರುವನೆಂಬುದನ್ನು ಬುದ್ಧಿಗೆ ಹಚ್ಚಿಕೊಳ್ಳದೆ ಇರುವವನು ಎಂದರ್ಥ; (ಇಂಥವನು) ಹೆಚ್ಚಿನವನು. (ವಿಶಿಷ್ಯತೇ ಎಂಬುದಕ್ಕೆ ಬದಲು) 'ವಿಮುಚ್ಯತೇ' (ಮುಕ್ತನಾಗುವನು) ಎಂದೂ ಪಾಠವುಂಟು. ಯೋಗಾರೂಢರಲ್ಲೆಲ್ಲ ಇವನು ಉತ್ತಮನು ಎಂದರ್ಥ.

## ಯೋಗವನ್ನು ಮಾಡುವ ಕ್ರಮ

ಆದ್ದರಿಂದ ಇಂಥ ಉತ್ತಮಫಲವನ್ನು ಹೊಂದುವದಕ್ಕಾಗಿ:—

**ಯೋಗೀ ಯುಞ್ಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

* "ಉಚ್ಯತೇ ಕಥ್ಯತೇ ಸ ಯೋಗೀ" ಎಂಬ (ನಿ|| ಗು|| ಮ||) ಪಾಠವನ್ನೇ ಇಲ್ಲಿ ತೆಗೆದುಕೊಂಡಿದೆ.

† ಅವುಗಳಲ್ಲಿ ಇವನಿಗೆ ರಾಗದ್ವೇಷಗಳುಂಟಾಗುವದಿಲ್ಲ ; ಏನನ್ನು ಕಂಡರೂ ಮನಸ್ಸಿನಲ್ಲಿ ಏರುಪೇರಿಲ್ಲದೆ ವಿರಕ್ತನಾಗಿರುವನು–ಎಂದು ಭಾವ.

೧೦. ಯೋಗಿಯಾದವನು ರಹಸ್ಯದಲ್ಲಿದ್ದುಕೊಂಡು ಒಂದೇ ಸಮನೆ ಮನಸ್ಸನ್ನು ನಿಲ್ಲಿಸಿಕೊಳ್ಳಬೇಕು; ಏಕಾಕಿಯಾಗಿ, ಚಿತ್ತಾತ್ಮಗಳನ್ನು ಬಿಗಿಯ ಹಿಡಿದು, ಆಶೆಯಿಲ್ಲದೆ, ತನ್ನದೆಂಬುದಿಲ್ಲದೆ ಇರಬೇಕು.

[ಭಾಷ್ಯ]

ಯೋಗಿಯು ಎಂದರೆ ಧ್ಯಾನಮಾಡುತ್ತಿರುವವನು, ಒಂದೇ ಸಮನೆ ಯಾವಾಗಲೂ ರಹಸ್ಯದಲ್ಲಿ ಎಂದರೆ ಬೆಟ್ಟದ ಗುಹೆಯೇ ಮುಂತಾದ * ಕಡೆಯಲ್ಲಿದ್ದುಕೊಂಡು, ಮನಸ್ಸನ್ನು ಯೋಗದಲ್ಲಿಡಬೇಕು, ಎಂದರೆ ಸಮಾಧಾನವಾಗಿಟ್ಟುಕೊಳ್ಳಬೇಕು. ಏಕಾಕಿಯಾಗಿ ಎಂದರೆ ಮತ್ತೊಬ್ಬರು ಜೊತೆಯಲ್ಲಿಲ್ಲದೆ (ಇರಬೇಕು). 'ರಹಸ್ಯದಲ್ಲಿರಬೇಕು', 'ಒಂಟಿಗನಾಗಿರಬೇಕು'-ಎಂದು ವಿಶೇಷಣವನ್ನು ಹಾಕಿರುವದರಿಂದ ಸಂನ್ಯಾಸವನ್ನು ಮಾಡಿರಬೇಕೆಂದು ಅರ್ಥ(ವನ್ನು ಮಾಡಬೇಕು). ಚಿತ್ತವನ್ನೂ ಆತ್ಮವನ್ನೂ ಬಿಗಿಯಹಿಡಿದುಕೊಂಡಿರಬೇಕು. ಚಿತ್ತವೆಂದರೆ† ಅಂತಃಕರಣವು, ಆತ್ಮವೆಂದರೆ ದೇಹವು; (ಇವನ್ನು) ಬಿಗಿಯಹಿಡಿದುಕೊಂಡಿರಬೇಕು. ಆಶೆಯಿಲ್ಲದೆ, ಎಂದರೆ ಇಂಥದ್ದು ಆಗಬೇಕೆಂಬ ಬಯಕೆಯಿಲ್ಲದೆ ತನ್ನದೆಂಬುದಿಲ್ಲದೆ ಇರಬೇಕು. ಸಂನ್ಯಾಸಿಯಾಗಿರುವದಲ್ಲದೆ ನನ್ನದೆಂಬ ಅಭಿಮಾನವನ್ನೆಲ್ಲ ತೊರೆದು ಯೋಗವನ್ನು ಮಾಡಬೇಕು- ಎಂದರ್ಥ.

ಇನ್ನು, ಯೋಗವನ್ನು ಮಾಡುವಾತನಿಗೆ ಆಸನ, ಆಹಾರ, ನಡೆನುಡಿ- ಮುಂತಾದ ಯೋಗಸಾಧನಗಳ ನಿಯಮವನ್ನು ಹೇಳಬೇಕು; ಯೋಗವನ್ನು ಪಡೆದಾತನ ಲಕ್ಷಣ ಮತ್ತು ಆ (ಯೋಗದಿಂದಾಗುವ) ಫಲ- ಇವುಗಳನ್ನು ಹೇಳಬೇಕು. ಇದಕ್ಕಾಗಿ (ಮುಂದಿನ ಗ್ರಂಥವನ್ನು) ಪ್ರಾರಂಭಿಸಿದೆ. ಮೊದಲು ಆಸನವನ್ನು ಕುರಿತು ಹೇಳುತ್ತಾನೆ:—

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥ ೧೧ ॥**

೧೧. ಶುಚಿಯಾದ ಸ್ಥಳದಲ್ಲಿ, ಹೆಚ್ಚು ಎತ್ತರವೂ ಅಲ್ಲದೆ ಹೆಚ್ಚು ತಗ್ಗೂ ಅಲ್ಲದೆ ಬಟ್ಟೆ, ಚರ್ಮ, ಕುಶಗಳು- ಇವುಗಳನ್ನು ಮೇಲೆ ಹಾಕಿರುವ ಸ್ಥಿರವಾದ ಆಸನವನ್ನು ಹಾಕಿಕೊಂಡು—

[ಭಾಷ್ಯ]

ಸ್ವಭಾವದಿಂದಲೆ ಆಗಲಿ ತಾನೆ ಶುದ್ಧಿಗೊಳಿಸುವದರಿಂದಲಾಗಲಿ ಶುಚಿಯಾದ ಪರಿಶುದ್ಧಪ್ರದೇಶದಲ್ಲಿ ತನ್ನ ಸ್ಥಿರವಾದ ಎಂದರೆ ಭದ್ರವಾದ ಆಸನವನ್ನು- ಹೆಚ್ಚು

* ಶ್ವೇ. ೨–೧೦ ರ ಸೂಚನೆ.

† ಮನಸ್ಸು, ಬುದ್ಧಿ, ಚಿತ್ತ- ಇವು ಅಂತಃಕರಣದ ಒಂದೊಂದು ವೃತ್ತಿಗೂ ಹೆಸರು, ಅಂತಃಕರಣಕ್ಕೂ ಹೆಸರು; ಸಂದರ್ಭಾನುಸಾರವಾಗಿ ಅರ್ಥವನ್ನು ಮಾಡಿಕೊಳ್ಳಬೇಕು.

ಎತ್ತರವೂ ಅಲ್ಲದೆ, ಹೆಚ್ಚು ತಗ್ಗೂ ಅಲ್ಲವೆ, ಮತ್ತು ಬಟ್ಟೆ, ಚರ್ಮ, ಕುಶ- ಇವುಗಳನ್ನು ಮೇಲೆ ಹಾಕಿರುವದಾದ ; ಬಟ್ಟೆಯೇ ಮುಂತಾದವುಗಳನ್ನು ಇಲ್ಲಿ ಹೇಳಿರುವ ಕ್ರಮಕ್ಕೆ ವಿರುದ್ಧವಾಗಿ [ಎಂದರೆ ದರ್ಭೆಯ ಮೇಲೆ ಚರ್ಮ, ಚರ್ಮದ ಮೇಲೆ ಬಟ್ಟೆ-ಹೀಗೆ ಹಾಕಿರುವ ಸ್ಥಿರವಾದ ಆಸನವನ್ನು]- ಹಾಕಿಕೊಂಡು

(ಆಸನವನ್ನು) ಹಾಕಿಕೊಂಡು ಏನು (ಮಾಡಬೇಕು) ? ಎಂದರೆ—

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇನ್ದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಞ್ಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥**

೧೨. ಆ ಆಸನದಲ್ಲಿ ಕುಳಿತುಕೊಂಡು, ಮನಸ್ಸನ್ನು ಏಕಾಗ್ರವಾಗಿ ಮಾಡಿಕೊಂಡು, ಚಿತ್ತ ಇಂದ್ರಿಯ ಇವುಗಳ ಕ್ರಿಯೆಗಳನ್ನು ಬಿಗಿಹಿಡಿದು ಆತ್ಮ ಶುದ್ಧಿಗಾಗಿ ಯೋಗವನ್ನು ಮಾಡಬೇಕು.

[ಭಾಷ್ಯ]

ಆ ಆಸನದಲ್ಲಿ ಕುಳಿತುಕೊಂಡು ಯೋಗವನ್ನು ಮಾಡಬೇಕು. ಹೇಗೆಂದರೆ, ಎಲ್ಲಾ ವಿಷಯಗಳಿಂದಲೂ ಮನಸ್ಸನ್ನು ಹಿಂಜರಿಗಿ ಏಕಾಗ್ರವಾಗಿಟ್ಟುಕೊಂಡು * ಚಿತ್ತದ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಸ್ವಾಧೀನದಲ್ಲಿಟ್ಟುಕೊಂಡು † (ಯೋಗವನ್ನು ಮಾಡಬೇಕು). ಅವನು ಏತಕ್ಕೆ ಯೋಗವನ್ನು ಮಾಡಬೇಕು ? ಎಂದರೆ ಹೇಳುತ್ತಾನೆ. ಆತ್ಮವಿಶುದ್ಧಿಗಾಗಿ, ಅಂತಃಕರಣವು ಚೆನ್ನಾಗಿ ಶುದ್ಧಿಯಾಗುವದಕ್ಕಾಗಿ ‡ ಎಂದರ್ಥ.

ಹೊರಗಿನ ಆಸನವನ್ನು ಹೇಳಿದ್ದಾಯಿತು ; ಈಗ ಶರೀರವನ್ನು ಹೇಗೆ ಇಟ್ಟುಕೊಳ್ಳಬೇಕೆಂಬುದನ್ನು ಹೇಳುತ್ತೇನೆ:—

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**
**ಪ್ರಶಾನ್ತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

---

* ಏಕಾಗ್ರತೆಯೆಂಬುದು ಚಿತ್ತದ ಒಂದು ಭೂಮಿಕೆಯು ; ಭೂಮಿಕೆಗಳನ್ನು ಗೀತಾರ್ಥ ಸರ್ವಸ್ವದಲ್ಲಿ ಚರ್ಚಿಸಿದೆ.

† ಇಂದ್ರಿಯಗಳು ಹೊರಕ್ಕೆ ಹರಿಯದಂತೆಯೂ ಚಿತ್ತವು ಒಳಗೇ ಸಂಕಲ್ಪವನ್ನು ಮಾಡದಂತೆಯೂ ತಡೆದುಕೊಂಡು- ಎಂದು ಭಾವ.

‡ ಕರ್ಮದಂತೆ ಯೋಗವೂ ಚಿತ್ತಶುದ್ಧಿಗೇ ಕಾರಣವಾಗಿರುವದು ; ಈ ಮೂಲಕವೇ ಅದು ಜ್ಞಾನಕ್ಕೆ ಕಾರಣ.

೧೩. ಶರೀರ, ತಲೆ, ಕತ್ತು– ಇವುಗಳನ್ನು ಸಮವಾಗಿ ಅಲುಗಾಡದಂತೆ ನಿಲ್ಲಿಸಿಕೊಂಡು, ಸ್ಥಿರನಾಗಿ ತನ್ನ ಮೂಗಿನ ತುದಿಯನ್ನು ನೋಡುತ್ತಾ, ದಿಕ್ಕು ಗಳನ್ನು ನೋಡದೆ, ಪ್ರಶಾಂತಾತ್ಮನಾಗಿ ಭಯವಿಲ್ಲದೆ, ಬ್ರಹ್ಮಚಾರಿವ್ರತದಲ್ಲಿದ್ದು ಕೊಂಡು, ಮನಸ್ಸನ್ನು ಬಿಗಿಹಿಡಿದು, ನನ್ನಲ್ಲಿಯೇ ಚಿತ್ತವುಳ್ಳವನಾಗಿ, ನಾನೇ ಹೆಚ್ಚೆಂದು ತಿಳಿದು ಯುಕ್ತನಾಗಿರಬೇಕು.

[ಭಾಷ್ಯ]

ಶರೀರವನ್ನೂ* ತಲೆಯನ್ನೂ ಕತ್ತನ್ನೂ ಇವುಗಳು ಸಮವಾಗಿ (ನೆಟ್ಟಗೆ) ಅಲುಗಾಡದಂತೆ ನಿಲ್ಲಿಸಿಕೊಂಡು ; ನೆಟ್ಟನೆ ನಿಲ್ಲಿಸಿಕೊಂಡರೂ ಅಲುಗಾಡಬಹು ದಾದ್ದರಿಂದ 'ಅಲುಗಾಡದಂತೆ' ಎಂಬ ವಿಶೇಷಣವನ್ನು ಹಾಕಿದೆ. ಸ್ಥಿರವಾಗಿ ಒಂದೇ ರೀತಿಯಾಗಿದ್ದುಕೊಂಡು ಎಂದರ್ಥ. ತನ್ನ ಮೂಗಿನ ತುದಿಯನ್ನೇ ಚೆನ್ನಾಗಿ ನೋಡುತ್ತಾ, 'ಚೆನ್ನಾಗಿ ನೋಡುವವನಂತೆ ಇದ್ದುಕೊಂಡು', ಎಂದು 'ಅಂತೆ' ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಏಕೆಂದರೆ ಇಲ್ಲಿ ತನ್ನ ಮೂಗಿನ ತುದಿಯನ್ನು ನೋಡಬೇಕೆಂದು ವಿಧಿಸುವದಕ್ಕೆ ಹೊರಟಿಲ್ಲ, ಮತ್ತೇನೆಂದರೆ ಕಣ್ಣಿನ ನೋಟವನ್ನು† ಒಕ್ಕಡೆಗೆ ತರಬೇಕೆಂಬುದನ್ನೇ (ವಿಧಿಸು ವದಕ್ಕೆ ಹೊರಟಿದೆ). ಹೀಗೆ ಮಾಡುವದು ಅಂತಃಕರಣವನ್ನು ಸಮಾಧಾನವಾಗಿಟ್ಟು ಕೊಳ್ಳುವದಕ್ಕೆಂದು ತಿಳಿಸುವದೇ ಇಲ್ಲಿ ತಾತ್ಪರ್ಯವು. ತನ್ನ ಮೂಗಿನ ತುದಿ ಯನ್ನು ನೋಡಿಕೊಳ್ಳಬೇಕೆಂಬುದೇ ಅಭಿಪ್ರಾಯವಾಗಿದ್ದರೆ ಮನಸ್ಸು ಅಲ್ಲಿಯೇ ನಿಲ್ಲಬೇಕೆಂದಾಗುವದು, ಆತ್ಮನಲ್ಲಿ (ನಿಲ್ಲಿಸಬೇಕೆಂದು) ಆಗಲಾರದು. ಆದರೆ "ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಂಡು" (೬–೨೫) ಎಂಬ ಶ್ಲೋಕದಲ್ಲ ಆತ್ಮನಲ್ಲಿ ಮನಸ್ಸನ್ನು ಸಮಾಧಾನಗೊಳಿಸಬೇಕೆಂದು ಹೇಳಿರುತ್ತದೆ. ಆದ್ದರಿಂದ ಇಲ್ಲಿ 'ಅಂತೆ' ಎಂಬ ಮಾತನ್ನು ಬಿಟ್ಟಿರುತ್ತದೆ, ಎರಡು ಕಣ್ಣುಗಳ ನೋಟವನ್ನೂ ಒಕ್ಕಡೆಗೆ ತರಬೇಕೆಂಬುದನ್ನು ತಿಳಿಸುವದಕ್ಕೆ "(ಮೂಗಿನ ತುದಿಯನ್ನು) ಚೆನ್ನಾಗಿ ನೋಡುತ್ತಾ" ಎಂದು ಹೇಳಿರುತ್ತದೆ– ಎನ್ನಬೇಕಾಯಿತು. "ದಿಕ್ಕು ಗಳನ್ನು ನೋಡದೆ" ಎಂದರೆ ನಡುನಡುವೆ ಅತ್ತಿತ್ತ ನೋಡದೆ ಎಂದರ್ಥ.

ಮತ್ತು ಪ್ರಶಾಂತಾತ್ಮನಾಗಿ ಎಂದರೆ ಅಂತಃಕರಣವನ್ನು ಹೆಚ್ಚಿನ ಶಾಂತಿ ಯಲ್ಲಿಟ್ಟುಕೊಂಡು, ಯಾವ ಹೆದರಿಕೆಯೂ ಇಲ್ಲದೆ, 'ಬ್ರಹ್ಮಚಾರಿವ್ರತದಲ್ಲಿದ್ದು ಕೊಂಡು'; ಬ್ರಹ್ಮಚಾರಿವ್ರತವೆಂದರೆ ಬ್ರಹ್ಮಚರ್ಯ; ಗುರುಶುಶ್ರೂಷೆ, ಭಿಕ್ಷಾನ್ನ ಭೋಜನವೇ ಮುಂತಾದದ್ದು ; ಅದನ್ನು ಮಾಡಿಕೊಂಡಿರಬೇಕೆಂದರ್ಥ. ಮನ ಸ್ಸನ್ನು ಬಿಗಿಹಿಡಿದು ಎಂದರೆ ಮನಸ್ಸಿನ ವೃತ್ತಿಗಳನ್ನು ತಡೆದುಕೊಂಡು ಎಂದರ್ಥ

* ಶ್ವೇ. ೨–೮.  † ೫–೨೭ನೆಯ ಶ್ಲೋಕವನ್ನು ನೋಡಿ.

ಪ್ರಾಯ. ನನ್ನಲ್ಲಿಯೇ ಚಿತ್ತವುಳ್ಳವನಾಗಿ ಎಂದರೆ ಪರಮೇಶ್ವರನಾದ* ನನ್ನಲ್ಲಿಯೇ ಚಿತ್ತವನ್ನಿಟ್ಟು ಯುಕ್ತನಾಗಿ ಸಮಾಧಿಯಲ್ಲಿ ಕುಳಿತಿರಬೇಕು. ನಾನೇ ಹೆಚ್ಚೆಂದು ತಿಳಿದಿರಬೇಕು. ಸ್ತ್ರೀಯಲ್ಲಿ ಅನುರಾಗವುಳ್ಳವನು ಸ್ತ್ರೀಚಿತ್ತನಾಗಿರುವನು, ಆದರೆ ಅವಳೇ ಎಲ್ಲಕ್ಕೂ ಹೆಚ್ಚೆಂದು ಭಾವಿಸಿರುವದಿಲ್ಲ; ರಾಜನೋ ಮಹಾದೇವನೋ ಎಲ್ಲಕ್ಕೂ ಹೆಚ್ಚೆಂದು ಭಾವಿಸಿರುವನು. ಈ ಯೋಗಿಯೋ ಎಂದರೆ ನನ್ನಲ್ಲಿಯೇ ಚಿತ್ತವುಳ್ಳವನಾಗಿ ನಾನೇ† ಹೆಚ್ಚೆಂದು ಭಾವಿಸಿರಬೇಕು.

ಇನ್ನು ಈ ಯೋಗದ ಫಲವನ್ನು ಹೇಳುತ್ತೇನೆ:—

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾನ್ತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

೧೫. ಹೀಗೆ ಮನಸ್ಸನ್ನು ಬಿಗಿಯುಹಿಡಿದು ತನ್ನನ್ನು ಯೋಗದಲ್ಲಿಟ್ಟುಕೊಳ್ಳುವ ಯೋಗಿಯು ನಿರ್ವಾಣದಲ್ಲಿ ಕೊನೆಗಾಣುವದಾಗಿಯೂ ನನ್ನಲ್ಲಿರುವದಾಗಿಯೂ ಇರುವ ಶಾಂತಿಯನ್ನು ಪಡೆಯುವನು.

[ಭಾಷ್ಯ]

ಮೇಲೆ ಹೇಳಿದ ಬಗೆಯಿಂದ ನಿಯತಮಾನಸನಾಗಿ ಎಂದರೆ ಮನಸ್ಸನ್ನು ಬಿಗಿಹಿಡಿದು, ಹೀಗೆ ಯಾವಾಗಲೂ ತನ್ನನ್ನು ಯೋಗದಲ್ಲಿಟ್ಟುಕೊಳ್ಳುವ ಸಮಾಧಾನಸ್ಥಿತಿಯಲ್ಲಿಟ್ಟುಕೊಳ್ಳುವ ಯೋಗಿಯು, ನಿರ್ವಾಣಪರಮವಾದ ಶಾಂತಿಯನ್ನು (ಹೊಂದುವನು); ನಿರ್ವಾಣವೆಂದರೆ ಮೋಕ್ಷವು, ಅದೇ ಕಡೆಯ ನಿಲ್ದಾಣವಾಗಿರುವದಾಗಿಯೂ, ನನ್ನಲ್ಲಿರುವದಾಗಿಯೂ ಎಂದರೆ ನನ್ನ ಅಧೀನವಾಗಿಯೂ ಇರುವ ಶಾಂತಿಯನ್ನು, ಉಪರತಿಯನ್ನು ಹೊಂದುವನು.

## ಯೋಗಕ್ಕೆ ಆಹಾರಾದಿಗಳ ನಿಯಮವು.

ಈಗ ಯೋಗಿಗೆ ಆಹಾರವೇ ಮುಂತಾದದ್ದರ ‡ ನಿಯಮವನ್ನು ಹೇಳುತ್ತಾನೆ:—

---

* ಚಿತ್ತವೃತ್ತಿಗಳನ್ನೆಲ್ಲ ಸುಮ್ಮನೆ ತಡೆಯುವದಕ್ಕೆ ಆಗುವದಿಲ್ಲ; ಆದ್ದರಿಂದ ಭಗವಂತನ ವಿಷಯಕವಾದ ಒಂದು ವೃತ್ತಿಯನ್ನು ಮಾಡಿಕೊಳ್ಳಬೇಕೆಂದು ಭಾವ.

† ಪರಮೇಶ್ವರನನ್ನು ಚಿಂತಿಸಿ ಮತ್ತೇನನ್ನಾದರೂ ಪಡೆಯಬೇಕೆಂಬ ಇಚ್ಛೆಯಿಂದ ಚಿಂತಿಸಿದರೆ ಅದು ಹೆಚ್ಚಿನ ಸಮಾಧಿಯಾಗುವದಿಲ್ಲ; ಪರಮೇಶ್ವರನೇ ನನಗೆ ಗತಿ, ಆತ್ಮತತ್ತ್ವವನ್ನು ಅರಿಯುವವೇ ಎಲ್ಲಕ್ಕೂ ಹೆಚ್ಚಿನ ಗುರಿ—ಎಂಬ ಭಾವನೆಯಿರಬೇಕು. ಧ್ಯಾನಯೋಗಕ್ಕೂ ಭಕ್ತಿಯೋಗಕ್ಕೂ ಇಲ್ಲಿಯೇ ಸಂಬಂಧವಾಗುವದು. ಇದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

‡ ಆಹಾರವೇ ಮುಂತಾದದ್ದು ಎಂದರೆ ನಿದ್ರೆ, ನಡತೆ- ಮುಂತಾದದ್ದು.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

[ಭಾಷ್ಯ]

೧೬., ಅತಿಯಾಗಿ ತಿನ್ನುವವನಿಗೆ ಯೋಗವಿಲ್ಲ, ತಿನ್ನುವದನ್ನು ಬಿಟ್ಟೇ ಬಿಟ್ಟಿರುವವನಿಗೆ ಇಲ್ಲ. ಅತಿಯಾಗಿ ನಿದ್ರಿಸುವವನಿಗೆ ಇಲ್ಲ, ಎಚ್ಚತ್ತಿರುವವನಿಗೆ ಇಲ್ಲವೇ ಇಲ್ಲ.

ಅತಿಯಾಗಿ ತಿನ್ನುವವನಿಗೆ ಎಂದರೆ ತನಗೆ ಎಷ್ಟು ಹೊಂದುವದೋ ಅಷ್ಟನ್ನು ಮೀರಿ ತಿನ್ನುವವನಿಗೆ ಯೋಗವು ದಕ್ಕುವದಿಲ್ಲ; ನಿಯಮವಾಗಿ ಆಹಾರ ವನ್ನೇ ಬಿಟ್ಟಿರುವವನಿಗೂ ಯೋಗವು ದಕ್ಕುವದಿಲ್ಲ. "ಯಾವ ಅನ್ನವು ತನಗೆ ಯೋಗ್ಯವಾಗಿರುವದೋ ಅದು (ತನ್ನನ್ನು) ಕಾಪಾಡುವದು, ಅದು ತೊಂದರೆ ಯನ್ನುಂಟುಮಾಡುವದಿಲ್ಲ ; ಯಾವದು (ತನಗೆ ತಕ್ಕ ಅಳತೆಗಿಂತ) ಹೆಚ್ಚಾಗಿ ರುವದೋ, ಯಾವದು (ಅದಕ್ಕಿಂತ) ಕಡಿಮೆಯಾಗಿರುವದೋ, ಅದು ತೊಂದರೆ ಯನ್ನುಂಟು ಮಾಡುವದು, ಅದು (ತನ್ನನ್ನು) ಕಾಪಾಡುವದಿಲ್ಲ (ಶ್ರು) * ಎಂದು ಶ್ರುತಿಯುಂಟು. ಆದ್ದರಿಂದ ಯೋಗಿಯಾದವನು ತನ್ನ ಅಳತೆಗೆ ಹೆಚ್ಚಾಗಿ ಅಥವಾ ಕಡಿಮೆಯಾಗಿ ಅನ್ನವನ್ನು ಊಟಮಾಡಬಾರದು.

ಅಥವಾ **ಯೋಗಶಾಸ್ತ್ರ**ದಲ್ಲಿ ಇಷ್ಟೆಂದು ಗೊತ್ತುಮಾಡಿರುವ ಅಳತೆಗಿಂತ ಹೆಚ್ಚು ಊಟಮಾಡುವವನಿಗೂ ಯೋಗವು ಸಾಧ್ಯವಾಗುವದಿಲ್ಲ (ಕಡಿಮೆಯಾಗಿ ಊಟಮಾಡುವವನಿಗೂ ಸಾಧ್ಯವಾಗುವದಿಲ್ಲ ಎಂದೂ ಈ ಶ್ಲೋಕಕ್ಕೆ ಅರ್ಥ ವನ್ನು ಮಾಡಬಹುದಾಗಿದೆ.) "ಅರ್ಧಂ ಸವ್ಯಞ್ಜನಾನ್ನಸ್ಯ ತೃತೀಯಮುದ ಕಸ್ಯ ಚ । ವಾಯೋಃ ಸಂಚರಣಾರ್ಥಂ ತು ಚತುರ್ಥಮವಶೇಷಯೇತ್ ॥" (ಸ್ಮೃ) (ಅನ್ನ ಸಾರು ಮುಂತಾದದ್ದಕ್ಕೆ ಅರ್ಧಪಾಲನ್ನೂ ನೀರಿಗೆ ಮೂರನೆಯ ಕಾಲುಪಾಲನ್ನೂ ಕೊಟ್ಟು, ಇನ್ನು ನಾಲ್ಕನೆಯ ಭಾಗವನ್ನು ವಾಯುಸಂಚಾ ರಕ್ಕೆ ಬಿಟ್ಟುಕೊಂಡಿರಬೇಕು). † ಎಂದು ಮುಂತಾಗಿ (ಆಹಾರ) ಪರಿಮಾಣ ವನ್ನು (ಯೋಗಶಾಸ್ತ್ರದಲ್ಲಿ) ಹೇಳಿರುತ್ತದೆ.

ಇದರಂತೆ ಎಲೈ ಅರ್ಜುನನೆ, ಬಹಳವಾಗಿ ನಿದ್ರಿಸುವವನಿಗೂ ಯೋಗವು (ವಶ)ವಾಗುವದಿಲ್ಲ, ಬಹುವಾಗಿ ಎಚ್ಚರವಾಗಿಯೇ ಇರುವವನಿಗೂ ಯೋಗವು (ವಶ)ವಾಗುವದಿಲ್ಲ.

---

* ಈ ಶ್ರುತಿಯು ಶತಪಥಬ್ರಾಹ್ಮಣದ್ದೆಂದು (ಆ ||) ವ್ಯಾಖ್ಯಾನಕಾರರು ಹೇಳುತ್ತಾರೆ ; ವ್ಯಾಖ್ಯಾನಕ್ಕೆ ಅನುಸಾರವಾಗಿಯೇ ಇದಕ್ಕೆ ಅರ್ಥವನ್ನು ಬರೆದಿದೆ.

† ಈ ಸ್ಮೃತಿಯು ಎಲ್ಲಿಯದೋ ತಿಳಿಯದು.

ಹಾಗಾದರೆ ಹೇಗಿದ್ದರೆ ಯೋಗವು (ವಶ)ವಾಗುವದು ? ಎಂದರೆ ಹೇಳುತ್ತೇನೆ:—

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

೧೭. ಯಾವನಿಗೆ ತಕ್ಕಷ್ಟು ಆಹಾರವಿಹಾರಗಳಿರುವವೋ, ಯಾವನು ಕರ್ಮಗಳಲ್ಲಿ ತಕ್ಕಷ್ಟು ಯತ್ನವುಳ್ಳವನಾಗಿರುವನೋ, ಯಾವನ ನಿದ್ರೆಯೂ ಎಚ್ಚರವೂ ತಕ್ಕಷ್ಟಿರುವವೋ, ಅವನಿಗೆ ದುಃಖನಾಶಕವಾದ ಯೋಗವು ಉಂಟಾಗುವುದು.

[ಭಾಷ್ಯ]

ಆಹಾರವೆಂದರೆ, ಒಳಕ್ಕೆ ತೆಗೆದುಕೊಳ್ಳುವ ಅನ್ನವು; ವಿಹಾರವೆಂದರೆ ನಡಗೆ, ಓಡಾಡುವುದು—ಇವು ತಕ್ಕಷ್ಟು ಎಂದರೆ ಗೊತ್ತಾದ ಪರಿಮಾಣದಲ್ಲಿ ಇರುವವನು ಯುಕ್ತಾಹಾರವಿಹಾರನು, ಅವನಿಗೆ ; ಮತ್ತು ಯಾವನು ಕರ್ಮಗಳಲ್ಲಿ ತಕ್ಕಷ್ಟು ಪ್ರಯತ್ನವುಳ್ಳವನೋ, ಅವನಿಗೆ ; ಮತ್ತು ನಿದ್ರೆಯೂ ಎಚ್ಚರವೂ ತಕ್ಕಷ್ಟು ಎಂದರೆ ಗೊತ್ತಾದ ಕಾಲದಷ್ಟು ಯಾವನಿಗೆ ಇರುವವೋ, ಅವನಿಗೆ. ಹೀಗೆ ತಕ್ಕಷ್ಟು ಆಹಾರವೂ ಕರ್ಮಗಳಲ್ಲಿ ತಕ್ಕಷ್ಟು ಪ್ರಯತ್ನವೂ ತಕ್ಕಷ್ಟು ನಿದ್ರೆಯೂ ಎಚ್ಚರವೂ ಇರುವ ಯೋಗಿಗೆ ದುಃಖಗಳೆಲ್ಲವನ್ನೂ ನಾಶಮಾಡುವ, ಎಂದರೆ ಸಂಸಾರದ ದುಃಖವೆಲ್ಲವನ್ನು ನಾಶಗೊಳಿಸುವ ಯೋಗವು (ವಶ)ವಾಗುವದು ಎಂದರ್ಥ.

## ಯುಕ್ತನಾದವ್ನರ ಗುರುತು.

ಇನ್ನು ಯಾವಾಗ ಯುಕ್ತನಾಗುವನು ಎಂಬುದನ್ನು ಹೇಳುತ್ತೇನೆ : —

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

೧೮. ಬಿಗಿಹಿಡಿದ ಚಿತ್ತವು ಯಾವಾಗ ಆತ್ಮನಲ್ಲಿಯೇ ನಿಲ್ಲುವದೋ, (ಯಾವಾಗ) ಸರ್ವಕಾಮಗಳಲ್ಲಿಯೂ ಆಶೆಯಿಲ್ಲದವನಾಗುವನೋ ಆಗ ಯುಕ್ತನೆನಿಸುವನು.

[ಭಾಷ್ಯ]

ಯಾವಾಗ ವಿನಿಯತವಾದ ಎಂದರೆ ಹೆಚ್ಚಾಗಿ ಬಿಗಿಹಿಡಿದು, ವಶಗೊಳಿಸಿ, ಏಕಾಗ್ರತೆಗೆ ತಂದುಕೊಂಡ ಚಿತ್ತವು, ಹೊರಗಿನ ಯೋಚನೆಯನ್ನು ಬಿಟ್ಟು,

ಬರಿಯ ಆತ್ಮನಲ್ಲಿಯೇ ನಿಲ್ಲುವದೋ, ಆತ್ಮನಲ್ಲಿಯೇ ನಿಲುಗಡೆಯನ್ನು ಹೊಂದು ವದೋ ಎಂದರ್ಥ; ಸರ್ವಕಾಮಗಳಲ್ಲಿಯೂ ಎಂದರೆ ಈ ಲೋಕದ ಮತ್ತು ಪರಲೋಕದ ಯಾವ ವಿಷಯಗಳಲ್ಲಿಯೂ ಆಶೆಯಿಲ್ಲದವನಾಗುವನೋ, ಆಶೆ ಯನ್ನು ತೊರೆದವನಾಗುವನೋ, ಆ ಯೋಗಿಯು ಆಗ ಎಂದರೆ ಆ ಕಾಲದಲ್ಲಿ 'ಯುಕ್ತನು' ಎಂದರೆ ಸಮಾಧಿಯನ್ನು ಹೊಂದಿದವನು ಎನಿಸುವನು.

ಸಮಾಧಿಯಲ್ಲಿರುವ ಆ ಯೋಗಿಯ ಚಿತ್ತಕ್ಕೆ ಒಂದು ಹೋಲಿಕೆಯನ್ನು ಹೇಳುತ್ತೇನೆ :—

**ಯಥಾ ದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಞ್ಜತೋ ಯೋಗಮಾತ್ಮನಃ ॥ ೧೯ ॥**

೧೯. ಗಾಳಿಯಿಲ್ಲದ ಕಡೆಯಲ್ಲಿರುವ ದೀಪವು ಹೇಗೆ ಚಲಿಸುವದಿಲ್ಲವೋ ಆತ್ಮನ ಯೋಗವನ್ನು ಮಾಡುತ್ತಿರುವ ಯೋಗಿಯ ಬಿಗಿಹಿಡಿದ ಚಿತ್ತಕ್ಕೆ ಅದೇ ಉಪಮಾನವೆನಿಸುವದು.

[ಭಾಷ್ಯ]

ಗಾಳಿಯಿಲ್ಲದ ಕಡೆಯಲ್ಲಿ ಇರುವ ದೊಡ್ಡ ದೀಪವು ಅಲ್ಲಾಡದೆ ಹೇಗೆ ಇರುವದೋ (ಹಾಗೆ)- ಎಂದು ಇದನ್ನೇ, ಚಿತ್ತದ ವೃತ್ತಿಯ ರೂಪಗಳನ್ನು ಬಲ್ಲ ಯೋಗಿಗಳು, ಆತ್ಮಯೋಗವನ್ನು ಮಾಡುತ್ತಿರುವ ಸಮಾಧಿಯನ್ನನುಭವಿ ಸುತ್ತಿರುವ ಯೋಗಿಯ ಬಿಗಿಹಿಡಿದ ಚಿತ್ತಕ್ಕೆ, ಬಿಗಿಹಿಡಿದ ಅಂತಃಕರಣಕ್ಕೆ ಉಪ ಮಾನವೆಂದು ಹೇಳುವರು.

ಹೀಗೆ ಯೋಗದ ಅಭ್ಯಾಸದ ಬಲದಿಂದ ಏಕಾಗ್ರವಾಗಿ ಗಾಳಿಯಿಲ್ಲದ ಕಡೆ ಇರುವ ದೀಪದಂತೆ ಇರುವದಾಗಿ.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**
**ಸುಖಮಾತ್ಯನ್ತಿಕಂ ಯತ್ತದ್ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**
**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥**
**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣೇನ ಚೇತಸಾ ॥೨೩॥**

೨೦–೨೩. ಯೋಗಸೇವೆಯಿಂದ ಚಿತ್ತವು ನಿರುದ್ಧವಾಗಿ ಯಾವಾಗ ಸುಮ್ಮನಾಗುವದೋ, ಯಾವಾಗ ತನ್ನಿಂದ ತನ್ನನ್ನು ಕಂಡುಕೊಂಡು ತನ್ನಲ್ಲಿ ತಾನು ತೃಪ್ತನಾಗಿರುವನೋ, ಯಾವಾಗ ಬುದ್ಧಿಗೆ ಸಿಗತಕ್ಕದ್ದಾಗಿಯೂ ಇಂದ್ರಿಯಗಳನ್ನು ಮೀರಿರುವದಾಗಿಯೂ ಇರುವ ಆತ್ಯಂತಿಕಸುಖವನ್ನು ತಿಳಿದುಕೊಳ್ಳುವನೋ, ಯಾವಾಗ ನಿಲುಗಡೆಯನ್ನು ಹೊಂದಿದವನಾಗಿ ತತ್ತ್ವವನ್ನು ಬಿಟ್ಟು ಅಲುಗಾಡದೆ ಇರುವನೋ, ಯಾವದನ್ನು ಹೊಂದಿದ ಮೇಲೆ ಅದಕ್ಕಿಂತ ಬೇರೆಯೊಂದು ಹೆಚ್ಚಿನ ಲಾಭವಿರುವದೆಂದು ಎಣಿಸದೆ ಇರುವನೋ, ಯಾವದರಲ್ಲಿರುವಾತನು ಬಹು ಹೆಚ್ಚಿನ ದುಃಖದಿಂದಲೂ ಚಲಿಸುವದಕ್ಕೆ ಆಗದಂತೆ ಇರುವನೋ, ದುಃಖಸಂಯೋಗದ ವಿಯೋಗವಾದ ಇದಕ್ಕೆ ಯೋಗವೆಂಬ ಹೆಸರೆಂದು ತಿಳಿಯಬೇಕು. ಈ ಯೋಗವನ್ನು ಬೇಸರವಿಲ್ಲದ ಚಿತ್ತದಿಂದ ಮಾಡುತ್ತಿರಬೇಕು.

[ಭಾಷ್ಯ]

೨೦. ಯಾವಾಗ ಎಂದರೆ ಯಾವ ಕಾಲದಲ್ಲಿ. ಯೋಗಸೇವೆಯಿಂದ ಎಂದರೆ ಯೋಗವನ್ನು ಅಭ್ಯಾಸಮಾಡುವದರಿಂದ, ನಿರುದ್ಧವಾಗಿ ಎಂದರೆ ಯಾವ ಕಡೆಗೂ ಹರಿದಾಡದಂತೆ ತಡೆಗಟ್ಟಿದಂತಾಗಿ ಸುಮ್ಮನಾಗುವದೋ, ಮತ್ತು ಯಾವಾಗ ಎಂದರೆ ಯಾವ ಕಾಲದಲ್ಲಿ ತನ್ನಿಂದ ತನ್ನನ್ನು ಕಂಡುಕೊಂಡು, ಎಂದರೆ ಸಮಾಧಿಯಿಂದ ಪರಿಶುದ್ಧವಾದ ಅಂತಃಕರಣದಿಂದ ಪ್ರಕಾಶರೂಪವಾಗಿರುವ ಪರಮಚೈತನ್ಯವನ್ನು ಕಂಡುಕೊಂಡು ತನ್ನ ಆತ್ಮಸ್ವರೂಪದಲ್ಲಿಯೇ ಯಾವನು ತೃಪ್ತಿಯನ್ನು ಹೊಂದಿರುವನೋ, (೨೧) ಬುದ್ಧಿಗೆ ಸಿಗತಕ್ಕದ್ದಾಗಿಯೂ ಎಂದರೆ ಇಂದ್ರಿಯಗಳ ಅಪೇಕ್ಷೆಯಿಲ್ಲದೆ ಬರಿಯ ಬುದ್ಧಿಯಿಂದಲೇ ಅರಿಯತಕ್ಕದ್ದಾಗಿಯೂ, ಇಂದ್ರಿಯಗಳನ್ನು ಮೀರಿರುವದಾಗಿಯೂ ಎಂದರೆ ಇಂದ್ರಿಯಗಳಿಗೆ ಗೋಚರವಾಗಿರುವದನ್ನೆಲ್ಲ ಮೀರಿ ವಿಷಯದಿಂದ ಉಂಟಾಗದ್ದಾಗಿಯೂ ಇರುವ ಆತ್ಯಂತಿಕಸುಖವನ್ನು– ಕೊನೆಯವರೆಗೂ ಇರುವದಕ್ಕೆ ಅತ್ಯಂತವೆಂದು ಹೆಸರು, ಆದ್ದರಿಂದ ಆತ್ಯಂತಿಕಸುಖವೆಂದರೆ ಕೊನೆಗಾಣದ ಎಂದರ್ಥ. ಇಂಥ ಸುಖವನ್ನು– ಯಾವಾಗ ಎಂದರೆ ಯಾವ ಕಾಲದಲ್ಲಿ ತಿಳಿಯುವನೋ ಅನುಭವಿಸುವನೋ, ಎಲ್ಲಿ ಎಂದರೆ ಯಾವ ಕಾಲದಲ್ಲಿ ಈ ಜ್ಞಾನಿಯು ಆತ್ಮಸ್ವರೂಪದಲ್ಲಿದ್ದುಕೊಂಡವನಾಗಿ ಆ ತತ್ತ್ವದಿಂದ ತತ್ತ್ವಸ್ವರೂಪದಿಂದ ಅಲುಗಾಡದೆ ಇರುವನೋ ಅದನ್ನು ಬಿಟ್ಟು ಕೆಳಕ್ಕೆ ಜಾರದೆ ಇರುವನೋ ಎಂದರ್ಥ; (೨೨) ಮತ್ತು ಯಾವ ಆತ್ಮಲಾಭವನ್ನು ಹೊಂದಿದ ಮೇಲೆ ಬೇರೊಂದು ಲಾಭವು ಅದಕ್ಕಿಂತ ಹೆಚ್ಚಿನದಾಗಿರುವದೆಂದು ಎಣಿಸಿಕೊಳ್ಳದೆ

ಇರುವನೋ ಮತ್ತು ಯಾವ ಆತ್ಮತತ್ತ್ವದಲ್ಲಿದ್ದುಕೊಂಡಿರುವಾಗ ಕತ್ತಿಯು ಪೆಟ್ಟೇ ಮುಂತಾದ್ದರಿಂದ ಉಂಟಾದ ಬಲವಾದ ದುಃಖದಿಂದಲೂ ಅತ್ತಿತ್ತ ಚಲಿಸದೆ ಇರುವನೋ, (೨೩) " ಯಾವಾಗ ಚಿತ್ತವು ಸುಮ್ಮನಾಗುವದೋ " (೬-೨೦) ಎಂಬ ಶ್ಲೋಕದಿಂದ ಹಿಡಿದು (ಇಲ್ಲಿಯವರೆಗೆ) ಇಷ್ಟು ವಿಶೇಷಣಗಳಿಂದ ಕೂಡಿರುವದೆಂದು ಅಂತಃಕರಣದ ಒಂದಾನೊಂದು ಅವಸ್ಥೆಯಾದ [ಆತ್ಮಾವಸ್ಥಾವಿಶೇಷಃ] ಯೋಗವನ್ನು ಹೇಳಿದೆನಷ್ಟೆ, ಇದು 'ದುಃಖಸಂಯೋಗದ ವಿಯೋಗವೆನ್ನಿಸಿದ್ದು'; ದುಃಖಗಳ ಸಂಬಂಧವೇ ದುಃಖಸಂಯೋಗವು; ಆ (ಸಂಯೋಗವು) ಇಲ್ಲದಿರುವದೇ ದುಃಖಸಂಯೋಗವಿಯೋಗವು. ಇದನ್ನು ವಿಪರೀತಲಕ್ಷಣೆಯಿಂದ '**ಯೋಗ**'ವೆಂಬ ಹೆಸರಿನಿಂದ ಕರೆದಿದೆಯೆಂದು ತಿಳಿಯಬೇಕು.

ಯೋಗದ ಫಲವನ್ನು ಉಪಸಂಹಾರಮಾಡಿ ಮತ್ತೆ ಯೋಗವನ್ನು ಮಾಡಬೇಕೆಂದು (ಈ ಶ್ಲೋಕದ ಉತ್ತರಾರ್ಧದಲ್ಲಿ) ಹೇಳುವದಕ್ಕೆ ಪ್ರಾರಂಭಿಸಿರುವದೇಕೆಂದರೆ ನಿಶ್ಚಯ, ಅನಿರ್ವೇದ- ಇವುಗಳು ಯೋಗದ ಸಾಧನಗಳೆಂದು ತಿಳಿಸುವದಕ್ಕೆ. ಹೀಗೆ ಮೇಲೆ ಹೇಳಿದಂಥ ಫಲವುಳ್ಳ ಈ ಯೋಗವನ್ನು ನಿಶ್ಚಯದಿಂದ ಎಂದರೆ ದೃಢವಾದ ಮನಸ್ಸಿನಿಂದ ಎಂದರೆ- ನಿರ್ವೇದವಿಲ್ಲದ ಚೇತಸ್ಸಿನಿಂದ ಬೇಸರಿಕೆಯಿಲ್ಲದ ಮನಸ್ಸಿನಿಂದ ಮಾಡಬೇಕು.

## ಯೋಗಕ್ಕೆ ಮಾಡಬೇಕಾದ ಪ್ರಯತ್ನ.

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥ ೨೪ ॥**
**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥ ೨೫ ॥**

೨೪-೨೫ ಸಂಕಲ್ಪದಿಂದ ಉಂಟಾಗುವ ಕಾಮಗಳನ್ನು ಒಂದೂ ಉಳಿಯದಂತೆ ಬಿಟ್ಟು ಮನಸ್ಸಿನಿಂದಲೆ ಇಂದ್ರಿಯಸಮೂಹವನ್ನು ಎಲ್ಲಾ ಕಡೆಯಿಂದಲೂ ಬಿಗಿಹಿಡಿದು, ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮೆಲ್ಲಮೆಲ್ಲನೆ ಹಿಂತಿರುಗಬೇಕು. ಮನಸ್ಸನ್ನು ಆತ್ಮನಲ್ಲಿರುವಂತೆ ಮಾಡಿ ಮತ್ತೇನನ್ನೂ ಚಿಂತಿಸದಿರಬೇಕು.

[ಭಾಷ್ಯ]

೨೪. ಸಂಕಲ್ಪವು ಕಾಮಗಳಿಗೆ ಉತ್ಪತ್ತಿಸ್ಥಾನವು. ಆ ಸಂಕಲ್ಪದಿಂದುಂಟಾಗುವ ಕಾಮಗಳನ್ನೆಲ್ಲವನ್ನೂ ಒಂದಿಷ್ಟೂ ಉಳಿಯದಂತೆ, ಅವುಗಳ ವಾಸನೆಯೂ ಕೂಡ ಉಳಿಯದಂತೆ ಬಿಟ್ಟು, ವಿವೇಕದಿಂದ ಕೂಡಿದ ಮನಸ್ಸಿನಿಂದಲೇ

ಇಂದ್ರಿಯಗಳ ಸಮೂಹವನ್ನು ಎಲ್ಲಾ ಕಡೆಯಿಂದಲೂ ಹಿಡಿದು * (೨೪) ಮೆಲ್ಲಮೆಲ್ಲಗೆ † ಹಿಂಜರಿಯಬೇಕು. ಏತರ ಸಹಾಯದಿಂದ ? ಎಂದರೆ, ಬುದ್ಧಿಯಿಂದ. ಎಂಥ ಬುದ್ಧಿಯಿಂದ ? ಎಂದರೆ ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮನಸ್ಸನ್ನು ಆತ್ಮನಲ್ಲಿ ನಿಲ್ಲುವಂತೆ ಮಾಡಿ, ಎಂದರೆ " ಇದೆಲ್ಲವೂ ಆತ್ಮನೆ, ಆ (ಆತ್ಮನಿಗಿಂತ) ಬೇರೆ ಯಾವದೊಂದೂ ಇಲ್ಲ " ಎಂದು ಆತ್ಮನಲ್ಲಿ ‡ ನಿಲ್ಲಿಸಿ ಮತ್ತೆ ಏನನ್ನೂ ಯೋಚಿಸಿಕೊಳ್ಳದೆ ಇರಬೇಕು- ಇದು ಯೋಗಕ್ಕೆ ಕೊನೆಯ ಅವಧಿಯು.§

ಹೀಗೆ ಆತ್ಮನಲ್ಲಿ ಮನಸ್ಸು ನಿಲ್ಲುವಂತೆ ಮಾಡುವದಕ್ಕೆ ತೊಡಗಿರುವ ಯೋಗಿಯು,

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

೨೬. ಚಂಚಲವಾಗಿರುವ ಮನಸ್ಸು ಸ್ಥಿರವಾಗಿ ನಿಲ್ಲದೆ ಯಾವಯಾವದರಿಂದ ಹೊರಕ್ಕೆ ಬರುವದೋ, ಅದರದರಿಂದ ಇದನ್ನು ಹಿಡಿದು ಆತ್ಮನಲ್ಲಿಯೇ ಇಟ್ಟು ಸ್ವಾಧೀನಪಡಿಸಿಕೊಳ್ಳಬೇಕು.

[ಭಾಷ್ಯ]

(ತನ್ನಲ್ಲಿ) ಸ್ವಭಾವವಾಗಿರುವ ದೋಷದಿಂದ ಚಂಚಲವಾಗಿರುವ ಮನಸ್ಸು ಆ ಕಾರಣದಿಂದಲೇ ಸ್ಥಿರವಾಗಿ (ಆತ್ಮನಲ್ಲಿ ನಿಲ್ಲದೆ), ಶಬ್ದವೇ ಮುಂತಾದ ಯಾವ ಯಾವ ನಿಮಿತ್ತದಿಂದ ಹೊರಕ್ಕೆ ಹೊರಡುವದೋ ಅದರದರಿಂದ ಎಂದರೆ ಶಬ್ದವೇ ಮುಂತಾದ ಆಯಾ ನಿಮಿತ್ತದಿಂದ, ಆಯಾ ನಿಮಿತ್ತದ ನಿಜವನ್ನು ಪರೀಕ್ಷೆಮಾಡಿ || ಅವುಗಳು ಬರಿಯ ತೋರಿಕೆಯೆಂದು ನಿಶ್ಚಯಿಸುವದರಿಂದಲೂ ವೈರಾಗ್ಯವನ್ನು ಭಾವನೆಮಾಡುವದರಿಂದಲೂ (ಆತ್ಮನಲ್ಲಿಯೇ ನಿಲ್ಲಿಸಿ) ತನ್ನ

* ಇದು ಪ್ರತ್ಯಾಹಾರವೆನಿಸುವದು.

† ವಿಷಯದರ್ಶನವನ್ನು ಬಿಟ್ಟ ಮೇಲೆ ವಿಷಯದ ಚಿಂತೆಯು ಹತ್ತುವುದು ; ಅದನ್ನು ಬಿಟ್ಟ ಮೇಲೂ ಅದರ ವಾಸನೆಯಿರುವದು ; ಅದನ್ನೂ ಬಿಟ್ಟು ಆತ್ಮನಲ್ಲಿಯೆ ಮನಸ್ಸನ್ನು ನಿಲ್ಲಿಸಬೇಕು.

‡ ವಿಷಯಗಳಿಂದ ಇಂದ್ರಿಯವನ್ನು ಹಿಂಜಗ್ಗಿಸಿ, ಮನಸ್ಸನ್ನೂ ಬುದ್ಧಿಯನ್ನೂ ಆತ್ಮನಲ್ಲಿ ಲಯಮಾಡುವದೆ ಯೋಗವು. ಕಠ ೧-೩-೧೩ ನೋಡಿ.

§ 'ಪರಮೋऽವಧಿಃ' ಎಂಬ ನಿ|| ಮು|| ಪಾಠವನ್ನು ಇಟ್ಟುಕೊಂಡಿದೆ.

|| ಈ ಕ್ರಮವನ್ನು ಅದ್ವೈತಪ್ರಕರಣದ ೪೩-೪೬ನೆಯ ಕಾರಿಕೆಗಳಲ್ಲಿ ವರ್ಣಿಸಿದೆ ಗೀತಾರ್ಥಸರ್ವಸ್ವದ ಧ್ಯಾನಯೋಗದಲ್ಲಿ ವಿವರಿಸಿದೆ.

ಸ್ವಾಧೀನವಮಾಡಿಕೊಳ್ಳಬೇಕು. ಹೀಗೆ ಯೋಗವನ್ನು ಅಭ್ಯಾಸಮಾಡುವದರಿಂದ ಯೋಗಿಯ ಮನಸ್ಸು ಆತ್ಮನಲ್ಲಿಯೇ ಅಡಗುವದು.

### ಯೋಗದ ಫಲ.

**ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

೨೭. ಪ್ರಶಾಂತವಾದ ಮನಸ್ಸುಳ್ಳವನೂ ರಜಸ್ಸು ಶಾಂತಿಯಾದವನೂ ಬ್ರಹ್ಮವಾಗಿರುವವನೂ ಕಲ್ಮಷವಿಲ್ಲದವನೂ ಆಗಿರುವ ಈ ಯೋಗಿಯು ಬಳಿಗೆ ಉತ್ತಮಸುಖವು ಬಂದು ಸೇರುವದು.

[ಭಾಷ್ಯ]

ಚೆನ್ನಾಗಿ ಶಾಂತವಾದ ಮನಸ್ಸುಳ್ಳವನೂ, ರಜಸ್ಸು ಶಾಂತವಾದವನೂ ಎಂದರೆ ಮೋಹವೇ * ಮುಂತಾದ ಕ್ಲೇಶಗಳ ಧೂಳು ಸಂಪೂರ್ಣವಾಗಿ ಹೋದವನೂ ಎಂದರ್ಥ ; ಬ್ರಹ್ಮವಾಗಿರುವವನೂ ಎಂದರೆ ಇದೆಲ್ಲವೂ ಬ್ರಹ್ಮವೇ ಎಂದು ನಿಶ್ಚಯಿಸಿದವನಾಗಿ ಜೀವನ್ಮುಕ್ತನಾಗಿರುವವನೂ† ಕಲ್ಮಷವಿಲ್ಲದವನೂ ಎಂದರೆ ಅಧರ್ಮವೇ ಮುಂತಾದದ್ದು ಇಲ್ಲದವನೂ ಆಗಿರುವ ಈ ಯೋಗಿಗೆ ಉತ್ತಮವಾದ ಸುಖವು, ಇನ್ನಿಲ್ಲವೆಂಬಷ್ಟು ಹೆಚ್ಚಿನ ಸುಖವು ಉಂಟಾಗುವದು.

**ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ ॥ ೨೮ ॥**

೨೮. ಹೀಗೆ ಯಾವಾಗಲೂ ತನ್ನನ್ನು ಯೋಗದಲ್ಲಿಟ್ಟುಕೊಂಡಿರುವದರಿಂದ ಯೋಗಿಗೆ ಕಲ್ಮಷವು ಹೋಗಿ, ಬ್ರಹ್ಮಸಂಸ್ಪರ್ಶವೆಂಬ ಅತ್ಯಂತಸುಖವನ್ನು ಸುಲಭವಾಗಿ ಪಡೆಯುವನು.

[ಭಾಷ್ಯ]

ಮೇಲೆ ಹೇಳಿದ ಕ್ರಮದಿಂದ ಯೋಗದ **ಅಂತರಾಯಗಳು**‡ ಯಾವವೂ ಇಲ್ಲದೆ ಯೋಗವನ್ನು ಅಭ್ಯಾಸಮಾಡುತ್ತಿರುವ ಯೋಗಿಗೆ ಕಲ್ಮಷವೆಲ್ಲ ಹೋಗಿ

---

* ರಾಗ, ದ್ವೇಷ ಮುಂತಾದವುಗಳು.

† ಬ್ರಹ್ಮವಾಗಿರುವವನು ಎಂದರೆ ತಾನೇ ಬ್ರಹ್ಮವೆಂಬ ಜ್ಞಾನವನ್ನು ಸಂಪಾದಿಸಿಕೊಂಡಿರುವವನು, ಸತ್ತ ಮೇಲೆ ಬ್ರಹ್ಮವಾಗುವದೆಂಬ ಸ್ಥಿತಿಯನ್ನು ಪಡೆದವನಲ್ಲ.

‡ ಅಂತರಾಯಗಳು ಎಂದರೆ ಅಡ್ಡಿಗಳು ; ವ್ಯಾಧಿ, ಆಲಸ್ಯ- ಮುಂತಾದವು ಯೋಗಸೂತ್ರ ೧-೩೦ನ್ನು ನೋಡಿ ; ಇವುಗಳನ್ನು ಯೋಗಮಲವೆಂದೂ ಕರೆಯುವರು ; ಇವುಗಳನ್ನು ಗೀತಾರ್ಥಸರ್ವಸ್ವದಲ್ಲಿ ವಿವರಿಸಿದೆ.

ಪಾಪವು ಇಲ್ಲದಂತಾಗಿ, ಸುಖವಾಗಿ ಯಾವ ಆಯಾಸವೂ ಇಲ್ಲದೆಯೆ, ಪರಬ್ರಹ್ಮದೊಡನೆ ಸೇರುವದೆಂಬ ಬ್ರಹ್ಮಸಂಸ್ಪರ್ಶರೂಪವಾದ* ಅತ್ಯಂತಸುಖವನ್ನು-ಅಂತವನ್ನು ಮೀರಿರುವದು ಅತ್ಯಂತವು, (ಅಂಥ ಕೊನೆಯೇ ಇಲ್ಲದ)- ಉತ್ಕೃಷ್ಟವಾದ ಇನ್ನಿಲ್ಲವೆಂಬಷ್ಟು ಹೆಚ್ಚಿನ ಸುಖವನ್ನು ಪಡೆಯುತ್ತಾನೆ.

ಈಗ ಸಂಸಾರವೆಲ್ಲವೂ ನಾಶವಾಗುವದಕ್ಕೆ ಕಾರಣವಾಗಿಯೂ ಯೋಗದ ಫಲವಾಗಿಯೂ† ಇರುವ 'ಬ್ರಹ್ಮವು ಒಂದೇ'‡ ಎಂಬ ಜ್ಞಾನವನ್ನು ತಿಳಿಸುತ್ತಾನೆ :—

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

೨೯. ಆತ್ಮನು ಸರ್ವಭೂತಗಳಲ್ಲಿರುವನೆಂಬುದನ್ನೂ ಸರ್ವಭೂತಗಳೂ ಆತ್ಮನಲ್ಲಿರುವವೆಂಬುದನ್ನೂ ಎಲ್ಲೆಲ್ಲಿಯೂ ಒಂದೇ ಸಮವಾದ ದರ್ಶನವುಳ್ಳ ಯೋಗಯುಕ್ತಾತ್ಮನು ಕಂಡುಕೊಳ್ಳುವನು.

[ಭಾಷ್ಯ]

ಸಕಲಪ್ರಾಣಿಗಳಲ್ಲಿಯೂ ತನ್ನ ಆತ್ಮನು ಇರುವನೆಂಬುದನ್ನೂ, ಬ್ರಹ್ಮನೇ ಮೊದಲಾಗಿ ಸ್ತಂಬದವರೆಗಿನ§ ಸಕಲಪ್ರಾಣಿಗಳೂ ಆತ್ಮನಲ್ಲಿಯೇ ಇರುವವೆಂಬುದನ್ನೂ ಎಂದರೆ ಆತ್ಮನಲ್ಲಿ ಒಂದಾಗಿರುವವೆಂಬುದನ್ನೂ,|| ಯೋಗಯುಕ್ತಾತ್ಮನಾದವನು ಮನಸ್ಸನ್ನು ಸಮಾಧಿಯುಲ್ಲಿರಿಸಿಕೊಂಡವನು ಕಂಡುಕೊಳ್ಳುವನು. ಎಲ್ಲೆಲ್ಲಿಯೂ ಒಂದೇ ಸಮವಾದ ದರ್ಶನವುಳ್ಳವನು ಎಂದರೆ ಬ್ರಹ್ಮನು ಮೊದಲು ಸ್ಥಾವರದವರೆಗಿನ ಬೇರೆಬೇರೆಯಾಗಿ (ತೋರು)ತ್ತಿರುವ ಪ್ರಾಣಿಗಳ

---

* ಬ್ರಹ್ಮಸಂಸ್ಪರ್ಶವೆಂದರೆ ಬ್ರಹ್ಮವನ್ನು ಮುಟ್ಟುವದು ; ತಾನು ಬ್ರಹ್ಮವೇ ಆಗಿದ್ದರೂ ಅನಾತ್ಮವಸ್ತುಗಳಲ್ಲಿ ತಾನೆಂಬ ಅಭಿಮಾನವನ್ನು ಇಟ್ಟುಕೊಂಡಿರುವವನು ಬ್ರಹ್ಮಕ್ಕೆ ದೂರವಾಗಿರುವನು; ಆ ಅಭಿಮಾನವನ್ನು ಬಿಟ್ಟು ಬ್ರಹ್ಮವೇ ತಾನೆಂದು ತಿಳಿದರೆ ಬ್ರಹ್ಮವನ್ನು ಮುಟ್ಟಿದಂತೆ ಆಯಿತು.

† ಯೋಗದಿಂದ ಅಂತರಂಗಶುದ್ಧಿಯಾಗಿ ಕೊನೆಗೆ ಜ್ಞಾನವು ಉಂಟಾಗುವದರಿಂದ ಇದು ಯೋಗದ ಫಲವಾಯಿತು.

‡ 'ಬ್ರಹ್ಮೈಕತ್ವಂ' ಎಂಬುದರ ಪರಿವರ್ತನೆಯಿದು. ಬ್ರಹ್ಮವು ಎರಡೆಂದಾಗಲಿ ಅನೇಕವೆಂದಾಗಲಿ ಯಾರಿಗೂ ಅರಿವು ಇರುವದಿಲ್ಲ ; ಆದ್ದರಿಂದ ಬ್ರಹ್ಮವೊಂದೇ ಇದೆಲ್ಲವು, ಬ್ರಹ್ಮಕ್ಕಿಂತ ಬೇರೆಯಾಗಿ ಯಾವದೂ ಇಲ್ಲ—ಎಂಬುದೇ ಬ್ರಹ್ಮವು ಒಂದೆಂಬ ಜ್ಞಾನವು—ಎಂದು ಅರ್ಥಮಾಡಬೇಕು.

§ ಸ್ಥಾವರದವರೆಗಿನ || ಆತ್ಮನಿಗಿಂತ ಬೇರೆಯಾಗಿರುವದಿಲ್ಲ.

ಲ್ಲೆಲ್ಲ ಒಂದೇ ಸಮವಾಗಿರುವ ಬ್ರಹ್ಮಾತ್ಮನು * ಒಬ್ಬನೇ ಎಂಬ ಜ್ಞಾನವುಳ್ಳವನು ;

ಆತ್ಮನು ಒಬ್ಬನೇ ಎಂದು ಕಂಡುಕೊಳ್ಳುವದರ ಫಲವನ್ನು ಹೇಳುತ್ತೇನೆ:–

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ　　॥ ೩೦ ॥**

೩೦. ಯಾವನು ನನ್ನನ್ನು ಎಲ್ಲೆಲ್ಲಿಯೂ ಕಾಣುವನೋ ಮತ್ತು ನನ್ನಲ್ಲಿ ಎಲ್ಲವನ್ನೂ ಕಾಣುವನೋ ಅವನಿಗೆ ನಾನು ಕಾಣದೆ ಹೋಗುವದಿಲ್ಲ, ಅವನೂ ನನಗೆ ಕಾಣದೆ ಇರುವದಿಲ್ಲ.

[ಭಾಷ್ಯ]

ಪ್ರತಿಯೊಬ್ಬನ ಆತ್ಮನೂ ಆಗಿರುವ **ವಾಸುದೇವ**ನಾದ ನನ್ನನ್ನು ಎಲ್ಲೆಲ್ಲಿಯೂ ಎಂದರೆ ಎಲ್ಲಾ ಪ್ರಾಣಿಗಳಲ್ಲಿಯೂ ಕಾಣುವನೋ ಮತ್ತು ಎಲ್ಲವನ್ನೂ ಎಂದರೆ ಬ್ರಹ್ಮನೇ ಮೊದಲಾದ ಎಲ್ಲಾ ಪ್ರಾಣಿಗಳ ಸಮೂಹವನ್ನು ನನ್ನಲ್ಲಿಯೇ † ಕಾಣುವನೋ, ಅವನಿಗೆ ಎಂದರೆ ಹೀಗೆ ಆತ್ಮನು ಒಬ್ಬನೇ ಎಂದು ಕಂಡುಕೊಳ್ಳುವವನಿಗೆ, ಈಶ್ವರನಾದ ನಾನು ಕಾಣದೆ ‡ ಹೋಗುವದಿಲ್ಲ, (ಅವನಿಗೆ) ನಾನು ಪರೋಕ್ಷವಾಗಿರುವದಿಲ್ಲ; ಆ ಜ್ಞಾನಿಯೂ ವಾಸುದೇವನಾದ ನನಗೆ § ಕಾಣದೆ ಇರುವದಿಲ್ಲ, ಪರೋಕ್ಷವಾಗಿರುವದಿಲ್ಲ. ಏಕೆಂದರೆ ಅವನೂ ನಾನೂ ಒಂದೇ ಆತ್ಮರೂಪವಾಗಿರುವೆವು. ತನ್ನ ಆತ್ಮನೆಂಬುವನು (ತನಗೆ) ಪ್ರಕಾಶನಾಗಿಯೇ ‖ ಇರಬೇಕಷ್ಟೆ ? ಸರ್ವವೂ ಆತ್ಮನೇ ಎಂದು ತಿಳಿದಿರುವವನು ನಾನೇ (ಆಗಿರುವವನು) ; ಆದ್ದರಿಂದಲೂ (ನನಗೆ ಅವನು ಪರೋಕ್ಷವಾಗಿರುವದಿಲ್ಲ, ಅವನಿಗೆ ನಾನೂ ಪರೋಕ್ಷವಾಗಿರುವದಿಲ್ಲ) ಎಂದು ತಾತ್ಪರ್ಯ. **

---

* ಆತ್ಮನು ಶರೀರದಲ್ಲಿರುವನೆಂದು ತಿಳಿದಿರುವಾಗ ಶಾರೀರಾತ್ಮನೆನಿಸುವನು ; ಅವನು ಯಾವ ಉಪಾಧಿಯೂ ಇಲ್ಲದ ಅದ್ವಿತೀಯನೆಂದು ತಿಳಿದರೆ 'ಬ್ರಹ್ಮಾತ್ಮ' ನೆನಿಸುವನು.

† ಈಶ. ೬　　‡ ಅಜ್ಞರು ಆತ್ಮನ ಸ್ವರೂಪವನ್ನು ಕಾಣರು : ಈಶ್ವರನು ಎಲ್ಲಿಯೋ ಇರುವನೆಂದು ತಿಳಿದುಕೊಂಡಿರುವರು.

§ ಈಶ್ವರನಿಗೆ ತನ್ನ ಸ್ವರೂಪಕ್ಕಿಂತ ಬೇರೆಯಾಗಿರುವ ದೇಹಾದಿಗಳು ಅತ್ಯಂತಪರೋಕ್ಷವು : ಏಕೆಂದರೆ ಪರಮಾರ್ಥವಾಗಿ ಅವು ಇರುವದಿಲ್ಲ. ಆತ್ಮರೂಪನಾದ ಜ್ಞಾನಿಯು ಅವನಿಗೆ ಅಪರೋಕ್ಷನಾಗಿರುವನು.

‖ "ಸ್ವಾತ್ಮಾ ಹಿ ನಾಮ ಆತ್ಮನಃ ಪ್ರಕಾಶ ಏವ ಭವತಿ " ಎಂಬ ಮು॥ ಮೈ॥ ಪಾಠವನ್ನು ಅನುಸರಿಸಿದೆ.

** ಯಸ್ಮಾಚ್ಚಾಹಮೇವ ಸರ್ವಾತ್ಮೈಕತ್ವದರ್ಶೀ ಇತ್ಯೇತತ್ ॥" ಇಲ್ಲಿಯವರೆಗಿನ ಭಾಷ್ಯವು ಈ ಶ್ಲೋಕಕ್ಕೆ ಸೇರಿದ್ದೆಂದು ಭಾವಿಸಿದೆ. ಈ ಶ್ಲೋಕದ ತಾತ್ಪರ್ಯವನ್ನೂ ೪–೩೫ನೆಯ ಶ್ಲೋಕದ ತಾತ್ಪರ್ಯವನ್ನೂ ಹೋಲಿಸಿ ನೋಡಿ.

ಪೂರ್ವಶ್ಲೋಕದ ಅರ್ಥವಾದ ಸರಿಯಾದ ಜ್ಞಾನವನ್ನು ಅನುವಾದಮಾಡಿ ಅದರ ಫಲವಾದ ಮೋಕ್ಷವನ್ನು ಇಲ್ಲಿ ತಿಳಿಸಲಾಗುತ್ತದೆ:

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

೩೧. ಯಾವನು ಸಕಲ ಪ್ರಾಣಿಗಳಲ್ಲಿಯೂ ಇರುವ ನಾನು ಒಬ್ಬನೇ ಎಂದು ತಿಳಿದು ಭಜಿಸುತ್ತಿರುವನೋ ಆ ಯೋಗಿಯು ಹೇಗೇ ಇರಲಿ, ನನ್ನಲ್ಲಿಯೇ ಇರುತ್ತಿರುವನು.

[ಭಾಷ್ಯ]

ಸರಿಯಾದ ಜ್ಞಾನವನ್ನು ಹೊಂದಿರುವ ಯೋಗಿಯು ಹೇಗೇ ಇರಲಿ, ಯಾವ ಯಾವ ಪ್ರಕಾರಗಳಿಂದ ಇರುತ್ತಿದ್ದರೂ * ನನ್ನಲ್ಲಿಯೆ ಎಂದರೆ **ವಿಷ್ಣುವಿನ ಪರಮಪದದಲ್ಲಿಯೆ** ಇರುವನು, ಅವನು ಎಂದಿಗೂ ಮುಕ್ತನಾಗಿಯೇ ಇರುವನು, ಅವನಿಗೆ ಮೋಕ್ಷಕ್ಕೆ ಯಾವ ಅಡ್ಡಿಯೂ † ಇರುವದಿಲ್ಲ ಎಂದರ್ಥ.

ಇದೂ ಅಲ್ಲದೆ :—

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ ೩೨ ॥**

೩೨. ಎಲೈ ಅರ್ಜುನನೆ, ಯಾವಾತನು ತನ್ನ ಹೋಲಿಕೆಯಿಂದಲೆ ಎಲ್ಲೆಲ್ಲಿಯೂ ಸುಖವನ್ನಾಗಲಿ ದುಃಖವನ್ನಾಗಲಿ ಸಮವಾಗಿ ಕಾಣುತ್ತಿರುವನೋ, ಆತನೆ ಪರಮಯೋಗಿಯು.

[ಭಾಷ್ಯ]

ಯಾವದಕ್ಕೆ ಹೋಲಿಸುತ್ತೇವೆಯೋ ಅದು ಉಪಮೇಯ; ಆತ್ಮನನ್ನು ಹೋಲಿಸುವ ಉಪಮೆಯ ಭಾವವು ಆತ್ಮೌಪಮ್ಯವೆನಿಸುವದು. ಎಲೈ ಅರ್ಜುನನೆ, ಅಂಥ ಆತ್ಮೌಪಮ್ಯದಿಂದ, (ಎಂದರೆ ತನ್ನಂತೆಯೆ,) ಎಲ್ಲೆಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಯಾವನು ಸಮವಾಗಿ ಕಾಣುವನು; ಅವನು ಏನನ್ನು ಸಮವಾಗಿ ಕಾಣುವನು? ಎಂದರೆ ಹೇಳುತ್ತೇನೆ. 'ಹೇಗೆ ನನಗೆ ಸುಖವು

---

* ಜನರ ದೃಷ್ಟಿಯಿಂದ ಅವನು ಹೇಗೆಯೇ ಇರಲಿ, ಜ್ಞಾನಿಯು ನಿಜವಾಗಿ ತಾನು ಆತ್ಮಸ್ವರೂಪನಾಗಿಯೇ ಇರುವನು.

† ತಾನು ಪಡೆಯಬೇಕಾದ ವಸ್ತುವಿಗೂ ತನಗೂ ನಡುವೆ ಅಡ್ಡಲಾಗಿ ಬರುವದೇ ಅಡ್ಡಿಯು; ಮೋಕ್ಷವು ತನ್ನ ಸ್ವರೂಪವೇ ಆದ್ದರಿಂದ ಅದಕ್ಕೆ ಯಾವ ಅಡ್ಡಿಯೂ ಬರುವ ಹಾಗಿಲ್ಲ.

ಬೇಕಾಗಿರುವದೋ ಅದರಂತೆಯೇ ಎಲ್ಲಾ ಪ್ರಾಣಿಗಳಿಗೂ ಸುಖವು ಅನುಕೂಲವಾಗಿರುವದು; ಮತ್ತು–(ಮೂಲದ) 'ವಾ' ಎಂಬ ಮಾತಿಗೆ ಮತ್ತು ಎಂದರ್ಥ–ನನಗೆ ದುಃಖವು ಹೇಗೆ ಬೇಡವಾಗಿರುವದೋ ಅದರಂತೆ ಸರ್ವಪ್ರಾಣಿಗಳಿಗೂ ದುಃಖವು ಬೇಡ, (ಅವಕ್ಕೆ ಅದು) ಪ್ರತಿಕೂಲವಾಗಿರುವದು– ಎಂದು ಹೀಗೆ ತನ್ನಂತೆಯೇ ಎಲ್ಲಾ ಪ್ರಾಣಿಗಳಿಗೂ ಸುಖದುಃಖಗಳು ಬೇಕಾಗಿಯೂ ಬೇಡವಾಗಿಯೂ ಇರುವವೆಂದು ಸಮವಾಗಿ ಕಾಣುವನೋ, ಯಾರಿಗೂ ತೊಂದರೆಯನ್ನು ಕೊಡದೆ ಅಹಿಂಸಕನಾಗಿರುವನೋ* ಎಂದರ್ಥ. ಯಾವನು ಹೀಗೆ ಅಹಿಂಸಕನಾಗಿ ಸರಿಯಾದ ತಿಳಿವಳಿಕೆಯಲ್ಲಿ ನಿಂತಿರುವನೋ ಆ ಯೋಗಿಯೇ ಪರಮನು, ಯೋಗಿಗಳಲ್ಲೆಲ್ಲ ಉತ್ಕೃಷ್ಟನು ಎಂದು (ನನ್ನ) ಅಭಿಪ್ರಾಯವು.

## ಅಭ್ಯಾಸವೈರಾಗ್ಯಗಳೇ ಮನೋನಿಗ್ರಹಕ್ಕೆ ಮುಖ್ಯವಾದ ಸಾಧನ

ಈ ಮೇಲೆ ಹೇಳಿದ ಸರಿಯಾದ ಜ್ಞಾನವೆಂಬ ಯೋಗವನ್ನು ಪಡೆಯುವದು ಕಷ್ಟವೆಂದು ತಿಳಿದು ಅವಶ್ಯವಾಗಿ ಅದನ್ನು ಹೊಂದಿಯೇ ತೀರುವದಕ್ಕೆ (ಅನುಕೂಲವಾದ) ಸಾಧನವನ್ನು ತಿಳಿಯಬೇಕೆಂದು ಅರ್ಜುನನು (ಈ ಮುಂದಿನ ಪ್ರಶ್ನೆಯನ್ನು) ಕೇಳಿರುತ್ತಾನೆ:—

**ಅರ್ಜುನ ಉವಾಚ:—**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಞ್ಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩ ॥**

೩೩. ಎಲೈ ಮಧುಸೂದನನೆ, ಸಾಮ್ಯವೆಂದು ನೀನು ಹೇಳಿದ ಯೋಗವಿದೆಯಷ್ಟೆ, ಚಂಚಲವಾಗಿರುವದರಿಂದ ಇದು ಸ್ಥಿರವಾಗಿರುವದೆಂದು ನನಗೆ ತೋರುವದಿಲ್ಲ.

[ಭಾಷ್ಯ]

ಎಲೈ ಮಧುಸೂದನ, (ಕೃಷ್ಣನೆ,) ಸಾಮ್ಯವೆಂದು† ಸಮತೆಯ ರೂಪವೆಂದು ನೀನು ಯಾವ ಯೋಗವನ್ನು ಹೇಳಿದೆಯೋ, ಇದು ಸ್ಥಿರವಾಗಿರುವದೆಂದು ನನಗೆ ತೋರುವದಿಲ್ಲ ; ಏಕೆಂದರೆ ಮನಸ್ಸು ಚಂಚಲವಾಗಿರುವದು.

---

* ಜ್ಞಾನಿಯಲ್ಲದವನೂ ಅಹಿಂಸಕನಾಗಿರಬಹುದು ; ಆದರೆ ಅಹಿಂಸೆಯು ಜ್ಞಾನಿಯ ಸ್ವಭಾವವು, ಏಕೆಂದರೆ ಜ್ಞಾನವು ಎಲ್ಲರೂ ತನ್ನ ಸ್ವರೂಪವೆಂಬ ನಂಬಿಕೆಯನ್ನು ದೃಢಗೊಳಿಸುವದು ; ೧೩–೨೮ನ್ನು ನೋಡಿ.

† ಜ್ಞಾನವನ್ನು ಯೋಗವೆಂಬ ಶಬ್ದದಿಂದ ಅರ್ಜುನನು ಕೇಳಿರುತ್ತಾನೆಂದು ಇಟ್ಟುಕೊಂಡರೆ ಸಮತ್ವವೆಂಬುದು ಅದಕ್ಕೆ ಹೊಂದುವದು ; ಏಕೆಂದರೆ ಎಲ್ಲೆಲ್ಲಿಯೂ ಸಮವಾಗಿರುವ ಬ್ರಹ್ಮವನ್ನು

ಇದು ಪ್ರಸಿದ್ಧವಾಗಿರುವದು:—

**ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

೩೪. ಕೃಷ್ಣನೆ, ಮನಸ್ಸು ಚಂಚಲವೂ ಕದಡುವಂಥಾದ್ದೂ, ಬಲವಾದದ್ದೂ, ಗಟ್ಟಿಯಾದದ್ದೂ ಅಲ್ಲವೆ? ಇದರ ನಿಗ್ರಹವೆಂಬುದು ವಾಯುವಿನ ನಿಗ್ರಹದಂತೆ ಬಹು ಕಷ್ಟವೆಂದು ನಾನು ತಿಳಿಯುವೆನು.

[ಭಾಷ್ಯ]

ಏಕೆಂದರೆ ಎಲೈ ಕೃಷ್ಣನೆ,–ಕೃಷ ವಿಲೇಖನೇ,– (ಕೃಷ್–ಗೀರು) ಎಂಬ ಧಾತುವಿನಿಂದ ಕೃಷ್ಣನೆಂಬ ಶಬ್ದವು ಬಂದಿರುವದು. ಭಕ್ತಜನರ ಪಾಪವೇ ಮುಂತಾದ ದೋಷಗಳನ್ನು ಎಳೆದುಹಾಕುವದರಿಂದ **ಕೃಷ್ಣ**ನೆಂದು ಹೆಸರು.— ಮನಸ್ಸು ಚಂಚಲವಾಗಿರುವದು. ಇದು ಬಹು ಚಂಚಲವಾಗಿರುವದೊಂದೇ ಅಲ್ಲ, ಕದಡುಹಾಕುವದು ಎಂದರೆ ಶರೀರವನ್ನು ಕದಡುಹಾಕಿ ಇಂದ್ರಿಯಗಳನ್ನು ವಿಕ್ಷೇಪಗೊಳಿಸಿ ಪರವಶಗೊಳಿಸುವದು. ಮತ್ತು ಬಲವಾಗಿರುವದು, ಇದನ್ನು ಯಾರಿಂದಲೂ ಬಿಗಿಹಿಡಿಯುವದಕ್ಕೆ ಆಗುವಂತಿರುವದಿಲ್ಲ, ಏಕೆಂದರೆ ಇದನ್ನು ಹಿಂತಿರುಗಿಸುವದಕ್ಕೆ* ಆಗುವದಿಲ್ಲ. ಮತ್ತು (ಇದು) ಗಟ್ಟಿಯಾಗಿರುವದು, ನಾಗಪಾಶದಂತೆ ಕತ್ತರಿಸುವದಕ್ಕೆ ಆಗದೆ ಇರುವದು. ಹೀಗಿರುವ ಮನಸ್ಸನ್ನು ನಿಗ್ರಹಮಾಡುವದು ಎಂದರೆ ತಡೆದಿಡುವದು (ಕಷ್ಟವೆಂದು) ತಿಳಿಯುವೆನು. ಹೇಗೆಂದರೆ, ಗಾಳಿಯನ್ನು ತಡೆಗಟ್ಟುವದು ಕಷ್ಟವಲ್ಲವೆ? ಅದಕ್ಕಿಂತಲೂ ಮನಸ್ಸನ್ನು ತಡೆಗಟ್ಟುವದು ಕಷ್ಟವೆಂದು ನನಗೆ ತೋರುವದು- ಎಂದಭಿಪ್ರಾಯವು.

**ಶ್ರೀಭಗವಾನುವಾಚ:—**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

---

ಕಾಣುವದೇ ಜ್ಞಾನವು. ಧ್ಯಾನಯೋಗವೆಂದು ಇಟ್ಟುಕೊಂಡರೆ ಮನಸ್ಸು ಲಯವೂ ಆಗದೆ ವಿಕ್ಷೇಪವೂ ಆಗದೆ ಬ್ರಹ್ಮದಲ್ಲಿಯೇ ನಿಂತಿರುವದೆಂಬ ಸಮತ್ವವೆಂದು ಅರ್ಥಮಾಡಬೇಕಾಗುವದು. 'ಸಮತ್ವ'ವೆಂಬುದನ್ನು ಯೋಗದ ಲಕ್ಷಣವಾಗಿ ಗೀತೆಯಲ್ಲಿ ಕೊಟ್ಟಿದೆಯೆಂಬುದನ್ನೂ ಅದು ಎಲ್ಲಾ ಯೋಗಗಳಿಗೂ ಹೊಂದುವದೆಂಬುದನ್ನೂ ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

* ವಿವೇಕವಿಲ್ಲದ ಪಶುಗಳು ತಮಗೆ ಹಾನಿಕರವಾದ ಪದಾರ್ಥವನ್ನು ತಿನ್ನುವದಕ್ಕೆ ಹೋದಾಗ ಮರುಕದಿಂದ ಜನರು ಅವುಗಳನ್ನು ಬೇರೆ ಕಡೆ ತಿರುಗಿಸುವದಕ್ಕೆ ಎಷ್ಟು ಪ್ರಯತ್ನಪಟ್ಟರೂ ಆಗದೆ ಇರುವಂತೆ, ಮನಸ್ಸು ತನಗೆ ಮೆಚ್ಚಾದ ವಿಷಯಗಳ ಮೇಲೆ ಬಿದ್ದಾಗ ಅದನ್ನು ಹಿಂತಿರುಗಿಸುವದಕ್ಕೆ ಎಷ್ಟು ಪ್ರಯತ್ನಪಟ್ಟರೂ ಆಗದೆ ಇರುವದು.

ಶ್ರೀಭಗವಂತನು ಹೇಳಿದನೇನೆಂದರೆ:—

೩೫. ಎಲೈ ಮಹಾಬಾಹುವೆ, ಮನಸ್ಸನ್ನು ನಿಗ್ರಹಮಾಡುವದು ಕಷ್ಟವೆಂಬುದೂ (ಅದು) ಚಂಚಲವಾಗಿರುವದೆಂಬುದೂ ನಿಸ್ಸಂಶಯವು ; ಆದರೆ ಎಲೈ ಕೌಂತೇಯನೆ, ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಹಿಡಿತಕ್ಕೆ ಸಿಕ್ಕುವದು.

[ ಭಾಷ್ಯ ]

ಶ್ರೀಭಗವಂತನು ಇದಕ್ಕೆ ಹೇಳಿದ (ಉತ್ತರ)ವೇನೆಂದರೆ, ಇದು ಹೀಗೆಯೆ, ನೀನು ಹೇಳಿದಂತೆಯೆ ಸರಿ. ಎಲೈ ಮಹಾಬಾಹುವಾದ ಅರ್ಜುನನೆ, ಮನಸ್ಸನ್ನು ಬಿಗಿಹಿಡಿಯುವದು ಕಷ್ಟವೆಂಬುದೂ ಇದು ಚಂಚಲವೆಂಬುದೂ ನಿಸ್ಸಂಶಯವು, ಇದರಲ್ಲಿ ಸಂಶಯವೇನೂ ಇಲ್ಲ. ಆದರೆ ಅಭ್ಯಾಸದಿಂದಲೂ– ಅಭ್ಯಾಸವೆಂದರೆ ಯಾವದಾದರೊಂದು **ಚಿತ್ತಭೂಮಿಯಲ್ಲಿ*** ಒಂದೇ ಬಗೆಯಾದ ಚಿತ್ತವೃತ್ತಿಯನ್ನು ಮತ್ತೆಮತ್ತೆ ನಡೆಸುವದು ; ವೈರಾಗ್ಯದಿಂದಲೂ–ವೈರಾಗ್ಯವೆಂದರೆ (ಈ ಲೋಕದಲ್ಲಿ) ಕಂಡಿರುವ ಮತ್ತು ಕಾಣದ (ಪರಲೋಕದಲ್ಲಿ) ನಮಗೆ ಬೇಕೆನಿಸುವ ಭೋಗಗಳಲ್ಲಿ ದೋಷವನ್ನು ಕಂಡು ಬಯಕೆಯಿಲ್ಲದೆ ಇರುವದು. ಆ ವೈರಾಗ್ಯದಿಂದಲೂ **ವಿಕ್ಷೇಪ**ವೆಂಬ ಚಿತ್ತದ ಪ್ರಚಾರವು ಹಿಡಿತಕ್ಕೆ ಸಿಕ್ಕುವದು ; ಹೀಗೆ ಆ ಮನಸ್ಸನ್ನು ಬಿಗಿಹಿಡಿದು ತಡೆಯಬಹುದು ಎಂದರ್ಥ.

**ಅಸಂಯತಾತ್ಮನೋ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥**

೩೬. ಅಸಂಯತಾತ್ಮನಾದವನಿಗೆ ಯೋಗವು ದಕ್ಕುವದು ಕಷ್ಟವೆಂದು ನನ್ನ ಮತವು ;ಆದರೆ ವಶ್ಯಾತ್ಮನಾದವನು ಪ್ರಯತ್ನವನ್ನು ಮಾಡಿದರೆ ಉಪಾಯದಿಂದ ಅದನ್ನು ಪಡೆಯಬಹುದು.

[ ಭಾಷ್ಯ ]

ಆದರೆ ಯಾವನು ಅಸಂಯತಾತ್ಮನೋ ಅವನಿಗೆ- ಅಭ್ಯಾಸವೈರಾಗ್ಯಗಳಿಂದ ಆತ್ಮವನ್ನು ಎಂದರೆ ಅಂತಃಕರಣವನ್ನು ಬಿಗಿಹಿಡಿಯದವನು ಅಸಂಯತಾತ್ಮನು, ಅಂಥ ಅಸಂಯತಾತ್ಮನಿಗೆ– ಯೋಗವು ದಕ್ಕುವದು ಕಷ್ಟವೆಂದು ನನ್ನ ಅಭಿಪ್ರಾಯವು. ಯಾವನಾದರೆ ವಶ್ಯಾತ್ಮನಾಗಿರುವನೋ ಎಂದರೆ ಅಭ್ಯಾಸವೈರಾಗ್ಯ

---

* ಚಿತ್ತಭೂಮಿಗಳು ಎಂದರೆ ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ– ಎಂದು ಯೋಗಭಾಷ್ಯದಲ್ಲಿ ಹೇಳಿರುವವಲ್ಲ; ವಾಕ್ಕು, ಮನಸ್ಸು, ಅಹಂಕಾರ, ಮಹತ್ತತ್ತ್ವ– ಎಂಬ ನಾಲ್ಕು ಭೂಮಿಗಳು ; ಇವುಗಳಲ್ಲಿ ಮನಸ್ಸನ್ನು ಮತ್ತೆಮತ್ತೆ ಇಡುವದು ಅಭ್ಯಾಸವು ; ಇದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿದೆ.

ಗಳಿಂದ ತನ್ನ ಆತ್ಮವನ್ನು ಎಂದರೆ ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುವನೋ ಅಂಥವನು ಮತ್ತೆಮತ್ತೆ ಪ್ರಯತ್ನವನ್ನು ಮಾಡಿದರೆ, ಮೇಲೆ ಹೇಳಿದ ಉಪಾಯದಿಂದ ಯೋಗವನ್ನು ಪಡೆಯಬಹುದು.

## ಯೋಗಭ್ರಷ್ಟನ ಗತಿ

ಯೋಗಾಭ್ಯಾಸವನ್ನು ಇಟ್ಟುಕೊಂಡು ಇಹಲೋಕಕ್ಕೂ ಪರಲೋಕಕ್ಕೂ ಕಾರಣವಾಗಿರುವ ಕರ್ಮಗಳನ್ನು ಸಂನ್ಯಾಸಮಾಡಿ, ಯೋಗಸಿದ್ಧಿಯ ಫಲವಾದ ಮೋಕ್ಷಕ್ಕೆಸಾಧನವಾದ ಸರಿಯಾದ ಜ್ಞಾನವೂ ಉಂಟಾಗದೆ ಇದ್ದರೆ, ಯೋಗಿಯ ಚಿತ್ತವು ಮರಣಕಾಲದಲ್ಲಿ* ಯೋಗಮಾರ್ಗವನ್ನು ಬಿಟ್ಟು (ಅತ್ತಿತ್ತ) ಚಲಿಸಬಹುದು. ಅಂಥವನು (ಸಂಪೂರ್ಣವಾಗಿ) ಕೆಟ್ಟುಹೋಗುವನೋ ಏನೋ ಎಂಬ ಶಂಕೆಯಿಂದ ಅರ್ಜುನನು (ಈ ಮುಂದಿನ ಪ್ರಶ್ನೆಯನ್ನು) ಕೇಳಿರುತ್ತಾನೆ:—

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥**

೩೭. ಎಲೈ ಕೃಷ್ಣನೆ, ಪ್ರಯತ್ನವನ್ನು ಮಾಡದೆಯೂ ಶ್ರದ್ಧೆಯುಳ್ಳಾತನಾಗಿಯೂ ಇರುವಾತನ ಮನಸ್ಸು ಯೋಗವನ್ನು ಬಿಟ್ಟು ಚಲಿಸಿದರೆ ಯೋಗಸಂಸಿದ್ಧಿಯನ್ನು ಪಡೆಯದ ಅಂಥವನಿಗೆ ಯಾವ ಗತಿಯಾಗುವದು ?

[ಭಾಷ್ಯ]

ಸರಿಯಾಗಿ ಪ್ರಯತ್ನವನ್ನು ಮಾಡದೆ ಇರುವವನೂ (ಆದರೆ) ಯೋಗಮಾರ್ಗದಲ್ಲಿ ಶ್ರದ್ಧೆಯುಳ್ಳವನೂ ಎಂದರೆ ಆಸ್ತಿಕ್ಯಬುದ್ಧಿಯುಳ್ಳವನೂ ಆಗಿ, ಮರಣಕಾಲದಲ್ಲಿ ಮನಸ್ಸು ಅತ್ತಿತ್ತ ಚಲಿಸಿದರೆ, ಎಂದರೆ (ಯೋಗದ) ನೆನಪು ತಪ್ಪಿಹೋದರೆ, ಅಂಥವನು ಯೋಗಸಂಸಿದ್ಧಿಯನ್ನು ಎಂದರೆ ಯೋಗದ ಫಲವಾದ ಸಂಯಾದ ತಿಳಿವಳಿಕೆಯನ್ನು ಪಡೆಯದೆ ಇರುವದರಿಂದ, ಎಲೈ ಕೃಷ್ಣನೆ, ಯಾವ ಗತಿಯನ್ನು ಹೊಂದುತ್ತಾನೆ ?

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮ ॥**

೩೮. ಎರಡೂ ತಪ್ಪಿ, ಆಶ್ರಯವಿಲ್ಲದೆ, ಬ್ರಹ್ಮದ ದಾರಿಯಲ್ಲಿ ದಿಕ್ಕು ತೋಚದೆ, ಚೂರಾದ ಮೋಡದ ಹಾಗೆ ಕೆಟ್ಟು ಹೋಗುವದಿಲ್ಲವಷ್ಟೆ ?

* ಯೋಗಕ್ಕೆ ಮರಣಕಾಲದಲ್ಲಿ ಕೂಡ ಚಿತ್ತವು ಅತ್ತಿತ್ತ ಚಲಿಸದಂತೆ ಇರುವದು ಅವಶ್ಯ ; ೮–೧೦ನೆಯ ಶ್ಲೋಕವನ್ನು ನೋಡಿ.

[ಭಾಷ್ಯ]

ಕರ್ಮಮಾರ್ಗ, ಯೋಗಮಾರ್ಗ- ಇವೆರಡೂ ತಪ್ಪಿದವನಾಗಿ ಅವನು ಕೆಟ್ಟುಹೋಗುತ್ತಾನೋ ಅಥವಾ ಕೆಟ್ಟುಹೋಗುವದಿಲ್ಲವೋ? ಎಲೈ ಮಹಾಬಾಹುವೆ, ಚೂರಾಗಿ ಹೊರಬಿದ್ದ ಮೋಡದಂತೆ ಯಾವ ಆಸರೆಯೂ ಇಲ್ಲದೆ, ಬ್ರಹ್ಮದ ದಾರಿಯಲ್ಲಿ ಎಂದರೆ ಬ್ರಹ್ಮವನ್ನು ಪಡೆಯುವ (ಯೋಗ)ಮಾರ್ಗದಲ್ಲಿ ದಿಕ್ಕುತೋಚದೆ (ಅವನು) ಕೆಟ್ಟುಹೋಗುವದಿಲ್ಲವಷ್ಟೆ?

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನಹ್ಯುಪಪದ್ಯತೇ ॥ ೩೯॥**

೩೯. ಎಲೈ ಕೃಷ್ಣನೆ, ಈ *ನನ್ನ ಸಂಶಯವನ್ನು ಒಂದಿಷ್ಟೂ ಉಳಿಯದಂತೆ ನೀನು ಕತ್ತರಿಸಬೇಕು; ಏಕೆಂದರೆ ನಿನ್ನನ್ನು ಬಿಟ್ಟರೆ ಮತ್ತೆ ಯಾರೂ ಈ ಸಂಶಯವನ್ನು ಕತ್ತರಿಸಲಾರರು.

[ಭಾಷ್ಯ]

ಎಲೈ ಕೃಷ್ಣನೆ, ಈ ನನ್ನ ಸಂದೇಹವನ್ನು ಒಂದಿಷ್ಟೂ ಉಳಿಯದಂತೆ ನೀನು ಕತ್ತರಿಸಬೇಕು, ಹೋಗಲಾಡಿಸಬೇಕು; ಏಕೆಂದರೆ ನಿನ್ನನ್ನು ಬಿಟ್ಟರೆ ಮತ್ತೆ ಯಾವ ದೇವತೆಯಾಗಲಿ ಋಷಿಯಾಗಲಿ ಈ ಸಂಶಯವನ್ನು ಕತ್ತರಿಸಲಾರರು, ನಾಶಗೊಳಿಸಲಾರರು; ಆದ್ದರಿಂದ ನೀನೇ ಕತ್ತರಿಸಬೇಕು ಎಂದರ್ಥ.

**ಶ್ರೀ ಭಗವಾನುವಾಚ:—**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥**

ಶ್ರೀ ಭಗವಂತನು ಹೇಳಿದನೇನೆಂದರೆ:—

೪೦. ಪಾರ್ಥನೆ, ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಅವನಿಗೆ ವಿನಾಶವಿಲ್ಲ; ಅಪ್ಪ, ಕಲ್ಯಾಣವಾದದ್ದನ್ನು ಮಾಡಿದಾತನು ಯಾವನೂ ದುರ್ಗತಿಯನ್ನು ಹೊಂದಲಾರನಷ್ಟೆ?

[ಭಾಷ್ಯ]

ಎಲೈ ಪಾರ್ಥನೆ, ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಅವನಿಗೆ ನಾಶವೆಂಬುದಿಲ್ಲ. ನಾಶವೆಂದರೆ ಹಿಂದಿಗಿಂತ ಕೀಳಾದ ಜನ್ಮವನ್ನು ಹೊಂದು

---

* 'ಏತನ್ಮೇ' ಎಂದು ಎಲ್ಲಾ ಪಾಠಗಳಲ್ಲಿಯೂ ಇದೆ; 'ಸಂಶಯಂ' ಎಂಬುದಕ್ಕೆ ವಿಶೇಷಣವಾದ್ದರಿಂದ 'ಏತಂ' ಎಂದಿರಬೇಕು. ಇದು ಆರ್ಷಪ್ರಯೋಗವೋ ಅಥವಾ 'ಏತಂ' ಎಂಬುದೇ ಶಂಕರಾಚಾರ್ಯರ ಪಾಠವೋ ಗೊತ್ತಾಗಲಿಲ್ಲ.

ವದು, ಅದು ಯೋಗಭ್ರಷ್ಟನಿಗೆ ಆಗಲಾರದು. ಏಕೆಂದರೆ ಕಲ್ಯಾಣವನ್ನು ಮಾಡಿದವನು, ಎಂದರೆ ಒಳ್ಳೆಯದನ್ನು ಮಾಡಿದವನು, ಯಾವನೂ ದುರ್ಗತಿಯನ್ನು ಹೊಂದಲಾರನಲ್ಲವೆ, ಕೆಟ್ಟ ಗತಿಯನ್ನು (ಪಡೆಯಲಾರನಷ್ಟೆ?) ('ಅಪ್ಪ' ಎಂಬ ಮಾತಿಗೆ ಮೂಲದಲ್ಲಿರುವ) 'ತಾತ' ಎಂಬ ಮಾತಿಗೆ ತಂದೆಯೆಂದರ್ಥ; ತನ್ನನ್ನೆ ಪುತ್ರರೂಪದಿಂದ ಉಂಟುಮಾಡುವನು [ತನೋತಿ], ಆದ್ದರಿಂದ ಅವನಿಗೆ 'ತಾತ' ಎಂದು ಹೆಸರು, ತಂದೆಯೇ* ಮಗನಾದ್ದರಿಂದ ಮಗನನ್ನು ತಾತನೆನ್ನುವರು. ಶಿಷ್ಯನೂ† ಮಗನೆನಿಸುವನು. (ಆದ್ದರಿಂದ 'ತಾತ' ಎಂಬ ಮಾತನ್ನು ಅರ್ಜುನನಿಗೆ ಉಪಯೋಗಿಸಿರುತ್ತದೆ.)

ಹಾಗಾದರೆ ಅವನಿಗೆ ಏನು (ಗತಿ) ಆಗುವದು? ಎಂದರೆ,

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ೪೧ ॥**

೪೧. ಪುಣ್ಯವನ್ನು ಮಾಡಿದವರ ಲೋಕಗಳನ್ನು ಪಡೆದು ಶಾಶ್ವತವಾಗಿ (ಬಹು) ವರ್ಷಗಳು (ಅಲ್ಲಿ) ವಾಸವಾಗಿದ್ದು, ಶುಚಿಗಳೂ ಶ್ರೀಮಂತರೂ ಆಗಿರುವವರ ಕುಲದಲ್ಲಿ ಯೋಗಭ್ರಷ್ಟನು ಜನಿಸುವನು.

[ಭಾಷ್ಯ]

ಯೋಗಮಾರ್ಗದಲ್ಲಿ ಹೊರಟಿರುವ ಸಂನ್ಯಾಸಿಯು- (ಇದು ಸಂನ್ಯಾಸಿಯ ವಿಷಯವೆಂಬುದು) ವಾಕ್ಯದ ಸಂದರ್ಭದಿಂದ‡ ಗೊತ್ತಾಗುತ್ತದೆ-ಅಶ್ವಮೇಧವೇ ಮುಂತಾದ ಯಾಗಗಳನ್ನು ಮಾಡುವ ಪುಣ್ಯವಂತರು§ ಪಡೆಯುವ ಭೋಗಗಳನ್ನು ಪಡೆದು ಅಲ್ಲಿ ಶಾಶ್ವತವಾಗಿ (ಬಹು) ವರ್ಷಗಳವರೆಗೆ (ಸುಖವಾಗಿ) ವಾಸಮಾಡಿಕೊಂಡಿದ್ದು. ಅಲ್ಲಿಯ ಭೋಗವು ಸವೆಯಲಾಗಿ ಶುಚಿಗಳಾಗಿಯೂ ಎಂದರೆ (ಶಾಸ್ತ್ರದಲ್ಲಿ) ಹೇಳಿದಂತೆ ಆಚರಿಸುವವರಾಗಿಯೂ‖ ಶ್ರೀಮಂತರಾ

* ತಂದೆಯೇ ಮಗನಾಗಿ ಹುಟ್ಟುವನೆಂದು ಶ್ರುತಿಯಿರುವದು.

† ವಿದ್ಯೆಯನ್ನು ಕೊಟ್ಟದ್ದರಿಂದ ಪುನರ್ಜನ್ಮವನ್ನು ಶಿಷ್ಯನಿಗೆ ಕೊಟ್ಟಂತೆ ಆಗುವದು, ಈ ಸಂದರ್ಭದಲ್ಲಿ ಗುರುವೇ ತಂದೆ, ಶಿಷ್ಯನೇ ಮಗನು.

‡ ಈ ಅಧ್ಯಾಯದ ಭಾಷ್ಯದ ಸಂಬಂಧಗ್ರಂಥವನ್ನು (ಪುಟ ೨೪೩ ರಲ್ಲಿ) ನೋಡಿ.

§ ಪುಣ್ಯವೆಂಬ ಶಬ್ದವನ್ನು ಶಾಸ್ತ್ರೀಯಕರ್ಮವೆಂಬರ್ಥದಲ್ಲಿಯೇ ಬಹುವಾಗಿ ಉಪಯೋಗಿಸುವರು.

‖ ಶಾಸ್ತ್ರದಲ್ಲಿ ಹೇಳಿದಂತೆ ಆಚರಿಸುವವರಿಗೆ ಪಾಪವೆಲ್ಲ ಕ್ಷಯವಾಗಿರುವದರಿಂದ ಅವರು ಶುಚಿಯಾಗಿರುವರು.

ಗಿಯೂ ಎಂದರೆ ಐಶ್ವರ್ಯವಂತರಾಗಿಯೂ ಇರುವವರ ಮನೆಯಲ್ಲಿ ಯೋಗ ಭ್ರಷ್ಟನಾದವನು ಹುಟ್ಟುತ್ತಾನೆ.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**

**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**

೪೨. ಅಥವಾ ಧೀಮಂತರಾದ ಯೋಗಿಗಳ ಕುಲದಲ್ಲಿಯೇ ಅವನು ಹುಟ್ಟುವನು; ಇದೇ, ಇಂಥ ಜನ್ಮವೆಂಬುದೇ, ಲೋಕದಲ್ಲಿ ದುರ್ಲಭತರ ವಾದದ್ದು.

[ಭಾಷ್ಯ]

ಹಾಗಿಲ್ಲದಿದ್ದರೆ, ಶ್ರೀಮಂತರ ಕುಲದಲ್ಲಿ (ಹುಟ್ಟ)ದಿದ್ದರೆ, ದರಿದ್ರರಾಗಿಯೂ ಧೀಮಂತರಾಗಿಯೂ ಎಂದರೆ ಜ್ಞಾನಿಗಳಾಗಿಯೂ ಇರುವ ಯೋಗಿಗಳ ಕುಲ ದಲ್ಲಿಯೇ ಅವನು ಹುಟ್ಟುವನು. ದರಿದ್ರರಾದ ಯೋಗಿಗಳ ಕುಲದಲ್ಲಿ ಹುಟ್ಟು ವದೆಂಬ ಇದೇ, ಹಿಂದೆ ಹೇಳಿದ (ಐಶ್ವರ್ಯವಂತರ ಮನೆಯಲ್ಲಿ ಹುಟ್ಟುವದ ಕ್ಕಿಂತ), ಇಂಥ ವಿಶೇಷಣಗಳುಳ್ಳ ಜನ್ಮವೇ, ಹೆಚ್ಚು* ದುರ್ಲಭವಾದದ್ದು.

ಏಕೆಂದರೆ,

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।**

**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥ ೪೩ ॥**

೪೩. ಎಲೈ ಕುರುನಂದನನೆ, ಅಲ್ಲಿ ಹಿಂದಿನ ದೇಹದಲ್ಲಿ ಉಂಟಾಗಿದ್ದ ಬುದ್ಧಿಯ ಸಂಬಂಧವನ್ನು ಹೊಂದುತ್ತಾನೆ; ಅದರಿಂದ ಬಹುವಾಗಿ ಸಂಸಿದ್ಧಿ ಗೋಸ್ಕರ ಯತ್ನವನ್ನು ಮಾಡುವನು.

[ಭಾಷ್ಯ]

ಎಲೈ ಕುರುವಂಶದಲ್ಲಿ ಉತ್ಪನ್ನನಾದ ಅರ್ಜುನನೆ, ಆ ಯೋಗಿಗಳ ಕುಲ ದಲ್ಲಿ ಹಿಂದಿನ ಜನ್ಮದಲ್ಲಿ ತನಗೆ ಇದ್ದ ಬುದ್ಧಿಯ ಸಂಬಂಧವನ್ನು ಹೊಂದುತ್ತಾನೆ; ಅದರಿಂದ ಎಂದರೆ ಆ ಹಿಂದೆ ಮಾಡಿದ್ದರ ಸಂಸ್ಕಾರದಿಂದ ಬಹುವಾಗಿ ಇನ್ನೂ ಹೆಚ್ಚಾಗಿ, ಸಂಸಿದ್ಧಿಗೋಸ್ಕರ ಎಂದರೆ ಯೋಗದ ಸಿದ್ಧಿಯನ್ನು ಹೊಂದುವದ ಕ್ಕೋಸ್ಕರ ಪ್ರಯತ್ನವನ್ನು ಮಾಡುತ್ತಾನೆ.

ಹಿಂದಿನ ದೇಹದಲ್ಲಿದ್ದ ಬುದ್ಧಿಯನ್ನು ಹೊಂದುವನೆಂಬುದು ಹೇಗೆ? ಎಂದರೆ ಅದನ್ನು ಹೇಳುತ್ತೇನೆ:—

---

* ಯೋಗವು ತಕ್ಕಮಟ್ಟಿಗೆ ಬಲವಾಗಿದ್ದರೆ ಐಶ್ವರ್ಯವಂತರ ವಂಶದಲ್ಲಿ ಹುಟ್ಟುವನು, ಹೆಚ್ಚು ಬಲವಾಗಿದ್ದರೆ ಯೋಗಿಗಳ ವಂಶದಲ್ಲಿಯೇ ಹುಟ್ಟುವನು.

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

೪೪. ಹಿಂದಿನ ಅದೇ ಅಭ್ಯಾಸದಿಂದ ತಾನು ಬೇಡವೆಂದರೂ ಎಳೆಯಲ್ಪಡುವನು. ಅವನು ಯೋಗವನ್ನು (ಸುಮ್ಮನೆ) ತಿಳಿದುಕೊಳ್ಳಬೇಕೆಂದಿದ್ದರೂ ಸರಿಯೆ. ಶಬ್ದಬ್ರಹ್ಮವನ್ನು ಮೀರುವನು.

[ಭಾಷ್ಯ]

ಹಿಂದಿನ ಜನ್ಮದಲ್ಲಿ ಅವನು ಮಾಡಿರುವ ಅಭ್ಯಾಸವೇ ಪೂರ್ವಾಭ್ಯಾಸವು. ಅದು ಬಲವಾಗಿ ಅವನನ್ನು ಎಂದರೆ ಆ ಯೋಗಭ್ರಷ್ಟನನ್ನು ಸಂಸಿದ್ಧಿಯಾಗುವ ವರೆಗೆ, ಅವನು ಬೇಡವೆಂದರೂ ಎಳೆದೊಯ್ಯುವದು. ಯೋಗಾಭ್ಯಾಸದಿಂದಾಗಿರುವ ಸಂಸ್ಕಾರಕ್ಕಿಂತ ಹೆಚ್ಚು ಬಲವಾದ ಅಧರ್ಮವೇ ಮುಂತಾದ ಕರ್ಮವನ್ನು ಮಾಡದೇ ಇದ್ದರೆ, (ಹಿಂದೆ ಮಾಡಿದ್ದ) ಯೋಗಾಭ್ಯಾಸದ ಸಂಸ್ಕಾರದಿಂದಲೇ ಮುಂದಕ್ಕೆ ಹೋಗುತ್ತಾನೆ; ಅವನು ಮಾಡಿದ ಅಧರ್ಮವು (ಅದಕ್ಕಿಂತ) ಬಲವಾಗಿದ್ದರೆ ಯೋಗದಿಂದಾದ ಸಂಸ್ಕಾರವೂ ಕುಗ್ಗಿಯೇ ಕುಗ್ಗುವದು. ಆದರೆ ಆ (ಅಧರ್ಮವು) ಸವೆದ ಮೇಲೆ* ಯೋಗದಿಂದ ಆಗಿದ್ದ ಸಂಸ್ಕಾರವು ತಾನೇ ತನ್ನ ಕಾರ್ಯವನ್ನು ಮಾಡುವದು; ಎಷ್ಟೇ ದೀರ್ಘಕಾಲವಾಗಲಿ, ಅದು ನಾಶವಾಗುವದಿಲ್ಲ– ಎಂದರ್ಥ.

ಆದ್ದರಿಂದ ಅವನು ಜಿಜ್ಞಾಸುವೇ ಆಗಿರಲಿ, ಎಂದರೆ ಯೋಗಸ್ವರೂಪವನ್ನು ತಿಳಿಯಬೇಕೆಂದು (ಸುಮ್ಮನೆ ಕುತೂಹಲದಿಂದ) ಕಾಲಿಟ್ಟಿರಲಿ, (ಅಂಥ) ಯೋಗಭ್ರಷ್ಟನಾದ ಸಂನ್ಯಾಸಿಯು- (ಆ ಸಂನ್ಯಾಸಿಯು)-ಇದು ಸಂನ್ಯಾಸಿಯ ವಿಷಯವೇ ಎಂಬುದು ವಾಕ್ಯಸಂದರ್ಭದಿಂದಲೇ ಗೊತ್ತಾಗುವದು-**ಶಬ್ದಬ್ರಹ್ಮ**ವನ್ನು† ದಾಟುವನು, ಎಂದರೆ ವೇದದಲ್ಲಿ ಹೇಳಿರುವ ಕರ್ಮವನ್ನು ಮಾಡು

---

* ಯೋಗವನ್ನು ಒಂದು ಸಲ ಮಾಡುವದಕ್ಕೆ ಹೊರಟಿದ್ದರೆ ಸಾಕು, ಅದು ತಾನೇ ನಮ್ಮನ್ನು ತನ್ನ ದಾರಿಗೆ ಎಳೆದೊಯ್ಯುವದು— ಎಂದು ಹುಚ್ಚುಭರವಸೆಯನ್ನು ಇಟ್ಟುಕೊಂಡು ಸಿಕ್ಕಸಿಕ್ಕಂತೆ ನಡೆಯಬಾರದು. 'ಮಾಡಿದ ಕರ್ಮಕ್ಕೆ ಫಲವಿಲ್ಲದೆ ಹೋಗುವದಿಲ್ಲ.' ಆದರೂ ಯೋಗವನ್ನು ಮಾಡಿದ್ದು ವ್ಯರ್ಥವಾಗುವದಿಲ್ಲವೆಂತಲೂ ಒಂದಿಲ್ಲದಿದ್ದರೆ ಒಂದು ಕಾಲದಲ್ಲಿ ಫಲವನ್ನು ಕೊಟ್ಟೇ ಕೊಡುವದೆಂತಲೂ ತಿಳಿಸುವದಕ್ಕೆ 'ತಾನು ಬೇಡವೆಂದರೂ ಎಳೆದೊಯ್ಯಲ್ಪಡುವನು' ಎಂದು ಹೇಳಿರುತ್ತದೆಯೆಂದು ಭಾವ.

† ಶಬ್ದಬ್ರಹ್ಮವೆಂದರೆ ವೇದವು; ಇಲ್ಲಿ ಲಕ್ಷಣೆಯಿಂದ ವೇದದಲ್ಲಿ ಹೇಳಿರುವ ಕರ್ಮವೆಂದು ಅರ್ಥಮಾಡಿದೆ.

ವದರ ಫಲವನ್ನು ತಿರಸ್ಕರಿಸುವನು; (ಹೀಗಿರುವಲ್ಲಿ) ಯಾವನು ಯೋಗವನ್ನು ತಿಳಿದುಕೊಂಡು ಅದರಲ್ಲಿಯೇ ಮನಸ್ಸಿಟ್ಟು ಅಭ್ಯಾಸಮಾಡುವನೋ ಅಂಥ ವನು (ಕರ್ಮಫಲವನ್ನು ಮೀರುವನೆಂಬುದನ್ನು) ಹೇಳತಕ್ಕದ್ದೇನಿದೆ?

ಯೋಗಿಯಾಗಿರುವದು ಒಳ್ಳೆಯದೆಂಬುದಕ್ಕೆ ಮತ್ತೊಂದು ಕಾರಣವೇ ನೆಂದರೆ:—

ಯೋಗಿಯ ಹೆಚ್ಚುಗಾರಿಕೆ

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫ ॥**

೪೫. ಪ್ರಯತ್ನದಿಂದ ಅಭ್ಯಾಸಮಾಡುವ ಯೋಗಿಯೋ ಎಂದರೆ, ಕಿಲ್ಬಿಷ ವನ್ನೆಲ್ಲ ಚೆನ್ನಾಗಿ ಕಳೆದುಕೊಂಡು ಅನೇಕ ಜನ್ಮಗಳಲ್ಲಿ ಸಂಸಿದ್ಧನಾಗಿ ಅದರಿಂದ ಹೆಚ್ಚಿನ ಗತಿಯನ್ನು ಪಡೆಯುವನು.

[ಭಾಷ್ಯ]

ಆದರೆ ಪ್ರಯತ್ನದಿಂದ ಅಭ್ಯಾಸಮಾಡುತ್ತಿರುವವನು ಎಂದರೆ ಬಲವಾಗಿ (ಪಟ್ಟುಹಿಡಿದು) ಅಭ್ಯಾಸಮಾಡುತ್ತಿರುವವನು ಎಂದರ್ಥ; ಅಂಥ ಯೋಗಿಯು ಎಂದರೆ ಜ್ಞಾನಿಯು, ಕಿಲ್ಬಿಷವನ್ನು ಪೂರ ಕಳೆದುಕೊಂಡು ಪಾಪವಿಲ್ಲದಂತೆ ಪರಿಶುದ್ಧನಾಗಿ, ಅನೇಕ ಜನ್ಮಗಳಲ್ಲಿ ಸಂಸಿದ್ಧನಾಗಿ, (ಒಂದೊಂದು ಜನ್ಮದಲ್ಲಿ) ಸ್ವಲ್ಪಸ್ವಲ್ಪವಾಗಿ ಸಂಸ್ಕಾರವನ್ನು ಕೂಡಿಹಾಕಿಕೊಂಡು, ಹಾಗೆ ಎಷ್ಟೋ* ಜನ್ಮಗಳಲ್ಲಿ ಕೂಡಿಹಾಕಿಕೊಂಡ (ಸಂಸ್ಕಾರದಿಂದ) ಸಂಸಿದ್ಧನಾಗಿ, ಆದರಿಂದ ಸರಿಯಾದ ಜ್ಞಾನವನ್ನು ಪಡೆದವನಾಗಿ, ಹೆಚ್ಚಿನ ಗತಿಯನ್ನು ಪಡೆಯುವನು.

ಹೀಗಿರುವದರಿಂದ—

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥**

೪೬. ತಪಸ್ವಿಗಳಿಗಿಂತಲೂ ಯೋಗಿಯು ಹೆಚ್ಚಿನವನು, ಜ್ಞಾನಿಗಳಿಗಿಂತಲೂ ಹೆಚ್ಚಿನವನೆಂದು (ನನ್ನ) ಅಭಿಪ್ರಾಯವು; ಯೋಗಿಯು ಕರ್ಮಿಗಳಿಗಿಂತಲೂ ಹೆಚ್ಚಿನವನು; ಆದಕಾರಣ, ಎಲೈ ಅರ್ಜುನನೆ, ಯೋಗಿಯಾಗು.

---

* ನಾವು ಇನ್ನೂ ಎಷ್ಟೋ ಜನ್ಮಗಳನ್ನು ಹೊಂದಿದ ಮೇಲೆ, ನಮಗೆ ಜ್ಞಾನವಾಗುವದೆಂದು ಸುಮ್ಮನಿರುವದಕ್ಕೆ ಸಾಧಕವಾಗಿ ಈ ವಾಕ್ಯವನ್ನು ಕೆಲವರು ಅಲಸರು ಉದಾಹರಿಸುವರು; ಯೋಗದ ಸಂಸ್ಕಾರವು ಹೊರಬೀಳಬೇಕಾದರೆ ಎಷ್ಟೋ ಜನ್ಮಗಳಾಗಿ ಬಂದಿರುವದರಿಂದ, ಯೋಗ ದಲ್ಲಿ ಒಂದು ಸಲ ಪ್ರವೃತ್ತಿಯುಂಟಾದರೆ ಮತ್ತೆ ಉದಾಸೀನನಾಗಬಾರದೆಂಬುದೇ ಇಲ್ಲಿ ನಿಜವಾದ ತಾತ್ಪರ್ಯವು.

[ಭಾಷ್ಯ]

ಯೋಗಿಯು ತಪಸ್ವಿಗಳಿಗಿಂತಲೂ* ಹೆಚ್ಚಿನವನು, ಜ್ಞಾನಿಗಳಿಗಿಂತಲೂ† (ಹೆಚ್ಚಿನವನು)– ಇಲ್ಲಿ ಜ್ಞಾನವೆಂದರೆ ಶಾಸ್ತ್ರದ ಅರ್ಥವನ್ನು ತಿಳಿದಿರುವದು. ಅ–(ಜ್ಞಾನ)ವುಳ್ಳವರಿಗಿಂತಲೂ (ಯೋಗಿಯು) ಹೆಚ್ಚಿನವನು, ಶ್ರೇಷ್ಠನು. ಯೋಗಿಯು ಕರ್ಮಿಗಳಿಗಿಂತಲೂ ಹೆಚ್ಚಿನವನು ; ಕರ್ಮವೆಂದರೆ ಅಗ್ನಿಹೋತ್ರವೇ ಮುಂತಾದದ್ದು, ಅದನ್ನು ಮಾಡುವವರಿಗಿಂತಲೂ ‡ ಹೆಚ್ಚಿನವನು, ಶ್ರೇಷ್ಠನು. ಹೀಗಿರುವದರಿಂದ, ಅರ್ಜುನನೆ, (ನೀನು) ಯೋಗಿಯಾಗು.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೪೭॥**

೪೭. ಯೋಗಿಗಳಲ್ಲೆಲ್ಲ, ಯಾವನು ನನ್ನಲ್ಲಿಯೇ ಅಂತರಾತ್ಮವನ್ನು ಇಟ್ಟು ಶ್ರದ್ಧೆಯಿಂದ ಭಜಿಸುತ್ತಿರುವನೋ ಅವನೇ ಹೆಚ್ಚಿನ ಯುಕ್ತನೆಂದು ನನ್ನ ಮತವು.

[ಭಾಷ್ಯ]

ರುದ್ರ, ಆದಿತ್ಯ- ಮುಂತಾದ (ದೇವತೆಗಳನ್ನು)§ ಧ್ಯಾನಮಾಡುವದರಲ್ಲಿ ನಿರತರಾದ ಯೋಗಿಗಳಲ್ಲೆಲ್ಲ **ವಾಸುದೇವ**ನಾದ|| ನನ್ನಲ್ಲಿಯೆ ಅಂತರಾತ್ಮವನ್ನು ಎಂದರೆ ಅಂತಃಕರಣವನ್ನು ನಿಲ್ಲಿಸಿ ಶ್ರದ್ಧೆಯಿಂದ ಕೂಡಿ ಯಾವಾತನು ನನ್ನನ್ನು ಭಜಿಸುತ್ತಿರುವನೋ ಎಂದರೆ ಸೇವಿಸುತ್ತಿರುವನೋ ಅವನೇ ಹೆಚ್ಚಿನ ಯುಕ್ತನು, (ಎಲ್ಲರಿಗಿಂತಲೂ) ಹೆಚ್ಚಿನ ಯೋಗಿಯು ಎಂದು ನನ್ನ ಅಭಿಪ್ರಾಯವು.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ— ಸಂವಾದೇ **ಧ್ಯಾನಯೋಗೋ** ನಾಮ ಷಷ್ಠೋಽಧ್ಯಾಯಃ

---

* ಉಪವಾಸವನವಾಸಗಳನ್ನು ಮಾಡಿ ಶರೀರವನ್ನು ದಂಡಿಸುವವರಿಗಿಂತಲೂ.

† ಯೋಗಿಯು ನನ್ನನ್ನು ಭಜಿಸುತ್ತಿರಬೇಕೆಂದು ಮುಂದಿನ ಶ್ಲೋಕದಲ್ಲಿಯೂ ಅದರಿಂದ ಜ್ಞಾನವಾಗುವದೆಂಬ ಮುಂದಿನ ಅಧ್ಯಾಯದಲ್ಲಿಯೂ, ಹೇಳಿರುವದರಿಂದ ಇಲ್ಲಿ ಜ್ಞಾನವೆಂದರೆ ಬರಿಯ ಶಾಸ್ತ್ರಾರ್ಥದ ತಿಳಿವು ಎಂದರ್ಥಮಾಡಬೇಕು.

‡ ಕರ್ಮಿಗಳಿಗಿಂತ ಯೋಗಿಯು ಹೆಚ್ಚು ಎಂದದ್ದರಿಂದ ಯೋಗಿಗೆ ಕರ್ಮವಿಲ್ಲವೆಂದಾಯಿತು.

§ ಯೋಗಿಯಾದವನು ತನ್ನ ಮನಸ್ಸನ್ನು ಯಾವದಾದರೊಂದರಲ್ಲಿ ಇಟ್ಟು ಧ್ಯಾನಮಾಡುವದರಿಂದಲೇ ಅವನ ಮನಸ್ಸು ಏಕಾಗ್ರವಾಗುವದು. ದೇವತೆಗಳನ್ನು ಧ್ಯಾನಮಾಡುವ ಯೋಗಿಗೂ ಈ ಫಲವು ಆಗಿಯೇ ಆಗುವದು (೪–೧೨) ; ಆದರೆ ದ್ವೈತಬುದ್ಧಿಯಿಂದ ಮಾಡುವ ಇಂಥ ಧ್ಯಾನವು ಕೀಳುಬಗೆಯದೆಂದು ತಿಳಿಸುವದಕ್ಕೆ ಇದನ್ನು ಶಾಸ್ತ್ರದಲ್ಲಿ ಅಲ್ಲಲ್ಲಿ ನಿಂದಿಸಿರುತ್ತದೆ.

|| ವಾಸುದೇವನೆಂದರೆ ಎಲ್ಲರಿಗೂ ಆತ್ಮನಾಗಿರುವ ಪರಮಾತ್ಮನು ; ಅದ್ವೈತಜ್ಞಾನಕ್ಕೆ ಆ ಪರಮಾತ್ಮಭಕ್ತಿಯೇ ಮುಖ್ಯಕಾರಣವು. ಇದು ಮುಂದಿನ ಅಧ್ಯಾಯದಲ್ಲಿ ಸ್ಪಷ್ಟವಾಗುವದು.

# ಆರನೆಯ ಅಧ್ಯಾಯದ ಸಾರ

೧—೩. ಶ್ರೀಕೃಷ್ಣನು ಹೇಳಿದ್ದೇನೆಂದರೆ: "ಎಲೈ ಅರ್ಜುನನೆ, ಕರ್ಮಫಲವನ್ನು ಆಶ್ರಯಿಸದೆ ನಿತ್ಯಕರ್ಮವನ್ನು ಮಾಡುತ್ತಿರುವವನೆ ಯೋಗಿಯು, ಅವನೆ ಸಂನ್ಯಾಸಿಯು ; ಗಾರ್ಹಪತ್ಯವೇ ಮುಂತಾದ ಅಗ್ನಿಗಳನ್ನೂ ತಪಸ್ಸು ದಾನ ಮುಂತಾದ ಕ್ರಿಯೆಗಳನ್ನೂ ಬಿಟ್ಟವನು ಮಾತ್ರ ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬೇಡ. ನಿಜವಾಗಿ ನೋಡಿದರೆ ಸಂಕಲ್ಪವನ್ನು ಬಿಡದೆ ಇರುವ ಯಾವನೂ ಯೋಗಿಯಾಗಲಾರನಾದ್ದರಿಂದ ಕರ್ಮಯೋಗವೂ ಸಂನ್ಯಾಸವೇ ಆಗಿರುವದು. ಧ್ಯಾನಯೋಗವನ್ನು ಹತ್ತಬೇಕೆನ್ನುವವನಿಗೆ ಈ ಕರ್ಮವೇ ಅದಕ್ಕೆ ಸಾಧನವಾಗಿರುವದು. ಆದರೆ ಅದನ್ನು ಏರಿದ ಮೇಲೆ ಸಂನ್ಯಾಸವು ಸಾಧನವಾಗಿರುವದು— ಇಷ್ಟೆ ಇವೆರಡಕ್ಕೂ ಇರುವ ತಾರತಮ್ಯವು.

೪—೯. "ಶಬ್ದಸ್ಪರ್ಶಾದಿವಿಷಯಗಳಲ್ಲಾಗಲಿ ನಿತ್ಯನೈಮಿತ್ತಿಕಾದಿಕರ್ಮಗಳಲ್ಲಾಗಲಿ ಮನಸ್ಸು ಹೋಗದಿರುವದೇ ಯೋಗಾರೂಢನಾದನೆಂಬುದಕ್ಕೆ ಗುರುತು. ಯೋಗಾರೂಢನಾದರೆ ಸಂಸಾರದ ಅನರ್ಥಗಳೆಲ್ಲವೂ ಬಿಡುಗಡೆಯಾಗುವವು ; ಆದ್ದರಿಂದ ತಿಳಿದವನು ತನ್ನನ್ನು ತಾನು ಹೇಗಾದರೂ ಉದ್ಧಾರಮಾಡಿಕೊಳ್ಳಬೇಕು, ತನಗೆ ತಾನೆ ಶತ್ರುವಾಗಿ ತನ್ನನ್ನು ತಾನೆ ಹಾಳುಮಾಡಿಕೊಳ್ಳಬಾರದು. ಯಾವನು ತನ್ನ ದೇಹವನ್ನೂ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು ಶಾಸ್ತ್ರಜ್ಞಾನವನ್ನೂ ಅದರಂತೆ ಅನುಭವವನ್ನೂ ಹೊಂದಿ ಏನನ್ನು ಕಂಡರೂ ಮನಸ್ಸಿನಲ್ಲಿ ಏರುಪೇರುಗಳಿಲ್ಲದೆ ಇರುವನೋ ಅವನೇ ಯೋಗಾರೂಢನು, ಯುಕ್ತನು. ಇಂಥವನು ಶತ್ರುಮಿತ್ರಉದಾಸೀನರೇ ಮುಂತಾದವರಲ್ಲಿ ಎಲ್ಲರಲ್ಲಿಯೂ ಪಕ್ಷಪಾತವಿಲ್ಲದೆ ಸಮಬುದ್ಧಿಯಿಂದಿರುವನು.

೧೦—೧೭. "ಇಂಥ ಉತ್ತಮಸ್ಥಿತಿಯನ್ನು ಹೊಂದುವದಕ್ಕೆ ರಹಸ್ಯದಲ್ಲಿ ಒಬ್ಬನೆ ಇದ್ದುಕೊಂಡು ಯೋಗವನ್ನು ಮಾಡುತ್ತಿರಬೇಕು. ಶುಚಿಯಾದ ಸ್ಥಲದಲ್ಲಿ ಸ್ಥಿರವಾದ ಆಸನವನ್ನು ಅಳವಡಿಸಿಕೊಂಡು ಶರೀರವನ್ನು ನೆಟ್ಟಗೆ ನಿಲ್ಲಿಸಿ ಕುಳಿತುಕೊಂಡು ಆತ್ಮನಲ್ಲಿಯೆ ಮನಸ್ಸನ್ನು ನಿಲ್ಲಿಸಬೇಕು. ಒಂದೇ ಸಮನೆ ಅಭ್ಯಾಸಮಾಡುವ ಯೋಗಿಗೆ ಯೋಗಫಲವಾದ ಶಾಂತಿಯುಂಟಾಗುವದು. ಆಹಾರವಿಹಾರಗಳಲ್ಲಿಯೂ, ನಡೆನುಡಿಗಳಲ್ಲಿಯೂ, ಎಚ್ಚರನಿದ್ರೆಗಳಲ್ಲಿಯೂ ಮಿತವಾಗಿರುವವನಿಗೆ ಮಾತ್ರ ಯೋಗವು ದಕ್ಕುವದು.

೧೮—೩೬. "ಯುಕ್ತನಾದವನಿಗೆ ಚಿತ್ತವು ಆತ್ಮನಲ್ಲಿಯೆ ನಿಂತುಬಿಟ್ಟಿರುವದು ; ಈ ಆತ್ಮದರ್ಶನದಿಂದ ಅವನ ಮನಸ್ಸು ತೃಪ್ತವಾಗಿರುವದು ; ಅತೀಂದ್ರಿಯವಾದ ಬ್ರಹ್ಮಾನಂದವನ್ನು ಕಂಡುಕೊಂಡಿರುವ ಆತನು ತತ್ತ್ವವನ್ನು ಬಿಟ್ಟು ಅತ್ತಿತ್ತ ಸರಿಯುವದಿಲ್ಲ ; ಇದಕ್ಕಿಂತ ಹೆಚ್ಚಿನ ಲಾಭವೊಂದಿರುವದೆಂದು ಆತನಿಗೆ ತೋರುವದಿಲ್ಲ ; ಹೊರಗಿನ ಯಾವ ದುಃಖವೂ ಅವ

ನನ್ನು ಅಲುಗಾಡಿಸದೆ ಇರುವುದು. ನಿಶ್ಚಯವಾದ ಮನಸ್ಸಿನಿಂದ ಬೇಸರವಿಲ್ಲದೆ ಪ್ರಯತ್ನ ಮಾಡುತ್ತಾ, ಸಕಲಕಾಮಗಳನ್ನೂ ತೊರೆದು ಆಯಾ ವಿಷಯಗಳಿಂದ ಇಂದ್ರಿಯಗಳನ್ನು ಬಿಗಿಹಿಡಿದು ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸುವಾತನು ಮಾತ್ರ 'ಯುಕ್ತ'ನೆಂದು ಹೇಳಿಸಿಕೊಳ್ಳುವ ಈ ಸ್ಥಿತಿಯನ್ನು ಪಡೆಯುವನು.

೨೭–೩೨. "ಯೋಗವು ಸಿದ್ಧಿಯಾದರೆ ಉತ್ತಮವಾದ ಸುಖವು ವಶವಾಗುವದು; ಬ್ರಹ್ಮವನ್ನು ಸೇರಿದಂತಾಗುವದು; 'ಬ್ರಹ್ಮಾದಿಸ್ತಂಬಪರ್ಯಂತವಾದ ಪ್ರಾಣಿಗಳಲ್ಲೆಲ್ಲ ಒಬ್ಬ ಪರಮಾತ್ಮನೇ ಇರುವನು, ಅವನೇ ನಾನು' ಎಂಬ ಉತ್ತಮವಾದ ಜ್ಞಾನವೂ ಬರುವದು; ವ್ಯವಹಾರದಲ್ಲಿ, ಸರ್ವಪ್ರಾಣಿಗಳಿಗೂ ಸುಖದುಃಖವು ತನ್ನಂತೆಯೆಂ ಎಂದು ಚೆನ್ನಾಗಿ ಮನದಟ್ಟಾಗಿ ಅವರಲ್ಲೆಲ್ಲ ಸಮಬುದ್ಧಿಯುಂಟಾಗುವದು.

೩೩–೩೬. "ಹೀಗೆ ಮನಸ್ಸನ್ನು ಬಿಗಿಹಿಡಿಯುವದು ಗಾಳಿಯನ್ನು ಹಿಡಿದು ನಿಲ್ಲಿಸುವದಕ್ಕಿಂತಲೂ ಕಷ್ಟವೆ ಸರಿ; ಆದರೆ ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಅದನ್ನು ವಶಪಡಿಸಿಕೊಳ್ಳಬಹುದು.

೩೭–೪೫. "ಎಲೈ ಅರ್ಜುನನೆ, ಯೋಗವನ್ನು ಹೀಗೆ ಸಾಧನೆಮಾಡುತ್ತಿರುವಾಗ ಅದರ ಸಿದ್ಧಿಯನ್ನು ಹೊಂದದೆ ಹೋಗಿ ಮರಣಕಾಲದಲ್ಲಿ ಮನಸ್ಸು ಏಕಾಗ್ರವಾಗಿಲ್ಲದೆ ಹೋದರೆ ಕರ್ಮಮಾರ್ಗವೂ ತಪ್ಪಿ ಯೋಗಮಾರ್ಗವೂ ತಪ್ಪಿ ಉಭಯಭ್ರಷ್ಟನಾಗುವನೇನೋ ಎಂದು ಯೋಚಿಸಬೇಡ. ಏಕೆಂದರೆ ಒಳ್ಳೆಯ ಕೆಲಸವನ್ನು ಮಾಡಿದವರಿಗೆ ಎಂದಿಗೂ ಕೆಟ್ಟ ಗತಿಯು ಆಗಲಾರದು. ಯೋಗವು ಪೂರ ಸಿದ್ಧಿಯಾಗದೆ ಮರಣವನ್ನು ಹೊಂದಿದಾತನು, ಪುಣ್ಯವಂತರ ಪಾಲಿಗೆ ಬರುವ ಉತ್ತಮಲೋಕಗಳನ್ನು ಪಡೆದು ಮತ್ತೆ ಉತ್ತಮರ ಕುಲದಲ್ಲಿ ಹುಟ್ಟುತ್ತಾನೆ. ಯೋಗಸಂಸ್ಕಾರವು ಬಲವಾಗಿದ್ದರಂತೂ ಯೋಗಿಗಳ ಕುಲದಲ್ಲಿಯೇ ಹುಟ್ಟಿ, ಮತ್ತೆ ಪೂರ್ವಸಂಸ್ಕಾರದಿಂದಲೇ ಯೋಗವನ್ನು ಅಭ್ಯಾಸಮಾಡಿ, ಯೋಗಮಾರ್ಗದಲ್ಲಿ ಬೇಗನೆ ಮುಂದುಮುಂದಕ್ಕೆ ಹೆಜ್ಜೆಯಿಡುತ್ತಾನೆ. "ತಾನೇ ಪ್ರಯತ್ನಪಟ್ಟು ಅಭ್ಯಾಸಮಾಡಿದರೆ ಅನೇಕ ಜನ್ಮಗಳಿಂದ ತಾನು ಮಾಡಿಕೊಂಡುಬಂದಿರುವ ಅಭ್ಯಾಸದಿಂದ ಸಕಲ ಪಾಪಗಳನ್ನೂ ತೊಳೆದುಕೊಂಡು, ಈಗ ಯೋಗಸಿದ್ಧಿಯನ್ನು ಪಡೆದು ಪರಗತಿಯನ್ನೈದುವನು.

೪೬–೪೭. "ಯೋಗಿಯಾದವನು ತಪಸ್ವಿಗಳಿಗಿಂತಲೂ ಹೆಚ್ಚಿನವನು, ಶಾಸ್ತ್ರಜ್ಞಾನವುಳ್ಳವರಿಗಿಂತಲೂ ಹೆಚ್ಚಿನವನು, ಕರ್ಮಿಗಳಿಗಿಂತಲೂ ಹೆಚ್ಚಿನವನು. ಆದ್ದರಿಂದ ಅರ್ಜುನನೆ, ನೀನು ಯೋಗಿಯಾಗುವದಕ್ಕೆ ಪ್ರಯತ್ನಿಸು. ಅದರಲ್ಲಿಯೂ ವಾಸುದೇವನಾದ ನನ್ನನ್ನೇ ಶ್ರದ್ಧೆಯಿಂದ ಭಜಿಸುವಂಥ ಯೋಗಿಯಾಗುವದಕ್ಕೆ ಯತ್ನಿಸು; ಏಕೆಂದರೆ ಯೋಗಿಗಳಲ್ಲೆಲ್ಲ ನನ್ನ ಭಕ್ತನೆ ಹೆಚ್ಚಿನ ಯೋಗಿಯು."

---

# ಏಳನೆಯ ಅಧ್ಯಾಯ

(ವಿಜ್ಞಾನಯೋಗ)

ಪರಮಾತ್ಮತತ್ತ್ವಜ್ಞಾನದ ಹೆಚ್ಚಿಗೆ

"ಯೋಗಿಗಳೆಲ್ಲರಲ್ಲಿ ನನ್ನಲ್ಲಿಯೇ ಅಂತರಾತ್ಮವನ್ನಿಟ್ಟು ಶ್ರದ್ಧೆಯಿಂದ ಯಾವಾತನು ಭಜಿಸುವನೋ ಅವನೇ ಅತ್ಯಂತ ಹೆಚ್ಚಿನ ಯೋಗಿಯೆಂದು ನನ್ನ ಮತವು" (೬-೪೭) ಎಂದು ಪ್ರಶ್ನೆಗೆ ಅವಕಾಶವನ್ನು (ಕಲ್ಪಿಸಿ)ಕೊಟ್ಟು, 'ನನ್ನ ತತ್ತ್ವವೆಂದರೆ ಇಂಥದ್ದು, ನನ್ನಲ್ಲಿಯೇ ಅಂತರಾತ್ಮವನ್ನಿಡುವದೆಂದರೆ ಹೀಗೆ'–ಎಂಬುದನ್ನು ತಿಳಿಸಬೇಕೆಂದು ಭಗವಂತನು ತಾನೇ ಹೇಳಿದನೇನೆಂದರೆ:–

**ಶ್ರೀ ಭಗವಾನುವಾಚ:—**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

೧. ಪಾರ್ಥನೆ, ನನ್ನಲ್ಲಿಯೇ ಆಸಕ್ತವಾದ ಮನಸ್ಸಿನಿಂದ ನನ್ನನ್ನೇ ಆಶ್ರಯಿಸಿದವನಾಗಿ ಯೋಗವನ್ನು ಮಾಡುತ್ತಾ, ಸಂಶಯವಿಲ್ಲದೆ ಸಮಗ್ರವಾಗಿ ನನ್ನನ್ನು ನೀನು ಹೇಗೆ ತಿಳಿದುಕೊಳ್ಳಬಹುದೋ ಅದನ್ನು ಕೇಳು.

[ಭಾಷ್ಯ]

ನನ್ನಲ್ಲಿ ಎಂದರೆ ಮುಂದೆ ಹೇಳುವ ವಿಶೇಷಣಗಳಿಂದ ಕೂಡಿದ* ಪರಮೇಶ್ವರನಲ್ಲಿಯೇ ಆಸಕ್ತಿಯುಳ್ಳ ಮನಸ್ಸಿನಿಂದ ಕೂಡಿದವನಾಗಿ, ಎಲೈ ಪಾರ್ಥನೆ, ಯೋಗವಮಾಡುತ್ತಾ ಮನಃಸಮಾಧಾನವನ್ನು ಮಾಡಿಕೊಳ್ಳುತ್ತಾ, ನನ್ನನ್ನೇ ಆಶ್ರಯಿಸಿ ಎಂದರೆ ಪರಮೇಶ್ವರನಾದ ನಾನೇ ಆಶ್ರಯವೆಂದು (ತಿಳಿದವನಾಗಿ)–ಯಾವನು ಯಾವದಾದರೂ ಪುರುಷಾರ್ಥವು ತನಗೆ ಆಗಬೇಕೆನ್ನುವನಾಗಿರುವನೋ ಅವನು ಅದಕ್ಕೆ ಬೇಕಾದ ಅಗ್ನಿಹೋತ್ರವೇ ಮುಂತಾದ ಕರ್ಮವನ್ನೋ, ತಪಸ್ಸನ್ನೋ, ದಾನವನ್ನೋ ಯಾವದಾದರೊಂದನ್ನು ಆಶ್ರಯವಾಗಿ† ಹೊಂದಿರುವನು ; ಆದರೆ ಈ ಯೋಗಿಯು ನನ್ನನ್ನೇ (ಅಂಥ) ಆಶ್ರಯವೆಂದು ಹೊಂದಿರುತ್ತಾನೆ, ಬೇರೆ ಯಾವ ಸಾಧನವನ್ನೂ ಬಿಲ್ಲದೆ ನನ್ನಲ್ಲಿಯೇ ಆಸಕ್ತಿಯಿಟ್ಟ ಮನ

* ಜಗತ್ತಿನ ಜನ್ಮಸ್ಥಿತಿಲಯಗಳಿಗೆ ಕಾರಣನಾಗಿ, ತ್ರಿಗುಣಾತೀತನಾಗಿ, ಜಗತ್ತಿಗೆಲ್ಲ ಆಧಾರನಾಗಿ, ಜಗತ್ತಿನಲ್ಲಿರುವ ಸಾರರೂಪವಾದ ವಸ್ತುಗಳೆಲ್ಲವೂ ತನ್ನ ವಿಭೂತಿಯೇ ಆಗಿ ಇರುವ.

† ೪–೨೦ ನೆಯ ಶ್ಲೋಕದ 'ನಿರಾಶ್ರಯಃ' ಎಂಬುದರ ಭಾಷ್ಯವನ್ನು ನೋಡಿ.

ಸ್ಸಿನವನಾಗಿರುತ್ತಾನೆ. (ಅರ್ಜುನನೆ,) ನೀನು ಇಂಥವನಾಗಿ– ಸಂಶಯವಿಲ್ಲದಂತೆ ನನ್ನನ್ನು ಸಮಗ್ರವಾಗಿ ಎಂದರೆ ವಿಭೂತಿ, ಬಲ, ಶಕ್ತಿ, ಐಶ್ವರ್ಯ– ಇವೇ ಮುಂತಾದ ಗುಣಗಳಿಂದ ಕೂಡಿದ ನನ್ನನ್ನು ಸಂಪೂರ್ಣವಾಗಿ, ಹೇಗೆ ಎಂದರೆ ಯಾವ ಪ್ರಕಾರದಿಂದ 'ಭಗವಂತನು ಹೀಗೆಯೇ (ಇರುವನು)' ಎಂದು ಸಂದೇಹ ವಿಲ್ಲದೆ ತಿಳಿದುಕೊಳ್ಳುವೆಯೋ ಅದನ್ನು ನಾನು ಹೇಳುವೆನು ಕೇಳು.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥**

೨. ವಿಜ್ಞಾನದಿಂದೊಡಗೂಡಿದ ಜ್ಞಾನವನ್ನು ನಿನಗೆ ನಾನು ಸ್ವಲ್ಪವೂ ಉಳಿಯದಂತೆ ಹೇಳುವೆನು ; ಅದನ್ನು ತಿಳಿದರೆ ಇಲ್ಲಿ ಮತ್ತೆ ತಿಳಿದುಕೊಳ್ಳಬೇಕಾದದ್ದು ಇರುವದಿಲ್ಲ.

[ಭಾಷ್ಯ]

ಮತ್ತು ಆ ನನ್ನ ವಿಷಯವಾದ ಜ್ಞಾನವನ್ನು ನಿನಗೆ ವಿಜ್ಞಾನದೊಡನೆ, ಎಂದರೆ ತನ್ನ ಅನುಭವದೊಡನೆ* ಸ್ವಲ್ಪವೂ ಉಳಿಯದಂತೆ [ಸಂಪೂರ್ಣವಾಗಿ]† ಹೇಳುವೆನು, ತಿಳಿಸುವೆನು. ಕೇಳುವ (ಅರ್ಜುನನು) ತನ್ನ ಕಡೆಗೆ ತಿರುಗಿ (ಕೇಳುವಂತೆ) ಮಾಡುವದಕ್ಕೋಸ್ಕರ ತಾನು ಹೇಳಬೇಕೆಂದಿರುವ ಆ ಜ್ಞಾನವನ್ನು ಹೊಗಳುತ್ತಾನೆ: ಯಾವ ಅದನ್ನು ತಿಳಿದರೆ ಎಂದರೆ ಆ ಜ್ಞಾನವನ್ನು ತಿಳಿದುಕೊಂಡರೆ ಇಲ್ಲಿ ಮತ್ತೆ ತಿಳಿದುಕೊಳ್ಳಬೇಕಾದ ಪುರುಷಾರ್ಥಸಾಧನವು ಉಳಿಯುವದಿಲ್ಲ, ಎಂದರೆ ನನ್ನ ತತ್ತ್ವವನ್ನು ಯಾವನು ತಿಳಿಯುವನೊ ಅವನು ಎಲ್ಲವನ್ನೂ‡ ತಿಳಿದವನಾಗುವನು ಎಂದರ್ಥ.

ಹೀಗೆ ಅಸಾಧಾರಣಫಲವುಳ್ಳದ್ದಾದ್ದರಿಂದ§ (ಈ) ಜ್ಞಾನವು ದೊರೆಯುವದು ಕಷ್ಟ; ಹೇಗೆಂದರೆ, ಹೇಳುತ್ತೇನೆ :—

* ಅಪರೋಕ್ಷಜ್ಞಾನದಿಂದೊಡಗೂಡಿದ ನನ್ನ ವಿಷಯಕವಾದ ಜ್ಞಾನವನ್ನು ಹೇಳುತ್ತೇನೆ, ಎಂದರೆ ನನ್ನನ್ನು ತಿಳಿದು ಸಾಕ್ಷಾದನುಭವಕ್ಕೆ ಗೋಚರಗೊಳಿಸಿಕೊಳ್ಳುವ ಬಗೆಯನ್ನು ಹೇಳುತ್ತೇನೆ ಎಂದರ್ಥ.

† 'ಕಾರ್ತ್ಸ್ನ್ಯೇನ' ಎಂಬುದು ಮ॥ ಪಾಠದಲ್ಲಿಲ್ಲ ; ಇಲ್ಲದಿದ್ದರೂ ಚಿಂತೆಯಿಲ್ಲ.

‡ ಛಾ.೬–೧–೩; ಮುಂ. ೧–೧–೩.

§ 'ಅತೋ ವಿಶಿಷ್ಟಫಲತ್ವಾತ್ ದುರ್ಲಭಂ ಜ್ಞಾನಂ' ಎಂಬ ಮಾತು ೩ನೆಯ ಶ್ಲೋಕ ಭಾಷ್ಯದ ಅವತರಣಿಕೆಯೆಂದು ಭಾವಿಸುವದೇ ಯುಕ್ತವೆಂದು ತೋರುವದು.

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

೩. ಸಾವಿರ ಮನುಷ್ಯರೊಳಗೆ ಯಾವನೋ ಒಬ್ಬನು ಸಿದ್ಧಿಗಾಗಿ ಪ್ರಯತ್ನಮಾಡುವನು ; ಯತ್ನಮಾಡುವ ಸಿದ್ಧರಲ್ಲಿಯೂ ಯಾವನೋ ಒಬ್ಬನು ನನ್ನನ್ನು ಸರಿಯಾಗಿ ತಿಳಿದುಕೊಳ್ಳುವನು.

[ಭಾಷ್ಯ]

ಸಾವಿರ ಮನುಷ್ಯರೊಳಗೆ, ಎಂದರೆ ಅನೇಕರೊಳಗೆ ಯಾವನೋ ಒಬ್ಬನು ಸಿದ್ಧಿಗಾಗಿ ಎಂದರೆ (ತನಗೆ) ಸಿದ್ಧಿಯಾಗಬೇಕೆಂದು ಯತ್ನಮಾಡುತ್ತಾನೆ. ಪ್ರಯತ್ನವನ್ನು ಮಾಡುತ್ತಾನೆ. ಹಾಗೆ ಪ್ರಯತ್ನಮಾಡುವ ಸಿದ್ಧರೊಳಗೂ- ಯಾರು ಮೋಕ್ಷಕ್ಕೆಂದು ಪ್ರಯತ್ನಮಾಡುವರೊ ಅವರು ಸಿದ್ಧರೇ* ಅಲ್ಲವೆ ? ಆ (ಸಿದ್ಧರೊಳಗೂ)- ಯಾವನೋ ಒಬ್ಬನು ನನ್ನನ್ನು ಸರಿಯಾಗಿ ಇದ್ದದ್ದು ಇದ್ದ ಹಾಗೆ ತಿಳಿದುಕೊಳ್ಳುವನು.

ಭಗವಂತನ ತತ್ತ್ವ.

(ಜ್ಞಾನದಲ್ಲಿ) ರುಚಿಹುಟ್ಟುವಂತೆ (ಅದನ್ನು ಹೊಗಳುವದರ) ಮೂಲಕ ಕೇಳುವ (ಅರ್ಜುನನನ್ನು) ತನ್ನ ಕಡೆಗೆ ಎಳೆದುಕೊಂಡು (ಈ ಮಾತನ್ನು) ಹೇಳುತ್ತಾನೆ:—

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

೪. ಭೂಮಿ, ಅಪ್ಪು, ಅನಲ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ- ಹೀಗೆ ನನ್ನ ಪ್ರಕೃತಿಯು ಎಂಟು ಬಗೆಯಾಗಿ ಬೇರೆಬೇರೆಯಾಗಿ ರುವದು.

[ಭಾಷ್ಯ]

ಭೂಮಿ ಎಂದರೆ **ಪೃಥಿವೀತನ್ಮಾತ್ರೆಯು,**† ಸ್ಥೂಲಭೂತವಲ್ಲ ; "ಪ್ರಕೃತಿಯು ಎಂಟು ಬಗೆಯಾಗಿರುವದು" (ಎಂದು ಪ್ರಕೃತಿಯ ಎಂಟು ಭಾಗವನ್ನು

---

* ಜ್ಞಾನನಿಷ್ಠೆಗೆ ತಕ್ಕ ಯೋಗ್ಯತೆಯೆಂಬ ಸಿದ್ಧಿಯನ್ನು ಪಡೆದವರೇ ಮೋಕ್ಷಕ್ಕೆ ಪ್ರಯತ್ನ ಮಾಡುವವರು ; ಕರ್ಮಯೋಗಧ್ಯಾನಯೋಗಗಳಿಂದ ಆ ಸಿದ್ಧಿಯು ಬರುವದು. ೧೮-೫೦ನೆಯ ಶ್ಲೋಕದ ಅವತರಣಿಕೆಯನ್ನೂ ಅದರ ಭಾಷ್ಯವನ್ನೂ ನೋಡಿ.

† ತನ್ಮಾತ್ರವೆಂದರೆ ಅದು ಮಾತ್ರವೆಂದರ್ಥ. ಪಂಚಭೂತಗಳು ತನ್ಮಾತ್ರೆಗಳೆಂದೂ ಮಹಾ ಭೂತಗಳೆಂದೂ ಎರಡು ವಿಧ. ತನ್ಮಾತ್ರೆಗಳೆಂದರೆ ಸೂಕ್ಷ್ಮಭೂತಗಳು ; ಇವುಗಳಲ್ಲಿ ಮತ್ತೊಂದು

ಇಲ್ಲಿ) ಹೇಳಿರುತ್ತದೆ. * ಇದರಂತೆ ಅಪ್ಪು ಮುಂತಾದ ತನ್ಮಾತ್ರೆಗಳನ್ನೆ (ಇಲ್ಲಿ) ಹೇಳಿದೆ. ಅಪ್ಪು, ತೇಜಸ್ಸು, ವಾಯು, ಆಕಾಶ- (ಇವು **ಪಂಚತನ್ಮಾತ್ರೆಗಳು**); ಮನವೆಂದರೆ ಇಲ್ಲಿ ಮನಸ್ಸಿಗೆ ಕಾರಣವಾದ '**ಅಹಂಕಾರ**'ವನ್ನು† ತೆಗೆದುಕೊಳ್ಳಬೇಕು, ಬುದ್ಧಿಯೆಂಬ ಮಾತಿನಿಂದ ಅಹಂಕಾರಕ್ಕೆ ಕಾರಣವಾದ '**ಮಹತ್ತತ್ತ್ವ**'ವನ್ನು ತೆಗೆದುಕೊಳ್ಳಬೇಕು, 'ಅಹಂಕಾರ'ವೆಂದರೆ ಅವಿದ್ಯೆಯಿಂದ‡ ಕೂಡಿದ **ಅವ್ಯಕ್ತವು**. ವಿಷವು ಬೆರೆದಿರುವ ಅನ್ನವನ್ನು ಹೇಗೆ ವಿಷವೆನ್ನುವರೋ, ಇದರಂತೆ ಅಹಂಕಾರವಾಸನೆಯಿಂದ ಕೂಡಿದ ಅವ್ಯಕ್ತವೆಂಬ ಮೂಲಕಾರಣವನ್ನು ಅಹಂಕಾರನೆಂದು ಕರೆದಿದೆ; ಏಕೆಂದರೆ ಅಹಂಕಾರವೇ ಪ್ರವರ್ತಕವಾಗಿರುವದು. ಲೋಕದಲ್ಲಿ ಎಲ್ಲವನ್ನೂ ಮುಂದುವರಿಯುವಂತೆ ಮಾಡುವದು ಅಹಂಕಾರವೇ ಅಲ್ಲವೆ ?— ಹೀಗೆ ಇಲ್ಲಿ ಹೇಳಿರುವಂತೆ ನನ್ನ **ಪ್ರಕೃತಿಯು**, ಎಂದರೆ ಈಶ್ವರನಾದ ನನ್ನ **ಮಾಯೆಯು**§ ಎಂಟು ಬಗೆಯಾಗಿ ಬೇರ್ಪಟ್ಟಿರುವದು (ಎಂಟು) ಭೇದಗಳಾಗಿರುವದು.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥೫॥**

೨೯ ಇದು ಕೀಳು (ಪ್ರಕೃತಿಯು). ಇದಕ್ಕಿಂತ ಹೆಚ್ಚಿನದಾಗಿರುವ ಬೇರೊಂದು ನನ್ನ ಪ್ರಕೃತಿಯನ್ನು (ಹೇಳುವೆನು) ತಿಳಿದುಕೊ; ಎಲೈ ಮಹಾಬಾಹುವೆ, (ಅದು) ಜೀವನಾಗಿದ್ದುಕೊಂಡಿರುವದು, ಅದರಿಂದ ಈ ಜಗತ್ತು ಧರಿಸಲ್ಪಟ್ಟಿರುವದು.

---

ಭೂತದ ಅಂಶವೇನೂ ಇರುವದಿಲ್ಲ. ಮಹಾಭೂತಗಳಲ್ಲಿ ಒಂದೊಂದರಲ್ಲಿ ಐದು ಭೂತಗಳ ಅಂಶಗಳೂ ಇರುವವು. ನಮ್ಮ "ತತ್ತ್ವಪ್ರದೀಪ" ವೆಂಬ ಗ್ರಂಥವನ್ನು ನೋಡಿ.

* 'ಪ್ರಕೃತಿಯು' ಎಂಟು ಬಗೆಯಾಗಿರುವದೆಂದು ಹೇಳಿದ್ದರಿಂದ 'ವಿಕೃತಿ'ಯಾದ ಮಹಾಭೂತವನ್ನು ತೆಗೆದುಕೊಳ್ಳಬಾರದೆಂದು ಸೂಚಿಸಿದಂತೆ ಆಯಿತೆಂದು ಭಾವ.

† ಈ ಶ್ಲೋಕದಲ್ಲಿ 'ಮನಸ್ಸು' ಮುಂತಾದವುಗಳ ಅರ್ಥವನ್ನು ಆಚಾರ್ಯರು ಲಕ್ಷಣೆಯಿಂದ ಮಾಡಿ, ಸಾಂಖ್ಯರ ಅಷ್ಟವಿಧಪ್ರಕೃತಿಗಳೆಂದು ಇಲ್ಲಿ ವಿವರಿಸಿರುತ್ತಾರೆ; ಈ ಶ್ಲೋಕದ ಅರ್ಥವನ್ನು ಕುರಿತು ಗೀತಾರ್ಥಸರ್ವಸ್ವದ ಜ್ಞಾನಯೋಗದಲ್ಲಿ ಚರ್ಚಿಸಿದೆ. ವ್ಯಾಖ್ಯಾನಕಾರರ ಬೇರೆ ಬೇರೆ ಅಭಿಪ್ರಾಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

‡ ಅವಿದ್ಯೆಯೆಂದರೆ ತಪ್ಪುತಿಳಿವಳಿಕೆಯಿಂದ ಉಂಟಾಗಿರುವ ಅಹಂಕಾರವಾಸನೆ; ಅವ್ಯಕ್ತದಲ್ಲಿ ಇದೂ ಅಡಗಿರುವದು.

§ ಸಾಂಖ್ಯರು ಹೇಳುವಂತೆ ಸ್ವತಂತ್ರವಾದ ಪ್ರಕೃತಿಯಲ್ಲ; ಪರಮೇಶ್ವರನ ಅಧೀನವಾಗಿರುವ ಅವ್ಯಾಕೃತವೆಂಬ ಹೆಸರಿನ ಜಗತ್ತಿನ ಸೂಕ್ಷ್ಮಸ್ಥಿತಿ; ಬ್ರ. ಸೂ. ೧-೪-೩ ನ್ನು ನೋಡಿ.

[ಭಾಷ್ಯ]

ಇದು ಅಪರ(ಪ್ರಕೃತಿ), ಎಂದರೆ ಹೆಚ್ಚಿನದಲ್ಲ, ನಿಕೃಷ್ಟವಾದದ್ದು, ಅಶುದ್ಧವಾದದ್ದು, ಅನರ್ಥವನ್ನುಂಟುಮಾಡುವಂಥದ್ದು, ಸಂಸಾರಬಂಧನವನ್ನುಂಟುಮಾಡುವದು. ಈ ನಾನು ಹೇಳಿದ ಇದಕ್ಕಿಂತ ಬೇರೆಯಾದ ವಿರುದ್ಧವಾದ ಹೆಚ್ಚಿನ ಉತ್ಕೃಷ್ಟವಾದ ಪ್ರಕೃತಿಯು ಜೀವರೂಪವಾಗಿ ಎಂದರೆ **ಕ್ಷೇತ್ರಜ್ಞ*** ಸ್ವರೂಪವಾಗಿ ಪ್ರಾಣವನ್ನು ಧಾರಣಮಾಡುವದಕ್ಕೆ † ಕಾರಣವಾಗಿರುವದೆಂದು ತಿಳಿ; (ತನ್ನ) ಒಳಹೊಕ್ಕಿರುವ ‡ ಆ ಪ್ರಕೃತಿಯಿಂದ ಈ ಜಗತ್ತು ಧರಿಸಲ್ಪಟ್ಟಿರುವದು. §

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ          ॥ ೬ ॥**

೬. ಸರ್ವಭೂತಗಳೂ ಇವುಗಳಿಂದ ಉಂಟಾಗುವವೆಂದು ನಿಶ್ಚಯಿಸು. ನಾನು (ಈ) ಜಗತ್ತಿಗೆಲ್ಲ ಪ್ರಭವನೂ ಪ್ರಲಯನೂ ಆಗಿರುವೆನು.

[ಭಾಷ್ಯ]

ಈ ಪರ ಮತ್ತು ಅಪರ, ಕ್ಷೇತ್ರಕ್ಷೇತ್ರಜ್ಞ- ಎಂಬ ಪ್ರಕೃತಿಗಳು ಭೂತಗಳಿಗೆ ಕಾರಣವಾಗಿರುವದರಿಂದ, ಸಕಲ ಭೂತಗಳೂ ಇವುಗಳಿಂದ ಆಗುವವೆಂದು ನಿಶ್ಚಯಿಸಿ ತಿಳಿದುಕೊ. ಸಮಸ್ತಭೂತಗಳಿಗೂ ನನ್ನ ಈ ಎರಡು ಪ್ರಕೃತಿಗಳೇ ಕಾರಣವಾಗಿರುವದರಿಂದ, ನಾನು (ಈ) ಇಡಿಯ ಜಗತ್ತಿಗೆಲ್ಲ 'ಪ್ರಭವನು' ಹುಟ್ಟು, ಮತ್ತು 'ಪ್ರಲಯನು' ವಿನಾಶವು; (ಈ) ಎರಡು ಪ್ರಕೃತಿಗಳ ಮೂಲಕ|| ಸರ್ವಜ್ಞನಾದ** ಈಶ್ವರನಾದ ನಾನು ಜಗತ್ತಿಗೆ ಕಾರಣನು. ††

---

* ೧೩-೨ ನೆಯ ಶ್ಲೋಕವನ್ನೂ ಆ ಅಧ್ಯಾಯದ ಭಾಷ್ಯದ ಅವತರಣಿಕೆಯನ್ನೂ ನೋಡಿ.

† ಜೀವ ಪ್ರಾಣಧಾರಣೇ ಎಂಬ ಧಾತುವಿನಿಂದ ಜೀವಶಬ್ದವು ಹುಟ್ಟಿದೆ. ‡ ಛಾಂ. ೬-೩-೨.

§ ಜ್ಞಾನಕ್ಕೆ ವಿಷಯವಾಗಿಯೇ ಈ ಜಗತ್ತು ಇರುವದು.

|| ನನ್ನ ಪ್ರಕೃತಿಗಳು ನನಗಿಂತ ಬೇರೆಯಾಗಿರುವದಿಲ್ಲ; ನನ್ನಲ್ಲಿ ಚೇತನಕ್ಕೆ ಕಾರಣವಾಗಿರುವ ಶಕ್ತಿಯೂ ಅಚೇತನಕ್ಕೆ ಕಾರಣವಾಗಿರುವ ಶಕ್ತಿಯೂ ಎರಡೂ ಇವೆ. ಆದ್ದರಿಂದ ನಾನೇ ಚೇತನಾಚೇತನರೂಪವಾದ ಜಗತ್ತಿಗೆಲ್ಲ ಕಾರಣನು.

** ಸಮಸ್ತಜಗತ್ತಿಗೂ ಕಾರಣನಾಗಿರುವವನು ಅದರ ಸ್ವರೂಪವನ್ನೆಲ್ಲ ಬಲ್ಲ ಚೇತನನಾಗಿರಬೇಕು; ಚೇತನರಿಗೆ ಕಾರಣವಾಗಿರುವದು ತಾನೇ ಚೇತನವಾಗಿರಬೇಕು, ಎಂದರೆ ಜ್ಞಾನಸ್ವರೂಪವಾಗಿರಬೇಕು. ಆದ್ದರಿಂದ ಈಶ್ವರನಲ್ಲಿ ಸರ್ವಜ್ಞತ್ವವು ಸಿದ್ಧವಾಯಿತು.

†† 'ಪ್ರಕೃತಿಗಳ ಮೂಲಕ ಕಾರಣನು' ಎಂದದ್ದರಿಂದ ಸ್ವತಃ ಕಾರ್ಯಕಾರಣರೂಪವಿಲ್ಲದವನು ಎಂದೂ ಆಗುವದು; ಈ ವಿಷಯವನ್ನು ಗೀತಾರ್ಥಸರ್ವಸ್ವದ ಜ್ಞಾನಯೋಗದಲ್ಲಿ ಚರ್ಚಿಸಿರುತ್ತದೆ.

ಹೀಗಿರುವ ಕಾರಣ,

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

೭. ಧನಂಜಯನೆ, ನನಗಿಂತ ಹೆಚ್ಚಿನ ಮತ್ತೊಂದು ಯಾವದೂ ಇರುವದಿಲ್ಲ ; ಇದೆಲ್ಲವೂ ದಾರದಲ್ಲಿ ಮಣಿಗಳ ಗುಂಪುಗಳಂತೆ ನನ್ನಲ್ಲಿ ಪೋಣಿಸಲ್ಪಟ್ಟಿರುವದು.

[ಭಾಷ್ಯ]

ಪರಮೇಶ್ವರನಾದ ನನಗಿಂತ ಹೆಚ್ಚಿನ* ಬೇರೊಂದು ಕಾರಣವು ಇರುವದಿಲ್ಲ ನಾನೇ ಜಗತ್ತಿಗೆ ಕಾರಣನು ಎಂದರ್ಥ. ಎಲೈ ಧನಂಜಯನೆ, ಹೀಗಿರುವದರಿಂದ ಪರಮೇಶ್ವರನಾದ ನನ್ನಲ್ಲಿ ಈ ಜಗತ್ತೆಲ್ಲವೂ ಪೋಣಿಸಲ್ಪಟ್ಟಿರುವದು, ಹೆಣೆಯಲ್ಪಟ್ಟಿರುವದು, ನನ್ನಿಂದ ಅನುಸರಿಸಲ್ಪಟ್ಟು † ಪೋಣಿಕೆಯಾಗಿರುವದು ಎಂದರ್ಥ. ಉದ್ದನೆಯ ನೂಲುಗಳಲ್ಲಿ ಬಟ್ಟೆಯಂತೆಯೂ ‡ ದಾರದಲ್ಲಿ ರತ್ನಗಳ ಗುಂಪಿನಂತೆಯೂ (ಪೋಣಿಸಲ್ಪಟ್ಟಿರುತ್ತದೆ) ಎಂದರ್ಥ.

## ಭಗವಂತನ ವಿಭೂತಿಗಳು.

**ರಸೋಽಹಮಪ್ಸು ಕೌನ್ತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

೮. ನಾನು ಅಪ್ಪಿನಲ್ಲಿ ರಸವಾಗಿರುವೆನು, ಎಲೈ ಕೌಂತೇಯನೆ, ಚಂದ್ರಸೂರ್ಯರಲ್ಲಿ ನಾನು ಪ್ರಭೆಯಾಗಿರುವೆನು. ಸರ್ವವೇದಗಳಲ್ಲಿ ನಾನು ಪ್ರಣವವಾಗಿರುವೆನು, ಆಕಾಶದಲ್ಲಿ ಶಬ್ದವಾಗಿರುವೆನು, ಜನರಲ್ಲಿ ಪೌರುಷವಾಗಿರುವೆನು.

---

* ಎಂಟು ರೂಪವಾಗಿರುವ ಜಡಪ್ರಕೃತಿಯೂ ಜೀವರೂಪವಾಗಿರುವ ಚೇತನಪ್ರಕೃತಿಯೂ ನಾನೇ, ಆದ್ದರಿಂದ ನಾನೇ ಜಗತ್ಕಾರಣನೆಂದು ಹೇಳಿದೆನು. ಆದರೂ ಪೃಥ್ವಿಗೆ ಅಪ್ಪು, ಅಪ್ಪಿಗೆ ತೇಜಸ್ಸು, ಮುಂತಾಗಿ ಹೆಚ್ಚು ಹೆಚ್ಚು ಸೂಕ್ಷ್ಮದ ಕಾರಣವು ಇರುವಂತೆ ನನಗಿಂತ ಹೆಚ್ಚಿನ ಕಾರಣ ವೊಂದು ಇದೆ ಎಂದು ತಿಳಿಯಬೇಡ-- ಎಂದು ಭಾವ ; ಬ್ರ. ಸೂ. ೩-೨-೩೧, ೨-೩-೯.

† ಕಾರ್ಯದಲ್ಲಿ ಕಾರಣದ ಧರ್ಮವು ಹಿಂಬಾಲಿಸಿಕೊಂಡು ಬಂದಿರುವದು.

‡ ಸೂತ್ರ, ಮಣಿ-ಎಂಬ ದೃಷ್ಟಾಂತದಿಂದ ಜಗತ್ತು ಬೇರೆ, ಬ್ರಹ್ಮವು ಬೇರೆ ಎಂಬ ಭ್ರಾಂತಿಯಾಗುವ ಸಂಭವವುಂಟು ; ಕಾರ್ಯಕಾರಣಗಳ ಸಂಬಂಧವೇ ಪ್ರಕೃತವಾದ್ದರಿಂದ ನೂಲುಬಟ್ಟೆಗಳ ದೃಷ್ಟಾಂತವೇ ಹೆಚ್ಚು ಒಪ್ಪುವದೆಂದು ಭಾವ. ಸೂತ್ರವು ಇದ್ದ ಹೊರತು, ಮಣಿಗಳು ಹೊಂದಿಸಲ್ಲದಂತೆ, ಕಾರಣವಾದ ಬ್ರಹ್ಮವಿದ್ದ ಹೊರತು ಕಾರ್ಯವಾದ ಜಗತ್ತು ನಿಲ್ಲಲಾರದೆಂಬುದೇ ದೃಷ್ಟಾಂತದಲ್ಲಿ ತೆಗೆದುಕೊಳ್ಳಬೇಕಾದ ಅಂಶವು.

[ಭಾಷ್ಯ]

ಅಪ್ಪಿನ ಸಾರವಿದೆಯಲ್ಲ, ಅದೇ ರಸವು (ಸವಿಯು); ಆ ರಸರೂಪನಾಗಿರುವ ನನ್ನಲ್ಲಿ ಅಪ್ಪು ಪೋಣಿಸಲ್ಪಟ್ಟಿರುವದು ಎಂದರ್ಥ; ಹೀಗೆಯೇ (ಎಂಕ್ಕ) ಎಲ್ಲಾ ಕಡೆಯಲ್ಲಿಯೂ (ತಿಳಿಯಬೇಕು). ನಾನು ಹೇಗೆ ಅಪ್ಪಿನಲ್ಲಿ ಸವಿಯಾಗಿರುವೆನೋ, ಅದರಂತೆ ಚಂದ್ರಸೂರ್ಯರಲ್ಲಿ ಬೆಳಕಾಗಿರುವೆನು. ಸರ್ವವೇದಗಳಲ್ಲಿಯೂ ಪ್ರಣವ ಎಂದರೆ ಓಂಕಾರವಾಗಿರುವೆನು; ಪ್ರಣವನಾಗಿರುವ ಆ ನನ್ನಲ್ಲಿ ವೇದಗಳೆಲ್ಲವೂ ಪೋಣಿಕೆಯಾಗಿರುವವು. ಹೀಗೆಯೇ ಆಕಾಶದಲ್ಲಿ ಸಾರವಾಗಿರುವ ಶಬ್ದವಾಗಿರುವೆನು; ಆ (ಶಬ್ದರೂಪನಾದ) ನನ್ನಲ್ಲಿ ಆಕಾಶವು ಪೋಣಿಕೆಯಾಗಿರುವದು. ಹೀಗೆಯೇ ಜನರಲ್ಲಿ ಪೌರುಷವು, ಎಂದರೆ ಪುರುಷನ ಸ್ವರೂಪವು; ಇದು ಇರುವದರಿಂದ ಪುರುಷನೆಂಬ ಬುದ್ಧಿಯುಂಟಾಗುವದು; ಆ (ಪೌರುಷರೂಪನಾಗಿರುವ) ನನ್ನಲ್ಲಿ ಪುರುಷರು ಪೋಣಿಕೆಯಾಗಿರುವರು.

**ಪುಣ್ಯೋ ಗನ್ಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

೯. ಪೃಥಿವಿಯಲ್ಲಿ ಪುಣ್ಯಗಂಧವೂ ಅಗ್ನಿಯಲ್ಲಿ ತೇಜಸ್ಸೂ ಆಗಿರುವೆನು; ಸರ್ವಭೂತಗಳಲ್ಲಿಯೂ ಜೀವನವಾಗಿಯೂ ತಪಸ್ವಿಗಳಲ್ಲಿ ತಪಸ್ಸೂ ಆಗಿರುವೆನು.

[ಭಾಷ್ಯ]

ಪೃಥಿವಿಯಲ್ಲಿ ಪುಣ್ಯವಾದ ಗಂಧವು ಎಂದರೆ ಸುವಾಸನೆಯು ನಾನು; ಆ ಗಂಧರೂಪನಾದ ನನ್ನಲ್ಲಿ ಪೃಥ್ವಿಯು ಪೋಣಿಕೆಯಾಗಿರುವದು– ಪೃಥ್ವಿಯಲ್ಲಿ ಒಳ್ಳೆಯ ಗಂಧವೇ ಸ್ವಭಾವದಿಂದ ಇರುವದೆಂದು ಹೇಳಿದ್ದು, ಅಪ್ಪು ಮುಂತಾದವುಗಳಲ್ಲಿ ಸವಿಯೇ ಮುಂತಾದದ್ದು ಒಳ್ಳೆಯದಾಗಿಯೇ ಇರುವದೆಂದು ಉಪಲಕ್ಷಣಕ್ಕಾಗಿ; ಗಂಧವೇಮುಂತಾದವು ಕೆಟ್ಟವಾಗಿರುವವೆಂಬದಾದರೋ ಅವಿದ್ಯೆ, ಅಧರ್ಮ- ಮುಂತಾದವುಗಳ ಕಾರಣದಿಂದ ಆಯಾ ಭೂತಗಳ ಸಂಬಂಧದಿಂದ ಸಂಸಾರಿಗಳಿಗೆ ಉಂಟಾಗುತ್ತಿರುವದು. ಅಗ್ನಿಯಲ್ಲಿ ತೇಜಸ್ಸು, ಎಂದರೆ ಬೆಳಕೂ ಆಗಿರುವೆನು. ಹಾಗೆಯೆ ಸಕಲ ಭೂತಗಳಲ್ಲಿಯೂ ಜೀವನವೂ (ಆಗಿರುವೆನು); ಏತರಿಂದ ಸರ್ವಪ್ರಾಣಿಗಳೂ ಬದುಕಿರುವವೊ ಅದು ಜೀವನವು. ತಪಸ್ವಿಗಳಲ್ಲಿ ತಪಸ್ಸೂ ಆಗಿರುವೆನು; ತಪಸ್ಸಾಗಿರುವ ಆ ನನ್ನಲ್ಲಿ ತಪಸ್ವಿಗಳು ಪೋಣಿಕೆಯಾಗಿರುವರು.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥**

೧೦. ಪಾರ್ಥನೆ, ಸನಾತನವಾಗಿರುವ ಸರ್ವಭೂತಗಳ ಬೀಜವು ನಾನೆಂದು ತಿಳಿ; ಬುದ್ಧಿವಂತರ ಬುದ್ಧಿಯಾಗಿರುವೆನು, ತೇಜಸ್ವಿಗಳ ತೇಜಸ್ಸು ನಾನು.

[ ಭಾಷ್ಯ ]

ಸಮಸ್ತ ಪ್ರಾಣಿಗಳಿಗೂ, ಎಲೈ ಪಾರ್ಥನೆ. ಹುಟ್ಟಿ ಬೆಳೆಯುವದಕ್ಕೆ ಕಾರಣವಾಗಿರುವ ಸನಾತನವಾದ ಶಾಶ್ವತವಾದ ಬೀಜವು ನಾನೆಂದು ತಿಳಿ; ಮತ್ತು ಬುದ್ಧಿವಂತರ ವಿವೇಕಶಕ್ತಿಯುಳ್ಳವರ ಬುದ್ಧಿಯು ಎಂದರೆ ಅಂತಃಕರಣದಲ್ಲಿರುವ ವಿವೇಕಶಕ್ತಿಯೂ ಆಗಿರುವೆನು, ತೇಜಸ್ಸು ಎಂದರೆ ಧೈರ್ಯವು, ಅದುಳ್ಳ ತೇಜಸ್ವಿಗಳಲ್ಲಿ ನಾನು (ತೇಜಸ್ಸು) ಆಗಿರುವೆನು.

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**

೧೧ ನಾನು ಬಲವಂತರಲ್ಲಿ ಕಾಮರಾಗಗಳಿಲ್ಲದ ಬಲವಾಗಿರುವೆನು. ಎಲೈ ಭರತರ್ಷಭನೆ, ಭೂತಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮವಾಗಿರುವೆನು.

[ ಭಾಷ್ಯ ]

ಬಲವೆಂದರೆ ಸಾಮರ್ಥ್ಯವು, ಜೋರು; ಬಲವಂತರಲ್ಲಿ ನಾನು (ಅಂಥ ಬಲವಾಗಿರುವೆನು). ಆ ಬಲವು ಕಾಮಗಳಿಲ್ಲದ್ದಾಗಿರಬೇಕು. ಕಾಮವೂ ರಾಗವೂ ಕಾಮರಾಗಗಳು– ಕಾಮವೆಂದರೆ ಹತ್ತಿರವಿಲ್ಲದ ವಿಷಯಗಳಲ್ಲಿ ಉಂಟಾಗುವ ಹಂಬಲಿಕೆ, ರಾಗವೆಂದರೆ ಒದಗಿದ ವಿಷಯಗಳಲ್ಲಿ ಮನಸ್ಸು ಅಡುತ್ತಿರುವದು–ಅಂಥ ಕಾಮರಾಗಗಳು ಇಲ್ಲದೆ ದೇಹವನ್ನು ಧರಿಸಿರುವ ಮಟ್ಟಿಗೆ ಬೇಕಾಗುವ ಬಲವೇ ಶಕ್ತಿಯೇ, ನಾನು. ಆದರೆ ಸಂಸಾರಿಗಳಿಗೆ ಹಂಬಲಿಕೆಗೂ ರಾಗಕ್ಕೂ ಕಾರಣವಾಗಿರುವ (ಬಲವು) ನಾನಲ್ಲ. ಮತ್ತು ಧರ್ಮಕ್ಕೆ ವಿರುದ್ಧವಲ್ಲದ ಎಂದರೆ ಶಾಸ್ತ್ರಾರ್ಥಕ್ಕೆ ವಿರೋಧವಾಗಿರದೆ ಭೂತಗಳಲ್ಲಿ (ಎಂದರೆ ಪ್ರಾಣಿಗಳಲ್ಲಿ ಯಾವ ಕಾಮವಿರುವದೋ, ಉದಾಹರಣೆಗೆ ದೇಹವನ್ನು ಧಾರಣೆ ಮಾಡಿಕೊಂಡಿರುವದಕ್ಕೆ ಮಟ್ಟಿಗೆ ಬೇಕಾದ ತಿಂಡಿ ತೀರ್ಥ ಮುಂತಾದ ವಿಷಯಗಳ (ಕಾಮವಿದೆಯಷ್ಟೆ,) ಅಂಥ ಕಾಮವೂ ಎಲೈ ಭರತಶ್ರೇಷ್ಠನೆ, (ನಾನು) ಆಗಿರುವೆನು.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

೧೨. ಸಾತ್ತ್ವಿಕವಾಗಿರುವ ಭಾವಗಳು ಯಾವವು ಇರುವವೋ, ಮತ್ತು ರಾಜಸವಾದ ತಾಮಸವಾದ ಭಾವಗಳು ಯಾವವು ಇರುವವೋ, ಅವು

ನನ್ನಿಂದಲೇ ಆಗಿರುವವೆಂದು ತಿಳಿ. ಆದರೆ ನಾನು ಅವುಗಳಲ್ಲಿರುವದಿಲ್ಲ, ಅವು ನನ್ನಲ್ಲಿರುವವು.

[ಭಾಷ್ಯ]

ಮತ್ತು ಸಾತ್ತ್ವಿಕವಾದ ಎಂದರೆ ಸತ್ತ್ವಗುಣದಿಂದಾಗಿರುವ* ಯಾವ ಭಾವಗಳು ಪದಾರ್ಥಗಳು ಇರುವವೋ ರಾಜಸವಾದ ಎಂದರೆ ರಜೋಗುಣ ದಿಂದಾಗಿರುವ ಮತ್ತು ತಾಮಸವಾದ ಎಂದರೆ ತಮೋಗುಣದಿಂದಾಗಿರುವ ಯಾವ ಪದಾರ್ಥಗಳು ಪ್ರಾಣಿಗಳ ಆಯಾ ಕರ್ಮದ ನಿಮಿತ್ತದಿಂದ ಆಗುತ್ತಿರುವವೋ, ಅವುಗಳೆಲ್ಲವೂ ನನ್ನಿಂದಲೇ ಆಗಿರುವವೆಂದು ತಿಳಿದುಕೊ. ಅವು ನನ್ನಿಂದಲೆ ಉಂಟಾಗುವವು. ಆದರೂ, ನಾನು ಅವುಗಳಲ್ಲಿಲ್ಲ,† ಸಂಸಾರಿಗಳಂತೆ ಅವುಗಳಧೀನವಾಗಿಲ್ಲ, ವಶನಾಗಿಲ್ಲ;‡ ಅವುಗಳು ಮಾತ್ರ ನನ್ನಲ್ಲಿ ನನ್ನ ಅಧೀನ ವಾಗಿರುವವು.

## ಮಾಯೆಯನ್ನು ದಾಟುವದು ಕಷ್ಟ.

ನಾನು ಹೀಗಿರುವ ‡ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿಯೂ ಸರ್ವ ಭೂತಗಳ ಆತ್ಮನಾಗಿಯೂ ನಿರ್ಗುಣನಾಗಿಯೂ ಸಂಸಾರದ ದೋಷಗಳ ಬೀಜ ವನ್ನು ಸುಡುವದಕ್ಕೆ ಕಾರಣನಾಗಿಯೂ ಇರುವ ಪರಮೇಶ್ವರನಾದರೂ ನನ್ನನ್ನು (ಈ) ಜಗತ್ತು ಅರಿಯದಲ್ಲ ! ಎಂದು ಭಗವಂತನು ಮರುಕವನ್ನು ತೋರಿಸು ತ್ತಾನೆ : ಜಗತ್ತಿನವರಿಗೆ ಈ ಅಜ್ಞಾನವು ಬರುವದಕ್ಕೆ ನಿಮಿತ್ತವೇನು ? ಎಂದರೆ ಹೇಳುತ್ತೇನೆ :—

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥**

೧೩. ಈ ಮೂರು ಗುಣಮಯವಾದ ಭಾವಗಳಿಂದ ಮೋಹಿತವಾಗಿರುವ ಈ ಜಗತ್ತು ಇವುಗಳಿಗಿಂತ ಬೇರೆಯಾಗಿರುವ ಅವ್ಯಯನಾದ ನನ್ನನ್ನು ಗೊತ್ತುಮಾಡಿಕೊಳ್ಳದೆ ಇರುವದು.

---

* ಸತ್ತ್ವ, ರಜ, ತಮ—ಎಂಬ ಮೂರು ಗುಣಗಳ ವಿಷಯವಾಗಿ ೧೪ನೆಯ ಅಧ್ಯಾಯವನ್ನು ನೋಡಿ.

† ನಾನು ಅವುಗಳಲ್ಲಿಲ್ಲ ಎಂಬುದಕ್ಕೆ ಅಕ್ಷರಾರ್ಥವನ್ನು ಮಾಡಿದರೆ ಹಿಂದೆ ಹೇಳಿದ್ದಕ್ಕೆ ವಿರೋಧವಾಗುವದು ; ಆದ್ದರಿಂದ ಅವುಗಳಿಗೆ ಅಧೀನವಾಗಿರುವದಿಲ್ಲ ಎಂದರ್ಥ.

‡ ಅನಾತ್ಮಕ್ಕಿಂತ ಬೇರೆಯಾಗಿ ಅದನ್ನು ಅಧೀನಪಡಿಸಿಕೊಂಡಿರುವ.

[ಭಾಷ್ಯ]

ಈ ಮೂರು ಗುಣಮಯವಾದ ಎಂದರೆ ಗುಣಗಳ ಕಾರ್ಯವಾಗಿರುವ ರಾಗ, ದ್ವೇಷ, ಮೋಹ- ಇವೇ ಮುಂತಾದ ಪ್ರಕಾರದ ಭಾವಗಳಿಂದ ಎಂದರೆ ಪದಾರ್ಥಗಳಿಂದ, ಮೇಲೆ ಹೇಳಿದ ಈ (ಪದಾರ್ಥಗಳಿಂದ) ಈ ಪ್ರಾಣಿಸಮೂಹ ವೆಂಬ ಜಗತ್ತು ಮೋಹಿತವಾಗಿ, ಅವಿವೇಕಿಯಾಗಿ ಇರುವದರಿಂದ ನನ್ನನ್ನು, ಈ ಮೇಲೆ ಹೇಳಿದ ಗುಣಗಳಿಗಿಂತ ಬೇರೆಯಾಗಿ ಇವುಗಳಿಗಿಂತ ಬೇರೆ ಸ್ವಭಾವ ದವನೂ ಅವ್ಯಯನೂ ಎಂದರೆ ವ್ಯಯರಹಿತನೂ ಹುಟ್ಟುವದೇ ಮುಂತಾದ ಭಾವವಿಕಾರಗಳಿಲ್ಲದವನೂ ಆಗಿರುವ ಎಂದರ್ಥ. (ಇಂಥ) ನನ್ನನ್ನು, ಅರಿಯದೆ ಇರುವದು.

ಹಾಗಾದರೆ ಈ ವೈಷ್ಣವದೈವಮಾಯೆಯನ್ನು ವಿೂರುವದು ಹೇಗೆ ? ಎಂದರೆ ಹೇಳುತ್ತೇನೆ :—

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥ ೧೪ ॥**

೧೪. ಈ ಗುಣಮಯವಾದ ನನ್ನ ದೈವಮಾಯೆಯು ದಾಟಲಶಕ್ಯವು. ನನ್ನನ್ನೇ ಯಾರು ಸೇರುವರೋ ಅವರು ಈ ಮಾಯೆಯನ್ನು ದಾಟುವರು.

[ಭಾಷ್ಯ]

ಇದು ದೈವಮಾಯೆಯು, ದೇವನಾದ ಎಂದರೆ ಈಶ್ವರನಾದ ವಿಷ್ಣುವಾದ ನನ್ನ ಸ್ವಾಧೀನವಾದದ್ದು; ಹೀಗೆ ಈ ಮೇಲೆ ಹೇಳಿದ ಗುಣಗಳಿಂದಾಗಿರುವ ನನ್ನ ಮಾಯೆಯು ದಾಟಲಶಕ್ಯವಾಗಿರುವದು, ಇದನ್ನು ವಿೂರುವದು ಕಷ್ಟವಾಗಿ ರುವದು. ಹೀಗಿರುವದರಿಂದ ಸರ್ವಧರ್ಮಗಳನ್ನೂ ಪರಿತ್ಯಾಗಮಾಡಿ* ಮಾಯಾವಿ ಯಾದ † ತಮ್ಮ ಆತ್ಮನಾದ ನನ್ನನ್ನೇ ಯಾರು (ಶರಣು)ಹೊಂದುವರೋ ಅವರು ಸಕಲ ಭೂತಗಳನ್ನೂ ಮೋಹಗೊಳಿಸುತ್ತಿರುವ ಈ ಮಾಯೆಯನ್ನು ದಾಟುವರು, ವಿೂರುವರು, ಸಂಸಾರಬಂಧದಿಂದ ಬಿಡುಗಡೆಯಾಗುವರು ಎಂದರ್ಥ.

ನಿನ್ನನ್ನು (ಶರಣು)ಹೊಂದಿದವರು ಈ ಮಾಯೆಯನ್ನು ದಾಟುವರಾದರೆ, ವಿತಕ್ಕೆ ನಿನ್ನನ್ನೇ ಎಲ್ಲರೂ (ಶರಣು)ಹೊಂದುವದಿಲ್ಲ ? ಎಂದರೆ ಹೇಳುತ್ತೇನೆ :—

* ೧೮-೬೬ ನೆಯ ಶ್ಲೋಕವನ್ನು ನೋಡಿ.

† ಮಾಯೆಯನ್ನು ಹರಡಿ ಮಾಯುಗಾರನು ತಾನು ಇದ್ದಂತೆಯೇ ಇರುತ್ತಿದ್ದರೂ ಅವನ ಸ್ವರೂಪವನ್ನು ಮಾಯಾಮೋಹಿತರಾದವರು ಅರಿಯದಿರುವಂತೆ, ತ್ರಿಗುಣಾತ್ಮಕಮಾಯಾಪ್ರಪಂಚ ದಿಂದ ಮೋಹಿತರಾದವರು ಪರಮಾತ್ಮನನ್ನು ಅರಿಯದೆ ಇರುವರು. ಮಾಂ. ಕಾ. ಆಗಮ ಪ್ರಕರಣ ೭ನೆಯ ಕಾರಿಕೆಯ ಭಾಷ್ಯವನ್ನು ನೋಡಿ.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ　　॥ ೧೫ ॥**

೧೫. ದುಷ್ಕೃತಿಗಳೂ ಮೂಢರೂ ಆದ ನರಾಧಮರು ನನ್ನನ್ನು (ಶರಣು)ಹೊಂದುವದಿಲ್ಲ; (ಅವರು) ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ಆಸುರಭಾವವನ್ನು ಆಶ್ರಯಿಸಿರುವರು.

[ಭಾಷ್ಯ]

ನನ್ನನ್ನು ಎಂದರೆ ಪರಮೇಶ್ವರನಾದ **ನಾರಾಯಣನನ್ನು** ದುಷ್ಕೃತಿಗಳು ಎಂದರೆ ಪಾಪವನ್ನು ಮಾಡಿದ ಮೂಢರು ಸೇರುವದಿಲ್ಲ; (ಅವರು) ನರಾಧಮರು, ಮನುಷ್ಯರೊಳಗೆ ಅಧಮರು, ಕೀಳರು. ಮತ್ತು ಅವರು ಮಾಯೆಯಿಂದ ಕೋಗಳಾಡಿಸಲ್ಪಟ್ಟ ಜ್ಞಾನವುಳ್ಳವರು, * ಹಿಂಸೆ ಸುಳ್ಳು ಮುಂತಾದ ರೂಪದ ಅಸುರಸ್ವಭಾವವನ್ನು † ಆಶ್ರಯಿಸಿರುವವರು.

ಜ್ಞಾನಿಯು ಪರಮಾತ್ಮನನ್ನೇ ಹೊಂದಿರುವನು.

ಆದರೆ ಯಾರು ಉತ್ತಮಪುರುಷರಾಗಿ ಪುಣ್ಯಕರ್ಮವನ್ನು ಮಾಡಿರುವರೋ, (ಅಂಥ)—

**ಚತುರ್ವಿಧಾ ಭಜನ್ತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ　　॥ ೧೬ ॥**

೧೬. ಅರ್ಜುನನೆ, ನಾಲ್ಕು ಬಗೆಯ ಸುಕೃತಿಗಳಾದ ಜನರು ನನ್ನನ್ನು ಭಜಿಸುವರು ; ಭರತರ್ಷಭನೆ, ಆರ್ತನು, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ-(ಇವರೇ ಆ ನಾಲ್ಕು ಬಗೆಯವರು.)

[ಭಾಷ್ಯ]

ಎಲೈ ಅರ್ಜುನನೆ, ನಾಲ್ಕು ವಿಧದ ನಾಲ್ಕು ಪ್ರಕಾರದ ಜನರು ನನ್ನನ್ನು ಸೇವಿಸುವರು ; (ಅವರು) ಸುಕೃತಿಗಳು ‡ ಎಂದರೆ ಪುಣ್ಯಕರ್ಮವನ್ನು ಮಾಡಿರುವವರು. (ಅವರು ಯಾರು ಯಾರೆಂದರೆ) :—ಆರ್ತನು ಎಂದರೆ ಸಂಕಟಕ್ಕೆ

---

* ಪಾಪಿಗಳು ವಿಷಯಾಸಕ್ತರಾಗಿರುವದರಿಂದ ಅವರಿಗೆ ಅತ್ಯಂತ ಅಪರೋಕ್ಷನಾಗಿರುವ ಪರಮಾತ್ಮನ ಜ್ಞಾನವು ಆಗದೆ ಇರುವದು.

† ಈ ಸ್ವಭಾವವನ್ನು ೧೬ನೆಯ ಅಧ್ಯಾಯದಲ್ಲಿ ವರ್ಣಿಸಿದೆ.

‡ ಸಂಕಟವನ್ನು ಪರಿಹರಿಸಿಕೊಳ್ಳುವದಕ್ಕಾಗಲಿ, ಒಳ್ಳೆಯದನ್ನು ಸಂಪಾದಿಸಿಕೊಳ್ಳುವದಕ್ಕಾಗಲಿ, ಜ್ಞಾನಕ್ಕಾಗಲಿ— ಪರಮಾತ್ಮನನ್ನು ಸೇವಿಸಬೇಕೆಂಬ ಬುದ್ಧಿಯು ಬರುವದು ಪುಣ್ಯದ ಫಲವು.

ಸಿಕ್ಕುವನು ಕಳ್ಳರು, ಹುಲಿ, ರೋಗ- ಮುಂತಾದವುಗಳಿಗೆ ಸಿಕ್ಕಿ ನರಳುತ್ತಿರುವವನು, ಜಿಜ್ಞಾಸು ಎಂದರೆ ಯಾವನು ಭಗವಂತನ ತತ್ತ್ವವನ್ನು ತಿಳಿಯಲಿಚ್ಛಿಸುವನೋ ಅವನು, ಅರ್ಥಾರ್ಥಿ ಎಂದರೆ ಧನವನ್ನು ಬಯಸುವವನು, ಜ್ಞಾನಿಯು ಎಂದರೆ ವಿಷ್ಣುವಿನ ತತ್ತ್ವವನ್ನು ಅರಿತವನು. ಎಲೈ ಭರತಶ್ರೇಷ್ಠನೆ, (ಇವರೇ ಆ ನಾಲ್ಕು ಬಗೆಯವರು.)

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

೧೭. ಅವರೊಳಗೆ ನಿತ್ಯಯುಕ್ತನಾಗಿಯೂ ಏಕಭಕ್ತಿಯಾಗಿಯೂ ಇರುವ ಜ್ಞಾನಿಯು ಹೆಚ್ಚಿನವನು ; ಏಕೆಂದರೆ ನಾನು ಜ್ಞಾನಿಗೆ ಬಹಳ ಪ್ರಿಯನಾಗಿರುವೆನು, ಅವನೂ ನನಗೆ ಪ್ರಿಯನಾಗಿರುವನು.

[ಭಾಷ್ಯ]

ಆ ನಾಲ್ಕು ಬಗೆಯವರೊಳಗೆ ಜ್ಞಾನಿಯು ಎಂದರೆ ತತ್ತ್ವವನ್ನರಿತು ಕೊಂಡಿರುವಾತನು, ಯಾವಾಗಲೂ ಯುಕ್ತನಾಗಿರುವನು, ಏಕಭಕ್ತಿಯೂ ಆಗಿರುವನು, ಎಂದರೆ ಭಜನೆಗೆ ಯೋಗ್ಯನಾದ ಮತ್ತೊಬ್ಬನು ಕಾಣದೆ ಇರುವದರಿಂದ (ನನ್ನಲ್ಲಿಯೇ) ಭಕ್ತಿಯುಳ್ಳವನಾಗಿರುವನು. ಆ ಏಕಭಕ್ತಿಯು ಹೆಚ್ಚಿನವನು, ಹೆಚ್ಚಿಗೆಯನ್ನು ಹೊಂದಿದವನು, ಮಿಕ್ಕವರಿಗಿಂತ ಮೇಲಾದವನು ಎಂದರ್ಥ. ಏಕೆಂದರೆ * ನಾನು ಜ್ಞಾನಿಗೆ ಆತ್ಮನಾಗಿರುವದರಿಂದ ಅವನಿಗೆ ನಾನು ಬಹಳ ಪ್ರಿಯನಾಗಿರುವೆನು ; (ತನ್ನ) ಆತ್ಮನು (ತನಗೆ) ಪ್ರಿಯನಾಗಿರುವನೆಂಬುದು ಲೋಕದಲ್ಲಿ ಪ್ರಸಿದ್ಧವಾಗಿರುವದಲ್ಲವೆ ? † ಆದ್ದರಿಂದ ಜ್ಞಾನಿಯು ‡ ಆತ್ಮನಾಗಿರುವದರಿಂದ ವಾಸುದೇವನು ಅವನಿಗೆ ಪ್ರಿಯನಾಗಿರುವನು ಎಂದರ್ಥ. ಮತ್ತು ಆ ಜ್ಞಾನಿಯೂ **ವಾಸುದೇವ**ನಾದ ನನಗೆ ಆತ್ಮನೇ ಆದ್ದರಿಂದ ನನಗೆ ಬಹಳ ಪ್ರಿಯನಾಗಿರುವನು.

(ಆಕ್ಷೇಪ) ಹಾಗಾದರೆ ಆರ್ತನೇ ಮುಂತಾದ ಮೂರು ಜನರು **ವಾಸುದೇವ**ನಿಗೆ ಪ್ರಿಯವಲ್ಲವೆಂದಾಯಿತು.

(ಪರಿಹಾರ) :—ಹಾಗಲ್ಲ, ಮತ್ತೇನೆಂದರೆ :—

---

* ೬—೩೦ ನೆಯ ಶ್ಲೋಕವನ್ನೂ ಮುಂದಿನ ಶ್ಲೋಕವನ್ನೂ ನೋಡಿ.

† ಬೃ. ೨—೪—೬ ನ್ನು ನೋಡಿ.

‡ ಅಜ್ಞಾನಿಗೂ ವಾಸುದೇವನು ಆತ್ಮನೇ ; ಆದರೂ ಅಜ್ಞನು ಅದನ್ನು ಅರಿಯನು. ಅವನು ಅನಾತ್ಮಗಳನ್ನೆ ತನ್ನ ಆತ್ಮವೆಂದು ನಂಬಿ ಅವನ್ನೆ ತನಗೆ ಪ್ರಿಯವಾಗಿ ಎಣಿಸಿರುವನು.

**ಉದಾರಾಃ ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮ ॥**

೧೮. ಇವರೆಲ್ಲರೂ ಉದಾರರರೆ, ಆದರೆ ಜ್ಞಾನಿಯು ನನ್ನ ಆತ್ಮನೇ ಎಂಬುದು (ನನ್ನ) ಮತವು; ಏಕೆಂದರೆ ಆತನು ಯುಕ್ತಾತ್ಮನಾಗಿ (ನಾನೇ) ಉತ್ತಮವಾದ ಗತಿಯೆಂದು ನನ್ನನ್ನು ಆಶ್ರಯಿಸಿರುವನು.

[ಭಾಷ್ಯ]

ಇವರೆಲ್ಲರೂ– ಮೂರು ಬಗೆಯ ಜನರೂ– ಉದಾರರರೆ, ಮೇಲುಗೈಯಾದವರೆ, ನನಗೆ ಪ್ರಿಯರೆ ಎಂದರ್ಥ ; ಏಕೆಂದರೆ ನನ್ನ ಭಕ್ತನಾದವನು ಯಾವನೂ ವಾಸುದೇವನಾದ ನನಗೆ ಪ್ರಿಯನಲ್ಲದೆ ಇರುವದಿಲ್ಲ ; ಆದರೆ ಜ್ಞಾನಿಯು ಮಾತ್ರ ಅತ್ಯಂತ ಪ್ರಿಯನಾಗಿರುವನು ಎಂಬುದೇ (ಅವನಲ್ಲಿ) ವಿಶೇಷವು. ಅದೇಕೆಂದರೆ, ಹೇಳುತ್ತಾನೆ: ಆದರೆ ಜ್ಞಾನಿಯು ನಾನೇ, * ನನಗಿಂತ ಬೇರೆಯಲ್ಲ ಎಂಬುದು ನನ್ನ ಮತವು, (ನನ್ನ) ನಿಶ್ಚಯವು; ಏಕೆಂದರೆ ಆ ಜ್ಞಾನಿಯು 'ಭಗವಂತನಾದ ವಾಸುದೇವನೇ ನಾನು, ನಾನು ಬೇರೆಯಲ್ಲ' ಎಂದು ಯುಕ್ತಾತ್ಮನಾಗಿ ಎಂದರೆ ಚಿತ್ತಸಮಾಧಾನವನ್ನು ಹೊಂದಿದವನಾಗಿ ಪರಬ್ರಹ್ಮವಾದ ನನ್ನನ್ನೇ ಪಡೆಯಬೇಕಾದ, ಎಲ್ಲಕ್ಕೂ ಉತ್ತಮವಾದ, ಗತಿಯೆಂದು (ನನ್ನನ್ನೇ) ಸೇರುವದಕ್ಕೆ ಹತ್ತಿರುತ್ತಾನೆ, (ಆಗಕ್ಕೋಸ್ಕರ) ಹೊರಟಿರುತ್ತಾನೆ ಎಂದರ್ಥ.

ಜ್ಞಾನಿಯನ್ನು (ಈಗ) ಮತ್ತೂ ಹೊಗಳುತ್ತಾನೆ:—

**ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

೧೯. ಬಹು ಜನ್ಮಗಳ ಕೊನೆಯಲ್ಲಿ ಜ್ಞಾನವುಳ್ಳವನಾಗಿ 'ವಾಸುದೇವನೇ ಸರ್ವವು' ಎಂದು ನನ್ನನ್ನು ಹೊಂದುತ್ತಾನೆ ; ಅಂಥ ಮಹಾತ್ಮನು ಸಿಕ್ಕುವದು ಕಷ್ಟ.

[ಭಾಷ್ಯ]

ಜ್ಞಾನಕ್ಕಾಗಿ ಮಾಡುವ (ಪ್ರಯತ್ನಗಳ) ಸಂಸ್ಕಾರಕ್ಕೆ† ಆಶ್ರಯವಾಗಿರುವ ಬಹು ಜನ್ಮಗಳ ಕೊನೆಯಲ್ಲಿ, ಪರಿಪಕ್ವವಾದ ಜ್ಞಾನವನ್ನು ಹೊಂದಿ, ವಾಸುದೇವನಾದ ತನ್ನೊಳಗಿನ ಆತ್ಮನಾದ, ನನ್ನನ್ನು, ಬಂದು ಸೇರುತ್ತಾನೆ.

* 'ಬ್ರಹ್ಮವನ್ನು ಅರಿತವನು ಬ್ರಹ್ಮವೆ' ಎಂಬ ಮುಂಡಕ ೩–೨–೧೦ ರ ಸೂಚನೆ.

† ೬–೪೫ ರ ಭಾಷ್ಯವನ್ನು ನೋಡಿ.

ಹೇಗೆ? ಎಂದರೆ- ವಾಸುದೇವನೇ ಇದೆಲ್ಲವೂ* ಎಂದು. ಯಾವನು ಎಲ್ಲರ ಆತ್ಮನಾದ ನಾರಾಯಣನಾದ ನನ್ನನ್ನು ತಿಳಿದುಕೊಳ್ಳುವನೋ, ಅವನು ಮಹಾತ್ಮನು, ಅವನಿಗೆ ಸಮನಾದವನಾಗಲಿ, ಹೆಚ್ಚಿನವನಾಗಲಿ ಮತ್ತೊಬ್ಬನು ಇರುವದಿಲ್ಲ; ಆದ್ದರಿಂದ ಅಂಥವನು ಸಿಕ್ಕುವದು ಬಲುಕಷ್ಟ. "ಸಾವಿರ ಮನುಷ್ಯರಲ್ಲಿ (ಯಾವನೋ ಒಬ್ಬನು ಪ್ರಯತ್ನ ಮಾಡುತ್ತಾನೆ)" (೭-೩) ಎಂದಲ್ಲವೆ ಹಿಂದೆ ಹೇಳಿತ್ತು?

## ಕಾಮಿಗಳು ಮಾಡುವ ಅನ್ಯದೇವತೆಗಳ ಪೂಜೆ

'ಆತ್ಮನಾದ ವಾಸುದೇವನೇ ಇದೆಲ್ಲವು' ಎಂದು ತಿಳಿಯದಿರುವದಕ್ಕೆ ಕಾರಣವನ್ನು ಹೇಳುತ್ತೇನೆ:—

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

೨೦. ಆಯಾ ಕಾಮಗಳಿಂದ ಅಪಹೃತವಾದ ಜ್ಞಾನವುಳ್ಳವರು, ತಮ್ಮ ಪ್ರಕೃತಿಯಿಂದ ಬಿಗಿಯಲ್ಪಟ್ಟು ಆಯಾ ನಿಯಮಗಳನ್ನು ಅನುಸರಿಸಿ ಬೇರೆ ದೇವತೆಗಳನ್ನು ಸೇರುವರು.

[ಭಾಷ್ಯ]

ಮಕ್ಕಳು, ಪಶುಗಳು, ಸ್ವರ್ಗ- ಮುಂತಾದ† ವಿಷಯಗಳ ಆಯಾ ಕಾಮಗಳಿಂದ ಅಪಹೃತವಾದ ಜ್ಞಾನವುಳ್ಳವರಾಗಿ ಎಂದರೆ ವಿವೇಕರೂಪವಾದ ವಿಜ್ಞಾನವನ್ನು ಕಳೆದುಕೊಂಡು ಬೇರೆ ದೇವತೆಗಳನ್ನು ಎಂದರೆ ತಮ್ಮ ಆತ್ಮನಾದ‡ ವಾಸುದೇವನಿಗಿಂತ ಬೇರೆಯಾದ ದೇವತೆಗಳನ್ನು ಸೇರುವರು. ದೇವತೆ

* 'ಇದೆಲ್ಲವೂ ಬ್ರಹ್ಮವೇ' ಎಂಬ ಮುಂಡಕ ೨-೨-೧೧ ಮುಂತಾದ ಶ್ರುತಿಗಳ ಅರ್ಥ.

† 'ಮುಂತಾದ' ಎಂದರೆ- ಹಣ, ಕೀರ್ತಿ, ಅಧಿಕಾರ, ಶತ್ರುಜಯ, ಮತ್ತೊಬ್ಬನನ್ನು ವಶಗೊಳಿಸಿಕೊಳ್ಳುವದು-ಮುಂತಾದದ್ದು. ಇಂಥಿಂಥ ದೇವತೆಗಳನ್ನು ಪೂಜಿಸಿದರೆ ಇಂಥಿಂಥ ಕಾಮಗಳು ಪೂರ್ತಿಯಾಗುವವೆಂದು ಶಾಸ್ತ್ರದಲ್ಲಿ ಹೇಳಿರುವದು.

‡ ಅಜ್ಞರು ದೇವತೆಗಳನ್ನು ತಮಗಿಂತ ಬೇರೆಯೆಂದು ಭಾವಿಸಿ ಪೂಜಿಸುವರು; ವಾಸುದೇವನನ್ನು ಜ್ಞಾನಿಯು ತನ್ನ ಆತ್ಮನೇ ಎಂದು ಭಾವಿಸುವನು- ಇದನ್ನು ಶ್ರುತಿಯಲ್ಲಿಯೂ ಹೇಳಿದೆ. ಬೃ. ೧-೪-೧೦ ನ್ನು ನೋಡಿ.

ಯನ್ನು ಆರಾಧನೆಮಾಡುವದಕ್ಕೆ ಯಾವ ಯಾವ ನಿಯಮವು* (ಶಾಸ್ತ್ರದಲ್ಲಿ) ಪ್ರಸಿದ್ಧವಾಗಿರುವದೋ ಆಯಾ (ನಿಯಮವನ್ನು) ಆಶ್ರಯಿಸಿ, ತಮ್ಮ ಪ್ರಕೃತಿಯಿಂದ† ಎಂದರೆ ಸ್ವಭಾವದಿಂದ ಹಿಂದಿನ ಜನ್ಮಗಳಲ್ಲಿ ಸಂಪಾದಿಸಿರುವ ಆಯಾ ಸಂಸ್ಕಾರದಿಂದ ಬಿಗಿಯಲ್ಪಟ್ಟು, ಅದರ ಕಟ್ಟಿಗೆ ಸಿಕ್ಕಿ (ಬೇರೆ ದೇವತೆಗಳ‡ ಆರಾಧನೆಗೆ ಹೋಗುವರು.)

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ೨೧ ॥**

೨೧. ಯಾವಯಾವನು ಭಕ್ತನಾಗಿ ಶ್ರದ್ಧೆಯಿಂದ ಯಾವಯಾವ ಮೂರ್ತಿಯನ್ನು ಅರ್ಚಿಸುವದಕ್ಕೆ ಅಪೇಕ್ಷಿಸುವನೋ, ಅವನವನಿಗೆ ಆಯಾ ಅಚಲವಾದ ಶ್ರದ್ಧೆಯನ್ನೇ ನಿಲ್ಲಿಸುವೆನು.

[ಭಾಷ್ಯ]

ಮತ್ತು ಈ ಕಾಮಿಗಳಲ್ಲಿ ಯಾವ ಯಾವ ಕಾಮಿಯು ಯಾವ ಯಾವ ದೇವತೆಯ ಮೂರ್ತಿಯನ್ನು ಶ್ರದ್ಧೆಯಿಂದ ಕೂಡಿ ಭಕ್ತನೂ ಆಗಿ ಪೂಜಿಸುವದಕ್ಕೆ ಇಚ್ಛಿಸುತ್ತಾನೋ ಆಯಾ ಕಾಮಿಗೆ ಅಲ್ಲಾಡದ ಸ್ಥಿರವಾದ ಆ ಶ್ರದ್ಧೆಯನ್ನೇ, ಸ್ವಭಾವದಿಂದ ಯಾವ§ ಶ್ರದ್ಧೆಯಿಂದ ಮೊದಲು ಹೊರಟಿದ್ದನೋ ಅದನ್ನೇ ನಿಲ್ಲಿಸುವೆನು, ಸ್ಥಿರಗೊಳಿಸುವೆನು.

ಯಾವನು ಯಾವ ಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಬೇಕೆಂದು ಇಚ್ಛಿಸುತ್ತಾನೋ,

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥ ೨೨ ॥**

೨೨. ಅವನು ಆ ಶ್ರದ್ಧೆಯಿಂದ ಕೂಡಿದವನಾಗಿ ಆ (ಮೂರ್ತಿಯ) ಪೂಜೆಯನ್ನು ಮಾಡುವನು; ಮತ್ತು ಅದರಿಂದ, ನನ್ನಿಂದಲೇ ಉಂಟುಮಾಡಲ್ಪಟ್ಟ, ಆ ಕಾಮಗಳನ್ನು ಪಡೆಯುತ್ತಾನೆ.

---

* ಜಪ, ಉಪವಾಸ–ಮುಂತಾದ ನಿಯಮ.

† ೩–೩೩ ರಲ್ಲಿ ಈ ಮಾತಿನ ಭಾಷ್ಯವನ್ನು ನೋಡಿ.

‡ ಈ ಶ್ಲೋಕದ ಅರ್ಥವು ಹಿಂದೆ ೪–೧೨ ರಲ್ಲಿ ಸೂಚಿತವಾಗಿದೆ.

§ 'ಯಯೈವ ಪೂರ್ವಂ ಪ್ರವೃತ್ತಃ ಸ್ವಭಾವತಃ' ಎಂಬವರೆಗೆ ಈ ಶ್ಲೋಕಕ್ಕೇ ಸೇರಿದ್ದೆಂದು ಇಟ್ಟುಕೊಂಡಿದೆ.

[ಭಾಷ್ಯ]

ಅವನು ನನ್ನಿಂದ ನೆಲೆಗೊಳಿಸಲ್ಪಟ್ಟ* ಆ ಶ್ರದ್ಧೆಯಿಂದ ಕೂಡಿದವನಾಗಿ ಆ ದೇವತಾಮೂರ್ತಿಯ ಆರಾಧನೆಯನ್ನು ಎಂದರೆ ಪೂಜೆಯನ್ನು ಮಾಡುವನು, ಅದಕ್ಕೆ ಪ್ರಯತ್ನಪಡುತ್ತಾನೆ. ಅದರಿಂದ ಎಂದರೆ ಹಾಗೆ ಪೂಜೆಮಾಡಿದ ದೇವತಾ ಮೂರ್ತಿಯಿಂದ, ಸರ್ವಜ್ಞನೂ ಪರಮೇಶ್ವರನೂ ಆದ (ನಾನು) ಕರ್ಮಫಲಗಳ ವಿಂಗಡವನ್ನು ಬಲ್ಲವನಾದ್ದರಿಂದ ನನ್ನಿಂದಲೇ† ವಿಹಿತವಾದ ಎಂದರೆ ನಿರ್ಮಿತವಾದ ಆ ಕಾಮಗಳನ್ನು ಪಡೆಯುತ್ತಾನೆ. (ಮೂಲದಲ್ಲಿ) ಹಿ ಎಂದರೆ ಯಾವ ಕಾರಣ ದಿಂದ (ಎಂದರ್ಥ). ಆ ಕಾಮಗಳನ್ನು ಭಗವಂತನೇ ಗೊತ್ತುಮಾಡಿರುವದರಿಂದ ಅವುಗಳನ್ನು ಅವಶ್ಯವಾಗಿ ಪಡೆದೇ ತೀರುವನು ಎಂದರ್ಥ. "ಹಿತಾನ್" ಎಂದು ಪದಚ್ಛೇದಮಾಡಿದರೆ ಕಾಮಗಳನ್ನು ಹಿತವೆಂದು ಹೇಳಿದ್ದು ಉಪಚಾರಕ್ಕೆಂದು ಇಟ್ಟುಕೊಳ್ಳಬೇಕು; ಏಕೆಂದರೆ ಕಾಮಗಳು (ನಿಜವಾಗಿ) ಯಾರಿಗೂ ಹಿತವಾಗಿರು ವದಿಲ್ಲ.

ಆ ಅವಿವೇಕಿಗಳೂ ಕಾಮಿಗಳೂ ಮಾಡುವ ಸಾಧನವು (ಸ್ವಲ್ಪ ಕಾಲ ದಲ್ಲಿಯೆ) ಕೊನೆಗಾಣುವ (ಫಲ)ವುಳ್ಳ ಕೆಲಸವಾದ್ದರಿಂದ,

**ಅನ್ತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥೨೩॥**

೨೩. ಆದರೆ ಅವರಿಗೆ (ಆಗುವ) ಫಲವು ಅಂತವುಳ್ಳದ್ದು, ಅದು ಅಲ್ಪ ಬುದ್ಧಿಗಳಿಗೆ ಉಂಟಾಗುವದು. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಸೇರುವರು, ನನ್ನ ಭಕ್ತರು ನನ್ನನ್ನು ಸೇರುವರು.

[ಭಾಷ್ಯ]

ಆದರೆ ಅವರಿಗೆ ಆಗುವ ಫಲವು ಕೊನೆಗಾಣುವದು, ನಾಶವುಳ್ಳದ್ದು. ಅದು ಅಲ್ಪಬುದ್ಧಿಯುಳ್ಳವರಿಗೆ, ಅಲ್ಪವಾದ ತಿಳಿವಳಿಕೆಯವರಿಗೆ, ಆಗುವದು. ದೇವಯಾಜಿಗಳು,— ದೇವತೆಗಳನ್ನು ಪೂಜಿಸುವವರು ದೇವಯಾಜಿಗಳು; ಅವರು—

---

* ಸರ್ವವೂ ಪರಮೇಶ್ವರನ ಮೂರ್ತಿಯೇ ; ಆದ್ದರಿಂದ ಯಾವ ರೂಪವನ್ನು ಪೂಜೆಮಾಡಿ ದರೂ ಅದರಲ್ಲಿ ಶ್ರದ್ಧೆಯು ಬೇಗೂರುವದು.

† ಕರ್ಮವು ಜಡವಾದ್ದರಿಂದಲೂ ನಶ್ವರವಾದ್ದರಿಂದಲೂ ಫಲವನ್ನು ಕೊಡಲಾರದು. ಆದ್ದ ರಿಂದ ಈಶ್ವರನೇ ಫಲವನ್ನು ಕೊಡುವವನು. ಬ್ರ. ಸೂ. ೩—೨—೩೮. ದೇವತೆಗಳು ಫಲವನ್ನು ಕೊಡುವರೆಂದು ಭಾವಿಸಿದರೂ ಅಲ್ಲಿಯೂ ಪರಮೇಶ್ವರನೇ ಮೂಲಕಾರಣವಾಗುತ್ತಾನೆ. ಇದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

ದೇವತೆಗಳನ್ನು* ಸೇರುವರು, ನನ್ನ ಭಕ್ತರು ನನ್ನನ್ನು ಸೇರುವರು. ಹೀಗೆ ಶ್ರಮವು (ಎರಡರಲ್ಲಿಯೂ) ಸಮವಾಗಿದ್ದರೂ† ನನ್ನನ್ನು ಸೇರಿ ಅನಂತಫಲವನ್ನು ಹೊಂದದೆ ಇರುವರಲ್ಲ, ಇದು ಎಂಥ ಶೋಚನೀಯವಾದ ವಿಷಯ! ಎಂದು ಭಗವಂತನು ಮರುಕವನ್ನು ತೋರಿಸುತ್ತಿದ್ದಾನೆ.

## ಅಜ್ಞರಿಗೆ ಪರಮಾತ್ಮತತ್ತ್ವವು ಗೋಚರಿಸದೆ ಇರಲು ಕಾರಣ

(ಅವರು) ನನ್ನನ್ನೇ ಏತಕ್ಕೆ ಸೇರಿ (ಭಜಿಸುವ)ದಿಲ್ಲ? ಎಂದರೆ ಹೇಳುತ್ತೇನೆ-

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।**
**ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ॥ ೨೪ ॥**

೨೪. ನಾನು ಅವ್ಯಕ್ತನಾಗಿದ್ದು ವ್ಯಕ್ತಿಯನ್ನು ಹೊಂದಿದನೆಂದು ಬುದ್ಧಿಯಿಲ್ಲದವರು ತಿಳಿಯುವರು; (ಅವರು) ಅವ್ಯಯವಾಗಿರುವ ಅತ್ಯಂತ ಉತ್ತಮವಾದ ನನ್ನ ಹೆಚ್ಚಿನ ಸ್ವರೂಪವನ್ನು ಅರಿಯರು.

[ಭಾಷ್ಯ]

ಅವ್ಯಕ್ತನಾಗಿದ್ದು, ತೋರಿಕೊಳ್ಳದೆ ಇದ್ದು ಈಗ ವ್ಯಕ್ತವಾದನು, ತೋರಿಕೊಂಡನು ಎಂದು– ನಿತ್ಯಪ್ರಸಿದ್ಧನಾಗಿರುವ‡ ಈಶ್ವರನಾಗಿದ್ದರೂ ನನ್ನನ್ನು (ಜನರು ಹೀಗೆಂದು)– ಬುದ್ಧಿಯಿಲ್ಲದ ಅವಿವೇಕಿಗಳು ತಿಳಿಯುವರು. (ಆ) ಅವಿವೇಕಿಗಳು ನನ್ನ ಅವ್ಯಯವಾದ ಎಂದರೆ ನಾಶವಿಲ್ಲದ ಇನ್ನು ಹೆಚ್ಚಿಲ್ಲವೆಂಬಷ್ಟು ಉತ್ತಮವಾದ ನನ್ನ ಹೆಚ್ಚಿನ ಸ್ವರೂಪವನ್ನು ಅರಿಯದೆ (ಹೀಗೆ ತಿಳಿದುಕೊಂಡಿರುವರು) ಎಂದರ್ಥ.

ಅವರು (ನನ್ನ ಸ್ವರೂಪವನ್ನು) ತಿಳಿಯದೆ ಇರುವದಕ್ಕೆ ನಿಮಿತ್ತವೇನೆಂದರೆ ಹೇಳುತ್ತೇನೆ:—

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥**

* ದೇವತೆಯನ್ನು ಉಪಾಸನೆಮಾಡುವವನು ತಾನೇ ಆ ದೇವತೆಯೆಂಬ ಭಾವನೆಯು ಬಲಪಡುವವರೆಗೂ ಉಪಾಸನೆಮಾಡಿದರೆ ಆ ದೇವತೆಯ ಸ್ವರೂಪವನ್ನೇ ಸತ್ತ ಮೇಲೆ ಪಡೆಯುವನೆಂದು ಶ್ರುತಿ. ಬೃ. ೪–೧–೨

† ಪರಮಾತ್ಮನ ಉಪಾಸನೆಗೂ ದೇವತೆಯ ಉಪಾಸನೆಯಷ್ಟೇ ಶ್ರಮ. ಹೆಚ್ಚಿಲ್ಲ.

‡ ಆತ್ಮನು ತನ್ನ ರೂಪದಲ್ಲಿಯೇ ಇರುತ್ತಿದ್ದರೂ ಅವನ ಅವತಾರದ ದೇಹವನ್ನು ಕಂಡು ಅವನೂ ಸಂಸಾರಿಯೆಂದೇ ಜನರು ಭಾವಿಸುವರು ; ೯–೧೧ ನ್ನು ನೋಡಿ.

೨೫. ಯೋಗಮಾಯೆಯಿಂದ ಮರೆಯಾಗಿರುವ ನಾನು ಎಲ್ಲರಿಗೂ ತೋರಿಕೊಳ್ಳೆನು ; ಮೂಢರಾದ ಈ ಜನರು ಅಜನೂ ಅವ್ಯಯನೂ ಆಗಿರುವ ನನ್ನನ್ನು ಅರಿಯರು.

[ಭಾಷ್ಯ]

ನಾನು ಎಲ್ಲಾ ಜನರಿಗೂ ತೋರಿಕೊಳ್ಳುವದಿಲ್ಲ, ನನ್ನ ಭಕ್ತರಾಗಿರುವ* ಕೆಲವರಿಗೆ ಮಾತ್ರ ತೋರಿಕೊಳ್ಳುವೆನು ಎಂದರ್ಥ. (ಏಕೆಂದರೆ) ನಾನು ಯೋಗಮಾಯೆಯಿಂದ ಮರೆಯಾಗಿರುವೆನು, ಯೋಗವೆಂದರೆ ಗುಣಗಳ ಯೋಜನೆ, ಸೇರಿಸುವಿಕೆ, ಅದೇ **ಮಾಯೆಯು**†; ಆ ಯೋಗಮಾಯೆಯಿಂದ ಮರೆಯಾಗಿ ಮುಸುಕಿಟ್ಟುಕೊಂಡಿರುವೆನು. ಆದ್ದರಿಂದಲೆ ಮೂಢರಾದ‡ ಈ ಜನರು ಜನ್ಮವಿಲ್ಲದವನೂ ನಾಶವಿಲ್ಲದವನೂ ಆಗಿರುವ ನನ್ನನ್ನು ಅರಿಯರು.

ಯಾವ ಯೋಗಮಾಯೆಯಿಂದ ಮರೆಯಾಗಿರುವ ನನ್ನನ್ನು ಜನರು ಅರಿಯರೋ, ಈ ಯೋಗಮಾಯೆಯು ನನ್ನದಾದ್ದರಿಂದ§ ಮಾಯಾವಿಯಾದ ನನ್ನ ಜ್ಞಾನಕ್ಕೆ ಅಡ್ಡಿಯನ್ನೇನೂ ತರುವದಿಲ್ಲ. ಬೇರೆ ಯಾವನೇ ಮಾಯಾವಿ ಇರಲಿ, ಅವನ ಜ್ಞಾನಕ್ಕೆ (ಅವನ) ಮಾಯೆಯು (ಅಡ್ಡಿಮಾಡಲಾರದಲ್ಲವೆ?)ಅದರಂತೆಯೇ (ನನ್ನ ಮಾಯೆಯು).

ಹೀಗಿರುವದರಿಂದ,

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

೨೬. ಅರ್ಜುನನೆ, ನಾನು ಹಿಂದೆ ಕಳೆದುಹೋಗಿರುವ, ಈಗ ಇರುವ, ಮುಂದೆ ಒದಗುವ ಭೂತಗಳನ್ನು ಬಲ್ಲೆನು, ನನ್ನನ್ನು (ಮಾತ್ರ) ಯಾರೂ ಅರಿಯರು.

[ಭಾಷ್ಯ]

೨೬. ನಾನು ಮಾತ್ರ ಹಿಂದೆ ಆಗಿಹೋಗಿರುವ ಪ್ರಾಣಿಗಳನ್ನೂ ಈಗ ಇರುವ (ಪ್ರಾಣಿಗಳನ್ನೂ), ಎಲೈ ಅರ್ಜುನನೆ, ಅರಿತಿರುವೆನು. ನಾನು ಮುಂದೆ ಹುಟ್ಟುವ

---

* ಭಕ್ತಿಯಿಲ್ಲದೆ ಇರುವದೇ ನನ್ನನ್ನು ಕಾಣದೆ ಇರುವದಕ್ಕೆ ಕಾರಣವು.

† ಮೂರು ಗುಣಗಳ ಗುಂಪಿಗೆ ಮಾಯೆಯೆಂದು ಹೆಸರು, ಬೇರೆ ಮಾಯೆಯಿಲ್ಲ. ಮ॥ ಪಾಠದಲ್ಲಿ ''ಅಥವಾ ಭಗವಚ್ಚಿತ್ತಸಮಾಧಾನಂ ಯೋಗಃ'' ಎಂಬ ಹೆಚ್ಚು ಪಾಠವಿದೆ, ಅದನ್ನು ಕೈಬಿಟ್ಟಿದೆ. ಈ ಅಧ್ಯಾಯದ ೧೩ನೆಯ ಶ್ಲೋಕವನ್ನು ನೋಡಿ.

‡ ಅಜ್ಞರು ಮೂರು ಗುಣಗಳ ತೋರಿಕೆಯನ್ನೇ ಸತ್ಯವೆಂದು ನೆಚ್ಚಿ, ಅದರಲ್ಲಿಯೇ ಕಾಮದಿಂದ ಮುಂದುವರಿಯುತ್ತಿರುವರು ; ಆದ್ದರಿಂದ ಅವರ ಆತ್ಮನಾಗಿರುವ ನಾನು ಮುಸುಕಿಟ್ಟುಕೊಂಡಿರುವವನಂತೆ ಅವರಿಗೆ ಮರೆಯಾಗಿರುವೆನು.

§ ನನ್ನ ಅಧೀನವಾಗಿರುವದರಿಂದ.

ಪ್ರಾಣಿಗಳನ್ನೂ ಬಲ್ಲೆನು. ಆದರೆ ನನ್ನನ್ನು ಯಾರೂ- ನನ್ನನ್ನೆ ಶರಣುಹೊಂದಿರುವ ನನ್ನ ಭಕ್ತನೊಬ್ಬನನ್ನು* ಬಿಟ್ಟು (ಮತ್ತೆ ಯಾರೂ)- ಅರಿಯರು. ನನ್ನ ನಿಜವನ್ನು ಅರಿಯದ್ದರಿಂದಲೇ ನನ್ನನ್ನು ಭಜಿಸುವದಿಲ್ಲ.

ನನ್ನ ತತ್ತ್ವವನ್ನು ತಿಳಿಯುವದಕ್ಕೆ ಯಾವ ಅಡಚಣೆಯಿರುವದರಿಂದ† ಅಡಿಯಾಗಿ ಹುಟ್ಟಿದ ಪ್ರಾಣಿಗಳೆಲ್ಲ ನನ್ನನ್ನು ಅರಿಯದೆ ಇರುವವು ?- ಎಂದು ಕೇಳಿದರೆ ಇದನ್ನು ಹೇಳುತ್ತೇನೆ.:—

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾನ್ತಿ ಪರಂತಪ ॥ ೨೭ ॥**

೨೭. ಎಲೈ ಶತ್ರುತಾಪನನಾಗಿಯೂ, ಭರತವಂಶೋತ್ಪನ್ನನಾಗಿಯೂ ಇರುವ (ಅರ್ಜುನನೆ,) ಇಚ್ಛಾದ್ವೇಷಗಳಿಂದ ಉಂಟಾಗಿರುವ ದ್ವಂದ್ವಮೋಹದಿಂದ ಎಲ್ಲಾ ಭೂತಗಳೂ ಹುಟ್ಟುವಾಗ ಸಮ್ಮೋಹವನ್ನು ಹೊಂದುವವು.

[ಭಾಷ್ಯ]

ಇಚ್ಛೆಯೂ ದ್ವೇಷವೂ ಇಚ್ಛಾದ್ವೇಷಗಳು, ಅವುಗಳಿಂದ ಉಂಟಾಗಿರುವದು ಇಚ್ಛಾದ್ವೇಷಸಮುತ್ಥವು. ಹೀಗೆ ಇಚ್ಛೆಯಿಂದಲೂ ದ್ವೇಷಗಳಿಂದಲೂ ಉಂಟಾಗಿರುವ, ಏತರಿಂದ ಎಂದರೆ ಅದನ್ನು ಗೊತ್ತಾಗಿ ಹೇಳುತ್ತಾನೆ: ದ್ವಂದ್ವಮೋಹದಿಂದ ; ದ್ವಂದ್ವದಿಂದ ಆಗಿರುವ ಭ್ರಾಂತಿಯು ದ್ವಂದ್ವಮೋಹವು. (ಹಿಂದೆ ಹೇಳಿದ) ಆ ಇಚ್ಛಾದ್ವೇಷಗಳೇ ಶೀತೋಷ್ಣಗಳಂತೆ ಒಂದಕ್ಕೊಂದು ವಿರೋಧವಾಗಿದ್ದುಕೊಂಡು ಸುಖ, ದುಃಖ, ಮತ್ತು ಅವುಗಳ‡ ಕಾರಣ(ವಾಗಿರುವ ವಸ್ತು)- ಇವುಗಳ ವಿಷಯದಲ್ಲಿ ಆಯಾ ಕಾಲದಲ್ಲಿ ಸರ್ವಪ್ರಾಣಿಗಳಿಗೂ ಉಂಟಾಗುತ್ತವೆ; (ಆಗ) ಅವಕ್ಕೆ '**ದ್ವಂದ್ವ**'ವೆಂದು ಹೆಸರು.

ಹೀಗಿರುವದರಿಂದ ಸುಖ ದುಃಖ, ಅವುಗಳಿಗೆ ಕಾರಣವಾಗಿರುವ ವಿಷಯ- ಇವುಗಳು ಬಂದೊದಗಲಾಗಿ ಯಾವಾಗ ಇಚ್ಛಾದ್ವೇಷಗಳು ಉಂಟಾಗುವವೋ ಆಗ ಅವು ಎಲ್ಲಾಪ್ರಾಣಿಗಳ ತಿಳಿವಳಿಕೆಯನ್ನೂ ತಮ್ಮ ಅಧೀನಕ್ಕೆ ತೆಗೆದುಕೊಂಡು

---

* ಜ್ಞಾನಿಭಕ್ತನು ನನ್ನ ಸ್ವರೂಪನೇ ಆಗಿರುವದರಿಂದ ನನ್ನನ್ನು ಅರಿತಿರುವನು ; ಇತರ ಭಕ್ತರು ಪುಣ್ಯವನ್ನು ಮಾಡಿರುವದರಿಂದ ಪರೋಕ್ಷವಾಗಿ ಅರಿತಿರುವರು.

† ಸ್ವಾಭಾವಿಕವಾದ ಎಂದಿಗೂ ಹೋಗಲಾರದ ಅಡ್ಡಿಯೇನಾದರೂ ಇದೆಯೆ?- ಎಂಬ ಪ್ರಶ್ನೆಯನ್ನು ತೆಗೆದು ಇಲ್ಲಿ ಉತ್ತರವನ್ನು ಹೇಳಿರುತ್ತದೆ.

‡ ಅದೇ ವಸ್ತು ಬೇರೆ ಬೇರೆಕಾಲದಲ್ಲಿ ಸುಖಕ್ಕೂ ದುಃಖಕ್ಕೂ ಕಾರಣವಾಗಿರುವದು ; ಸುಖಕ್ಕೆ ಕಾರಣವಾಗಿದ್ದರೆ ಅದರಲ್ಲಿ ಇಚ್ಛೆಯೂ ದುಃಖಕ್ಕೆ ಕಾರಣವಾಗಿದ್ದರೆ ದ್ವೇಷವೂ ಆಗುವದು.

ಪರಮಾರ್ಥವಾಗಿರುವ ಆತ್ಮತತ್ತ್ವದ ವಿಷಯದ ಜ್ಞಾನವು ಉಂಟಾಗದಂತೆ ಅಡ್ಡಿಯಾಗುವದಕ್ಕೆ ಕಾರಣವಾದ **ಮೋಹ**ವನ್ನು ಹುಟ್ಟಿಸುವವು. ಏಕೆಂದರೆ ಇಚ್ಛಾದ್ವೇಷಗಳಿಗೆ ವಶನಾಗಿರುವ ಚಿತ್ತವುಳ್ಳವನಿಗೆ ಹೊರಗಿನ (ವಸ್ತುವಿನಲ್ಲಿ) ಕೂಡ ವಿಷಯವು ಇದ್ದಂತೆ ಅದರ ಜ್ಞಾನವು ಆಗುವಹಾಗಿರುವದಿಲ್ಲ ; ಹೀಗಿರುವಲ್ಲಿ ಆ (ಇಚ್ಛಾದ್ವೇಷಗಳೆಂಬ) ಎರಡರ ಹಿಡಿತಕ್ಕೆ ಸಿಕ್ಕಿದ ಬುದ್ಧಿಯುಳ್ಳವನಾದ ಮೂಢನಿಗೆ, ಎಷ್ಟೋ ಅಡ್ಡಿಗಳುಳ್ಳ ಪ್ರತ್ಯಗಾತ್ಮಜ್ಞಾನವು ಉಂಟಾಗುವದಿಲ್ಲವೆಂದು ಹೇಳತಕ್ಕದ್ದೇನಿದೆ?*

ಆದ್ದರಿಂದ ಇಚ್ಛಾದ್ವೇಷಗಳಿಂದ ಉಂಟಾಗಿರುವ ಈ ದ್ವಂದ್ವಮೋಹದಿಂದ, ಎಲೈ ಭರತವಂಶದಲ್ಲಿ ಉತ್ಪನ್ನನಾಗಿರುವ ಅರ್ಜುನನೆ, ಸರ್ವ ಪ್ರಾಣಿಗಳೂ ಮೂಢರಾಗಿ ಸರ್ಗದಲ್ಲಿ ಎಂದರೆ, ಹುಟ್ಟಿನಲ್ಲಿ ; ಹುಟ್ಟುವಾಗಲೇ ಮೋಹವನ್ನು ಹೊಂದುವರು ಎಂದರ್ಥ. ಎಲೈ ಶತ್ರುತಾಪನನಾದ ಅರ್ಜುನನೆ, ಪ್ರಾಣಿಗಳೆಲ್ಲ ಹುಟ್ಟುವಾಗ ಮೋಹಕ್ಕೆ ಒಳಗಾಗಿಯೇ† ಹುಟ್ಟುತ್ತವೆ ಎಂಬುದು ಅಭಿಪ್ರಾಯವು. ಹೀಗಿರುವದರಿಂದ ಈ ದ್ವಂದ್ವಮೋಹದಿಂದ‡ ತಿಳಿವಳಿಕೆಗೆ ಅಡ್ಡಿಯಾಗಿ, ಮೋಹಿತರಾಗುವರಾದ್ದರಿಂದ ಯಾವ ಪ್ರಾಣಿಗಳೂ (ತಮ್ಮ) ಆತ್ಮನಾಗಿರುವ ನನ್ನನ್ನು ಅರಿಯದೆ ಇರುವರು ; ಆದ್ದರಿಂದಲೆ ನಾನು ಆಪರ ಆತ್ಮನೇ ಎಂದು ತಿಳಿದು ಭಜಿಸದೆ ಇರುವರು.

## ಪುಣ್ಯವಂತರು ಭಗವಂತನನ್ನು ಭಜಿಸುವರು

ಹಾಗಾದರೆ ಈ ದ್ವಂದ್ವಮೋಹದಿಂದ ಬಿಡುಗಡೆಯನ್ನು ಹೊಂದಿ ನಿನ್ನನ್ನು ಅರಿತುಕೊಂಡು ಶಾಸ್ತ್ರದಲ್ಲಿ ಹೇಳಿರುವಂತೆ ನಿನ್ನನ್ನು ತಾವೇ ನೀನೆಂದು ಭಜಿಸುವರು ಯಾರು— ಎಂದು ಕೇಳಬಹುದಷ್ಟೆ ? ಈ ವಿಷಯವನ್ನು ತಿಳಿಸುವದಕ್ಕೆ ಹೇಳುತ್ತಾನೆ:—

* ಹೊರಗೆ ನೋಡುವದು ಮನುಷ್ಯನ ಸ್ವಭಾವವು ; ಹೊರಗಿನ ವಸ್ತುಗಳನ್ನೇ ಇಚ್ಛಾದ್ವೇಷಗಳಿಂದ ಕೂಡಿದವನು ಸರಿಯಾಗಿ ಅರಿಯಲಾರನೆಂದ ಮೇಲೆ ಒಳಗಿನ ಆತ್ಮನನ್ನು ಅರಿಯುವದು ಹೇಗೆ? ಆದ್ದರಿಂದ ಇಚ್ಛಾದ್ವೇಷಗಳನ್ನು ಕಳೆದುಕೊಂಡು ಶಮದಮಾದಿಗಳನ್ನು ಸಂಪಾದಿಸಿಕೊಳ್ಳಬೇಕೆಂದು ತಾತ್ಪರ್ಯ.

† ಇಚ್ಛಾದ್ವೇಷದ ಸಂಸ್ಕಾರವು ಪ್ರತಿಯೊಂದು ಪ್ರಾಣಿಯಲ್ಲಿಯೂ ಹುಟ್ಟುವಾಗಲೇ ಇದ್ದುಕೊಂಡಿರುವದು.

‡ ಹೊರಗಿನ ವಿಷಯದ ಇಚ್ಛಾದ್ವೇಷವೇ ಆತ್ಮಜ್ಞಾನಕ್ಕೆ ಅಡ್ಡಿಯೇ ಹೊರತು, ಪರಮಾತ್ಮನು ನಮಗೆ ತೋರಕೂಡದೆಂದು ತಾನೇ ಬೇಕೆಂತ ಅಡಗಿಕೊಂಡಿರುವದಿಲ್ಲವೆಂಬದು ಇದರಿಂದ ಸ್ಪಷ್ಟವಾಯಿತು.

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**

**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ॥ ೨೮ ॥**

೨೮. ಆದರೆ ಪುಣ್ಯಕರ್ಮವನ್ನು ಮಾಡಿರುವ ಯಾವ ಜನರ ಪಾಪವು ಕೊನೆಗಂಡಿರುವದೋ, ಅವರು ದ್ವಂದ್ವಮೋಹದಿಂದ ಬಿಡುಗಡೆಯಾದವರಾಗಿ ದೃಢವ್ರತರಾಗಿ ನನ್ನನ್ನು ಭಜಿಸುವರು.

[ಭಾಷ್ಯ]

ಆದರೆ ಯಾವ ಪುಣ್ಯಕರ್ಮರಾದ ಜನರಿಗೆ– ಪುಣ್ಯಕರ್ಮರು ಎಂದರೆ ಸತ್ತ್ವಶುದ್ಧಿಗೆ ಕಾರಣವಾಗಿರುವ ಪುಣ್ಯಕರ್ಮವನ್ನು ಮಾಡಿರುವವರು ; ಅಂಥ ಯಾವ ಪುಣ್ಯಕರ್ಮರಿಗೆ– ಪಾಪವು ಕೊನೆಗಂಡಿರುವದೋ, ಮುಗಿದಂತೆ ಆಗಿರುವದೋ, ಅವರು ದ್ವಂದ್ವಮೋಹದಿಂದ ಮುಕ್ತರಾಗಿ ಎಂದರೆ ಹಿಂದೆ ಹೇಳಿದ ದ್ವಂದ್ವದ ಮೋಹದಿಂದ ಬಿಡುಗಡೆಹೊಂದಿ ದೃಢವ್ರತರಾಗಿ ಪರಮಾತ್ಮನಾದ ನನ್ನನ್ನು ಭಜಿಸುವರು. ಪರಮಾರ್ಥತತ್ತ್ವವು ಹೀಗೆಯೇ ಸರಿ, ಬೇರೆಯಿಲ್ಲ– ಎಂದು ಎಲ್ಲವನ್ನೂ ಬಿಡಬೇಕೆಂಬ ವ್ರತದಿಂದ ನಿಶ್ಚಯಮಾಡಿಕೊಂಡ ತಿಳಿವುಳ್ಳವರು ದೃಢವ್ರತರೆನಿಸುವರು.

ಅವರು ಏತಕ್ಕೆ ಭಜಿಸುವರು ? ಎಂದರೆ ಹೇಳುತ್ತೇನೆ:—

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ ।**

**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ ೨೯ ॥**

೨೯. ಜರಾಮರಣಗಳಿಂದ ಬಿಡುಗಡೆಯಾಗುವದಕ್ಕಾಗಿ ನನ್ನನ್ನು ಆಶ್ರಯಿಸಿ ಯಾರು ಪ್ರಯತ್ನಮಾಡುವರೋ, ಅವರು ಆ ಬ್ರಹ್ಮವನ್ನೂ, ಸಂಪೂರ್ಣವಾದ ಅಧ್ಯಾತ್ಮವನ್ನೂ, ಅಖಿಲವಾದ ಕರ್ಮವನ್ನೂ ತಿಳಿದುಕೊಳ್ಳುವರು.

[ಭಾಷ್ಯ]

ಜರಾಮರಣಗಳಿಂದ ಬಿಡುಗಡೆಯಾಗುವದಕ್ಕಾಗಿ, ಎಂದರೆ ಮುಪ್ಪು ಸಾವುಗಳನ್ನು ತಪ್ಪಿಸಿಕೊಳ್ಳುವದಕ್ಕಾಗಿ ಪರಮೇಶ್ವರನಾದ ನನ್ನನ್ನು ಆಶ್ರಯಿಸಿ ನನ್ನಲ್ಲಿಯೇ ಸಮಾಧಾನದಿಂದ ಇಟ್ಟ ಚಿತ್ತವುಳ್ಳವರಾಗಿ ಪ್ರಯತ್ನವನ್ನು ಮಾಡುತ್ತಿರುವರೋ ಅವರು ಆ ಪರಬ್ರಹ್ಮವೆಂಬುದು ಯಾವುದುಂಟೋ ಅದನ್ನು ಅರಿತುಕೊಳ್ಳುವರು ; ಸಂಪೂರ್ಣವಾಗಿ ಅಧ್ಯಾತ್ಮವನ್ನೂ ಪ್ರತ್ಯಗಾತ್ಮತತ್ತ್ವವಿದೆಯಲ್ಲ, ಅದನ್ನೂ ಅರಿತುಕೊಳ್ಳುವರು; ಕರ್ಮವೆಲ್ಲವನ್ನೂ ಅರಿತುಕೊಳ್ಳುವರು.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**

**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

೩೦. ಯಾರು ಅಧಿಭೂತ, ಅಧಿದೈವ, ಅಧಿಯಜ್ಞ– ಇವುಗಳಿಂದ ಕೂಡಿ ನನ್ನನ್ನು ತಿಳಿದುಕೊಳ್ಳುವರೋ, ಆ ಯುಕ್ತಚಿತ್ತರು ಮರಣಕಾಲದಲ್ಲಿಯೂ ನನ್ನನ್ನು ತಿಳಿದುಕೊಳ್ಳುವರು.

[ಭಾಷ್ಯ]

ಅಧಿಭೂತ, ಅಧಿದೈವ– ಇವುಗಳೊಡನೆ ಕೂಡಿರುವ ನನ್ನನ್ನು ಯಾರು ತಿಳಿದುಕೊಳ್ಳುವರೋ ಅಧಿಯಜ್ಞದಿಂದೊಡಗೂಡಿದ ನನ್ನನ್ನು ಯಾರು ತಿಳಿದುಕೊಳ್ಳುವರೋ, ಅವರು ಸಾಯುವ ಕಾಲದಲ್ಲಿಯೂ ಯುಕ್ತಚಿತ್ತರಾಗಿ ಮನಸ್ಸಮಾಧಾನದಿಂದ ನನ್ನನ್ನು ತಿಳಿದುಕೊಳ್ಳುವರು.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ವಿಜ್ಞಾನಯೋಗೋ** ನಾಮ
ಸಪ್ತಮೋಽಧ್ಯಾಯಃ.

—*—

# ಏಳನೆಯ ಅಧ್ಯಾಯದ ಸಾರ

೧–೩. ಶ್ರೀಕೃಷ್ಣನು ಹೇಳಿದ್ದೇನೆಂದರೆ:— "ಎಲೈ ಅರ್ಜುನನೆ, ನನ್ನನ್ನೇ ಆಶ್ರಯಿಸಿ ನನ್ನನ್ನೇ ಧ್ಯಾನಿಸುತ್ತಿದ್ದರೆ ನನ್ನ ತತ್ತ್ವವನ್ನು ಪೂರ ತಿಳಿದುಕೊಳ್ಳಬಹುದು. ಅನುಭವಕ್ಕೆ ತಂದುಕೊಳ್ಳಲೂ ಬಹುದು. ಇದನ್ನು ತಿಳಿದರೆ ಎಲ್ಲವನ್ನೂ ತಿಳಿದುಕೊಂಡಂತಾಗುವದು. ಆದರೆ ಹೀಗೆ ಪ್ರಯತ್ನಿಸುವವರು ವಿರಳ, ಅರಿತುಕೊಳ್ಳುವವರು ಮತ್ತೂ ವಿರಳ.

೪–೧೨. "ಪೃಥ್ವಿ, ಅಪ್ಪು- ಮುಂತಾದ ಪಂಚಸೂಕ್ಷ್ಮಭೂತಗಳು, ಅಹಂಕಾರ, ಮಹತ್ತು, ಅವ್ಯಕ್ತ– ಎಂದು ನನ್ನ ಕೀಳಾದ ಜಡಪ್ರಕೃತಿಯು ಎಂಟು ಬಗೆಯಾಗಿರುವದು; ಜೀವ ರೂಪವಾಗಿರುವ ನನ್ನ ಚೇತನಪ್ರಕೃತಿಯು ಇದಕ್ಕಿಂತ ಮೇಲಾದದ್ದು. ಈ ಎರಡು ಪ್ರಕೃತಿಗಳ ಮೂಲಕ ನಾನು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿರುವೆನು. ಪ್ರತಿಯೊಂದು ವಸ್ತುವಿನಲ್ಲಿಯೂ ಸಾರಭೂತವಾಗಿರುವದು ನಾನೇ ಎಂದು ತಿಳಿದುಕೊ; ಸತ್ತ್ವರಜಸ್ತಮೋಗುಣಗಳ ಕಾರ್ಯವಾದ ವಸ್ತುಗಳೆಲ್ಲ ನನ್ನನ್ನೆ ಆಶ್ರಯಿಸಿರುವವು, ನಾನು ಅವುಗಳಲ್ಲಿ ಯಾವದನ್ನೂ ಆಶ್ರಯಿಸಿರುವದಿಲ್ಲ.

೧೩–೧೫. "ಗುಣಮಯವಾದ ಮಾಯೆಯಿಂದ ಮೋಹಿತರಾಗಿರುವವರೇ ಬಹಳ; ಈ ಮಾಯೆಗೆ ಸಿಕ್ಕವರಿಗೆ ನನ್ನ ತತ್ತ್ವವು ನಿಲುಕುವದಿಲ್ಲ. ನನ್ನನ್ನೆ ಶರಣುಹೊಕ್ಕವರು ಈ ಮಾಯೆಯನ್ನು ದಾಟಬಹುದು; ಆದರೆ ಅಸುರಸಂಪತ್ತಿನ ಜನರು ನನ್ನನ್ನು ಭಜಿಸುವದಿಲ್ಲ.

೧೬–೧೯. "ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ– ಈ ನಾಲ್ಕು ಬಗೆಯ ಜನಗಳು ನನ್ನನ್ನು ಭಜಿಸುವರು. ಇವರಲ್ಲಿ ಜ್ಞಾನಿಯು ನನಗೆ ಅತ್ಯಂತಪ್ರಿಯನು, ಅವನು ನನ್ನ ಆತ್ಮನೇ ಆಗಿರುವನು. ಇಂಥ ಜ್ಞಾನಿಯಾಗುವದು ಮಹಾಪುಣ್ಯರಾಶಿಯ ಫಲವು.

೨೦–೨೩. "ನನ್ನನ್ನು ಸೇವಿಸುವದರಲ್ಲಿಯೂ ಇತರ ದೇವತೆಗಳನ್ನು ಸೇವಿಸುವದರಲ್ಲಿಯೂ ಸಮವಾದ ಆಯಾಸವಿರುತ್ತಿದ್ದರೂ ಕಾಮಿಗಳಾದವರು ದೇವತೆಗಳನ್ನೇ ಭಜಿಸುವರು. ಅಂಥವರಿಗೆ ಆಯಾ ದೇವತಾಮೂರ್ತಿಗಳಲ್ಲಿಯೇ ಭಕ್ತಿಯನ್ನು ಬೆಳೆಯಿಸಿ ಅವರು ಕೋರುವ ಕಾಮಗಳನ್ನು ಆ ಮೂಲಕ ನಾನೇ ಪೂರ್ತಿಗೊಳಿಸುವೆನು. ಆದರೆ ಆ ಫಲವು ಬೇಗನೆ ನಾಶವಾಗುವದು. ಮೂಢರಿಗೆ ಅದೇ ಬೇಕಾಗಿರುವದು.

೨೪–೩೦. "ಬುದ್ಧಿಯಿಲ್ಲದ ಜನರು ನಾನು ಹಿಂದೆ ಇಲ್ಲದೆ ಇದ್ದು ಆಮೇಲೆ ಒಂದು ಗೊತ್ತಾದ ಕಾಲದಲ್ಲಿ ಹುಟ್ಟುವೆನೆಂದೇ ತಿಳಿಯುವರು; ಗುಣಮಯವಾದ ಮಾಯೆಗೆ ಮರುಳಾಗಿರುವ ಆ ಜನರಿಗೆ ನಾನು ಯಾವಾಗಲೂ ಸ್ವಯಂಪ್ರಕಾಶನಾಗಿರುವೆನೆಂಬುದು ತಿಳಿಯದು. ನನಗೆ ಮೂರು ಕಾಲದಲ್ಲಿ ಆಗುವ ಪ್ರಾಣಿಗಳ ಆಗುಹೋಗುಗಳೂ ತಿಳಿದಿರುವವು; ಆದರೆ ನನ್ನನ್ನು ಭಕ್ತರು ಹೊರತು ಮತ್ತೆ ಯಾರೂ ಅರಿಯರು, ಏಕೆಂದರೆ ಸಾಮಾನ್ಯವಾಗಿ ಎಲ್ಲಾ ಜೀವರೂ ರಾಗದ್ವೇಷಗಳಿಗೆ ವಶರಾಗಿಯೇ ಹುಟ್ಟುವರು.

೨೮–೩೦. "ಆದರೆ ಯಾರು ಪುಣ್ಯರಾಶಿಯನ್ನು ಕೂಡಿಹಾಕಿ ಚಿತ್ತಶುದ್ಧಿಯನ್ನು ಪಡೆದು ಕೊಂಡಿರುವರೋ ಅವರು ಈ ರಾಗದ್ವೇಷಗಳ ಕಾರ್ಯವಾದ ದ್ವಂದ್ವಮೋಹಕ್ಕೆ ಸಿಕ್ಕಿಕೊಳ್ಳದೆ ನನ್ನನ್ನು ಭಜಿಸಿ ಮುಪ್ಪುಮರಣಗಳನ್ನು ದಾಟಿಸುವ ಬ್ರಹ್ಮತತ್ತ್ವವನ್ನೂ ಪ್ರತ್ಯಗಾತ್ಮತತ್ತ್ವವನ್ನೂ ಕರ್ಮತತ್ತ್ವವನ್ನೂ ಚೆನ್ನಾಗಿ ತಿಳಿದುಕೊಳ್ಳುವರು. ಅಧಿಭೂತ, ಅಧಿದೈವ, ಅಧಿಯಜ್ಞ– ಇವುಗಳಿಂದ ಕೂಡಿದ ನನ್ನನ್ನು ಯಾರು ತಿಳಿದುಕೊಂಡಿರುವರೋ, ಅಂಥವರು ಮರಣಕಾಲದಲ್ಲಿಯೂ ಸಮಾಹಿತಚಿತ್ತರಾಗಿ ನನ್ನನ್ನು ಅರಿಯುವರು."

———*———

# ತಿದ್ದುಪಡಿ

(ಸೂಚನೆ :— ಪುಟ ೨೩೬ ಆದ ಮೇಲಿನ ಪುಟಗಳು ೨೪೧, ೨೪೨,‥೨೪೮ ಹೀಗೆ ಇವೆ; ಇವು ೨೩೭, ೨೩೮,. . . .೨೪೪ ಎಂತ ಇರಬೇಕು. ತಿದ್ದಿದ ಮೇಲೆ ಆಗುವ ಸಂಖ್ಯೆಗಳನ್ನೇ ಈ ಪಟ್ಟಿಯಲ್ಲಿ ಕೊಟ್ಟಿದೆ.)

| ಪುಟ | ಸಾಲು | ಈಗ ಇರುವದು | ಇರಬೇಕಾದದ್ದು |
|---|---|---|---|
| ೧೫೦ | ೧ | ಹೇಳಿದೆನು | ನಾನು ಹೇಳಿದೆನು |
| ೧೫೧ | ೧೪ | ನಾಶವಾದದ್ದನ್ನು | ನಾಶವಾದದ್ದನ್ನೂ |
| | ೧೫ | ಆದದ್ದನ್ನು | ಆದದ್ದನ್ನೂ |
| ೧೫೨ | ೧೧ | ಈಗ ಹೇಳಿರುವೆಯೆಂದೂ | ಹೇಳಿರುವೆಯೆಂದೂ (ಈ ಮಾತಿನಲ್ಲಿ ಏನೂ) ವಿರೋಧವಿಲ್ಲವೆಂದೂ |
| ೧೫೩ | ೧೮ | ಸ್ತಂಭ | ಸ್ತಂಬ |
| ೧೫೯ | ೨ | ದೇವತೆಗಳನ್ನು | ದೇವತೆಯು |
| | ೧೮ | ಕರ್ಮಕ್ಕಿಂತಲೂ | ದೇವತೆಗಳ ಸೇವಾರೂಪವಾದ ಕರ್ಮಕ್ಕಿಂತಲೂ |
| | ೨೧ | ಸ್ವಾರಸ್ಯವೆಂದು | |
| | | 'ಕ್ಷಿಪ್ರಂ'ಶಬ್ದದ | 'ಕ್ಷಿಪ್ರಂ' ಶಬ್ದದ ಸ್ವಾರಸ್ಯವೆಂದು |
| ೧೬೧ | ೧೯ | ಅವಗಳನ್ನು | ಅವುಗಳನ್ನೂ |
| ೧೬೩ | ೧೨ | (ಕರ್ಮ) § | (ಕರ್ಮ) |
| ೧೬೮ | ೩ | ಇಲ್ಲದೆ | ಯಾವ ಕೆಲಸವೂ ಇಲ್ಲದೆ |
| | ೧೧ | ಆತ್ಮನಲ್ಲಿ | ವಿಕಾರರಹಿತನಾದ ಆತ್ಮನಲ್ಲಿ |
| | ೧೫ | ನಿಜವಾಗಿ ಚಲಿಸುತ್ತಿರುವದಿಲ್ಲವೆಂದು | ಚಲಿಸುತ್ತಿವೆ ಎಂಬುದನ್ನು ಬದಲಾಯಿಸಿ |
| | ೧೬ | ತಿಳಿದುಕೊಳ್ಳುವಂತೆ | (ತಿಳಿದುಕೊಳ್ಳುವಂತೆ) |
| | ,, | ಅಕರ್ಮವನ್ನು | ಅಕರ್ಮವನ್ನು ಎಂದರೆ ಕರ್ಮದ ಅಭಾವವನ್ನು |
| ೧೬೯ | ೨ | ಸುಖವಾಗಿದ್ದೇನೆ | ಸುಮ್ಮನೆ ಸುಖವಾಗಿದೇನೆ. |
| ೧೭೩ | ಟಿಪ್ಪಣಿ† | ಆಗುವದಿಲ್ಲ. | ಆಗುವದಿಲ್ಲ. ಕೆಲಸವು ತನ್ನದೆಂಬ ಅಭಿಮಾನವಿರುವವನಿಗೆ ಮಾತ್ರ ಅದರ ಫಲವು ತನ್ನದೆಂಬ ಅಭಿಮಾನವುಂಟಾಗುವದು. |
| ೧೭೬ | ೨ | ಅವನಿಗಿಂತ | ಅವನಿಗೆ |
| | ೧೮ | ಸ್ವಾಧೀನದಲ್ಲಿಟ್ಟುಕೊಂಡು | ಸ್ವಾಧೀನದಲ್ಲಿಟ್ಟುಕೊಂಡು ಸರ್ವಪರಿಗ್ರಹವನ್ನು ಬಿಟ್ಟು ಎಂದರೆ ತನ್ನದೆಂಬುದನ್ನೆಲ್ಲ ಬಿಟ್ಟು |
| ೧೭೭ | ಟಿಪ್ಪಣಿ† | ವಿರುದ್ಧ. | ವಿರುದ್ಧ. ಮಾಡಬಾರದ ಕರ್ಮವನ್ನು ಮಾಡಿದರೆ ಆಗಬಾರದ ಫಲವು ಆಗಲೇಬೇಕಲ್ಲವೆ ? |
| ೧೮೩ | ೧೭ | ೧೭ | ೧೬ |
| ೧೮೭ | ೫ | ಜಿಹ್ವತಿ | ಜುಹ್ವತಿ |
| ೧೮೯ | ೩ | (ಕೆಲವರು) | ಕೆಲವರು ತಪೋಯಜ್ಞವನ್ನು ಮಾಡುವವರು. (ಕೆಲವರು) |
| ೧೯೪ | ೭ | ದ್ರವ್ಯಮಯವಾದ | ಎಲೈ ಶತ್ರುತಾಪನನೆ, ದ್ರವ್ಯಮಯವಾದ |
| ೧೯೬ | ೮ | ಅಜ್ಞಾನದಿಂದ | ಆ ಜ್ಞಾನದಿಂದ |
| ೨೦೩ | ೨ | ವಾದ ಸಂಶಯವನ್ನು | ವಾದ ಬಲುಕೆಟ್ಟದಾದ (ಈ) ಸಂಶಯವನ್ನು |
| | ೧೧ | ವಿಷಯವಾದ) | ವಿಷಯವಾದ)† |
| | ೧೨ | ವಾಗಿರುವ† | ವಾಗಿರುವ |

| | | | |
|---|---|---|---|
| ೨೧೦ | ೧೨ | ಇರಲಾರದೊ ? | ಇರಲಾರದೊ? ಎರಡರಲ್ಲಿ ಒಂದು ಇರಲಾರದೇ ಬ ಪಕ್ಷದಲ್ಲಿ ಕರ್ಮಸಂನ್ಯಾಸವು ಇರಲಾರದೊ, ಅಥವಾ ಕರ್ಮಯೋಗವು ಇರಲಾರದೊ ? |
| | ೧೪ | ಆತ್ಮಜ್ಞಾನಿಗೆ | ಇದಕ್ಕೆ ಹೇಳುತ್ತೇವೆ, ಕೇಳಿ. ಆತ್ಮಜ್ಞಾನಿಗೆ |
| ೨೧೧ | ೬ | ತಿಳಿದುಕೊ ? | ತಿಳಿದುಕೊ |
| | ೧೫ | ಏಕೆಂದರೆ | ಇದಕ್ಕೆ ಉತ್ತರ ಹೇಳುತ್ತೇವೆ, ಕೇಳಿ. |
| | ೨೭ | ನಿಗೆ) ನೈಷ್ಕರ್ಮ್ಯವು ದೊರಕುವದಿಲ್ಲ | ನಿಗೆ ನೈಷ್ಕರ್ಮ್ಯವು ದೊರಕುವದಿಲ್ಲ ) |
| ೨೧೨ | ೬ | ವನ್ನರಿತವನು | ವನ್ನರಿತ ಯುಕ್ತನು |
| | ೧೬ | ಸಂನ್ಯಾಸಕ್ಕಿಂತಲೂ | ಹಿಂದೆ ಹೇಳಿರುವ ಸಂನ್ಯಾಸಕ್ಕಿಂತಲೂ |
| ೨೧೩ | ೧೫ | ಎಂದು | ಎಂದು ಇವೆರಡಕ್ಕೂ ಇರುವ |
| | ೨೬ | (ಹೊಗಳುತ್ತಿದ್ದೀಯೆ) | ಹೊಗಳುತ್ತಿದ್ದೀಯೆ, ಹೇಳುತ್ತಿದ್ದೀಯೆ ಎಂದರ್ಥ. |
| ೨೨೨ | ೧೭ | ಫಲವನ್ನು | ಫಲಗಳ ಅನುಭವವನ್ನು |
| ೨೨೬ | ೨೧ | ಅಜ್ಞಾನವು | ಆತ್ಮನ ಅಜ್ಞಾನವು |
| ೨೨೭ | ೧೦ | ತಾತ್ಪರ್ಯವುಳ್ಳ | ತಾತ್ಪರ್ಯವು. ಸರ್ವಕರ್ಮಗಳನ್ನೂ ಸಂನ್ಯಾಸ ಮಾಡಿ ಆ ಬ್ರಹ್ಮದಲ್ಲಿಯೇ ನಿಲುಗಡೆಯನ್ನುಳ್ಳವರು ತನ್ನಿಷ್ಠರೆನಿಸುವರು. |
| ೨೨೮ | ೪ | ಗೋವಿನಲ್ಲಿಯೂ | ಗೋವಿನಲ್ಲಿಯೂ, ಆನೆಯಲ್ಲಿಯೂ |
| ೨೩೦ | ೧೬ | (ಆದ್ದರಿಂದಲೂ) | (ಆದ್ದರಿಂದಲೂ |
| | ೧೭ | ಹತ್ತಲಾರದು | ಹತ್ತಲಾರದು ) |
| ೨೩೧ | ೧೦ | ಸಕಲಪ್ರಾಣಿಗಳಲ್ಲಿ ಸ್ಥಿರ ಬುದ್ಧಿಯಾಗಿ | ಸ್ಥಿರಬುದ್ಧಿಯಾಗಿ ಸಕಲಪ್ರಾಣಿಗಳಲ್ಲಿ |
| ೨೩೫ | ೨ | ಕೊಂಡಿರುವವರಾಗಿಯೂ | ಕೊಂಡಿರುವವರಾಗಿಯೂ ಯಾವ ದೋಷವೂ ಇಲ್ಲದವರಾಗಿಯೂ (ಎಂದರ್ಥ.) |
| ೨೩೬ | ೧೯ | ಒಗಿಳರುವ | ಒಳಗಿರುವ |
| | ೨೩ | ಮೂಗಿನಲ್ಲಿ | ಮತ್ತು ಮೂಗಿನಲ್ಲಿ |
| ೨೪೦ | ಟಿಪ್ಪಣಿ* | ಕರ್ಮಫಲದ | ಕರ್ಮಯೋಗದಲ್ಲಿ ಕರ್ಮಫಲದ |
| ೨೪೨ | ೮ | ತೀರಬೇಕು; ಮೋಕ್ಷವಂತು* | ತೀರಬೇಕು* ; ಮೋಕ್ಷವಂತು |
| ೨೪೩ | ೧ | (ಆದ್ದರಿಂದ) | (ಇವನು ಆ) ಯೋಗದಿಂದ ಜಗುಳಿಬಿದ್ದಿದ್ದಾನೆ. (ಆದ್ದರಿಂದ) |
| ೨೪೬ | ೧೨ | ಕರ್ಮಫಲವನ್ನು | ಕರ್ಮದ ಸಂಕಲ್ಪವನ್ನು |
| ೨೪೭ | ೭ | ಅದೇ ಯೋಗವೆಂದು ತಿಳಿ | ಆ ಪರಮಾರ್ಥಸಂನ್ಯಾಸವು ಕರ್ಮವನ್ನು ಮಾಡುವದೆಂಬ ಯೋಗವೆಂದು ತಿಳಿ. |
| | ೨೨ | ಯೋಗಿಯಾಗುವ | ಸಮಾಧಾನವುಳ್ಳವನಾಗುವ |
| ೨೪೮ | ೨೧ | ಕರ್ಮಕ್ಕೆ | ಕರ್ಮವು |
| ೨೪೯ | ೨೪ | ಜೇಕಾದದ್ದೆ | ಬೇಕಾದದ್ದೆ. |
| ೨೫೦ | ಟಿಪ್ಪಣಿ† | ಪಾತ | ಪಾಠ |
| ೨೫೧ | ೬ | ಬಿಡುಗಡೆ | ಉದ್ಧಾರ |
| ೨೫೦ | ಟಿಪ್ಪಣಿ* | ಇತುಚ್ಯತೇ | ಇತ್ಯುಚ್ಯತೇ |
| | ಟಿಪ್ಪಣಿ‡ | ವಾಕ್ಯದ | ಈ ಗ್ರಂಥಸಂದರ್ಭದ |

| | | | |
|---|---|---|---|
| ೨೫೬ | ೨೫ | ಪ್ರಶಸ್ತಾತ್ಮಾ | ಪ್ರಶಾನ್ತಾತ್ಮಾ |
| ೨೫೮ | ೨ | ನಾನೇ | ಮತ್ಪರನಾಗಿರಬೇಕು ಎಂದರೆ ನಾನೇ |
| | ೧೦ | ಹೀಗೆ | ಹೀಗೆ ಯಾವಾಗಲೂ |
| ೨೫೯ | ೩ | [ಭಾಷ್ಯ] | ಇದು ಅರನೆಯ ಸಾಲಿಗೆ ಬರಬೇಕು. |
| | ೪ | ಅತಿಯಾಗಿ | ಎಲೈ ಅರ್ಜುನನೆ, ಅತಿಯಾಗಿ |
| ೨೬೦ | ೧೫ | ಅಹಾರವೂ | ಆಹಾರವೂ ವಿಹಾರವೂ |
| ೨೬೧ | ೧೮ | ಮೌನವೆಂದು ಹೇಳುವರು | ಮೌನವೆಂದು ಇದೇ ಹೋಲಿಸುವ ಸಾಧನವೆಂದು ಹೇಳುವರು— ಎಂದರ್ಥ. |
| ೨೬೨ | ೧೫ | ಸುಮ್ಮನಾಗುವದೋ | ಚಿತ್ತವು ಸುಮ್ಮನಾಗುವದೋ ಶಾಂತಿಯನ್ನು ಹೊಂದುವದೋ |
| ೨೬೩ | ೧ | ಇರುವನೋ | ಯೋಚಿಸಿಕೊಳ್ಳದೆ |
| ೨೬೪ | ೨ | ಹಿಂಜರಿಯಬೇಕು | ಹಿಂಜರಿಯಬೇಕು, ತಟ್ಟನೆ ಹಿಂಜರಿಯಬಾರದು. |
| ೨೬೪ | ೩ | ಎಂದರೆ | ಎಂದರೆ ಧೃತಿಯಿಂದ ಹಿಡಿಯಲ್ಪಟ್ಟ |
| | ೧೬ | ಚಂಚಲವಾಗಿರುವ | ಚಂಚಲವಾಗಿರುವ ಎಂದರೆ ಬಹುವಾಗಿ ಹುಡಾಡುತ್ತಿರುವ |
| ೨೬೫ | ೧೯ | ಯೋಗಿಗೆ ಕಲ್ಮಷವು ಹೋಗಿ | ಯೋಗಿಯು ಕಲ್ಮಷವು ಹೋದವನಾಗಿ |
| | ೨೦ | ,, | ,, |
| ೨೬೬ | ೧೧ | ದರ್ಶವುಳ್ಳ | ದರ್ಶನವುಳ್ಳ |
| ೨೬೭ | ೧೨ | ನನ್ನಲ್ಲಿಯೇ | ಸರ್ವಾತ್ಮನಾದ ನನ್ನಲ್ಲಿಯೇ |
| ೨೬೯ | ೬ | ಸಮವಾಗಿ | ಸರ್ವಪ್ರಾಣಿಗಳಲ್ಲಿಯೂ ಸಮವಾಗಿ |
| | ೧೮ | ಎಲೈ | ಅರ್ಜುನನು ಹೇಳಿದ್ದೇನೆಂದರೆ, ಎಲೈ |
| ೨೭೧ | ೧೬ | ಅಸಂಯನಾತ್ಮನೋ | ಅಸಂಯತಾತ್ಮನಾ |
| ೨೭೨ | ೨೫ | ಎರಡು | ಎಲೈ ಮಹಾಬಾಹುವೆ, (ಅಂಧವನು) ಎರಡು |
| ೨೭೪ | ೬ | ಮಗನನ್ನು | ಮಗನನ್ನೂ |
| | ೭ | ಅರ್ಜುನ | ಶಿಷ್ಯನಾದ ಅರ್ಜುನ |
| | ೧೮ | (ಸುಖವಾಗಿ) | ಎಷ್ಟೋ ವರ್ಷಗಳ ಕಾಲ (ಸುಖವಾಗಿ) |
| ೩೭೫ | ೨೨ | ಜನ್ಮದಲ್ಲಿ | (ಜನ್ಮದ) ದೇಹದಲ್ಲಿ |
| | ೨೨ | ಸಂಬಂಧವನ್ನು ಹೊಂದುತ್ತಾನೆ | ಆ ಸಂಬಂಧವನ್ನು ಹೊಂದುತ್ತಾನೆ ; ಮತ್ತು |
| ೨೭೮ | ೧ | ಜ್ಞಾನಿಗಳಿಗಿಂತಲೂ† | ಜ್ಞಾನಿಗಳಿಗಿಂತಲೂ |
| | ೨ | ತಿಳಿದಿರುವದು | ತಿಳಿದಿರುವದು† |
| ೨೮೩ | ೨೩ | ಭೂತವಲ್ಲ ; | ಭೂತವಲ್ಲ ; ಏಕೆಂದರೆ |
| ೨೮೬ | ೧೪ | | ಯಾವ ಯಾವ ಧರ್ಮದಿಂದ ಕೂಡಿದ ನಿನ್ನಲ್ಲಿ ಇದೆಲ್ಲವೂ ಪೋಣಿಕೆಯಾಗಿರುವದು ? ಎಂದರೆ ಹೇಳುತ್ತೇನೆ:— |
| ೨೮೮ | ೧೫ | ಕಾಮಗಳಿಲ್ಲ | ಕಾಮರಾಗಗಳಿಲ್ಲ |
| | ೨೧ | (ಎಂದರೆ | ಎಂದರೆ |
| ೨೮೯ | ೯ | †ಸಂಸಾರಿಗಳಂತೆ | ಸಂಸಾರಿಗಳಂತೆ |
| | ೧೦ | ‡ | † |
| ೨೯೦ | ೫ | ಜಗತ್ತು | ಜಗತ್ತಲ್ಲ |
| | ೧೦ | ಹಾಗಾದರೆ | ಹಾಗಾದರೆ ಮೂರು ಗುಣಗಳಿಂದಾಗಿರುವ |

ಅಧ್ಯಾತ್ಮಗ್ರಂಥಾವಳಿ

ಶ್ರೀ ಶಾಂಕರಭಾಷ್ಯಸಮೇತವಾದ

# ಶ್ರೀಮದ್ಭಗವದ್ಗೀತೆಯು

## ಅಧ್ಯಾಯಗಳು ೮—೧೨

ಅನುವಾದಕ
ವೈ. ಸುಬ್ಬರಾವ್
ಅಧ್ಯಾತ್ಮಪ್ರಕಾಶಕಾರ್ಯಾಲಯ



ಬೆಂಗಳೂರು ಸಿಟಿ, ಚಾಮರಾಜಪೇಟೆ, ೨ನೆಯ ಬೀದಿಯಲ್ಲಿರುವ
ಅಧ್ಯಾತ್ಮಪ್ರಕಾಶಮುದ್ರಣಾಲಯದಲ್ಲಿ
ಅಚ್ಚಾದದ್ದು
1934

# ವಾಚಕರಿಗೆ

---

ಈ ಗೀತಾನುವಾದದಲ್ಲಿ :—

(೧) ದಪ್ಪಕ್ಷರದಲ್ಲಿ ಬರೆದಿರುವ ತಲೆಬರಹ("ಹೆಡಿಂಗ್")ಗಳು ಅನುವಾದಕರು ಹೊಸದಾಗಿ ಸೇರಿಸಿದವುಗಳಾಗಿವೆ.

(೨) ಭಾಷ್ಯದಲ್ಲಿ ಮುಖ್ಯವಾದ ಅಥವಾ ವಾದಾಸ್ಪದವಾದ ವಿಷಯಗಳನ್ನು ತಿಳಿಯಿಸುವ ವಾಕ್ಯಗಳನ್ನೂ ಸಂಕೇತನಾಮಗಳನ್ನೂ ಕಪ್ಪಕ್ಷರ("ANTIQUE")ದಲ್ಲಿ ಅಚ್ಚುಮಾಡಿಸಿದೆ.

(೩) ಮೂಲದಲ್ಲಿಲ್ಲದೆ ಇದ್ದರೂ ಅರ್ಥಕ್ಕೆ ಬೇಕಾಗುವಂತೆ ಸೇರಿಸಿದ ಮಾತುಗಳನ್ನು ದುಂಡುಕಂಸದಲ್ಲಿ (            ) ಹೀಗೆ ತೋರಿಸಿರುತ್ತದೆ.

(೪) ಭಾಷ್ಯದ ಯಾವ ಮಾತಿನ ಪರಿವರ್ತನೆಯಿರಬಹುದೆಂಬ ಸಂಶಯವು ಬರಬಹುದಾದ ಕಡೆಗಳಲ್ಲಿ ಚೌಕಕಂಸಗಳಲ್ಲಿ [            ] ಹೀಗೆ ಆ ಸಂಸ್ಕೃತಮಾತುಗಳನ್ನು ಮುಂದುಗಡೆಯಲ್ಲಿ ತೋರಿಸಿರುತ್ತದೆ. ಭಾಷ್ಯಪಾಠದಲ್ಲಿ ಸಂದೇಹವಿರುವ ಭಾಗಗಳನ್ನೂ ಹೀಗೆಯೇ ಚೌಕಕಂಸಗಳಲ್ಲಿಟ್ಟಿರುತ್ತದೆ.

—*—

ಸಭಾಷ್ಯಭಗವದ್ಗೀತೆಯ ಮೂರನೆಯ ಭಾಗದ

# ವಿಷಯಗಳ ಪಟ್ಟಿ

—**—

## ಹನ್ನೊಂದನೆಯ ಅಧ್ಯಾಯ

### ವಿಶ್ವರೂಪದರ್ಶನಯೋಗ



## ಹನ್ನೆರಡನೆಯ ಅಧ್ಯಾಯ

### ಭಕ್ತಿಯೋಗ



———

# ಎಂಟನೆಯ ಅಧ್ಯಾಯ

( ಅಭ್ಯಾಸಯೋಗ )*

## ಅರ್ಜುನನ ಏಳು ಪ್ರಶ್ನೆಗಳು, ಭಗವಂತನ ಉತ್ತರ

"ಅವರು ಆ ಬ್ರಹ್ಮವನ್ನೂ ಸಂಪೂರ್ಣವಾದ (ಅಧ್ಯಾತ್ಮವನ್ನೂ ಅಖಿಲವಾದ ಕರ್ಮವನ್ನೂ ಅರಿತುಕೊಳ್ಳುವರು)" ಎಂದು ಮುಂತಾಗಿ ಪ್ರಶ್ನೆಗೆ ಅವಕಾಶವಾಗುವಂತೆ † ಭಗವಂತನು ಹಿಂದೆ (೭–೨೯, ೩೦) ಮಾತನಾಡಿರುತ್ತಾನೆ. ಆದ್ದರಿಂದ ಆ (ಬ್ರಹ್ಮವೇ ಮುಂತಾದವುಗಳನ್ನು) ಕೇಳಬೇಕೆಂದು ಅರ್ಜುನನು ಹೀಗೆಂದು ಕೇಳಿದನು :—

**ಅರ್ಜುನ ಉವಾಚ :—**

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**
**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಅರ್ಜುನನು ಹೇಳಿದ್ದೇನೆಂದರೆ :—

೧-೨. ಎಲೈ ಪುರುಷೋತ್ತಮನೆ, ಆ ಬ್ರಹ್ಮವೆಂಬುದು ಯಾವದು? ಅಧ್ಯಾತ್ಮವು ಯಾವದು? ಕರ್ಮವು ಯಾವದು? ಅಧಿಭೂತವೆಂದು ಹೇಳಿದ್ದು ಯಾವದು? ಅಧಿದೈವವೆಂಬುದು ಯಾವದು? ಎಲೈ ಮಧುಸೂದನನೆ, ಇಲ್ಲಿ ಈ ದೇಹದಲ್ಲಿ ಅಧಿಯಜ್ಞನಾಗಿರುವವನು ಯಾರು, (ಅವನು) ಹೇಗೆ (ಅಧಿಯಜ್ಞನು)? ಮರಣಕಾಲದಲ್ಲಿ ಮನಸ್ಸನ್ನು ಬಿಗಿಹಿಡಿದುಕೊಂಡು (ಜನರು) ನಿನ್ನನ್ನು ಹೇಗೆ ಅರಿತುಕೊಳ್ಳಬೇಕು? ‡

---

* ಈ ಅಧ್ಯಾಯದ ಹೆಸರು ಒಂದೊಂದು ಪುಸ್ತಕದಲ್ಲಿ ಒಂದೊಂದು ತರವಾಗಿದೆ. ಈ ವಿಷಯದಲ್ಲಿ ಗೀತಾರ್ಥಸರ್ವಸ್ವವನ್ನು ನೋಡಿ.

† ಪರಮೇಶ್ವರನ ಭಕ್ತರು ಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞ- ಇವುಗಳನ್ನು ಅರಿತುಕೊಳ್ಳುವರು, ಸಾಯುವ ಕಾಲದಲ್ಲಿಯೂ ನನ್ನನ್ನು ತಿಳಿದುಕೊಳ್ಳುವರು-ಎಂದು ಶ್ರೀಕೃಷ್ಣನು ಹಿಂದಿನ ಅಧ್ಯಾಯದ ಕೊನೆಯ ಎರಡು ಶ್ಲೋಕಗಳಲ್ಲಿ ಹೇಳಿರುತ್ತಾನೆ; ಅವುಗಳು ಯಾವವೆಂಬುದನ್ನು ತಿಳಿಸಿಲ್ಲ. ಆದ್ದರಿಂದ ಪ್ರಶ್ನೆಗೆ ಅವಕಾಶವಾಯಿತು.

‡ ಇಲ್ಲಿ ಅರಿಯುವದೆಂದರೆ ಉಪಾಸನೆಮಾಡುವದು.

ಈ ಪ್ರಶ್ನೆಗಳನ್ನು ಒಂದೊಂದಾಗಿ ನಿರ್ಣಯಿಸಿ ಹೇಳುವದಕ್ಕೆ ಭಗವಂತನು ಈ ಮಾತುಗಳನ್ನಾಡಿರುತ್ತಾನೆ:

**ಶ್ರೀಭಗವಾನುವಾಚ :—**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಶ್ರೀಭಗವಂತನು ಹೇಳಿದ್ದೇನೆಂದರೆ :—

೩. ಎಲ್ಲಕ್ಕೂ ಹೆಚ್ಚಿನ ಅಕ್ಷರವೇ ಬ್ರಹ್ಮವು, ಸ್ವಭಾವವೇ ಅಧ್ಯಾತ್ಮವೆನಿಸುವದು. ಪ್ರಾಣಿಗಳನ್ನುಂಟುಮಾಡುವ ತ್ಯಾಗಕ್ಕೆ ಕರ್ಮವೆಂದು ಹೆಸರು.

[ ಭಾಷ್ಯ ]

ಅಕ್ಷರವೆಂದರೆ * ನಾಶವಿಲ್ಲದ ಪರಮಾತ್ಮನು ; "ಎಲೈ ಗಾರ್ಗಿಯೆ, ಈ ಅಕ್ಷರದ ಅಪ್ಪಣೆಯಿಂದಲೇ (ಭೂವ್ಯೋಂತರಿಕ್ಷಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಅಲುಗಾಡದರಂತೆ ನಿಂತಿರುವವು)" (ಬೃ) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. (ಇಲ್ಲಿ ಅಕ್ಷರವೆಂದರೆ) ಓಂಕಾರವನ್ನು ತೆಗೆದುಕೊಳ್ಳಬಾರದು ; ಏಕೆಂದರೆ "ಓಂ ಎಂಬ ಒಂದಕ್ಷರದ ಬ್ರಹ್ಮವನ್ನು" ( ೮–೧೩ ) ಎಂಬ ಶ್ಲೋಕದಲ್ಲಿ ಮುಂದೆ (ಅದನ್ನು)ಬೇರೆಯಾಗಿ ಹೇಳಿರುತ್ತದೆ; ಎಲ್ಲಕ್ಕೂ ಹೆಚ್ಚಿನ [ಪರಮಂ] ಎಂಬ ವಿಶೇಷಣವೂ ಎಲ್ಲಕ್ಕೂ ಮಿಗಿಲಾದ ಬ್ರಹ್ಮರೂಪವಾದ ಅಕ್ಷರಕ್ಕೆ ಹೆಚ್ಚು ಹೊಂದುತ್ತದೆಯೇ ಹೊರತು (ಓಂಕಾರಕ್ಕೆ ಅಷ್ಟಾಗಿ ಹೊಂದಿಗೆಯಾಗುವದಿಲ್ಲ. ಆದ್ದರಿಂದ ನಾಶವಿಲ್ಲದ ಪರಮಾತ್ಮನೇ ಬ್ರಹ್ಮವು ಎಂಬುದೇ ವಾಕ್ಯದ ಅರ್ಥವು.)

ಈ ಪರಬ್ರಹ್ಮವೇ ಒಂದೊಂದು ದೇಹದಲ್ಲಿಯೂ ಒಳಗಿನ ಆತ್ಮನಾಗಿರುವದೆಂಬ ಸ್ವಭಾವವು, ಅದರ ಇರುವಿಕೆಯು, ಅಧ್ಯಾತ್ಮವೆನಿಸುವದು. ಆತ್ಮದ ಎಂದರೆ ದೇಹದ ಆಧಾರದಲ್ಲಿ † ಪ್ರತ್ಯಗಾತ್ಮನಾಗಿ ತೋರಿಕೊಂಡು ಪರಮಾರ್ಥವಾಗಿ ಬ್ರಹ್ಮವೇ ಎಂದು ಕೊನೆಗೆ ತೋರಿಬರುವ ವಸ್ತುಸ್ವಭಾವವೇ ಅಧ್ಯಾತ್ಮವೆನಿಸುವದು, ಅಧ್ಯಾತ್ಮಶಬ್ದದಿಂದ ಹೇಳಲ್ಪಡುತ್ತದೆ (ಎಂದರ್ಥ).

* ಈ ವಿಷಯದಲ್ಲಿ ಬೇರೆಬೇರೆ ಭಾಷ್ಯಕಾರರ ಅಭಿಪ್ರಾಯವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

† ನಿಜವಾಗಿ ನೋಡಿದರೆ ದೇಹದಲ್ಲಿ ಆತ್ಮನಿಲ್ಲ, ಆತ್ಮಚೈತನ್ಯಕ್ಕೇ ದೇಹವು ವಿಷಯವಾಗಿರುವದು. ಆದರೂ 'ದೇಹದೊಳಗೆ ನಾನಿರುವೆನು' ಎಂದು ಮನಸ್ಸಿನಲ್ಲಿ ತೋರಿಕೊಳ್ಳುವದರಿಂದ ದೇಹದಲ್ಲಿ ಆತ್ಮನಿರುವನೆಂದು ವ್ಯವಹಾರವು ಬಂದಿರುವದು.

ಭೂತಭಾವವೆಂದರೆ ಪ್ರಾಣಿಗಳಾಗಿರುವದು *; ಇದರ ಉತ್ಪತ್ತಿಯೇ ಭೂತಭಾವೋದ್ಭವವು; ಇದನ್ನುಂಟುಮಾಡುವದು ಭೂತಭಾವೋದ್ಭವಕರ. ಪ್ರಾಣಿಗಳ ರೂಪದ ವಸ್ತುಗಳನ್ನುಂಟುಮಾಡುವ ಎಂದರ್ಥ. ಇಂಥ ವಿಸರ್ಗವು, ಎಂದರೆ ಬಿಡುವಿಕೆಯು, ದೇವತೆಗಳಿಗೋಸ್ಕರವೆಂದು ಚರು, ಪುರೋಡಾಶ† ಮುಂತಾದ ಪದಾರ್ಥವನ್ನು (ಹೋಮಕಾಲದಲ್ಲಿ) ಹಾಕುವದೆಂಬ ಯಜ್ಞವೇ ‡ ಕರ್ಮವೆಂಬ ಹೆಸರುಳ್ಳದ್ದು, ಅದಕ್ಕೆ ಕರ್ಮವೆಂಬ ಹೆಸರೆಂದರ್ಥ. ಈ ಯಜ್ಞವೆಂಬ ಬೀಜದಿಂದಲೇ ವೃಷ್ಟಿಯೇ § ಮುಂತಾದ ಕ್ರಮದಲ್ಲಿ ಸ್ಥಾವರಜಂಗಮ ಪ್ರಾಣಿಗಳು ಉಂಟಾಗುವವು. ॥ ೩ ॥

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

೪. ನಾಶವಾಗುವ ವಸ್ತುವೇ ಅಧಿಭೂತವು, ಪುರುಷನೇ ಅಧಿದೈವವು; ಎಲೈ ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೆ, ಈ ದೇಹದಲ್ಲಿರುವ ಅಧಿಯಜ್ಞನೆಂದರೆ ನಾನೇ.

[ ಭಾಷ್ಯ ]

ಅಧಿಭೂತವೆಂದರೆ ಪ್ರಾಣಿಸಮೂಹದಲ್ಲಿರುವದು. ಅದು ಯಾವದು ? ಕ್ಷರವೆಂದರೆ ನಾಶವಾಗುವದು, ಭಾವವೆಂದರೆ ಹುಟ್ಟುವ ಯಾವದಾದರೂ ವಸ್ತು; (ಹುಟ್ಟಿ ನಾಶವಾಗುವ ವಸ್ತುವೆಲ್ಲ ಅಧಿಭೂತವೆನಿಸುವದು) || ಎಂದರ್ಥ. ಪುರುಷನೇ (ಅಧಿದೈವವು); ಸರ್ವವನ್ನೂ ತುಂಬಿಕೊಂಡಿರುವದರಿಂದ, ಅಥವಾ

---

* 'ಭೂತಭಾವೋದ್ಭವಕರ' ಎಂಬಲ್ಲಿ 'ಭಾವ' ಎಂಬ ಶಬ್ದಕ್ಕೆ ಉತ್ಪತ್ತಿ ಎಂಬರ್ಥವನ್ನು ಮಾಡಿದರೆ 'ಉದ್ಭವ' ಎಂಬ ಮಾತು ವ್ಯರ್ಥವಾಗುವದು ; ಆದ್ದರಿಂದ ಭೂತಭಾವ ಎಂದರೆ ಭೂತತ್ವ, ಪ್ರಾಣಿಗಳ ಸ್ವರೂಪ– ಎಂಬರ್ಥವನ್ನು ಮಾಡಿದೆ. ಇಲ್ಲಿ ತೋರುವ ಪುನರುಕ್ತಿಯನ್ನು ತಪ್ಪಿಸುವದಕ್ಕೆ ವ್ಯಾಖ್ಯಾನಕಾರರು ಮಾಡಿರುವ ಬೇರೆಬೇರೆ ಅರ್ಥಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

† ಮಂತ್ರಪೂತವಾಗಿ ಹಾಲು, ತುಪ್ಪ, ನೀರು– ಇವುಗಳಲ್ಲೊಂದರಲ್ಲಿ ಬೇಯಿಸಿದ ಧಾನ್ಯವು ಚರು ; ಅಕ್ಕಿಹಿಟ್ಟಿನಿಂದ ಮಾಡಿ ಹೋಮಮಾಡುವ ರೊಟ್ಟಿಯು ಪುರೋಡಾಶವು.

‡ ದೇವತೆಗಳಿಗಾಗಿ ತನ್ನ ವಸ್ತುವನ್ನು ತ್ಯಾಗಮಾಡುವದೇ ಯಜ್ಞವೆನಿಸುವದು. ಅದನ್ನೇ ಇಲ್ಲಿ 'ಕರ್ಮ'ವೆಂದು ಕರೆದಿದೆಯೆಂದು ಭಾವ.

§ ಮೂರನೆಯ ಅಧ್ಯಾಯದ ೧೪ನೆಯ ಶ್ಲೋಕದ ಭಾಷ್ಯವನ್ನು ನೋಡಿ.

|| ಪ್ರಾಣಿಗಳಲ್ಲಿರುವ ಸ್ಥೂಲಸೂಕ್ಷ್ಮಶರೀರವೇ ಇಲ್ಲಿ ಅಧಿಭೂತವು ; ಇದನ್ನು 'ಕ್ಷೇತ್ರ'ವೆಂದು ೧೩ನೆಯ ಅಧ್ಯಾಯದಲ್ಲಿ ಕರೆದಿದೆ.

(ಪ್ರಾಣಿಗಳ ಹೃದಯವೆಂಬ) ಪುರದಲ್ಲಿರುವದರಿಂದ [ಪೂರ್ಣಮನೇನ ಸರ್ವಮಿತಿ, ಪುರಿ ಶಯನಾದ್ವಾ] ಸೂರ್ಯನೊಳಗಿರುವ **ಹಿರಣ್ಯಗರ್ಭನಿಗೆ** ಪುರುಷನೆಂದು ಹೆಸರು. ಸರ್ವಪ್ರಾಣಿಗಳ ಕರಣಗಳಿಗೂ ಆತನೇ ಅನುಗ್ರಾಹಕನು * (ಆದ್ದರಿಂದ ಆ ಪುರುಷನೇ) ಅಧಿದೈವವು. ಅಧಿಯಜ್ಞನೆಂದರೆ ಯಜ್ಞಗಳಿಗೆಲ್ಲ ಅಭಿಮಾನಿಯಾದ **ವಿಷ್ಣು**ವೆಂಬ ಹೆಸರಿನ ದೇವತೆಯು; "ಯಜ್ಞವೆಂದರೆ ವಿಷ್ಣುವೇ"(ತೈ.ಸಂ.) ಎಂಬ ಶ್ರುತಿಯೇ ಇದಕ್ಕೆ ಪ್ರಮಾಣವು. ಆ ವಿಷ್ಣುವು ನಾನೇ. ಈ ದೇಹದಲ್ಲಿ ಯಜ್ಞವಿದೆಯಷ್ಟೆ, ಇದಕ್ಕೆ ಅಧಿಯಜ್ಞನು ನಾನು. ಯಜ್ಞವು ದೇಹದಿಂದ ಮಾಡತಕ್ಕದ್ದಾದ್ದರಿಂದ ದೇಹಸಂಬಂಧವುಳ್ಳದ್ದಾಯಿತು. ಆದ್ದರಿಂದ ಇದಕ್ಕೆ ದೇಹವೇ ಆಶ್ರಯವಾಯಿತು. (ಆದ್ದರಿಂದ 'ಈ ದೇಹದಲ್ಲಿ' ಎಂದು ಹೇಳಲಾಗಿದೆ.) ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೆ, (ಈ ರೀತಿಯಾಗಿ ಬ್ರಹ್ಮವೇ ಮುಂತಾದವುಗಳನ್ನು ನಿನಗೆ ತಿಳಿಸಿದ್ದಾಯಿತು.) ॥ ೪ ॥

**ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

೫. ಮತ್ತು ಕಡೆಯ ಕಾಲದಲ್ಲಿ ನನ್ನನ್ನೇ ಸ್ಮರಿಸಿಕೊಳ್ಳುತ್ತಾ ದೇಹವನ್ನು ಬಿಟ್ಟು ಯಾವನು ನಡೆಯುವನೋ ಅವನು ನನ್ನ ಸ್ವರೂಪವನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ.

[ ಭಾಷ್ಯ ]

ಮತ್ತು ಕಡೆಯ ಕಾಲದಲ್ಲಿ ಎಂದರೆ ಸಾಯುವಾಗ ಪರಮೇಶ್ವರನಾದ ವಿಷ್ಣುವಾದ ನನ್ನನ್ನೇ ನೆನಸಿಕೊಳ್ಳುತ್ತಾ ಶರೀರವನ್ನು ಬಿಟ್ಟು ಯಾವನು ತೆರಳುವನೋ ಅವನು ನನ್ನ ಸ್ವರೂಪವನ್ನು ಎಂದರೆ ವಿಷ್ಣುಸ್ವರೂಪವನ್ನೇ ಹೊಂದು

* ಪರಮಾತ್ಮನು ಎಲ್ಲವನ್ನೂ ತುಂಬಿಕೊಂಡಿರುವನಾದರೂ ಉತ್ಕೃಷ್ಟವಾದ ಉಪಾಧಿಗಳಲ್ಲಿ ಹೆಚ್ಚಾಗಿ ಬೆಳಗುವನು ಸೂರ್ಯನೊಳಗಿರುವ ಪರಮಾತ್ಮನನ್ನೇ ಈಶ್ವರನೆಂದು ಉಪಾಸನೆ ಮಾಡಬೇಕೆಂದು ಅನೇಕ ಶ್ರುತಿಗಳಲ್ಲಿ ಹೇಳಿರುವದು ಉಪಾಧಿಯ ಉತ್ಕೃಷ್ಟತೆಯಿಂದಲೇ. ಸೂರ್ಯನ ತೇಜಸ್ಸು ಸಕಲಪ್ರಾಣಿಗಳಿಗೂ ತಮ್ಮ ತಮ್ಮ ಕರಣಗಳಿಂದ ಜ್ಞಾನಕರ್ಮಗಳನ್ನು ನೆರವೇರಿಸಿಕೊಳ್ಳಲಿಕ್ಕೆ ಸಹಾಯವಾಗಿರುವದರಿಂದಲೂ ಅದೇ ಪರಮಾತ್ಮನೇ ಪ್ರಾಣಿಗಳೆಲ್ಲರ ಮನಸ್ಸಿಗೂ ಸಾಕ್ಷಿಯಾಗಿ ಪ್ರಾಣಿಗಳೊಳಗೂ ಇರುವದರಿಂದಲೂ ಸೂರ್ಯಾಂತರ್ಗತನಾದ ಪರಮಾತ್ಮನನ್ನು ಪುರುಷನೆಂದೂ ಕರಣಾನುಗ್ರಾಹಕನಾದ ಪರಮಾತ್ಮನನ್ನು 'ಅಧಿದೈವ'ವೆಂದೂ ಕರೆದಿದೆ. ಅಧ್ಯಾತ್ಮ, ಅಧಿಭೂತ, ಅಧಿದೈವ– ಎಂಬ ವಿಂಗಡಗಳ ವಿಷಯದಲ್ಲಿ ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ.

ವನು. ಇದರಲ್ಲಿ ಎಂದರೆ ಈ ವಿಷಯದಲ್ಲಿ ಹೊಂದುವನೋ ಇಲ್ಲವೋ ಎಂಬ ಸಂದೇಹವಿಲ್ಲ.

## ಮರಣಕಾಲದಲ್ಲಿ ಪರಮಾತ್ಮನ ಧ್ಯಾನವು ಒದಗುವದಕ್ಕೆ ಮಾಡಬೇಕಾದ ಅಭ್ಯಾಸ

ಈ ನಿಯಮವು ನನ್ನ ವಿಷಯದಲ್ಲಿ ಮಾತ್ರವಿಲ್ಲ, ಮತ್ತೇನೆಂದರೆ—

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ ।**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥ ೬ ॥**

೬. ಎಲೈ ಕೌಂತೇಯನೆ, ಯಾವಾಗಲೂ ಅದರ ಭಾವದಿಂದ ಭಾವಿತನಾಗಿದ್ದು ಯಾವ ಯಾವ ಭಾವವನ್ನು ಸ್ಮರಿಸಿಕೊಳ್ಳುತ್ತಾ ಕೊನೆಯಲ್ಲಿ ದೇಹವನ್ನು ಬಿಡುವನೋ, ಆಯಾ ಭಾವವನ್ನೇ ಹೊಂದುವನು.

[ ಭಾಷ್ಯ ]

ಕೊನೆಯಲ್ಲಿ ಎಂದರೆ ಪ್ರಾಣವು ಬಿಟ್ಟಗಲುವ ಕಡೆಯ ಕಾಲದಲ್ಲಿ ಯಾವಯಾವ ಭಾವವನ್ನು ಎಂದರೆ ಯಾವ ಯಾವ ದೇವತೆಯನ್ನು ಸ್ಮರಿಸಿಕೊಳ್ಳುತ್ತಾ ನೆನಸಿಕೊಳ್ಳುತ್ತಾ ಶರೀರವನ್ನು ಬಿಡುವನೋ, ಅವನು ನೆನಸಿಕೊಂಡ ಆಯಾ ಭಾವವನ್ನೇ ಹೊಂದುವನೇ ಹೊರತು ಬೇರೆ ಹೊಂದುವದಿಲ್ಲ. ಎಲೈ ಕೌಂತೇಯನೆ, ಯಾವಾಗಲೂ ಅದರ ಭಾವದಿಂದ ಭಾವಿತನಾಗಿರುವವನು ಅದನ್ನೇ ಮತ್ತೆಮತ್ತೆ ನೆನಸಿಕೊಳ್ಳುತ್ತಾ ಅದರ ವಾಸನೆಯಿಂದಲೇ ಅವನು ಕೂಡಿರುವನಾಗಿರುವದರಿಂದ (ಅದನ್ನೇ ಹೊಂದುವನು.) ॥ ೬ ॥

ಹೀಗೆ ಕಡೆಯ ಭಾವನೆಯು * ಮತ್ತೊಂದು ದೇಹವನ್ನು ಹೊಂದುವದಕ್ಕೆ ಕಾರಣವಾಗಿರುವದಷ್ಟೆ; ಆದಕಾರಣ—

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ ೭ ॥**

೭. ಆದ್ದರಿಂದ ಸರ್ವಕಾಲಗಳಲ್ಲಿಯೂ ನನ್ನನ್ನು ಸ್ಮರಿಸುತ್ತಿರು, (ಈಗ) ಯುದ್ಧವನ್ನು ಮಾಡು. ನನ್ನಲ್ಲಿ ಅರ್ಪಿಸಿದ ಮನೋಬುದ್ಧಿಗಳುಳ್ಳವನಾದರೆ ನನ್ನನ್ನೇ ಹೊಂದುವೆ, ಸಂಶಯವಿಲ್ಲ.

---

* ಯಾವ ಭಾವನೆಯನ್ನು ಮನುಷ್ಯನು ಯಾವಾಗಲೂ ಇಟ್ಟುಕೊಂಡಿರುವನೋ, ಆ ಭಾವನೆಯು ಬಲವಾಗಿ ಅವನಿಗೆ ಅಂಟಿಕೊಂಡು ದೇಹವನ್ನು ಬಿಟ್ಟಗಲುವ ಕಾಲದಲ್ಲಿಯೂ ಸ್ವಪ್ರಯತ್ನವಿಲ್ಲದೆಯೇ ತೋರಿಕೊಳ್ಳುತ್ತಿರುವದು, ಆ ಭಾವನೆಯ ಹೆಗ್ಗುರಿಯು ಯಾವದೋ ಅದನ್ನು ಸೇರುವದಕೆ ಅನುಗುಣವಾದ ಜನ್ಮವು ಬರುವದು— ಎಂದು ಶ್ರುತಿಗಳಲ್ಲಿ ಅಲ್ಲಲ್ಲಿ ಹೇಳಿರುವದು.

[ ಭಾಷ್ಯ ]

ಎಲ್ಲಾ ಕಾಲಗಳಲ್ಲಿಯೂ ಶಾಸ್ತ್ರದಲ್ಲಿ * ಹೇಳಿರುವಂತೆ ನನ್ನನ್ನು ಸ್ಮರಿಸುತ್ತಿರು. (ಈಗ) ನಿನ್ನ ಧರ್ಮವಾಗಿರುವ ಯುದ್ಧವನ್ನು ಮಾಡು. ವಾಸುದೇವನಾದ ನನ್ನಲ್ಲಿ ಅರ್ಪಿತವಾದ ಮನೋಬುದ್ಧಿಗಳುಳ್ಳವನಾದರೆ, ಎಂದರೆ ನೀನು ಮನಸ್ಸು, ಬುದ್ಧಿ-ಈ ಎರಡನ್ನೂ † ನನ್ನಲ್ಲಿಯೇ ಇಟ್ಟದ್ದಾದರೆ ಯಾವ ರೂಪದಲ್ಲಿ ಸ್ಮರಣೆಮಾಡಿರುವೆಯೋ ಆ ರೂಪದಲ್ಲಿಯೇ ನನ್ನನ್ನು ಪಡೆಯುವೆ, ಇದರಲ್ಲಿ ಸಂಶಯವಿಲ್ಲ.

## ಅಭ್ಯಾಸಯೋಗದ ಫಲ.

ಮಂತ್ರ—

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ॥ ೮ ॥**

೮. ಎಲೈ ಪಾರ್ಥನೆ, ಅಭ್ಯಾಸಯೋಗದಿಂದ ಕೂಡಿ ಮತ್ತೊಂದು ಕಡೆ ಹರಿಯದ ಚಿತ್ತದಿಂದ ಅನುಚಿಂತನೆಮಾಡುತ್ತಿರುವಾತನು ದಿವ್ಯನಾದ ಪರಮ ಪುರುಷನನ್ನು ಹೊಂದುವನು.

[ ಭಾಷ್ಯ ]

ಚಿತ್ತವನ್ನು ಯಾರಲ್ಲಿ ಸಮರ್ಪಣೆಮಾಡಬೇಕೆಂದು (ಹೇಳಿದೆನೋ) ಆ ನನ್ನೊಬ್ಬನಲ್ಲಿಯೇ ಒಂದೇ ಬಗೆಯ ಭಾವವನ್ನು ಮತ್ತೆ ಮತ್ತೆ ನಡೆಯಿಸುತ್ತಿರುವದು, ಬೇರೆ ಬಗೆಯ ಭಾವವನ್ನು ನಡುವೆ ಬರಗೊಡದಿರುವದು- ಇದಕ್ಕೆ

---

* ಪರಮಾತ್ಮಸ್ವರೂಪವನ್ನು ಹೇಗೆ ಧ್ಯಾನಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆಯೋ ಅದರಂತೆ ಅದರಲ್ಲಿಯೇ ಮನಸ್ಸಿಟ್ಟು ಎಡೆಬಿಡದೆ ಕೊನೆಯವರೆಗೂ ಧ್ಯಾನಮಾಡುತ್ತಿರಬೇಕೆಂಬುದನ್ನು 'ಶಾಸ್ತ್ರದಲ್ಲಿ ಹೇಳಿರುವಂತೆ' ಎಂಬ ವಿಶೇಷಣವು ಸೂಚಿಸುತ್ತದೆ ಎಂದು (ಆ||) ವ್ಯಾಖ್ಯಾನಕಾರರು ಹೇಳುತ್ತಾರೆ. ಉಪಾಸನೆಯ ವಿಷಯದಲ್ಲಿ ಬ್ರ|| ಸೂ|| ೪ನೆಯ ಅಧ್ಯಾಯದಲ್ಲಿ ವಿಚಾರಮಾಡಿರುತ್ತದೆ. ಗೀತಾರ್ಥಸರ್ವಸ್ವದಲ್ಲಿಯೂ ಇದನ್ನು ಸ್ವಲ್ಪಮಟ್ಟಿಗೆ ವಿವರಿಸಲಾಗಿದೆ. ಈ ಅಧ್ಯಾಯದ ೧೩, ೧೪, ೧೫ನೆಯ ಶ್ಲೋಕಗಳನ್ನು ನೋಡಿ.

† ಇಲ್ಲಿ ಜ್ಞಾನಕರ್ಮಸಮುಚ್ಚಯವಿಲ್ಲವೆಂದು (ಆ||) ಟೀಕಾಕಾರರು ಹೇಳುತ್ತಾರೆ. ಇದು ಸರಿಯೆಂದು ತೋರುವದಿಲ್ಲ. ಮನೋಬುದ್ಧಿಗಳನ್ನು ಸಮರ್ಪಿಸುವದೆಂದರೆ ಪರಮಾತ್ಮನ ಚಿಂತೆಯಲ್ಲಿ ಮುಳುಗಿರುವದು. ಇದೊಂದನ್ನೇ ಮಾಡು ಎಂಬುದೇನೂ ಇಲ್ಲಿ ಭಗವಂತನ ಅಭಿಪ್ರಾಯವಲ್ಲ. ಸ್ವಧರ್ಮವನ್ನು ಮಾಡುತ್ತಾ ಭಗವಂತನಿಗೆ ಅದನ್ನು ಸಮರ್ಪಿಸಿ ಅವನ ಚಿಂತೆಯನ್ನೇ ಮಾಡುತ್ತಿರು ಎಂಬುದು ತಾತ್ಪರ್ಯ.

ಅಭ್ಯಾಸವೆಂದು ಹೆಸರು. ಈ ಅಭ್ಯಾಸವೇ ಯೋಗವು. ಅದರಲ್ಲಿಯೇ ಯೋಗಿಯ ಚಿತ್ತವು ಕೆಲಸಮಾಡುತ್ತಿರುವದು. ಇಂಥ ಅಭ್ಯಾಸಯೋಗದಿಂದ ಕೂಡಿ ಮತ್ತೊಂದು ಕಡೆ ಹರಿಯದಿರುವ ಸ್ವಭಾವವುಳ್ಳ ಚಿತ್ತದಿಂದ ಅನುಚಿಂತನೆಮಾಡು ತ್ತಿರುವಾತನು ಎಂದರ್ಥ. ಶಾಸ್ತ್ರದ ಮತ್ತು ಆಚಾರ್ಯರ ಉಪದೇಶಕ್ಕೆ ಅನು ಸಾರವಾಗಿ ಧ್ಯಾನಮಾಡುತ್ತಿರುವಾತನು ಎಂದರ್ಥ. (ಅಂಥವನು) ದಿವ್ಯನಾದ, ದಿವದಲ್ಲಿ, ಸೂರ್ಯಮಂಡಲದಲ್ಲಿ ಇರುವ, ಪರಮಪುರುಷನನ್ನು ಮಿಗಿಲಿಲ್ಲದ ಪುರುಷನನ್ನು, ಹೊಂದುವನು.

ಮತ್ತು ಎಂಥ ಪುರುಷನನ್ನು ಹೊಂದುವನು ? ಎಂದರೆ ಹೇಳುತ್ತಾನೆ:–

> ಕವಿಂ ಪುರಾಣಮನುಶಾಸಿತಾರ-
> ಮಣೋರಣೀಯಾಂಸಮನುಸ್ಮರೇದ್ಯಃ ।
> ಸರ್ವಸ್ಯ ಧಾತಾರಮಚಿನ್ತ್ಯರೂಪ-
> ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥

೯. ಕವಿಯೂ, ಪುರಾಣನೂ, ಆಳುವವನೂ, ಅಣುವಿಗಿಂತಲೂ ಅಣು ವಾಗಿರುವವನೂ, ಎಲ್ಲಕ್ಕೂ ಧಾತೃವೂ, ಅಚಿಂತ್ಯವಾದ ರೂಪವುಳ್ಳವನೂ, ಆದಿತ್ಯ ವರ್ಣನೂ, ಕತ್ತಲೆಯ ಆಚೆಯಿರುವವನೂ– ಇದ (ಪರಮಪುರುಷನನ್ನು) ಯಾವನು ಅನುಸ್ಮರಣೆಮಾಡುತ್ತಿರುವನೋ (ಅವನು ಆ ಪುರುಷನನ್ನು ಹೊಂದು ವನು.)

[ ಭಾಷ್ಯ ]

ಕವಿಯೆಂದರೆ ಆಚೆಗಿರುವದನ್ನು ನೋಡುವ ಸರ್ವಜ್ಞನು. ಪುರಾಣನು, ಬಹುಕಾಲದಿಂದ ಇರುವ (ಹಳಬನು). ಆಳುವವನು ಎಂದರೆ ಸಮಸ್ತಜಗತ್ತನ್ನು ಕಟ್ಟಪ್ಪಣೆಯಲ್ಲಿಟ್ಟಿರುವವನು. ಅಣುವಿಗಿಂತಲೂ ಅಣು, ಎಂದರೆ ಸೂಕ್ಷ್ಮವಾ ಗಿರುವದೆಲ್ಲಕ್ಕಿಂತಲೂ ಸೂಕ್ಷ್ಮವಾಗಿರುವವನು. ಯಾವನೇ ಆಗಲಿ (ಇಂಥ ಪುರುಷನನ್ನು ಯಾವನು) ಅನುಸ್ಮರಣೆಮಾಡುವನೋ (ಶಾಸ್ತ್ರದಲ್ಲಿ ಹೇಳಿರುವಂತೆ) ಅನುಚಿಂತನೆಮಾಡುತ್ತಿರುವನೋ. ಎಲ್ಲಕ್ಕೂ ಧಾತೃವು ಎಂದರೆ ಕರ್ಮಗಳ ಫಲ ವೆಲ್ಲವನ್ನೂ ಬಗೆಬಗೆಯಾಗಿ ಪ್ರಾಣಿಗಳಿಗೆ ಎಂಗಡಿಸಿಕೊಡುವವನು. ಅಚಿಂತ್ಯ ರೂಪನು ಎಂದರೆ ಈತನ ಸ್ವರೂಪವು ಮಾರ್ಪಾಡಿಲ್ಲದೆ ಒಂದೇ ತೆರನಾಗಿದ್ದರೂ ಯಾರೂ ಇದನ್ನು (ವಿಷಯಮಾಡಿ) ತಿಳಿಯಲಾರರು *; ಆದ್ದರಿಂದ ಅಚಿಂತ್ಯರೂಪ

* ಉಪಾಸನೆಗೆ ವಿಷಯವಾಗಿರುವದು ಪರಮಾತ್ಮಸ್ವರೂಪವಲ್ಲ, ಆ ಸ್ವರೂಪವನ್ನು ವಿಷಯ ವಾಗಿ ಮಾಡಿಕೊಳ್ಳುವದು ಆಗಲಾರದು.

ನೆನಿಸಿರುವನು. ಆದಿತ್ಯವರ್ಣನು, ಸೂರ್ಯನ ಸ್ವಭಾವವಾದ (ಪ್ರಕಾಶ) ದಂತೆ * ನಿತ್ಯಚೈತನ್ಯಪ್ರಕಾಶವೇ ಇವನ ವರ್ಣವಾಗಿರುವದು ; ಇಂಥ ಆದಿತ್ಯವರ್ಣನು, ಕತ್ತಲೆಯಿಂದಾಚೆಗಿರುವವನು ಎಂದರೆ ಅಜ್ಞಾನವೆಂಬ ಮೋಹದ ಕಗ್ಗತ್ತಲೆಯಿಂದಾಚೆಗೆ ಇರುವವನು. ಇಂಥ ಪುರುಷನನ್ನು ಅನುಚಿಂತನೆಮಾಡುವಾತನು (ಆ ಪರಮಪುರುಷನನ್ನು) ಹೊಂದುವನು ಎಂದು ಹಿಂದಿನ (ಶ್ಲೋಕದ ವಾಕ್ಯಕ್ಕೆ) ಸಂಬಂಧಿಸಿಕೊಳ್ಳಬೇಕು.

ಮತ್ತು—

**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್** ॥ ೧೦ ॥

೧೦. ಪ್ರಯಾಣಕಾಲದಲ್ಲಿ ನಿಶ್ಚಲವಾದ ಮನಸ್ಸಿನಿಂದ ಭಕ್ತಿಯಿಂದಲೂ ಯೋಗದ ಬಲದಿಂದಲೂ ಕೂಡಿದವನಾಗಿ ಹುಬ್ಬುಗಳ ನಡುವೆ ಸರಿಯಾಗಿ ಪ್ರಾಣವನ್ನು ಇಟ್ಟು ಅವನು ದಿವ್ಯನಾದ ಪರಮಪುರುಷನನ್ನು ಹೊಂದುವನು.

[ ಭಾಷ್ಯ ]

ಪ್ರಯಾಣಕಾಲದಲ್ಲಿ ಎಂದರೆ ಸಾಯುವ ಕಾಲದಲ್ಲಿ ನಿಶ್ಚಲವಾದ ಸ್ವಲ್ಪವೂ ಅಲುಗಾಡದ ಮನಸ್ಸಿನಿಂದ ಭಕ್ತಿಯಿಂದಲೂ †- (ಪ್ರೇಮದಿಂದ) ಭಜಿಸುವದೇ ಭಕ್ತಿಯು ; ಆ ಭಕ್ತಿಯಿಂದಲೂ- ಯೋಗಬಲದಿಂದಲೂ ಕೂಡಿ ; ಯೋಗದ ಬಲವೆಂದರೆ **ಸಮಾಧಿ**ಯಿಂದುಂಟಾದ ಸಂಸ್ಕಾರವು ಬಲವಾಗಿ ಚಿತ್ತವು ಸ್ಥಿರವಾಗುವದು ; ಆ (ಯೋಗಬಲದಿಂದಲೂ) ಕೂಡಿ ಎಂದರ್ಥ. ಮೊದಲು ಹೃದಯಕಮಲದಲ್ಲಿ ಚಿತ್ತವನ್ನು ಅಳವಡಿಸಿಕೊಂಡು ಆಮೇಲೆ ಮೇಲಕ್ಕೆ ಹೋಗಿರುವ (ಸುಷುಮ್ನೆ ಎಂಬ) **ನಾಡಿ**ಯಿಂದ ಒಂದೊಂದಾಗಿ **ಭೂಮಿಕೆ**ಗಳನ್ನು ‡

* ಸೂರ್ಯನು ಪ್ರಕಾಶಸ್ವರೂಪನೇ ಆಗಿರುವಂತೆ ಪರಮಾತ್ಮನು ನಿತ್ಯಚೈತನ್ಯಸ್ವರೂಪನು.

† ಯೋಗಿಗಳಲ್ಲೆಲ್ಲ ಭಕ್ತಿಯಿಂದ ಪರಮಾತ್ಮನನ್ನು ಪೂಜಿಸುವವನೇ ಶ್ರೇಷ್ಠನೆಂದು ಹಿಂದೆ (೬—೪೭)ರಲ್ಲಿ ತಿಳಿಸಿರುವದರ ಸೂಚನೆಯಿದು.

‡ ಮನಸ್ಸನ್ನು ಶರೀರದಲ್ಲಿರುವ ಬೇರೆಬೇರೆ ಚಕ್ರಗಳಲ್ಲಿ ನಿಲ್ಲಿಸಿಕೊಳ್ಳುತ್ತಾ ಮೇಲು ಮೇಲಕ್ಕೆ ಒಯ್ಯಬೇಕೆಂದು ಯೋಗಿಗಳು ಹೇಳುವರು ; ಈ ಕ್ರಮವನ್ನು ಬಲ್ಲ ಅನುಭವಿಗಳಿಂದಲೇ ಇದನ್ನು ತಿಳಿದುಕೊಳ್ಳಬೇಕಾಗಿದೆ. (ಯೋಗಸೂ. ೩-೬) ಭೂಮಿಜಯಕ್ರಮೇಣ- ಎಂಬುದಕ್ಕೆ ಭೂಮಿಯೇ ಮುಂತಾದ ಪಂಚಭೂತಗಳನ್ನು ಜಯಿಸುವದೆಂದು (ಆ||) ವ್ಯಾಖ್ಯಾನಕಾರರು ಅರ್ಥ ಮಾಡಿರುತ್ತಾರೆ. ಇದು ಬೇರೆ ಬೇರೆ ಚಕ್ರಗಳಲ್ಲಿ ಮನಸ್ಸಿಟ್ಟರೆ ಬೇರೆ ಬೇರೆ ತತ್ತ್ವಗಳ ಜಯವಾಗುವದೆಂಬ ತಂತ್ರಶಾಸ್ತ್ರದ ಪ್ರಕ್ರಿಯೆಯನ್ನು ಲಕ್ಷ್ಯದಲ್ಲಿಟ್ಟು ಹೇಳಿದ್ದೆಂದು ತಿಳಿಯಬೇಕು.

ಗೆದ್ದುಕೊಂಡು ಹುಬ್ಬುಗಳ ನಡುವೆ ಪ್ರಾಣವನ್ನು * ಚೆನ್ನಾಗಿ ನಿಲ್ಲಿಸಿಕೊಂಡು ಸ್ವಲ್ಪವೂ ಎಚ್ಚರಿಕೆತಪ್ಪದವನಾಗಿ, ಅವನು ಎಂದರೆ ಈ ರೀತಿಯಲ್ಲಿ ಧ್ಯಾನ ಮಾಡುವ ಯೋಗಿಯು 'ಕವಿಯೂ ಪುರಾಣನೂ' ಎಂದು ಮುಂತಾಗಿ (ಹಿಂದಿನ ಶ್ಲೋಕದಲ್ಲಿ ವರ್ಣಿಸಿರುವ) ಆ ದಿವ್ಯನಾದ ಪ್ರಕಾಶಸ್ವರೂಪನಾದ ಪರಮಪುರುಷನನ್ನು ಹೊಂದುವನು. ॥ ೧೦ ॥

ಮುಂದೆ ಹೇಳುವ ಸಾಧನದಿಂದ ಪಡೆಯಬೇಕಾಗಿರುವ ಬ್ರಹ್ಮವು ವೇದವನ್ನು ಬಲ್ಲವರು ತಿಳಿಸುತ್ತಾರೆಂಬುದೇ ಮುಂತಾದ ವಿಶೇಷಣಗಳಿಂದ ಕೂಡಿರುವದೆಂದು † ಭಗವಂತನು ಮತ್ತೂ ಹೇಳುತ್ತಾನೆ:—

ಓಂಕಾರದ ಮೂಲಕ ಪರಮಾತ್ಮನ ಉಪಾಸನೆ

**ಯದಕ್ಷರಂ ವೇದವಿದೋ ವದನ್ತಿ**
**ವಿಶನ್ತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

೧೧. ಯಾವ ಅಕ್ಷರವನ್ನು ವೇದವನ್ನು ಬಲ್ಲವರು ತಿಳಿಸುವರೋ, ವೀತರಾಗರಾದ ಯತಿಗಳು ಯಾವದನ್ನು ಪ್ರವೇಶಿಸುವರೋ, ಯಾವದನ್ನು ಬಯಸಿ ಬ್ರಹ್ಮಚರ್ಯವನ್ನು ಆಚರಿಸುವರೋ, ಆ ಸ್ಥಾನವನ್ನು ಸಂಗ್ರಹವಾಗಿ ನಿನಗೆ ಹೇಳುವೆನು.

[ ಭಾಷ್ಯ ]

ಅಕ್ಷರವೆಂದರೆ ನಾಶವಿಲ್ಲದೆ ಇರುವ (ತತ್ತ್ವವು); ಇಂಥ ಯಾವ ಅಕ್ಷರವನ್ನು ವೇದವನ್ನು ಬಲ್ಲವರು ಎಂದರೆ ವೇದದ ಅರ್ಥವನ್ನು ತಿಳಿದವರು ಹೇಳುವರೋ, "ಎಲೌ ಗಾರ್ಗಿಯೆ, ಈ ಅಕ್ಷರವನ್ನು ಬ್ರಾಹ್ಮಣರು ( ಹೀಗೆಂದು ) ಹೇಳುವರು" (ಬೃ.) ಎಂಬ ಶ್ರುತಿಯಲ್ಲಿ ಹೇಳಿರುವಂತೆ ಅದಕ್ಕೆ ಯಾವ ವಿಶೇ

* ಪ್ರಾಣವನ್ನು ನಿಲ್ಲಿಸುವದೆಂದರೆ ಸಂಯಮಮಾಡುವದೇ; ಮನೋಜಯದಿಂದ ಪ್ರಾಣಜಯವೂ ಆಗುವದರಿಂದ ಇದಕ್ಕೇ 'ಪ್ರಾಣವನ್ನು ನಿಲ್ಲಿಸುವದೆಂದು' ವ್ಯವಹಾರ. ಇಲ್ಲಿ ಹೇಳಿರುವ ಯೋಗವನ್ನು ತೈತ್ತಿರೀಯಕಠಾದಿಗಳಲ್ಲಿಯೂ ತಿಳಿಸಿದೆ.

† ಮುಂದೆ ೧೩ನೆಯ ಶ್ಲೋಕದಲ್ಲಿ ಹೇಳುವ ಪ್ರಣವೋಚ್ಚಾರವೆಂಬ ಸಾಧನದಿಂದ ಪಡೆಯಬೇಕಾಗಿರುವ ಬ್ರಹ್ಮಕ್ಕೆ ಇನ್ನೂ ಕೆಲವು ವಿಶೇಷಣಗಳನ್ನು ತಿಳಿಸುತ್ತಾನೆಂದರ್ಥ.

ಷವೂ ಇಲ್ಲ, ಅದು 'ದಪ್ಪದಲ್ಲ, ಸಣ್ಣದಲ್ಲ' (ಬೃ) ಎಂದು ಮುಂತಾಗಿ ತಿಳಿಸುವರೋ *; ಮತ್ತು ವೀತರಾಗರಾದ ಯತಿಗಳು ಯಾದರ (ವಿಷಯದಲ್ಲಿ) ರಾಗವಿಲ್ಲದವರಾಗಿ (ಇಂದ್ರಿಯಗಳನ್ನು ಬಿಗಿಹಿಡಿದು) ಪ್ರಯತ್ನಮಾಡುತ್ತಿರುವ ಸಂನ್ಯಾಸಿಗಳು ಸರಿಯಾದ ಅರಿವನ್ನು † ಪಡೆದು ಯಾವದನ್ನು ಪ್ರವೇಶಿಸುವರೋ; ಮತ್ತು ಯಾವ ಅಕ್ಷರವನ್ನು ಬಯಸಿ,- ಎಂದರೆ ತಿಳಿಯಬೇಕೆಂದು ‡ (ಇಚ್ಛಿಸಿ) ಎಂದು ಸೇರಿಸಿಕೊಳ್ಳಬೇಕು - (ಯಾವ ಅಕ್ಷರವನ್ನು ಬಯಸಿ) ಗುರುವಿನ ಬಳಿಯಲ್ಲಿದ್ದು ಬ್ರಹ್ಮಚರ್ಯವನ್ನಾಚರಿಸುವರೋ, ಆ ಪದವನ್ನು ಎಂದರೆ ಪಡೆಯಬೇಕಾಗಿರುವ ಆ ಅಕ್ಷರದ ಸ್ಥಾನವನ್ನು ಸಂಗ್ರಹವಾಗಿ ಸ್ವಲ್ಪದರಲ್ಲಿಯೇ ನಿನಗೆ ತಿಳಿಸುವೆನು. ॥ ೧೧ ॥

"ಪೂಜ್ಯರೆ, ಯಾವಾತನಾದರೆ ಸಾಯುವವರೆಗೂ ಓಂಕಾರವನ್ನು ಧ್ಯಾನಮಾಡುತ್ತಿರುವನೋ, ಅದರಿಂದ ಯಾವ ಲೋಕವನ್ನು ಅವನು ಗೆದ್ದುಕೊಳ್ಳುವನು ?– (ಹೀಗೆಂದು ಕೇಳಿದ) ಆತನನ್ನು ಕುರಿತು ಆ (ಪಿಪ್ಪಲಾದ)ನಿಂತೆಂದನು : ಎಲೈ ಸತ್ಯಕಾಮನೆ, ಈ ಓಂಕಾರವೆಂಬುದೇ ಪರಬ್ರಹ್ಮವು ಮತ್ತು ಅಪರಬ್ರಹ್ಮವು"– ಎಂದು ಮೊದಲುಮಾಡಿ "ಯಾವಾತನಾದರೆ ಮೂರು ಮಾತ್ರೆಗಳಿಂದಲೂ ಕೂಡಿ ಓಂ ಎಂಬ ಅಕ್ಷರದಿಂದಲೇ ಈ ಪರಮಪುರುಷನನ್ನು ಧ್ಯಾನಮಾಡುತ್ತಿರುವನೋ .... ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುವನು." ಎಂದು ಮುಂತಾಗಿರುವ (ಪ್ರಶ್ನೋಪನಿಷತ್ತಿನ) ವಚನದಿಂದಲೂ "ಧರ್ಮಕ್ಕಿಂತಲೂ ಬೇರೆಯಾಗಿ ಅಧರ್ಮಕ್ಕಿಂತಲೂ ಬೇರೆಯಾಗಿ (ಇರುವ ಯಾವದನ್ನು ನೀನು ಬಲ್ಲೆಯೋ ಅದನ್ನು ಹೇಳು)" ಎಂದು ಮೊದಲುಮಾಡಿ "ವೇದಗಳೆಲ್ಲವೂ ಯಾವ ಸ್ಥಾನವನ್ನು ತಿಳಿಸುತ್ತವೆಯೋ ತಪಸ್ಸುಗಳೆಲ್ಲವೂ ಯಾವದನ್ನು ತಿಳಿಸುವವೋ, ಯಾವದನ್ನು ಬಯಸಿ ಬ್ರಹ್ಮಚರ್ಯವನ್ನು ಆಚರಿಸುವರೋ, ಆ ಸ್ಥಾನವನ್ನು ನಿನಗೆ ಸ್ವಲ್ಪದರಲ್ಲಿ ಹೇಳುವೆನು. ಓಂ ಎಂಬುದೇ ಇದು" (ಕ) ಎಂಬುದೇ ಮುಂತಾದ ವಚನಗಳಿಂದಲೂ ಪರಬ್ರಹ್ಮಕ್ಕೆ **ವಾಚಕವಾಗಿಯೋ** § ಪ್ರತಿಮೆಯ ಹಾಗೆ **ಪ್ರತೀಕವಾಗಿಯೋ** ಪರಬ್ರಹ್ಮವನ್ನು

---

* ಜ್ಞಾನಿಗಳು ತಿಳಿಯುವ ನಿರ್ಗುಣಬ್ರಹ್ಮವೇ ಇಲ್ಲಿ ಹೇಳಿರುವ ಉಪಾಸ್ಯಬ್ರಹ್ಮ.

† ಬ್ರಹ್ಮವನ್ನು ಸೇರುವದಕ್ಕೆ ಜ್ಞಾನವು ಬೇಕೇ ಬೇಕು

‡ ಬ್ರಹ್ಮಚರ್ಯವೇ ಮುಂತಾದ ಸಾಧನಗಳು 'ವಿವಿದಿಷೆ' (ತಿಳಿಯಬೇಕೆಂಬ ಇಚ್ಛೆ)ಗೆ ಕಾರಣವಾಗುವವು. ಗೀತಾರ್ಥಸರ್ವಸ್ವದಲ್ಲಿ ಇದನ್ನು ಚರ್ಚಿಸಿದೆ.

§ ವಾಚಕವೆಂದರೆ ಅದನ್ನು ಹೆಸರಿಸುವ ಮಾತು ; ಪ್ರತೀಕವೆಂದರೆ ಯಾವದನ್ನೇ ಬ್ರಹ್ಮವೆಂದು ಉಪಾಸನೆ ಮಾಡುತ್ತೇವೆಯೋ ಅದು. ಪ್ರತೀಕದ ಮೂಲಕ ಪರಮೇಶ್ವರಪೂಜೆಯನ್ನು ಮಾಡುವದು ಪ್ರತಿಮಾಪೂಜೆಯಲ್ಲಿ ಪ್ರಸಿದ್ಧವಾಗಿದೆ.

ಪಡೆಯುವದಕ್ಕೆ ಸಾಧನವಾಗಿ ಕೀಳ್ತರದ ಬುದ್ಧಿಯುಳ್ಳವರಿಗೂ ನಡುತರದ ಬುದ್ಧಿಯುಳ್ಳವರಿಗೂ ಹೇಳಿರುವ ಓಂಕಾರದ ಉಪಾಸನೆಯು ಕಾಲಾಂತರದಲ್ಲಿ ಮುಕ್ತಿಯನ್ನು ಕೊಡುವದೆಂದು ತಿಳಿಸಿದೆಯಷ್ಟೆ. ಆದನ್ನೇ ಇಲ್ಲಿ "ಕವಿಯೂ ಪುರಾಣನೂ" (೮-೯) "ಯಾವ ಅಕ್ಷರವನ್ನು ವೇದವನ್ನು ಬಲ್ಲವರು ತಿಳಿಸುವರೋ" (೮-೧೧) ಎಂದು ಹಿಂದೆ ಹೇಳಿದ ಪರಬ್ರಹ್ಮವನ್ನು ಪಡೆಯುವದಕ್ಕೆ ಮೇಲೆ ಹೇಳಿದ ರೀತಿಯಿಂದ* ಸಾಧನವಾಗಿರುವ ಓಂಕಾರವನ್ನು ಉಪಾಸನೆಮಾಡಿದರೆ ಕಾಲಾಂತರದಲ್ಲಿ ಮುಕ್ತಿಯುಂಟೆಂದು ಅದನ್ನು ಯೋಗಧಾರಣೆಯ ಸಮೇತವಾಗಿ ಹೇಳಬೇಕಾಗಿರುವದರಿಂದಲೂ, ಪ್ರಸಕ್ತವಾಗಿರುವ ಈ ವಿಷಯಕ್ಕೆ ಸಂಬಂಧಪಟ್ಟಂತೆ ಮತ್ತೆ ಕೆಲವು ವಿಷಯಗಳನ್ನೂ ಹೇಳಬೇಕಾಗಿರುವದರಿಂದಲೂ, ಮುಂದಿನ ಗ್ರಂಥವು ಪ್ರಾರಂಭವಾಗಿರುತ್ತದೆ :—

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥೧೨**
**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥**

೧೨-೧೩. ಸರ್ವದ್ವಾರಗಳನ್ನೂ ಬಿಗಿಹಿಡಿದು, ಮನಸ್ಸನ್ನು ಹೃದಯದಲ್ಲಿ ತಡೆದಿಟ್ಟು, ತನ್ನ ಪ್ರಾಣವನ್ನು ನೆತ್ತಿಯಲ್ಲಿಟ್ಟು, ಯೋಗಧಾರಣೆಯನ್ನು ಹೊಂದಿದವನಾಗಿ, ಓಂ ಎಂಬ ಒಂದಕ್ಷರದ ಬ್ರಹ್ಮವನ್ನು ಉಚ್ಚರಿಸುತ್ತಾ, ನನ್ನನ್ನು ಅನುಸ್ಮರಣೆಮಾಡುತ್ತಾ ಯಾವಾತನು ದೇಹವನ್ನು ಬಿಟ್ಟು ತೆರಳುವನೋ ಅವನು ಪರಮಗತಿಯನ್ನೈದುವನು.

[ ಭಾಷ್ಯ ]

( ವಿಷಯವನ್ನು ) ಅರಿಯುವದಕ್ಕೆ ಬಾಗಿಲಾಗಿರುವ ( ಇಂದ್ರಿಯಗ )ಳೆಲ್ಲವನ್ನೂ ಬಿಗಿಯುಹಿಡಿದು, ಮನಸ್ಸನ್ನು ಹೃದಯಪುಂಡರೀಕದಲ್ಲಿ ತಡೆಗಟ್ಟಿ, ಅಲುಗಾಡದಂತೆ ಮಾಡಿಕೊಂಡು, ಅಲ್ಲಿ ವಶಗೊಳಿಸಿಕೊಂಡ ಮನಸ್ಸಿನ ಮೂಲಕವಾಗಿ ಹೃದಯದಿಂದ ಮೇಲಕ್ಕೆ ಹೋಗಿರುವ (ಸುಷುಮ್ನಾ) ನಾಡಿಯ ದಾರಿಯಿಂದ ಮೇಲಕ್ಕೆ ಹತ್ತಿ, ತನ್ನ ಪ್ರಾಣವನ್ನು ನೆತ್ತಿಯಲ್ಲಿಟ್ಟು, **ಯೋಗಧಾರಣೆಯನ್ನು**† ಹೊಂದಿದವನಾಗಿ ಎಂದರೆ ಯೋಗವನ್ನು ಧರಿಸುವದಕ್ಕೆ

---

* ವಾಚಕವಾಗಿಯೂ ಪ್ರತೀಕವಾಗಿಯೂ.

† ಒಂದಾನೊಂದು ಗೊತ್ತಾದ ಸ್ಥಳದಲ್ಲಿ ಚಿತ್ತವನ್ನು ಹಿಡಿದಿಟ್ಟುಕೊಳ್ಳುವದು ಧಾರಣೆ. (ಯೋ. ಸೂ. ೩-೧)

ಮೊದಲುಮಾಡಿ ಅಲ್ಲಿಯೇ ಅದನ್ನು ಹಿಡಿದಿಟ್ಟುಕೊಂಡು, ಓಂ ಎಂಬ ಒಂದಕ್ಷರದ ಬ್ರಹ್ಮವನ್ನು ಎಂದರೆ ಬ್ರಹ್ಮದ ಹೆಸರಾದ ಓಂಕಾರವನ್ನು ಉಚ್ಚರಿಸುತ್ತಾ ಆ ಓಂಕಾರಕ್ಕೆ ಅರ್ಥವಾಗಿರುವ * ಈಶ್ವರನಾದ ನನ್ನನ್ನು ಅನುಸ್ಮರಿಸುತ್ತಾ ಅನುಚಿಂತನೆಮಾಡುತ್ತಾ ಯಾವಾತನು ತೆರಳುವನೋ ಎಂದರೆ ಸಾಯುವನೋ, ಆತನು ಈ ಶರೀರವನ್ನು ಬಿಟ್ಟು; 'ದೇಹವನ್ನು ಬಿಟ್ಟು' ಎಂಬುದು ತೆರಳುವಿಕೆಗೆ ವಿಶೇಷಣವು; ಜೀವಾತ್ಮನಿಗೆ ದೇಹವನ್ನು ಬಿಡುವದರಿಂದಲೇ ಮರಣವೇ ಹೊರತು ಸ್ವರೂಪನಾಶವಾಗುವದರಿಂದಲ್ಲ ಎಂದರ್ಥ. ಹೀಗೆ ದೇಹವನ್ನು ಬಿಟ್ಟವನು ಪರಮಗತಿಯನ್ನು ಹೊಂದುವನು, ಎಲ್ಲಕ್ಕೂ ಹೆಚ್ಚಿನ ಗತಿಯನ್ನು ಪಡೆಯುವನು.

## ಪರಮಾತ್ಮನನ್ನು ಪಡೆದವರಿಗೆ ಸಂಸಾರದ ದುಃಖವಿಲ್ಲ

ಮತ್ತು

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

೧೪. ಎಲೈ ಪಾರ್ಥನೆ, ಯಾವಾತನು ಮತ್ತೊಂದರಲ್ಲಿ ಚಿತ್ತವಿಡದೆ, ಯಾವಾಗಲೂ ಎಡೆಬಿಡದೆ ನನ್ನನ್ನೇ ಸ್ಮರಿಸುತ್ತಿರುವನೋ ಆ ನಿತ್ಯಯುಕ್ತನಾದ ಯೋಗಿಗೆ ನಾನು ಸುಲಭನು.

[ ಭಾಷ್ಯ ]

ಮತ್ತೊಂದು ವಿಷಯದಲ್ಲಿ ಚಿತ್ತವಿಡದೆ ಇರುವ ಯೋಗಿಯು ಅನನ್ಯಚಿತ್ತನೆನಿಸುವನು. ( ಹೀಗೆ ಅನನ್ಯಚಿತ್ತನಾಗಿ ) ಯಾವಾಗಲೂ ಪರಮೇಶ್ವರನಾದ ನನ್ನನ್ನೇ ಯಾವನು ನಿತ್ಯವಾಗಿ ಸ್ಮರಿಸುತ್ತಿರುವನೋ. ( ಇಲ್ಲಿ ) ಸತತವಾಗಿ ಎಂದರೆ ಎಡೆಬಿಡದೆ ಎಂಬರ್ಥ, ನಿತ್ಯವೂ ಎಂದರೆ ದೀರ್ಘಕಾಲದವರೆಗೆ ಎಂದರ್ಥ. ಆರು ತಿಂಗಳೋ ಒಂದು ವರ್ಷವೋ ಅಲ್ಲ, ಬದುಕಿರುವವರೆಗೂ ಎಡೆಬಿಡದೆ ಯಾವಾತನು ನನ್ನನ್ನು ಸ್ಮರಿಸುತ್ತಿರುವನೋ † ಎಂದರ್ಥ. ಅಂಥ

---

* ಓಂಕಾರದ ಜಪವೆಂದರೆ ಓಂಕಾರದ ಅರ್ಥವಾದ ಪರಮಾತ್ಮನನ್ನು ಭಾವನೆಮಾಡುವದೇ. (೧–೨೮) ಪಾತಂಜಲಸೂತ್ರದ ಸೂಚನೆ.

† ಬಹುಕಾಲದವರೆಗೆ, ಎಡೆಬಿಡದೆ, ತಪಸ್ಸು ಬ್ರಹ್ಮಚರ್ಯ ಮುಂತಾದವುಗಳಿಂದ ಕೂಡಿ, ನಡೆಯಿಸಿದ ಅಭ್ಯಾಸವೇ ಫಲಕಾರಿಯೆಂಬ ಯೋಗಸೂತ್ರ(೧–೧೪) ವನ್ನು ಸೂಚಿಸಿದೆ.

ಯೋಗಿಗೆ ನಾನು ಸುಲಭನಾಗಿರುವೆನು. ಎಲೈ ಪಾರ್ಥನೆ, ನಿತ್ಯಯುಕ್ತನಾಗಿ ಎಂದರೆ ಯಾವಾಗಲೂ ಚಿತ್ತವನ್ನು ಸಮಾಧಿಯಲ್ಲಿಟ್ಟುಕೊಂಡಿರುವ ಆ ಯೋಗಿಗೆ ನಾನು ಸುಖವಾಗಿ ದೊರಕುವೆನು. ಹೀಗಿರುವದರಿಂದ ಮತ್ತೊಂದರಲ್ಲಿ ಚಿತ್ತವಿಡದೆ, ಯಾವಾಗಲೂ ನನ್ನಲ್ಲಿ ಮನಸ್ಸನ್ನು ನಿಲ್ಲಿಸಿಕೊಂಡಿರಬೇಕು. ॥ ೧೪ ॥

ನೀನು ಸುಲಭನಾದರೆ ಏನಾಗುವದು ? ಎಂದರೆ, ನಾನು ಸುಲಭನಾಗಿ ದೊರಕುವದರಿಂದ ಏನಾಗುವದೋ ಹೇಳುತ್ತೇನೆ ಕೇಳು :—

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

೧೫. ನನ್ನನ್ನು ಸೇರಿ ಪರಮಸಂಸಿದ್ಧಿಯನ್ನು ಪಡೆದ ಮಹಾತ್ಮರು ದುಃಖಕ್ಕೆ ಎಡೆಯೂ ಅಶಾಶ್ವತವಾದದ್ದೂ ಆಗಿರುವ ಪುನರ್ಜನ್ಮವನ್ನು ಹೊಂದುವದಿಲ್ಲ.

[ ಭಾಷ್ಯ ]

ಈಶ್ವರನಾದ ನನ್ನನ್ನು ಸೇರಿ ನನ್ನ ಸ್ವರೂಪವನ್ನು ಪಡೆದರೆ ಪುನರ್ಜನ್ಮವನ್ನು ಎಂದರೆ ಮರುಹುಟ್ಟನ್ನು ಹೊಂದುವದಿಲ್ಲ : ಎಂಥ ಪುನರ್ಜನ್ಮವನ್ನು ಹೊಂದುವದಿಲ್ಲ ? ಎಂದರೆ ಅದಕ್ಕೆ ವಿಶೇಷಣವನ್ನು ಹೇಳುತ್ತಾನೆ: ದುಃಖಾಲಯವಾದದ್ದು, ಆಧ್ಯಾತ್ಮಿಕವೇ ಮುಂತಾದ ದುಃಖಗಳಿಗೆ ಎಡೆಯಾಗಿರುವದು. ದುಃಖಗಳು ಯಾವದರಲ್ಲಿ ಇರುತ್ತಿರುವವೋ ಆ ಜನ್ಮವು ದುಃಖಾಲಯವು. ಅದು ದುಃಖಾಲಯವೆಂಬುದಿಷ್ಟೇ ಅಲ್ಲ, ಅಶಾಶ್ವತವಾದದ್ದು ; ಇಂಥದ್ದೆಂದು ಗೊತ್ತಾದ ಸ್ವರೂಪವಿಲ್ಲದ್ದು. ಮೋಕ್ಷವೆಂಬ ಹೆಚ್ಚಿನ ಸಂಸಿದ್ಧಿಯನ್ನು ಪಡೆದಿರುವ ಮಹಾತ್ಮರು ಇಂಥ ಜನ್ಮವನ್ನು ಪಡೆಯುವದಿಲ್ಲ. ಆದರೆ ಯಾರು ನನ್ನನ್ನು ಪಡೆಯುವದಿಲ್ಲವೋ, ಅವರು ಮಾತ್ರ ಈ (ಸಂಸಾರಕ್ಕೆ) ಹಿಂದಿರುಗುತ್ತಾರೆ. ॥ ೧೫ ॥

## ಯಾವಲೋಕಕ್ಕೆ ಹೋದರೂ ಸಂಸಾರವು ತಪ್ಪಿದ್ದಲ್ಲ

ನಿನ್ನನ್ನು ಬಿಟ್ಟು ಮಿಕ್ಕದ್ದನ್ನು ಪಡೆದವರು ಹಿಂತಿರುಗುವರೇನು ? * ಎಂದರೆ ಹೇಳುತ್ತಾನೆ :—

* "ಸೋಮಪಾನವನ್ನು ಮಾಡಿ ಅಮೃತರಾದೆವು" ಎಂದು ಮುಂತಾಗಿರುವ ಶ್ರುತಿಯನ್ನು ನೋಡಿದರೆ ಸ್ವರ್ಗಾದಿಗಳನ್ನು ಪಡೆದವರೂ ಮರಳಿ ಈ ಲೋಕಕ್ಕೆ ಬರುವದಿಲ್ಲವೆಂದು ತೋರುವದಲ್ಲ !— ಎಂಬುದು ಪ್ರಶ್ನೆಯ ಭಾವ.

**ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

೧೬. ಅರ್ಜುನನೆ, ಬ್ರಹ್ಮಲೋಕದವರೆಗಿನ ಲೋಕಗಳೆಲ್ಲವೂ ಹಿಂತಿರುಗಿಸುವವೇ ; ಆದರೆ ಕೌಂತೇಯನೆ, ನನ್ನನ್ನು ಸೇರಿದ ಬಳಿಕ ಪುನರ್ಜನ್ಮವಿಲ್ಲ.

[ ಭಾಷ್ಯ ]

ಭುವನವೆಂದರೆ ಭೂತಗಳು (ಪ್ರಾಣಿಗಳು) ಇರುವದಕ್ಕೆಡೆಯಾಗಿರುವದು. ಬ್ರಹ್ಮಭುವನವೆಂದರೆ ಬ್ರಹ್ಮಲೋಕವೆಂದರ್ಥ. ಎಲೈ ಅರ್ಜುನನೆ, ಬ್ರಹ್ಮಲೋಕದವರೆಗೆ ಎಂದರೆ ಬ್ರಹ್ಮಲೋಕವೂ * ಸೇರಿ ಎಲ್ಲಾ ಲೋಕಗಳೂ, ಪುನರಾವರ್ತಿಯುಳ್ಳವೇ ಎಂದರೆ (ಈ ಲೋಕಕ್ಕೆ) ಮರಳಿಸುವಂಥವೇ. ಆದರೆ ಎಲೈ ಕೌಂತೇಯನೆ, ನನ್ನೊಬ್ಬನನ್ನು ಸೇರಿದರೆ ಮಾತ್ರ, ಪುನರ್ಜನ್ಮವು ಎಂದರೆ ಮತ್ತೆ ಹುಟ್ಟುವದೆಂಬುದು, ಇಲ್ಲ. ॥ ೧೬ ॥

ಬ್ರಹ್ಮಲೋಕವೂ ಸೇರಿ ಎಲ್ಲಾ ಲೋಕಗಳೂ ಏತಕ್ಕೆ ಹಿಂತಿರುಗಿಸುವವು? ಎಂದರೆ ಕಾಲಕ್ಕೆ ಕಟ್ಟುಬಿದ್ದಿರುವದರಿಂದ. ಅದು ಹೇಗೆ ? ಎಂದರೆ :—

**ಸಹಸ್ರಯುಗಪರ್ಯನ್ತಮಹರ್ಯದ್ ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾನ್ತಾಂ ತೇಽಹೋರಾತ್ರವಿದೋ ಜನಾಃ ॥೧೭॥**

೧೭. ಅಹೋರಾತ್ರವನ್ನು ಬಲ್ಲ ಜನರು ಬ್ರಹ್ಮನ ಹಗಲು ಸಾವಿರಯುಗದವರೆಗೆ ಇರುವದೆಂಬುದನ್ನೂ ರಾತ್ರಿಯು ಸಾವಿರಯುಗದವರೆಗೆ ಇರುವದೆಂಬುದನ್ನೂ ಬಲ್ಲರು.

[ ಭಾಷ್ಯ ]

ಬ್ರಹ್ಮನ, ಎಂದರೆ ವಿರಾಟ್ಪುರುಷನಾದ ಪ್ರಜಾಪತಿಯ ಸಾವಿರಯುಗಗಳ ಕೊನೆಯಲ್ಲಿ ಮುಗಿಯುವದಾದ್ದರಿಂದ ಬ್ರಹ್ಮನ ಹಗಲು ಸಹಸ್ರಯುಗಪರ್ಯಂತವಾಗಿರುವದು. ರಾತ್ರಿಯೂ ಸಹಸ್ರಯುಗಪರ್ಯಂತವಾಗಿರುವದು, ಎಂದರೆ ಹಗಲಿನಷ್ಟೇ ಇರುವದು— ಎಂಬುದನ್ನು ಬಲ್ಲರು. ಯಾರು ಬಲ್ಲರು ? ಎಂದರೆ ಹೇಳುತ್ತಾನೆ : ಆ ಹಗಲು ರಾತ್ರಿಗಳನ್ನು ಬಲ್ಲ ಎಂದರೆ ಕಾಲದ ಲೆಕ್ಕವನ್ನು

* ಬ್ರಹ್ಮಲೋಕದಲ್ಲಿ ಯಾರಿಗೆ ಜ್ಞಾನವುಂಟಾಗುವದೋ ಅವರಿಗೆ ಮೋಕ್ಷವೇ ಆಗುವದು; ಮಿಕ್ಕವರೆಲ್ಲ ಸ್ವರ್ಗಕ್ಕೆ ಹೋದವರಂತೆಯೇ ಈ ಲೋಕಕ್ಕೆ ಹಿಂತಿರುಗಬೇಕಾಗುವದು.

ಬಲ್ಲ ಜನರು ( ಬಲ್ಲರು ) ಎಂದರ್ಥ. ಹೀಗೆ ಆ ಲೋಕಗಳೆಲ್ಲ ಕಾಲಕ್ಕೆ ಕಟ್ಟು ಬಿದ್ದಿರುವದರಿಂದ ಹಿಂತಿರುಗಿಸುತ್ತವೆ. ॥ ೧೭ ॥

ಪ್ರಜಾಪತಿಬ್ರಹ್ಮನ ಹಗಲಿನಲ್ಲಿ ಏನಾಗುತ್ತದೆ, ಮತ್ತು ರಾತ್ರಿಯಲ್ಲಿ ಏನಾಗುತ್ತದೆ- ಎಂಬುದನ್ನು ಹೇಳುತ್ತಾನೆ :—

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

೧೮. ಹಗಲು ಬರುತ್ತಲೂ ಅವ್ಯಕ್ತದಿಂದ ವ್ಯಕ್ತಿಗಳೆಲ್ಲವೂ ಹುಟ್ಟುತ್ತವೆ; ರಾತ್ರಿಯು ಬರುತ್ತಲೂ ಅವ್ಯಕ್ತವೆಂಬ ಹೆಸರಿನ ಅದರಲ್ಲಿಯೇ ಪ್ರಲಯವಾಗುತ್ತವೆ.

[ ಭಾಷ್ಯ ]

**ಅವ್ಯಕ್ತವೆಂದರೆ** ಪ್ರಜಾಪತಿಯ ನಿದ್ರಾವಸ್ಥೆಯು. * ಆ ಅವ್ಯಕ್ತದಿಂದ ವ್ಯಕ್ತಿಗಳು ಎಂದರೆ ತೋರತೋರಿಕೊಳ್ಳುವ ಸ್ಥಾವರಜಂಗಮರೂಪವಾದ ಎಲ್ಲಾ ಪ್ರಾಣಿಗಳು ಹಗಲು ಬರುತ್ತಲೂ ಅಂದರೆ ಹಗಲು ತಲೆದೋರಿತೋ ಇಲ್ಲವೋ ಕೂಡಲೆ ಆ ಬ್ರಹ್ಮನ ಎಚ್ಚರ ಕಾಲದಲ್ಲಿ ಹುಟ್ಟುತ್ತವೆ, ಎಂದರೆ ತೋರಿಕೊಳ್ಳುತ್ತವೆ; ಇದರಂತೆ ರಾತ್ರಿಯು ಬರುತ್ತಲೂ ಎಂದರೆ ಬ್ರಹ್ಮನು ನಿದ್ರೆಹೋಗುವ ಕಾಲದಲ್ಲಿ (ಈ) ವ್ಯಕ್ತಿಗಳೆಲ್ಲ ಅದರಲ್ಲಿಯೇ ಎಂದರೆ ಹಿಂದೆ ಹೇಳಿದ ಅವ್ಯಕ್ತವೆಂಬ ಹೆಸರಿನ (ಅವಸ್ಥೆಯಲ್ಲಿಯೇ) ಅಡಗಿಕೊಳ್ಳುತ್ತವೆ. ॥ ೧೮ ॥

ಮಾಡದೆ ಇರುವ (ಕರ್ಮದ ಫಲವು) ಉಂಟಾಗುವದು, ಮಾಡಿದ(ಕರ್ಮದ) ಫಲವು ನಾಶವಾಗುವದು– ಎಂಬ ದೋಷಗಳನ್ನು † ಒಗೆಹರಿಸುವದಕ್ಕೂ, ಬಂಧಮೋಕ್ಷಗಳನ್ನು ತಿಳಿಸುವ ಶಾಸ್ತ್ರವು ಸಾರ್ಥಕವೆಂದು ‡ ತೋರಿಸುವ

* ಮನು. ೧–೫೨

† ಈ ಕಲ್ಪದಲ್ಲಿ ಮಾಡಿದ ಫಲಗಳನ್ನು ಅನುಭವಿಸುವದಕ್ಕೆ ಮುಂದಿನ ಕಲ್ಪದಲ್ಲಿ ಮಾಡಿದವರೇ ಇಲ್ಲದೆ ಹೋಗುವದು, ಯಾವ ಕರ್ಮವನ್ನೂ ಮಾಡದಿದ್ದರೂ ಅಕಸ್ಮಾತ್ತಾಗಿ ಹೊಸಬರು ಸಂಸಾರದಲ್ಲಿ ಹುಟ್ಟುವದು– ಎಂಬೀ ಎರಡು ದೋಷಗಳನ್ನು.

‡ ಮೋಕ್ಷವಾಗುವವರೆಗೂ ಜೀವನು ಬೇರೆ ಬೇರೆ ಜನ್ಮಗಳನ್ನು ಪಡೆಯುತ್ತಿರುವನು, ಕಲ್ಪವೇ ಬದಲಾಯಿಸಿದರೂ ಸಂಸಾರಬಂಧದಿಂದ ಬಿಡುಗಡೆಯಾಗುವದಿಲ್ಲ– ಎಂಬುದನ್ನು ತಿಳಿಸುವದಕ್ಕೂ.

ದಕ್ಕೂ, ಅವಿದ್ಯೆಯೇ * ಮುಂತಾದ ಕ್ಲೇಶಗಳಿಂದಾಗಿರುವ **ಕರ್ಮಾಶಯದ** ದೆಸೆಯಿಂದ, ಪರತಂತ್ರವಾಗಿರುವ ಪ್ರಾಣಿಗಳ ಗುಂಪು ಹುಟ್ಟಿ ಹುಟ್ಟಿ ಸಾಯುತ್ತಿರುವದು ಎಂದು ಸಂಸಾರದಲ್ಲಿ ವೈರಾಗ್ಯವನ್ನು ತೋರಿಸುವದಕ್ಕೂ ಇದನ್ನು ಹೇಳುತ್ತಾನೆ :—

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

೧೯. ಎಲೈ ಪಾರ್ಥನೆ, ಅದೇ ಈ ಭೂತಗ್ರಾಮವೇ ಆಗಿ ಆಗಿ ರಾತ್ರಿಯು ಬರುತ್ತಲೂ ಅವಶವಾಗಿ ಪ್ರಲಯವಾಗುತ್ತಿರುವದು; ಹಗಲು ಬರುತ್ತಲೂ ಹುಟ್ಟುತ್ತಿರುವದು.

[ ಭಾಷ್ಯ ]

ಭೂತಗ್ರಾಮವೆಂದರೆ ಸ್ಥಾವರಜಂಗಮರೂಪವಾದ ಪ್ರಾಣಿಗಳ ಗುಂಪು. ಹಿಂದಿನ ಕಲ್ಪದಲ್ಲಿ ಯಾವ (ಪ್ರಾಣಿಗಳ ಸಮುದಾಯವಿತ್ತೋ) ಅದೇ ಬೇರೆಯಲ್ಲ, (ಅದೇ) ಹಗಲಾಗುತ್ತಲೂ ಹೊರತೋರಿಕೊಂಡು ತೋರಿಕೊಂಡು ಮತ್ತೆಮತ್ತೆ ಹಗಲು ಸವೆದು ರಾತ್ರಿಯು ಬರುತ್ತಲೂ ಅವಶ್ಯವಾಗಿ ತನ್ನ ಸ್ವಾತಂತ್ರ್ಯವೇನೂ ಇಲ್ಲದೆ ಅಡಗುತ್ತಿರುವದು. ಎಲೈ ಪಾರ್ಥನೆ, ಹಗಲು ಬರುತ್ತಲೂ (ಮತ್ತೆ) ಸ್ವಾತಂತ್ರ್ಯವೇನೂ ಇಲ್ಲದೆಯೇ ಹುಟ್ಟುತ್ತಿರುವದು. ॥ ೧೯ ॥

## ಪರಮಾತ್ಮನನ್ನು ಪಡೆದವರಿಗೆ ಮತ್ತೆ ಸಂಸಾರವಿಲ್ಲ

ಅಕ್ಷರವೆಂದು ಹಿಂದೆ (೮-೩) ಹೇಳಿತ್ತಷ್ಟೆ, ಆ (ಬ್ರಹ್ಮ) ವನ್ನು ಪಡೆಯುವದಕ್ಕೆ "ಓಂ ಎಂಬ ಅಕ್ಷರದ ಬ್ರಹ್ಮವನ್ನು (ಉಚ್ಚರಿಸುತ್ತಾ)" ಮುಂತಾಗಿ (೮-೧೩) ಸಾಧನವನ್ನು ತಿಳಿಸಿದ್ದಾಯಿತು. ಈಗ ಆ ಅಕ್ಷರದ (ಬ್ರಹ್ಮದ) ಸ್ವರೂಪವನ್ನೇ ತಿಳಿಸುವದಕ್ಕಾಗಿ, ಈ ಯೋಗಮಾರ್ಗದಿಂದ ಇದನ್ನು ಸೇರಬೇಕೆಂದು ಹೀಗೆ ಹೇಳುತ್ತಿದ್ದಾನೆ :—

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

---

* ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ— ಎಂಬ ಕ್ಲೇಶಗಳಿಂದ ಧರ್ಮಾಧರ್ಮಗಳ ಕರ್ಮಾಶಯವಾಗುವದು. ಇದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿದೆ.

೨೦. ಆದರೆ ಆ ಅವ್ಯಕ್ತಕ್ಕಿಂತಲೂ ಅವ್ಯಕ್ತವಾಗಿರುವ ಬೇರೆಯಾದ ಮತ್ತೊಂದು ಸನಾತನಭಾವವು ಯಾವದುಂಟೋ, ಅದು ಸರ್ವಭೂತಗಳೂ ನಾಶವಾದರೂ ನಾಶವಾಗುವದಿಲ್ಲ.

[ ಭಾಷ್ಯ ]

ಪರವೆಂದರೆ ವ್ಯತಿರಿಕ್ತ, ಬೇರೆಯಾದದ್ದು. ಯಾವದಕ್ಕಿಂತ ( ಬೇರೆ ) ? ಎಂದರೆ ಹಿಂದೆ ಹೇಳಿದ (ಅವ್ಯಕ್ತಕ್ಕಿಂತ). ಇಲ್ಲಿರುವ 'ಆದರೆ' [ತು] ಎಂಬ ಮಾತು ಇಲ್ಲಿ ಹೇಳಬೇಕೆಂದಿರುವ ಅಕ್ಷರ(ಬ್ರಹ್ಮ)ವು ಅವ್ಯಕ್ತಕ್ಕಿಂತ * ಬೇರೆಯ ಸ್ವಭಾವದ್ದೆಂದು ತಿಳಿಯಪಡಿಸುವದಕ್ಕೆ. ಭಾವವು, ಎಂದರೆ ಅಕ್ಷರವೆಂಬ ಪರಬ್ರಹ್ಮ (ವಸ್ತು). ಬೇರೆಯಾಗಿದ್ದರೂ ಅದೇ ಜಾತಿಯಾಗಿರಬಹುದು † ಅದನ್ನು ಅಲ್ಲ ವೆನ್ನುವದಕ್ಕಾಗಿ 'ಮತ್ತೊಂದು' ಎಂಬ ಮಾತನ್ನು ಹೇಳಿದೆ. ಮತ್ತೊಂದು ಎಂದರೆ ಬೇರೊಂದು ಬಗೆಯಾಗಿರುವದು. ಅದು ಅವ್ಯಕ್ತವಾದದ್ದು, ಎಂದರೆ ಇಂದ್ರಿಯ ಗಳಿಗೆ ಗೋಚರವಲ್ಲದ್ದು. 'ಅದಕ್ಕಿಂತ ಬೇರೆ' ಎಂದು ಹೇಳಿದೆಯಲ್ಲ, ಯಾವದ ಕ್ಕಿಂತ ಬೇರೆ? ಎಂದರೆ **ಅವಿದ್ಯಾಕಲ್ಪಿತವಾದ ‡ ಅವ್ಯಕ್ತವು** ಪ್ರಾಣಿಗಳ ಗುಂಪಿಗೆಲ್ಲ ಬೀಜವಾದದ್ದೆಂದು **ಹಿಂದೆ ಹೇಳಿತ್ತಷ್ಟೆ; ಆ (ಅವ್ಯಕ್ತ)ಕ್ಕಿಂತಲೂ ಬೇರೆಯ ಸ್ವಭಾವದ ವಸ್ತುವೆಂದರ್ಥ.** ಸನಾತನವಾದದ್ದು, ಎಂದರೆ ಎಂದೆಂದಿನಿಂದಲೂ ಇರುವಂಥದ್ದು. ಯಾವ ಈ ವಸ್ತುವು ಬ್ರಹ್ಮನೇ ಮುಂತಾದ ಸಕಲ ಪ್ರಾಣಿಗಳು ನಾಶವಾದರೂ ನಾಶವಾಗುವದಿಲ್ಲ. § ॥ ೨೦ ॥

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥ ೨೧ ॥**

೨೧. ಅವ್ಯಕ್ತವೆಂದೂ ಅಕ್ಷರವೆಂದೂ ಹೇಳಿದ ಇದನ್ನು ಪರಮಗತಿಯೆನ್ನುವರು. ಅದನ್ನು ಸೇರಿದರೆ ಹಿಂತಿರುಗುವದಿಲ್ಲ. ಅದೇ ನನ್ನ ಹೆಚ್ಚಿನ ಸ್ಥಾನವು.

---

* ಅವ್ಯಕ್ತವು ಅವಿದ್ಯಾಕೃತವಾದದ್ದರಿಂದ ಅದಕ್ಕೆ ನಾಶವುಂಟು.

† ಕುದುರೆಗಿಂತ ಒಂಟೆಯು ಬೇರೆಯೆಂದರೂ ಎರಡೂ ಸವಾರಿಗೆ ಉಪಯೋಗಿಸುವ ಪ್ರಾಣಿಗಳಾಗಿರುವವೆಂಬ ಹೋಲಿಕೆಯಿರುವದು ; 'ಅವ್ಯಕ್ತಕ್ಕಿಂತ ಬೇರೆ, ಬೇರೆ ಸ್ವಭಾವದ್ದು' ಎಂದು ತಿಳಿಸುವದಕ್ಕಾಗಿ 'ಪರಃ, ಅನ್ಯಃ'– ಎಂಬ ಎರಡು ಮಾತುಗಳನ್ನುಪಯೋಗಿಸಿದೆ ಎಂದು ಭಾವ.

‡ ಅವ್ಯಕ್ತವು, ಎಂದರೆ ಜಗತ್ತಿನ ಸೃಷ್ಟಿಪೂರ್ವದ ಸ್ಥಿತಿಯು, ಅವಿದ್ಯಾಕಲ್ಪಿತವೆಂಬುದನ್ನು ಭಾಷ್ಯಕಾರರು ಮತ್ತೆ ಮತ್ತೆ ಹೇಳುತ್ತಲೇ ಇರುತ್ತಾರೆ. ೯-೯, ೯-೧೦ ಈ ಶ್ಲೋಕಗಳ ಭಾಷ್ಯಗಳನ್ನು ನೋಡಿ.

§ ಅದ್ದರಿಂದಲೇ ಇದಕ್ಕೆ ಅಕ್ಷರವೆಂದು ಹೆಸರು.

[ ಭಾಷ್ಯ ]

ಅವ್ಯಕ್ತವೆಂದೂ ಅಕ್ಷರವೆಂದೂ ಹೇಳಿದ ಈ ಅಕ್ಷರವೆಂಬ ಅವ್ಯಕ್ತವೆನ್ನುವ ವಸ್ತುವನ್ನೇ ಹೆಚ್ಚಿನ ಗತಿಯೆನ್ನುವರು. ಈ ತತ್ತ್ವವನ್ನು ಪಡೆದರೆ ಮತ್ತೆ ಸಂಸಾರಕ್ಕೆ ಹಿಂತಿರುಗುವದಿಲ್ಲ ; ಅದೇ ವಿಷ್ಣುವಾದ ನನ್ನ ಪರಮಪದವು ಎಂದರ್ಥ. ॥ ೨೧ ॥

## ಪರಮಾತ್ಮನನ್ನು ಸೇರುವದಕ್ಕೆ ಮಾರ್ಗ

ಅದನ್ನು ಪಡೆಯುವದಕ್ಕೆ ಉಪಾಯವನ್ನು ಹೇಳುತ್ತಾನೆ :—

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨ ॥**

೨೨. ಎಲೈ ಪಾರ್ಥನೆ, ಯಾವನೊಳಗೆ ಎಲ್ಲಾ ಭೂತಗಳೂ ಇರುವವೋ ಯಾವಾತನಿಂದ ಇದೆಲ್ಲವೂ ವ್ಯಾಪ್ತವಾಗಿರುವದೋ ಆ ಪರಮಪುರುಷನು ಅನನ್ಯವಾದ ಭಕ್ತಿಯಿಂದ ಲಭ್ಯನಾಗಿರುವನು.

**ಪು**ರದಲ್ಲಿ ಮಲಗಿರುವದರಿಂದಲೋ, ಎಲ್ಲವನ್ನೂ **ಪೂ**ರ ತುಂಬಿಕೊಂಡಿರುವದರಿಂದಲೋ **ಪುರುಷ**ನೆನಿಸಿಕೊಂಡಿರುವ * ಆ ಪರಮಾತ್ಮನು, ಎಲೈ ಪಾರ್ಥನೆ, ಯಾವ ಪುರುಷನಿಗಿಂತ ಹೆಚ್ಚಿನದು ಯಾವದೂ ಇಲ್ಲವೋ † ಆ ಹೆಚ್ಚಿನ ಪುರುಷನು, ಅನನ್ಯವಾದ ಎಂದರೆ ಆತ್ಮವಿಷಯವಾದ **ಜ್ಞಾನವೆಂಬ ಭಕ್ತಿಯಿಂದ** ಲಭ್ಯನಾಗಿರುವನು. ಆ ಪುರುಷನ ಒಳಗೆ ಕಾರ್ಯರೂಪವಾಗಿರುವ ಭೂತಗಳೆಲ್ಲವೂ ಇರುತ್ತಿರುವವು ; ಏಕೆಂದರೆ ಕಾರ್ಯವು ಕಾರಣದೊಳಗೆ ಇರುವದು ; ಗಡಿಗೆಯೇ ಮುಂತಾದದ್ದು ಆಕಾಶದಿಂದ ವ್ಯಾಪ್ತವಾಗಿರುವಂತೆ ಆ ಪುರುಷನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವದು. ॥ ೨೨ ॥

## ಯೋಗಿಗಳಿಗೂ ಕರ್ಮಿಗಳಿಗೂ ಆಗುವ ಶುಕ್ಲಕೃಷ್ಣಗತಿಗಳು

ಪ್ರಣವದಲ್ಲಿ ಬ್ರಹ್ಮಬುದ್ಧಿಯನ್ನಿಟ್ಟವರಾಗಿಯೂ ಕಾಲಾಂತರದಲ್ಲಿ ಮುಕ್ತಿಯನ್ನು ಪಡೆಯುವವರಾಗಿಯೂ ಇರುವ ಯೋಗಿಗಳ ವಿಷಯವನ್ನಷ್ಟೆ, ಈಗ ಮಾತನಾಡುತ್ತಿರುವದು ? ಇವರಿಗೆ ಬ್ರಹ್ಮವನ್ನು ಪಡೆಯುವದಕ್ಕೆ **ಉತ್ತರಮಾರ್ಗ**ವನ್ನು ಹೇಳಬೇಕಾಗಿದೆ. ಆದ್ದರಿಂದ ''ಯತ್ರ ಕಾಲೇ'' ಮುಂತಾದ

---

*** ೮–೪ನೆಯ ಶ್ಲೋಕದ ಭಾಷ್ಯವನ್ನು ನೋಡಿ.**

**† ಕಠ ೧–೩–೧೧ರ ಸೂಚನೆ.**

ಶ್ಲೋಕಗಳನ್ನು ಹೇಳಿರುತ್ತದೆ; ಇದು ತಾನು ಹೇಳಬೇಕೆಂದಿರುವ ವಿಷಯ ವನ್ನು * (ಸರಿಯಾಗಿ) ತಿಳಿಸುವದಕ್ಕೆ. ಹಿಂತಿರುಗುವ ಮಾರ್ಗವನ್ನೂ † ಹೇಳಿ ರುವದು, ಇನ್ನೊಂದು ಮಾರ್ಗವನ್ನು ‡ ಹೊಗಳುವದಕ್ಕೆ.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

೨೩. ಎಲೈ ಭರತಶ್ರೇಷ್ಠನೆ, ಯಾವ ಕಾಲದಲ್ಲಿ ಹೊರಟ ಯೋಗಿಗಳು ಹಿಂತಿರುಗದಿರುವಿಕೆಯನ್ನೂ ಹಿಂತಿರುಗುವಿಕೆಯನ್ನೂ ಹೊಂದುವರೋ, ಆ ಕಾಲ ವನ್ನು ಹೇಳುವೆನು.

[ ಭಾಷ್ಯ ]

'ಯಾವ ಕಾಲದಲ್ಲಿ' ಎಂಬುದನ್ನು 'ಹೊರಟವರು' ಎಂಬ (ಉತ್ತರಾರ್ಧ ದಲ್ಲಿ) ದೂರವಾಗಿರುವ ಮಾತಿಗೆ ಸಂಬಂಧಿಸಿಕೊಳ್ಳಬೇಕು. ಯಾವ ಕಾಲದಲ್ಲಿ ಹಿಂತಿರುಗುವಿಕೆಯನ್ನು ಎಂದರೆ ಮರುಹುಟ್ಟಿಲ್ಲದಿರುವಿಕೆಯನ್ನೂ, ಹಿಂತಿರುಗು ವಿಕೆಯನ್ನು ಎಂದರೆ ಅದಕ್ಕೆ ವಿರುದ್ಧವಾದ ಪುನರ್ಜನ್ಮವನ್ನೂ ಯೋಗಿಗಳು– ಇಲ್ಲಿ ಯೋಗಿಗಳೆಂಬ ಮಾತನ್ನು (ನಿಜವಾದ) ಯೋಗಿಗಳಿಗೂ ಕರ್ಮಿಗಳಿಗೂ ಕೂಡ ಉಪಯೋಗಿಸಿರುತ್ತದೆ. ಕರ್ಮಿಗಳನ್ನು ಯೋಗಿಗಳೆಂದು ಕರೆಯುವದು ಉಪ ಚಾರಕ್ಕೆ. "ಕರ್ಮಯೋಗದಿಂದ ಯೋಗಿಗಳಿಗೆ ( ನಿಷ್ಠೆ ) " ( ೨–೩ ) ಎಂಬ ವಚನದಲ್ಲಿ (ಯೋಗಿಗಳೆಂಬ ಆ) ವಿಶೇಷಣವನ್ನು (ಕರ್ಮಿಗಳಿಗೂ) ಕೊಟ್ಟಿರು ತ್ತದೆ. ಯಾವ ಕಾಲದಲ್ಲಿ ಹೊರಟ ಯೋಗಿಗಳು ಎಂದರೆ ಸತ್ತ (ಯೋಗಿ ಗಳು) ಮತ್ತೆ ಹುಟ್ಟುವದಿಲ್ಲವೋ, ಮತ್ತು ಯಾವ ಕಾಲದಲ್ಲಿ ಸತ್ತ ಯೋಗಿ ಗಳು ಎಂದರೆ ( ಕರ್ಮಿಗಳು ) ಮತ್ತೆ ಹುಟ್ಟುವರೋ ಆ ಕಾಲವನ್ನು ಎಲೈ ಭರತಶ್ರೇಷ್ಠನೆ, (ನಿನಗೆ) ಹೇಳುವೆನು. ॥ ೨೩ ॥

ಆ ಕಾಲವನ್ನು ಈಗ ಹೇಳುತ್ತಾನೆ :—

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

---

* ಪರಮಾತ್ಮನನ್ನು ಪಡೆದ ಯೋಗಿಗಳಿಗೆ ಪುನರಾವೃತ್ತಿಯಿಲ್ಲವೆಂದು ತಿಳಿಸುವದಕ್ಕೆ.

† ದಕ್ಷಿಣಮಾರ್ಗವನ್ನು.

‡ ಉತ್ತರಮಾರ್ಗವನ್ನು.

೨೪ ಅಗ್ನಿ, ಜ್ಯೋತಿ, ಹಗಲು, ಶುಕ್ಲ(ಪಕ್ಷ), ಉತ್ತರಾಯಣದ ಆರು ತಿಂಗಳು- ಇದರಲ್ಲಿ ಮೃತರಾದ ಬ್ರಹ್ಮವಿದರಾದ ಜನರು ಬ್ರಹ್ಮವನ್ನು ಹೊಂದು ತ್ತಾರೆ

[ ಭಾಷ್ಯ ]

'ಅಗ್ನಿ' ಎಂಬುದು ಒಂದು ಕಾಲಾಭಿಮಾನಿಯಾದ ದೇವತೆಯು ; 'ಜ್ಯೋತಿ' ಎಂಬುದೂ ಹಾಗೆಯೇ, ಕಾಲಾಭಿಮಾನಿಯಾದ ದೇವತೆಯೇ. ಅಥವಾ 'ಅಗ್ನಿ', 'ಜ್ಯೋತಿ'– ಎಂಬಿವು ಆಯಾ ದೇವತೆಗಳೇ. ''ಯಾವ ಕಾಲದಲ್ಲಿ (ಮರಣವನ್ನು ಹೊಂದಿದ ಯೋಗಿಗಳು ಆವೃತ್ತಿಯನ್ನೂ ಅನಾವೃತ್ತಿಯನ್ನೂ ಪಡೆಯುವರೋ) ಆ ಕಾಲವನ್ನು (ಹೇಳುವೆನು)'' ಎಂದು (ಹಿಂದಿನ ಶ್ಲೋಕದಲ್ಲಿ ಹೇಳಿರುವದು) ಬಹು (ದೇವತೆಗಳು ಕಾಲಾಭಿಮಾನಿಗಳಾಗಿರುವದರಿಂದ) 'ಮಾವಿನ ತೋಟ' * ಮುಂತಾದ ಪ್ರಯೋಗದಂತೆ ( ಎಂದು ತಿಳಿಯಬೇಕು. ) ಇದರಂತೆ 'ಹಗಲು' ಎಂದರೆ ಹಗಲಿನ ಅಭಿಮಾನಿಯಾದ ದೇವತೆ, ಶುಕ್ಲವೆಂಬುದು ಶುಕ್ಲಪಕ್ಷದ ದೇವ ತೆಯು, ಉತ್ತರಾಯಣದ ಆರುತಿಂಗಳು ಎಂಬಲ್ಲಿಯೂ ಮಾರ್ಗದಲ್ಲಿರುವ ದೇವ ತೆಯೇ † ವಿವಕ್ಷಿತವಾಗಿರುವದು. ಈ (ಶ್ಲೋಕಕ್ಕೆ ಹೀಗೆ ಅರ್ಥವನ್ನು ಮಾಡು ವದು) ಯುಕ್ತವೆಂಬುದನ್ನು ಮುತ್ತೊಂದು ಕಡೆಯಲ್ಲಿ ‡ ಸಿದ್ಧಮಾಡಲಾಗಿರುತ್ತದೆ. ಇದರಲ್ಲಿ ಎಂದರೆ ಈ ಮಾರ್ಗದಲ್ಲಿ ಹೊರಟ ಬ್ರಹ್ಮವಿದರು ಎಂದರೆ ಸತ್ತ ಬ್ರಹ್ಮೋ ಪಾಸಕರು ಬ್ರಹ್ಮವನ್ನು ಹೊಂದುತ್ತಾರೆ.

ಬ್ರಹ್ಮೋಪಾಸನೆಯಲ್ಲಿಯೇ ತಾತ್ಪರ್ಯವುಳ್ಳ ಜನರು 'ಕ್ರಮಕ್ರಮವಾಗಿ (ಬ್ರಹ್ಮವನ್ನು ಸೇರುತ್ತಾರೆ)' ಎಂದು ಈ ವಾಕ್ಯಕ್ಕೆ ಸೇರಿಸಿಕೊಳ್ಳಬೇಕು ; ಏಕೆಂದರೆ **ಸದ್ಯೋಮುಕ್ತಿ**ಯನ್ನು ಹೊಂದುವ ಸಮ್ಯಗ್ದರ್ಶನದಲ್ಲಿಯೇ ನಿಷ್ಠರಾದ ವರಿಗೆ ಎಲ್ಲಿಗಾದರೂ ಹೋಗುವದಾಗಲಿ ಮತ್ತೆ ಬರುವದಾಗಲಿ ಇರುವದಿಲ್ಲ. ''ಆತನ ಪ್ರಾಣಗಳು (ದೇಹವನ್ನು ಬಿಟ್ಟು) ಮೇಲಕ್ಕೆ ಹೋಗುವದಿಲ್ಲ'' (ಬೃ)

---

* ಮಿಕ್ಕ ಮರಗಳೂ ಕೆಲವಿದ್ದರೂ ಮಾವಿನ ಮರಗಳೇ ಹೆಚ್ಚಾಗಿರುವ ತೋಟವನ್ನು ಮಾವಿನ ತೋಟವೆಂದು ಕರೆಯುವಂತೆ.

† ಈ ಶ್ಲೋಕದಲ್ಲಿಯೂ ಮುಂದಿನ ಶ್ಲೋಕದಲ್ಲಿಯೂ ಇರುವ ಅಗ್ನಿ ಮುಂತಾದವುಗಳು ದೇವತಾವಾಚಕಗಳೆಂಬುದನ್ನೂ ಈ ಎರಡು ಮಾರ್ಗಗಳ ವಿವೇಚನೆಯನ್ನೂ ಗೀತಾರ್ಥಸರ್ವಸ್ವದಲ್ಲಿ ಕರ್ಮವಿಪಾಕದ ಪ್ರಕರಣದಲ್ಲಿ ಮಾಡಿದೆ.

‡ ಬ್ರ. ಸೂ. ೪-೩-೪ರಲ್ಲಿ.

ಎಂಬ ಶ್ರುತಿಯೂ ಇದಕ್ಕೆ ಪ್ರಮಾಣವು. [ಅವರ ಪ್ರಾಣವು ಬ್ರಹ್ಮದಲ್ಲಿಯೇ ಅಡಗುವದು, ಅವರು ಬ್ರಹ್ಮಮಯರಾಗಿ, ಬ್ರಹ್ಮವೇ ಆಗಿರುವರು.*] ॥ ೨೪ ॥

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥೨೫॥**

೨೫. ಹೊಗೆ, ರಾತ್ರಿ, ಕೃಷ್ಣ(ಪಕ್ಷ), ದಕ್ಷಿಣಾಯನದ ಆರು ತಿಂಗಳು– ಇದರಲ್ಲಿ (ಮರಣಹೊಂದಿದ ಕರ್ಮ)ಯೋಗಿಯು ಚಂದ್ರನ ಜ್ಯೋತಿಯನ್ನು ಪಡೆದು ಮರಳಿ ಬರುತ್ತಾನೆ.

[ ಭಾಷ್ಯ ]

ಧೂಮ, ರಾತ್ರಿ– ಎಂದರೆ ಹೊಗೆಯ ಅಭಿಮಾನಿಯಾದ (ದೇವತೆ) ಮತ್ತು ರಾತ್ರಿಯ ಅಭಿಮಾನಿಯಾದ ದೇವತೆ. ಇದರಂತೆ ಕೃಷ್ಣವೆಂದರೆ ಕೃಷ್ಣಪಕ್ಷದ ದೇವತೆ; 'ದಕ್ಷಿಣಾಯನದ ಆರು ತಿಂಗಳು' ಎಂದರೂ ಹಿಂದಿನ (ಶ್ಲೋಕದಲ್ಲಿ ಹೇಳಿರು)ವಂತೆ (ಅಭಿಮಾನ)ದೇವತೆಯೇ. ಇಷ್ಟವೇ † ಮುಂತಾದ ಕರ್ಮವನ್ನು ಮಾಡುವ ಯೋಗಿಯು ಎಂದರೆ ಕರ್ಮಿಯು ಆ (ಮಾರ್ಗದಲ್ಲಿ ಹೋಗಿ) ಚಂದ್ರನಲ್ಲಿರುವ ಬೆಳಕೆಂಬ ಫಲವನ್ನು ಹೊಂದಿ ಅನುಭವಿಸಿ ಅದು ಸವೆಯಲು ಈ ಲೋಕಕ್ಕೆ ಮರಳಿ ಬರುತ್ತಾನೆ. ॥ ೨೫ ॥

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥**

೨೬. ಶುಕ್ಲ, ಕೃಷ್ಣ– ಎಂಬ ಈ ಎರಡು ಗತಿಗಳೂ ಜಗತ್ತಿಗೆ ಶಾಶ್ವತವಾದವುಗಳೆನಿಸಿರುವವು. (ಇವುಗಳಲ್ಲಿ) ಒಂದರಿಂದ (ಹೋದವನು) ಅನಾವೃತ್ತಿಯನ್ನು ಹೊಂದುವನು, ಮತ್ತೊಂದರಿಂದ (ಹೋದವನು) ಹಿಂತಿರುಗಿ ಬರುತ್ತಾನೆ.

[ ಭಾಷ್ಯ ]

ಶುಕ್ಲ(ಮಾರ್ಗವೊಂದು), ಕೃಷ್ಣ(ಮಾರ್ಗವೊಂದು)– ಹೀಗೆ ಶುಕ್ಲಕೃಷ್ಣ(ಗಳೆಂಬ ಎರಡು ಮಾರ್ಗಗಳಿರುವವು). ಜ್ಞಾನವನ್ನು ತೋರಿಸಿಕೊಡುವದರಿಂದ (ಮೊದಲನೆಯದಕ್ಕೆ) ಶುಕ್ಲವೆಂದು ಹೆಸರು, ಹಾಗೆ ಮಾಡದ್ದರಿಂದ (ಎರಡನೆಯದಕ್ಕೆ) ಕೃಷ್ಣವೆಂದು ಹೆಸರು. ಈ ಶುಕ್ಲಕೃಷ್ಣಗತಿಗಳು ಜಗತ್ತಿಗೆ (ಶಾಶ್ವತ

---

* ಚೌಕಕಂಸದಲ್ಲಿರುವ ಭಾಗವು ಮ॥ ಮೈ॥ ಪಾಠಗಳಲ್ಲಿಲ್ಲ. ಇದರ ಮುಂದೆ ನಿ॥ ಗು॥ ಪಾಠಗಳಲ್ಲಿರುವ 'ಕ್ರಮೇಣ ತು ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ' ಎಂಬ ವಾಕ್ಯವು ಹೆಚ್ಚೆಂದು ಕೈಬಿಟ್ಟಿದೆ. † ಛಾಂ. ೫–೧೦–೩ ನೋಡಿ.

ವಾಗಿರುವವೆನಿಸಿರುವವು) ; (ಹೀಗೆಂದು ಶಾಸ್ತ್ರಕಾರರ) ಅಭಿಪ್ರಾಯವಿರುವದು. (ಇಲ್ಲಿ ಜಗತ್ತಿಗೆ ಎಂದರೆ) ಪ್ರಕೃತವಾಗಿರುವ ಯೋಗಿಗಳಿಗೆ ಮತ್ತು ಕರ್ಮಿಗಳಿಗೆ, ಒಟ್ಟು ಜಗತ್ತಿಗೆಲ್ಲ ಈ ಗತಿಗಳು ಆಗುವ ಹಾಗಿಲ್ಲ,* (ಇವು) ಶಾಶ್ವತವಾಗಿರುವವು ಎಂದರೆ ನಿತ್ಯವಾಗಿರುವವು ; ಏಕೆಂದರೆ ಸಂಸಾರವು ನಿತ್ಯವಾಗಿರುವದರಿಂದ † (ಅದರಲ್ಲಿರುವ ಈ ಗತಿಗಳೂ ನಿತ್ಯವಾಗಿರುವವು.) ಇವುಗಳಲ್ಲಿ ಒಂದರಿಂದ ಎಂದರೆ ಮೊದಲನೆಯದಾದ ಶುಕ್ಲ(ಮಾರ್ಗದಿಂದ ಹೋದವನು) ಮರಳಿ ಬರುವದಿಲ್ಲ, ಇನ್ನೊಂದರಿಂದ (ಎಂದರೆ ಕೃಷ್ಣಮಾರ್ಗದಿಂದ ಹೋದವನು) ಮರಳಿ ಬರುತ್ತಾನೆ. ॥ ೨೬ ॥

## ಯೋಗಿಯ ಹೆಚ್ಚುಗಾರಿಕೆ

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥೨೭॥**

೨೭. ಎಲೈ ಪಾರ್ಥನೆ, ಈ ಎರಡು ಮಾರ್ಗಗಳನ್ನೂ (ಸರಿಯಾಗಿ) ತಿಳಿದುಕೊಂಡ ಯಾವ ಯೋಗಿಯೂ ಮೋಹಕ್ಕೊಳಗಾಗನು. ಆದಕಾರಣ ಎಲೈ ಅರ್ಜುನನೆ, (ನೀನು) ಎಲ್ಲಾ ಕಾಲಗಳಲ್ಲಿಯೂ ಯೋಗದಿಂದೊಡಗೂಡಿದವನಾಗಿರು.

[ ಭಾಷ್ಯ ]

ಎಲೈ ಪಾರ್ಥನೆ, ಮೇಲೆ ಹೇಳಿದ ಎರಡು ಮಾರ್ಗಗಳನ್ನೂ ತಿಳಿದುಕೊಂಡಿರುವ, ಎಂದರೆ ಒಂದರಿಂದ ಸಂಸಾರವೂ ಮತ್ತೊಂದರಿಂದ ಮೋಕ್ಷವೂ ಆಗುವವೆಂದು ತಿಳಿದುಕೊಂಡಿರುವ, ಯಾವ ಯೋಗಿಯೂ ಮೋಹಕ್ಕೀಡಾಗುವದಿಲ್ಲ.‡ ಆದ್ದರಿಂದ ಎಲ್ಲಾ ಕಾಲದಲ್ಲಿಯೂ ನೀನು ಯೋಗಯುಕ್ತನಾಗಿರು, ಎಂದರೆ ಚಿತ್ತಸಮಾಧಾನವುಳ್ಳವನಾಗಿರು. ॥ ೨೭ ॥

---

* ಕರ್ಮಿಗಳಿಗೆ ಕೃಷ್ಣಮಾರ್ಗ, ಯೋಗಿಗಳಿಗೆ ಶುಕ್ಲಮಾರ್ಗ, ಬರಿಯ ಲೌಕಿಕಕರ್ಮಗಳನ್ನೇ ಮಾಡಿಕೊಂಡಿರುವ ಅಜ್ಞರಿಗೆ ಸುಮ್ಮನೆ ಹುಟ್ಟಿ ಹುಟ್ಟಿ ಸಾಯುವ ಮೂರನೆಯ ಮಾರ್ಗ–ಹೀಗೆ ಕರ್ಮದ ಫಲವು ಮೂರು ತೆರನಾಗಿರುವದು. ಬ್ರಹ್ಮಜ್ಞಾನಿಗಳಿಗೆ ಯಾವ ಗತಿಯೂ ಇಲ್ಲ, ಅವರು ಬ್ರಹ್ಮಸ್ವರೂಪರೇ ಆಗಿರುವರೆಂದು ಹಿಂದಿನ ಶ್ಲೋಕದಲ್ಲಿಯೇ ಹೇಳಿದೆ.

† ಸಂಸಾರವು ಪರಮಾರ್ಥವಾಗಿ ಸತ್ಯವಲ್ಲವಾದರೂ ಅದು ನಿತ್ಯ ; ಅದರಲ್ಲಿರುವ ಕರ್ತೃತ್ವಭೋಕ್ತೃತ್ವಗಳೂ ನಿತ್ಯ.

‡ ಉಪಾಸಕರಿಗೆ ಮರಣಕಾಲದಲ್ಲಿಯೂ ತಮ್ಮ ಉಪಾಸನೆಯ ಬಲದಿಂದ ಸುಷುಮ್ನಾದ್ವಾರವು ಗೊತ್ತಾಗುವದು . ಮಿಕ್ಕವರಿಗೆ ಈ ದಾರಿಯು ತಿಳಿಯದು. ಆದ್ದರಿಂದಲೇ ಅವರು ಮತ್ತೆ ಮತ್ತೆ ಸಂಸಾರದಲ್ಲಿ ತೊಳಲುವರು. ಬ್ರ. ಸೂ. ೪–೨–೭ರ ಭಾಷ್ಯವನ್ನು ನೋಡಿ.

ಆ ಯೋಗದ ಹೆಚ್ಚುಗಾರಿಕೆಯನ್ನು (ಹೇಳುವೆನು,) ಕೇಳು :—

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮ ॥**

೨೮. ವೇದಗಳಲ್ಲಿಯೂ ಯಜ್ಞಗಳಲ್ಲಿಯೂ ತಪಸ್ಸುಗಳಲ್ಲಿಯೂ ದಾನಗಳಲ್ಲಿಯೂ ಯಾವ ಪುಣ್ಯಫಲವು ಉಂಟಾಗುವದೆಂದು ಹೇಳಿದೆಯೋ ಅದೆಲ್ಲವನ್ನೂ ಇದನ್ನು ತಿಳಿದ ಯೋಗಿಯು ಮೀರುವನು, ಮತ್ತು ಮೊದಲನೆಯ ಹೆಚ್ಚಿನ ಸ್ಥಾನವನ್ನು ಹೊಂದುವನು.

[ ಭಾಷ್ಯ ]

ವೇದಗಳನ್ನು ಸರಿಯಾಗಿ * ಅಧ್ಯಯನಮಾಡುವದರಿಂದ, ಯಜ್ಞಗಳನ್ನು ಸರಿಯಾಗಿ ಮಾಡುವದರಿಂದ, ಸರಿಯಾಗಿ ದಾನಗಳನ್ನು ಕೊಡುವದರಿಂದ–ಇವುಗಳಿಂದ ಯಾವ ಪುಣ್ಯಫಲವಾಗುವದೆಂದು ಶಾಸ್ತ್ರದಲ್ಲಿ ಹೇಳಿದೆಯೋ, ಆ ಫಲಸಮೂಹವನ್ನೆಲ್ಲ ಈ ಏಳು ಪ್ರಶ್ನೆಗಳಿಗುತ್ತರವಾಗಿ ಹೇಳಿರುವ ವಿಷಯವನ್ನು ತಿಳಿದುಕೊಂಡು ಎಂದರೆ ಸರಿಯಾಗಿ ನಿಶ್ಚಯಿಸಿಕೊಂಡು ಅದರಂತೆ ಅಭ್ಯಾಸ ಮಾಡಿದ ಯೋಗಿಯು ಪರಮಸ್ಥಾನವನ್ನು ಎಂದರೆ ಹೆಚ್ಚಿನ ಈಶ್ವರಸ್ಥಾನವನ್ನು, ಆದ್ಯವಾದ ಎಂದರೆ ಎಲ್ಲಕ್ಕೂ ಮೊದಲಿರುವ ಕಾರಣಬ್ರಹ್ಮವನ್ನು, ಸೇರುತ್ತಾನೆ ಎಂದರ್ಥ. ॥ ೨೮ ॥

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಅಕ್ಷರಬ್ರಹ್ಮಯೋಗೋ** ನಾಮ
ಅಷ್ಟಮೋಽಧ್ಯಾಯಃ

—++++—

* ನಿಯಮದಿಂದ ಮಾಡಿದ ಅಧ್ಯಯನ, ಅಂಗೋಪಾಂಗಗಳಿಂದ ಕೂಡಿ ಮಾಡಿದ ಯಜ್ಞ, ದೇಶಕಾಲಪಾತ್ರಗಳಲ್ಲಿ ಮಾಡಿದ ದಾನ– ಇವುಗಳು ಸಾತ್ತ್ವಿಕಾಧ್ಯಯನಯಜ್ಞದಾನಗಳು ; ೧೭ನೆಯ ಅಧ್ಯಾಯವನ್ನು ನೋಡಿ.

# ಎಂಟನೆಯ ಅಧ್ಯಾಯದ ಸಾರ

೧ ಅರ್ಜುನನು "ಎಲೈ ಶ್ರೀಕೃಷ್ಣನೆ, ಬ್ರಹ್ಮವೆಂದರೇನು ? ಅಧ್ಯಾತ್ಮವೆಂದರೆ ಯಾವದು ? ಕರ್ಮವೆಂದರೆ ಯಾವದು ? ಅಧಿಭೂತ, ಅಧಿದೈವ, ಅಧಿಯಜ್ಞ– ಇವುಗಳು ಯಾವವು ? ಮರಣಕಾಲದಲ್ಲಿ ಮನಸ್ಸನ್ನು ಬಿಗಿಹಿಡಿದು ನಿನ್ನನ್ನು ಹೇಗೆ ಅರಿತುಕೊಳ್ಳಬೇಕು ?" ಎಂದು ಕೇಳಲು ಈ ಏಳು ಪ್ರಶ್ನೆಗಳಿಗೂ ಭಗವಂತನು ಹೀಗೆಂದು ಉತ್ತರವನ್ನು ಹೇಳಿದನು.

೨-೫. "ಎಂದಿಗೂ ನಾಶವಾಗದ ಪರಮಾತ್ಮನೇ ಬ್ರಹ್ಮವು, ಒಬ್ಬೊಬ್ಬರಲ್ಲಿಯೂ ಇದು ಜೀವನಾಗಿರುವ ಸ್ವಭಾವವೇ ಅಧ್ಯಾತ್ಮವು, ಪ್ರಾಣಿಗಳ ಉತ್ಪತ್ತಿಗೆ ಕಾರಣವಾಗಿರುವ ಶಾಸ್ತ್ರೋಕ್ತ ಕರ್ಮವನ್ನೇ ಇಲ್ಲಿ ನಾನು ಕರ್ಮವೆಂದು ಕರೆದಿದ್ದೇನೆ, ನಾಶವಾಗುವ ಪ್ರಾಣಿಗಳೇ ಅಧಿಭೂತವು. ಸರ್ವರ ಕರಣಗಳಿಗೂ ಅನುಗ್ರಾಹಕನಾಗಿರುವ ಆದಿತ್ಯಾಂತರ್ಗತನಾದ ಹಿರಣ್ಯಗರ್ಭನೇ ಅಧಿದೈವವು. ಜನರು ತಮ್ಮ ದೇಹದಿಂದ ಮಾಡುವ ಯಜ್ಞಕ್ಕೆಲ್ಲ ಅಭಿಮಾನಿಯಾದ ಅಧಿಯಜ್ಞವು ನಾನೇ. ಮರಣಕಾಲದಲ್ಲಿ ನನ್ನನ್ನೇ ಚಿಂತಿಸುತ್ತಾ ದೇಹವನ್ನು ಬಿಡುವಾತನು ನನ್ನನ್ನೇ ಸೇರುವನು.

೬-೭. "ಮನುಷ್ಯನು ಸಾಯುವ ಕಾಲದಲ್ಲಿ ಎಂಥ ಚಿಂತೆಯಿಂದೊಡಗೂಡಿರುವನೋ ಅಂಥ ಗತಿಯನ್ನು ಹೊಂದುತ್ತಾನೆ. ಅವನು ತನ್ನ ಜೀವಿತಕಾಲದಲ್ಲಿ ಯಾವ ಬಗೆಯ ಯೋಚನೆಯಿಂದ ಕೂಡಿರುವನೋ ಆ ಬಗೆಯ ಚಿಂತೆಯೇ ಮರಣಕಾಲದಲ್ಲಿಯೂ ಬರುವದು. ಆದ್ದರಿಂದ ಯಾವಾಗಲೂ ನನ್ನ ಚಿಂತೆಯನ್ನೇ ಮಾಡುತ್ತಿರು ; ಹಾಗಾದರೆ ಕೊನೆಗೆ ನನ್ನನ್ನೇ ಪಡೆಯುತ್ತೀಯೆ.

೮-೧೩. "ಹೀಗೆ ಯಾವಾಗಲೂ ನನ್ನ ಚಿಂತೆಯನ್ನೇ ಅಭ್ಯಾಸಮಾಡುತ್ತಿರುವವನು ಮನಸ್ಸನ್ನು ಬಿಗಿಹಿಡಿದು, ಭಕ್ತಿಯಿಂದ ಕೂಡಿ, ಪ್ರಾಣವನ್ನು ಕ್ರಮಕ್ರಮವಾಗಿ ಮೇಲುಮೇಲಿನ ಭೂಮಿಕೆಗೆ ತಂದುಕೊಂಡು ಓಂಕಾರದ ಮೂಲಕ ನನ್ನನ್ನು ಧ್ಯಾನಮಾಡುತ್ತಿರುವವನಿಗೆ ಉತ್ತಮ ಗತಿಯಾಗುವದು.

೧೪-೧೯. "ಹೀಗೆ ನಿತ್ಯಾಭ್ಯಾಸದಿಂದ ನನ್ನನ್ನು ಪಡೆದವರು ಮರಳಿ ಸಂಸಾರದುಃಖವನ್ನು ಪಡೆಯುವದಿಲ್ಲ. ಮಿಕ್ಕವರು ಯಾವ ಲೋಕವನ್ನೇ ಪಡೆಯಲಿ, ಸಂಸಾರಕ್ಕೆ ಸಿಕ್ಕುಬಿದ್ದೇ ಬೀಳುತ್ತಾರೆ; ಏಕೆಂದರೆ ಆ ಲೋಕಗಳೆಲ್ಲ ಕಾಲಕ್ಕೆ ಕಟ್ಟುಬಿದ್ದಿರುವದರಿಂದ ಶಾಶ್ವತವಾದ ಸುಖವನ್ನು ಕೊಡಲಾರವು. ಬ್ರಹ್ಮನಿಗೆ ಹಗಲಾದರೆ ಪ್ರಾಣಿಗಳೆಲ್ಲ ಸೃಷ್ಟಿಯಾಗುವವು, ರಾತ್ರಿಯಾದರೆ ಅವನಲ್ಲಿಯೇ ಅಡಗಿಕೊಳ್ಳುವವು. ಯಾವ ಪ್ರಾಣಿಗಳಿಗೂ ಸಂಸಾರದಿಂದ ಬಿಡುಗಡೆಯಿಲ್ಲ.

೨೦-೨೨. "ಆದರೆ ಅವ್ಯಕ್ತನೆಂಬ ಹೆಸರಿನ ಪರಮಾತ್ಮನು ಮಾತ್ರ ಕಾಲಕ್ಕೆ ಕಟ್ಟುಬೀಳದೆ ಇರುವನು, ಭಕ್ತಿಯಿಂದ ಅವನನ್ನು ಉಪಾಸನೆಮಾಡಿ ಕ್ರಮಮುಕ್ತಿಯನ್ನು ಪಡೆದವರು ಸಂಸಾರದುಃಖವನ್ನು ದಾಟುವರು.

೨೩–೨೮. “ಕರ್ಮಿಗಳು ಸತ್ತ ಮೇಲೆ ಕೃಷ್ಣಮಾರ್ಗದಿಂದ ಚಂದ್ರಲೋಕಕ್ಕೆ ಹೋಗಿ ತಾವು ಮಾಡಿದ ಪುಣ್ಯದ ಫಲವನ್ನು ಅನುಭವಿಸಿ ಬಳಿಕ ಮತ್ತೆ ಸಂಸಾರಕ್ಕೆ ತಿರುಗುವರು. ಪರಮಾತ್ಮನ ಉಪಾಸಕರು ಮಾತ್ರ ಶುಕ್ಲಮಾರ್ಗದಿಂದ ಹೋಗಿ ಕ್ರಮಮುಕ್ತಿಯನ್ನು ಪಡೆದು ಪರಮಾತ್ಮನನ್ನು ಸೇರಿಕೊಳ್ಳುವರು. ಹೀಗೆ ಕರ್ಮಕ್ಕೂ ಪರಮಾತ್ಮನ ಉಪಾಸನೆಗೂ ಹೆಚ್ಚಿನ ಅಂತರವಿರುವದು. ವೇದಾಧ್ಯಯನ, ಯಜ್ಞ, ದಾನ, ತಪಸ್ಸು- ಈ ಕರ್ಮಗಳಲ್ಲಿ ಯಾವದೊಂದನ್ನು ಮಾಡಿದರೂ ಅಂತ ಕಾಲದಲ್ಲಿ ಮಾಡಿದ ಪರಮಾತ್ಮಧ್ಯಾನದಿಂದ ಆಗುವ ಫಲವು ಸಿಗಲಾರದು. ಆದ್ದರಿಂದ ನೀನು ಇಂಥ ಉಪಾಸನೆಯನ್ನು ಅಭ್ಯಾಸಮಾಡುವ ಯೋಗಿಯಾಗು.”

---

# ಒಂಬತ್ತನೆಯ ಅಧ್ಯಾಯ

## (ರಾಜವಿದ್ಯಾರಾಜಗುಹ್ಯಯೋಗ)

### ಇಲ್ಲಿ ಹೇಳುವ ಜ್ಞಾನದ ಹೆಚ್ಚುಗಾರಿಕೆ

ಎಂಟನೆಯ ಅಧ್ಯಾಯದಲ್ಲಿ (ಸುಷುಮ್ನಾ)ನಾಡಿಯ ಮೂಲಕವಾಗಿ (ಪರಮಾತ್ಮನನ್ನು ಉಪಾಸನೆಮಾಡುವ) ಧಾರಣಾಯೋಗವನ್ನು ಅದರ ಅಂಗಗಳೊಡನೆ * [ಸಗುಣಃ] ಹೇಳಿದ್ದಾಯಿತು. ಅದಕ್ಕೆ ಅಗ್ನಿ, ಜ್ಯೋತಿ- ಮುಂತಾದ ಕ್ರಮದಿಂದ (ಹೋಗಿ), ಕಾಲಾಂತರದಲ್ಲಿ ಸಂಸಾರಕ್ಕೆ ಮರಳಿ ಬರದೆ ಇರುವದಾದ ಬ್ರಹ್ಮವನ್ನು ಪಡೆಯುವದೇ ಫಲವೆಂದು ತಿಳಿಸಿದ್ದಾಯಿತು. ಇಲ್ಲಿ, ಈ ರೀತಿಯಿಂದಲೇ ಮೋಕ್ಷವನ್ನು ಪಡೆಯುವ ಫಲವು ದೊರಕುವದೇ ಹೊರತು ಬೇರೆ ರೀತಿಯಿಂದ ದೊರಕದೆಂಬ ಶಂಕೆಯು ಬರಬಹುದು. ಅದನ್ನು ನೀಗುವದಕ್ಕೋಸ್ಕರ ಶ್ರೀಭಗವಂತನು (ಈ ರೀತಿ) ಹೇಳಿದನು:—

**ಶ್ರೀಭಗವಾನುವಾಚ:—**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧ ॥**

೧. ಆದರೆ ಅಸೂಯಾರಹಿತನಾದ ನಿನಗೆ ಈ ಹೆಚ್ಚಿನ ಗುಟ್ಟನ್ನು, ವಿಜ್ಞಾನದಿಂದೊಡಗೂಡಿದ ಜ್ಞಾನವನ್ನು, ಹೇಳುವೆನು. ಇದನ್ನು ಅರಿತುಕೊಂಡರೆ ಅಶುಭದಿಂದ ಬಿಡುಗಡೆಯಾಗುತ್ತೀಯೆ.

[ಭಾಷ್ಯ]

ಮುಂದೆ ಹೇಳುವ ಮತ್ತು ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ ಬ್ರಹ್ಮಜ್ಞಾನವನ್ನು ಬುದ್ಧಿಯ ಬಳಿಗೆ ತಂದುಕೊಂಡು 'ಈ (ಹೆಚ್ಚಿನ ಗುಟ್ಟನ್ನು)' ಎಂದಿರುತ್ತಾನೆ.

---

* ಭೂಮಿಜಯ, ಓಂಕಾರಜಪ, ಭಕ್ತಿಯಿಂದ ಉಪಾಸನೆಮಾಡುವದು- ಮುಂತಾದವು ಈ ಧಾರಣಾಯೋಗದ ಅಂಗಗಳು. ಪ್ರಾಣವನ್ನು ಮೂರ್ಧಪ್ರದೇಶದಲ್ಲಿ ಧಾರಣೆಮಾಡಬೇಕೆಂದು ಹೇಳಿರುವದರಿಂದಲೂ ಓಂಕಾರದ ಮೂಲಕ ಉಪಾಸನೆಮಾಡಬೇಕೆಂದು ಹೇಳಿರುವದರಿಂದಲೂ ಇದು ಧಾರಣಾಯೋಗವು.

'ಆದರೆ' ಎಂಬ ಮಾತು ವಿಶೇಷವಾಗಿ ಇಂಥದ್ದೆಂದು ಗೊತ್ತುಪಡಿಸುವದಕ್ಕೆ. ಈ ಸಮ್ಯಗ್‌ಜ್ಞಾನವೇ ಮೋಕ್ಷವನ್ನು ಪಡೆಯುವದಕ್ಕೆ ನೇರಾದ ಸಾಧನವು. "ವಾಸುದೇವನೇ ಸರ್ವವು" (೭-೧೯), "ಇದೆಲ್ಲವೂ ಆತ್ಮನೇ" (ಛಾ), "ಎರಡನೆಯದಿಲ್ಲದ ಒಂದೇ" (ಛಾ)- ಮುಂತಾದ ಶ್ರುತಿಸ್ಮೃತಿಗಳಲ್ಲಿ (ಈ ಜ್ಞಾನವನ್ನು ತಿಳಿಸಿರುತ್ತದೆ.) ಮಿಕ್ಕ ಯಾವದೂ * ಮೋಕ್ಷಕ್ಕೆ (ನೇರಾದ ಸಾಧನವಲ್ಲ); "ಇದಕ್ಕಿಂತ ಬೇರೆಯಾಗಿ ಯಾರು ತಿಳಿದುಕೊಳ್ಳುತ್ತಾರೋ ಅವರಿಗೆ ಮತ್ತೊಬ್ಬ ರಾಜನಿರುವನು, ಅವರ ಲೋಕವು ನಾಶವಾಗುವದು" (ಛಾ) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಈ ಎಲ್ಲಕ್ಕೂ ಹೆಚ್ಚಿನ ಗುಟ್ಟನ್ನು † ಅಸೂಯೆಯಿಲ್ಲದ ‡ ನಿನಗೆ ಹೇಳುವೆನು. ಅದು ಯಾವದು? ಎಂದರೆ ಜ್ಞಾನವು. ಎಂಥ ಜ್ಞಾನವು? ವಿಜ್ಞಾನದಿಂದೊಡಗೂಡಿದ್ದು, ಎಂದರೆ ಅನುಭವವೂ ಸೇರಿದ್ದು. ಅಂಥ ಜ್ಞಾನವನ್ನು ಹೇಳುತ್ತೇನೆ. ಈ ಜ್ಞಾನವನ್ನು ತಿಳಿದುಕೊಂಡ ಮೇಲೆ ಈ ಅಮಂಗಲವಾದ ಸಂಸಾರದ ಕಟ್ಟಿನಿಂದ ಬಿಡುಗಡೆಯಾಗುತ್ತೀಯೆ. ॥ ೧ ॥

ಮತ್ತು (ಈ ಜ್ಞಾನವು)—

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

೨. ಇದು ರಾಜವಿದ್ಯೆ, ರಾಜಗುಹ್ಯವು, ಉತ್ತಮವಾದ ಪವಿತ್ರವು. ಪ್ರತ್ಯಕ್ಷವಾಗಿ ತಿಳಿಯಬರುವಂಥದ್ದು, ಧರ್ಮಕ್ಕೆ ಹೊಂದುವಂಥದ್ದು, ಮಾಡುವದಕ್ಕೆ ಬಹುಸುಲಭ, ಅವ್ಯಯವಾದದ್ದು.

[ಭಾಷ್ಯ]

ಇದು ರಾಜವಿದ್ಯೆ, ವಿದ್ಯೆಗಳ ರಾಜನು §; ಏಕೆಂದರೆ ಇದರಲ್ಲಿ ಹೆಚ್ಚಿನ ಬೆಳಕಿರುವದು. ವಿದ್ಯೆಗಳಲ್ಲೆಲ್ಲ ಈ ಬ್ರಹ್ಮವಿದ್ಯೆಯೆಂಬುದು ಹೆಚ್ಚಾಗಿ ಬೆಳಗುತ್ತಿರುವ

---

* ಕರ್ಮ, ಉಪಾಸನೆ ಮುಂತಾದದ್ದು.

† ಕರ್ಮವೇ ಗುಟ್ಟು (ಗುಹ್ಯ), ಉಪಾಸನೆಯು ಅದಕ್ಕಿಂತ ಹೆಚ್ಚಿನ ಗುಟ್ಟು (ಗುಹ್ಯತರ); ಜ್ಞಾನವು ಎಲ್ಲಕ್ಕೂ ಹೆಚ್ಚಿನ ಗುಟ್ಟು (ಗುಹ್ಯತಮ). ಸರಿಯಾದ ಯೋಗ್ಯತೆಯಿಲ್ಲದವರಿಗೆ ತಿಳಿಸಿದರೂ ತಿಳಿಯುವದಿಲ್ಲವಾದ್ದರಿಂದ ಜ್ಞಾನವು ಹೆಚ್ಚಿನ ಗುಟ್ಟೆನಿಸುವದು

‡ ತತ್ತ್ವಜ್ಞಾನದಲ್ಲಿ ಶ್ರದ್ಧೆಯಿಲ್ಲದೆ ಅಸೂಯೆಪಡುವವನಿಗೆ ಅದು ಎಂದಿಗೂ ಹಿಡಿಯುವದಿಲ್ಲ. ೧೮-೬೭ ನೋಡಿ.

§ 'ರಾಜವಿದ್ಯೆ' ಎಂಬ ಶಬ್ದಕ್ಕೆ 'ರಾಜರ ಪರಂಪರೆಯಿಂದ ಬಂದ ವಿದ್ಯೆ' ಎಂದು ಕೆಲವರು ಅರ್ಥಮಾಡುವರು; ಜ್ಞಾನದ ಪ್ರಕರಣಕ್ಕೆ ಈ ಪರಂಪರೆಯ ಹೊಗಳಿಕೆಯು ಅಷ್ಟು ಪ್ರಯೋಜನಕರವಲ್ಲವಾದ್ದರಿಂದ 'ವಿದ್ಯೆಗಳ ರಾಜ'ನೆಂಬ ವಿಗ್ರಹವೇ ಹೆಚ್ಚು ಒಪ್ಪುತ್ತದೆ.

ದಲ್ಲವೆ? ಇದರಂತೆ ರಾಜಗುಹ್ಯವು, ಗುಟ್ಟುಗಳೆಲ್ಲೆಲ್ಲ ರಾಜನು. ಉತ್ತಮವಾದ ಪವಿತ್ರವು. ಪಾವನಗೊಳಿಸುವವುಗಳಲ್ಲೆಲ್ಲ * ಬ್ರಹ್ಮಜ್ಞಾನವು ಹೆಚ್ಚಿನ ಶುದ್ಧಿ ಕಾರಣವಾಗಿರುವದು. ಅನೇಕ ಜನ್ಮಸಹಸ್ರಗಳಲ್ಲಿ ರಾಶಿಹಾಕಿಕೊಂಡಿರುವ ಧರ್ಮಾಧರ್ಮವೇ ಮುಂತಾದ † ಕರ್ಮವನ್ನು ಕೂಡ ಒಂದೇ ಕ್ಷಣದಲ್ಲಿ ಮೂಲಸಹಿತವಾಗಿ ಬೂದಿಗೈದುಬಿಡುವದರಿಂದ ಅದು ಪವಿತ್ರವಾದದ್ದೆಂದು ಹೇಳ ತಕ್ಕದ್ದೇನಿದೆ! ಮತ್ತು ಪ್ರತ್ಯಕ್ಷವಾಗಿ ತಿಳಿಯಬರುವಂಥದ್ದು, ಸುಖವೇ ಮುಂತಾ ದವು ಹೇಗೆ ತಿಳಿಯಬರುವವೋ ಹಾಗೆ ಇದು ನೇರಾಗಿ ತಿಳಿಯಬರುವಂಥದ್ದು. ಬಹು ಗುಣಗಳಿದ್ದರೂ ಧರ್ಮಕ್ಕೆ ವಿರುದ್ಧವಾಗಿರುವದು ಕಂಡುಬರುತ್ತದೆ; ಆತ್ಮ ಜ್ಞಾನವು ಹಾಗೆ ಧರ್ಮಕ್ಕೆ ವಿರುದ್ಧವಾದದ್ದಲ್ಲ, ಧರ್ಮಕ್ಕೆ ಹೊಂದುವಂಥದ್ದೇ, ಧರ್ಮವನ್ನು ಬಿಟ್ಟುಹೋಗುವಂಥದ್ದಲ್ಲ. ‡ ಹೀಗಿದ್ದರೂ ಇದನ್ನು ಪಡೆಯುವದು ಕಷ್ಟವಾಗಿರಬಹುದಲ್ಲ? ಎಂದರೆ ಹೇಳುತ್ತಾನೆ. 'ಮಾಡುವದಕ್ಕೆ ಬಹು ಸಲಭ'. ರತ್ನವನ್ನು ಇಂಥದ್ದೆಂದು ವಿಂಗಡಿಸಿ (ಬೆಲೆಕಟ್ಟುವ) ತಿಳಿವಳಿಕೆಯಂತೆ (ಇದನ್ನು ಸುಲಭವಾಗಿ § ಕಲಿತುಕೊಳ್ಳಬಹುದು.) ಸ್ವಲ್ಪವೇ ಆಯಾಸದಿಂದ ಪಡೆದುಕೊಳ್ಳ ಬಹುದಾದ ವಿಕ್ಕ ಕರ್ಮಗಳಿಗೆ ಸ್ವಲ್ಪವೇ ಫಲವಿರುವದು, ಮಾಡುವದಕ್ಕೆ ಕಷ್ಟ ವಾಗಿರುವವುಗಳಿಗೆ ಹೆಚ್ಚಿನ ಫಲವಿರುವದನ್ನು ನೋಡಿದ್ದೇವೆ. ಇದನ್ನು ಸುಲಭ ವಾಗಿ ಸಂಪಾದಿಸಿಕೊಳ್ಳಬಹುದಾದ ಇದರ ಫಲವು ನಷ್ಟವಾಗಿ ಇದೂ ತೀರಿ ಹೋಗುವದೆಂತಾಯಿತಲ್ಲ? ಎಂದರೆ ಹೇಳುತ್ತಾನೆ. ಇದು ಅವ್ಯಯವಾದದ್ದು, ಇದು ಕರ್ಮದಂತೆ ಫಲನಾಶದ ಮೂಲಕವಾಗಿ ತೀರಿಹೋಗುವಂಥದ್ದಲ್ಲ. ಆದ್ದ ರಿಂದ ಆತ್ಮಜ್ಞಾನದಲ್ಲಿ || ಶ್ರದ್ಧೆಯಿರಬೇಕು. ॥ ೨ ॥

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

---

* ಪ್ರಾಯಶ್ಚಿತ್ತವೇ ಮುಂತಾದವೂ ಶುದ್ಧಿಗೊಳಿಸುತ್ತವೆ; ಆದರೆ ಆತ್ಮಜ್ಞಾನವು ನಿತ್ಯಶುದ್ಧ ವಾದ ಆತ್ಮಸ್ವರೂಪವನ್ನು ನಮಗೆ ಕೊಡುವದರಿಂದ ಇದು ಎಲ್ಲಕ್ಕಿಂತಲೂ ಹೆಚ್ಚಿನ ಶುದ್ಧಿಕರವಾಗಿರು ವದು. ಆಪಸ್ತಂಬಧರ್ಮಸೂತ್ರ (೧-೨೨-೧) ವನ್ನೂ ಹರದತ್ತವ್ಯಾಖ್ಯಾನವನ್ನೂ ನೋಡಿ.

† ಧರ್ಮಾಧರ್ಮಗಳಲ್ಲದೆ ಮತ್ತೆ ಯಾವ ಕರ್ಮಗಳೂ ಇಲ್ಲ; ಇಲ್ಲಿ 'ಆದಿ' ಎಂಬ ಶಬ್ದವು ಅವಶ್ಯಕವಾಗಿ ತೋರುವದಿಲ್ಲ. ಆದರೆ ಎಲ್ಲಾ ಪುಸ್ತಕಗಳಲ್ಲಿಯೂ ಇದೇ ಪಾಠವಿದೆ.

‡ ಜ್ಞಾನಿಗಳು ಅಧರ್ಮವನ್ನೆಂದಿಗೂ ಮಾಡರು, ಧರ್ಮದಿಂದಲೇ ಜ್ಞಾನವು ಸಿಕ್ಕುವದು.

§ ದೇಹದ ಆಯಾಸವಿಲ್ಲದೆ.

|| ಆತ್ಮಜ್ಞಾನದ ಹೆಚ್ಚುಗಾರಿಕೆಯನ್ನು ಗೀತಾರ್ಥಸರ್ವಸ್ವದಲ್ಲಿ ವಿವರಿಸಿದೆ.

೩. ಎಲೈ ಪರಂತಪನೆ, ಈ ಧರ್ಮದಲ್ಲಿ ಶ್ರದ್ಧೆಯನ್ನಿಡದ ಜನರು, ನನ್ನನ್ನು ಹೊಂದದೆ ಮೃತ್ಯುಸಂಸಾರದ ದಾರಿಗೆ ಹಿಂತಿರುಗುತ್ತಾರೆ.

[ಭಾಷ್ಯ]

ಆದರೆ ಯಾರು ಈ ಆತ್ಮಜ್ಞಾನವೆಂಬ ಧರ್ಮದಲ್ಲಿ ಶ್ರದ್ಧೆಯನ್ನಿಡದವರೋ ಎಂದರೆ ಇದರ ಸ್ವರೂಪದಲ್ಲಿಯೂ ಇದರ ಫಲದಲ್ಲಿಯೂ ನಂಬಿಕೆಯಿಲ್ಲದೆ ನಾಸ್ತಿಕರಾಗಿ ಪಾಪವನ್ನೇ ಮಾಡುತ್ತಾ ದೇಹವೇ ಆತ್ಮನೆಂದು ತಿಳಿಯುವ **ಅಸುರರ ಉಪನಿಷತ್ತನ್ನು** * ಹಿಡಿದು ಹೊಟ್ಟೆಯನ್ನು ಹೊರೆಯುತ್ತಿರುವ ಪಾಪಿಜನರಾಗಿರುವರೋ (ಅವರು) ನಂಬಿಕೆಯಿಲ್ಲದೆ, ಎಲೈ ಪರಂತಪನಾದ (ಅರ್ಜುನನೆ), ಪರಮೇಶ್ವರನಾದ ನನ್ನನ್ನು ಹೊಂದದೆ- ನನ್ನನ್ನು ಪಡೆಯುವರೆಂಬ ಶಂಕೆಯು ಕೂಡ ಇಲ್ಲವಾದ್ದರಿಂದ ನನ್ನನ್ನು ಪಡೆಯುವ ಮಾರ್ಗಗಳಲ್ಲಿ ಒಂದಾದ ಭಕ್ತಿಯನ್ನು ಕೂಡ ಹೊಂದದೆ ಎಂದರ್ಥ- ಹಿಂತಿರುಗುವರು. ನಿಶ್ಚಯವಾಗಿ ಅವರು (ಈ ಮಾರ್ಗದಲ್ಲಿ) ಮತ್ತೆ ಮತ್ತೆ † ಬರುತ್ತಿರುವರು. ಎಲ್ಲಿ? ಎಂದರೆ ಮೃತ್ಯುಸಂಸಾರದ ದಾರಿಯಲ್ಲಿ. ಮೃತ್ಯುಸಂಸಾರವೆಂದರೆ ಮೃತ್ಯುವಿನಿಂದೊಡಗೂಡಿದ ಸಂಸಾರವು, ಅದರ ಹಾದಿಯೆಂದರೆ ನರಕ, ತಿರ್ಯಕ್ಪ್ರಾಣಿಗಳ ಜನ್ಮವೇ ಮುಂತಾದವನ್ನು ಪಡೆಯುವ ಹಾದಿಯು ; ಅದರಲ್ಲಿಯೇ ಅಂಥವರು ಇರುತ್ತಾರೆ ಎಂದರ್ಥ. ॥ ೩ ॥

(ಹೀಗೆ) ಜ್ಞಾನವನ್ನು ಹೊಗಳಿ ಅರ್ಜುನನ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಂಡು ಭಗವಂತನು ಹೇಳುತ್ತಾನೇನೆಂದರೆ:—

## ಪರಮಾತ್ಮನಿಗೆ ಪ್ರಪಂಚದ ಸೋಂಕಿಲ್ಲ

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

೪. ಈ ಜಗತ್ತೆಲ್ಲವೂ ಅವ್ಯಕ್ತಮೂರ್ತಿಯಾದ ನನ್ನಿಂದ ವ್ಯಾಪ್ತವಾಗಿರುವದು. ಸರ್ವಭೂತಗಳೂ ನನ್ನಲ್ಲಿವೆ, ಆದರೆ ನಾನು ಅವುಗಳಲ್ಲಿಲ್ಲ.

[ಭಾಷ್ಯ]

ನನ್ನಿಂದ ಅಂದರೆ ನನ್ನ ಹೆಚ್ಚಿನ ಸ್ವಭಾವದಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವದು. ಅವ್ಯಕ್ತಮೂರ್ತಿಯಾದ, ವ್ಯಕ್ತವಲ್ಲದ ಮೂರ್ತಿಯನ್ನು

* ಇಲ್ಲಿ ಉಪನಿಷತ್ತೆಂದರೆ ಸಿದ್ಧಾಂತವು. ೧೬ನೆಯ ಅಧ್ಯಾಯವನ್ನು ನೋಡಿ.

† 'ನಿಶ್ಚಯೇನ ಆವರ್ತನ್ತೇ' ಎಂಬ ಶ॥ ಗು॥ ಪಾಠಗಳನ್ನೇ ಇಟ್ಟುಕೊಂಡಿರುತ್ತದೆ.

ಎಂದರೆ ಸ್ವರೂಪವನ್ನುಳ್ಳ ನಾನು ಅವ್ಯಕ್ತಮೂರ್ತಿಯೆನಿಸಿರುವೆನು. ಅಂಥ ಅವ್ಯಕ್ತಮೂರ್ತಿಯಾದ– ಎಂದರೆ ಕರಣಗಳಿಗೆ ಗೋಚರವಾಗದ ಸ್ವರೂಪವುಳ್ಳ (ನನ್ನಿಂದ ಜಗತ್ತೆಲ್ಲವೂ ವ್ಯಾಪ್ತವಾಗಿರುವದು.) ಆ ಅವ್ಯಕ್ತಮೂರ್ತಿಯಾದ ನನ್ನಲ್ಲಿ ಎಲ್ಲಾ ಭೂತಗಳೂ ಎಂದರೆ ಬ್ರಹ್ಮನು ಮೊದಲುಗೊಂಡು ಸ್ತಂಬದವರೆಗಿನ (ಎಲ್ಲಾ ಪ್ರಾಣಿಗಳೂ) ಇರುವವು. ಯಾವ ಭೂತವೇ ಆಗಲಿ ನಿರಾತ್ಮಕವಾಗಿದ್ದರೆ ವ್ಯವಹಾರಕ್ಕೆ ತಕ್ಕದ್ದಾಗಿರುವದೇ ಇಲ್ಲ. ಆದ್ದರಿಂದ (ಭೂತಗಳು) ನನ್ನಲ್ಲಿಯೇ * ಇರುವವು, ಆತ್ಮನಾದ ನನ್ನನ್ನೇ ತನಗೆ ಆತ್ಮವಾಗಿ ಮಾಡಿಕೊಂಡಿರುವವಾದ್ದರಿಂದ (ಅವು) ನನ್ನಲ್ಲಿರುವವು ಎನ್ನಿಸಿಕೊಳ್ಳುವವು.

ಆ ಭೂತಗಳಿಗೆ ನಾನೇ ಆತ್ಮನಾಗಿರುವದರಿಂದ ಅವುಗಳಲ್ಲಿ ನಾನು ಇದೇನೆಂದು ಮೂಢಬುದ್ಧಿಗಳಾದವರಿಗೆ † ತೋರುವದು. ಆದ್ದರಿಂದ ನಾನು ಆ ಭೂತಗಳಲ್ಲಿರುವದಿಲ್ಲ ಎಂದು ಹೇಳುತ್ತಲಿದೇನೆ. ಅದೇಕೆಂದರೆ ಮೂರ್ತವಸ್ತುವಿನಂತೆ ನಾನು ಯಾವ ವಸ್ತುವಿಗೂ ಅಂಟಿಕೊಂಡಿರುವದಿಲ್ಲ ; ಏಕೆಂದರೆ ಆಕಾಶಕ್ಕಿಂತಲೂ ನಾನು ಒಳಗಡೆ ಇರುವವನಾಗಿರುತ್ತೇನೆ. ಮತ್ತೊಂದರೊಡನೆ ಅಂಟಿಕೊಳ್ಳಲಾರದ ವಸ್ತು ಏತರಲ್ಲಿಯೂ ಆಧೇಯರೂಪವಾಗಿ ಇರಲಾರದಷ್ಟೆ? ॥೪॥

ಹೀಗೆ ನಾನು ಒಂದಕ್ಕೆ ಅಂಟಿಕೊಳ್ಳಲಾಗದ ಸ್ವಭಾವವುಳ್ಳವನಾದ್ದರಿಂದಲೇ–

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

೫. ಮತ್ತು ಭೂತಗಳು ನನ್ನಲ್ಲಿಲ್ಲವೂ ಇಲ್ಲ. ನನ್ನ ಈಶ್ವರಯೋಗವನ್ನು ನೋಡು ! ಭೂತಭಾವನನಾದ ನನ್ನ ಆತ್ಮನು ಭೂತಗಳನ್ನು ಧರಿಸಿರುವದು, ಆದರೆ ಭೂತಗಳಲ್ಲಿಲ್ಲ.

* ಆತ್ಮನಲ್ಲಿ ಭೂತಗಳು ಇರುವವೆಂದರೆ ಥಾಲಿಯಲ್ಲಿ ನೀರು ಇರುವಂತೆ ಅಲ್ಲ ; ಆತ್ಮನನ್ನು ಬಿಟ್ಟರೆ ಯಾವ ವಸ್ತುವೂ ತೋರಿಕೊಳ್ಳಲೇ ಆರದೆಂಬರ್ಥದಲ್ಲಿ ಮಾತ್ರ ಆತ್ಮನಲ್ಲಿರುವದು.

† ಪಂಚಭೂತಗಳಿಂದಾಗಿರುವ ಶರೀರದಲ್ಲಿ ಆತ್ಮನು ಇದ್ದಾನೆಂದು ಮೂಢರು ಭಾವಿಸುವರು: ಶರೀರದಲ್ಲಿ ಮನಸ್ಸೂ ಮನಸ್ಸಿನಲ್ಲಿ ಆತ್ಮನೂ ಇದ್ದಾನೆಂದು ಭಾವಿಸುವದು ಸರಿಯಾಗಿ ನೋಡಿದರೆ ತಪ್ಪೇ ; ಏಕೆಂದರೆ ಗಡಿಗೆಯಲ್ಲಿ ಜಲ್ಲವಿರುವಂತೆ ಶರೀರದಲ್ಲೇನೂ ಆತ್ಮನಿರುವದಿಲ್ಲ. ಇದಲ್ಲದೆ ಆತ್ಮನು ಸಾವಯುವನಲ್ಲವಾದ್ದರಿಂದ ಆತ್ಮನು ಚಾಪೆಯ ಮೇಲೆ ಮನುಷ್ಯನಿರುವಂತೆ ಶರೀರವನ್ನವಲಂಬಿಸಿಕೊಂಡು ಇದಾನೆಂದೂ ಹೇಳುವದಕ್ಕಿಲ್ಲ.

[ಭಾಷ್ಯ]

ಬ್ರಹ್ಮನೇ ಮೊದಲಾದ ಭೂತಗಳು ನನ್ನಲ್ಲಿಲ್ಲವೂ * ಇಲ್ಲ. ನೋಡು ಈಶ್ವರನಾದ ನನ್ನ ಯೋಗವನ್ನು, ಎಂದರೆ ಆತ್ಮನ ಯಾಥಾತ್ಮ್ಯವನ್ನು ನೋಡು ಎಂದರ್ಥ. ಆದ್ದರಿಂದಲೇ ಆತ್ಮನು ಮತ್ತೊಂದಕ್ಕೆ ಅಂಟಿಕೊಳ್ಳುವ ಸ್ವಭಾವದವನಲ್ಲವೆಂಬುದರ ಮೇಲೆ ಶ್ರುತಿಯು : "(ಆತನು) ಅಸಂಗನು, ಏಕೆಂದರೆ ಅವನು (ಏತಕ್ಕೂ ಅಂಟಿಕೊಳ್ಳುವದಿಲ್ಲ" (ಬೃ) ಎಂದು ಆತನು ಅಸಂಗನೆಂದು ತಿಳಿಸುತ್ತದೆ.

ಇದೂ ಅಲ್ಲದೆ ಇನ್ನೊಂದು ಆಶ್ಚರ್ಯವನ್ನು ನೋಡು : ಭೂತಗಳನ್ನು ಧರಿಸಿರುವನು, ಈತನು ಅಸಂಗನಾದರೂ ಭೂತಗಳನ್ನು ಹಿಡಿದು ನಿಲ್ಲಿಸಿಕೊಂಡಿರುವನು; ಆದರೂ ಭೂತಗಳಲ್ಲಿಲ್ಲ, ಏಕೆಂದರೆ ಹಿಂದೆ ಹೇಳಿ ತೋರಿಸಿಕೊಟ್ಟಿರುವ ರೀತಿಯಿಂದ ಆತನು ಯಾವ ಭೂತಗಳಲ್ಲಿಯೂ ಇರುವದೆಂಬುದು ಹೊಂದುವ ಹಾಗಿಲ್ಲ.

ಹಾಗಾದರೆ 'ಈತನು ನನ್ನ ಆತ್ಮನು' ಎಂದು ಹೇಳಿದ್ದು ಹೇಗೆ ? ಎಂದರೆ ದೇಹವೇ ಮುಂತಾದವುಗಳ ಗುಂಪನ್ನು ಪಂಗಡಿಸಿ, ಅದರಲ್ಲಿ ಅಹಂಕಾರವನ್ನು ಆರೋಪಿಸಿ ಸಾಮಾನ್ಯಜನರ ಬುದ್ಧಿಯನ್ನನುಸರಿಸಿ 'ನನ್ನ ಆತ್ಮನು' ಎಂದು ಹೇಳಿರುವನೇ ಹೊರತು ತನ್ನ ಆತ್ಮನು ಬೇರೆಯಾಗಿರುವನೆಂದು ಸಾಮಾನ್ಯಜನರಂತೆ ತಪ್ಪುತಿಳಿವಳಿಕೆಯಿಂದ ಹೇಳಿರುವದಿಲ್ಲ. † ಮತ್ತು ಈ ಆತ್ಮನು ಭೂತಭಾವನನು ; ಎಂದರೆ ಭೂತಗಳನ್ನು ಉಂಟುಮಾಡುವವನು ಅಥವಾ ಭೂತಗಳನ್ನು ಬೆಳೆಯುವಂತೆ ಮಾಡುವವನು. ॥ ೫ ॥

ಹಿಂದೆ ಹೇಳಿದ ಎರಡು ಶ್ಲೋಕಗಳಲ್ಲಿ ಹೇಳಿರುವ ವಿಷಯವನ್ನು ದೃಷ್ಟಾಂತದಿಂದ ತಿಳಿಸಿಕೊಡುವದಕ್ಕಾಗಿ ಭಗವಂತನು ಹೇಳುತ್ತಾನೇನೆಂದರೆ :—

**ಯಥಾಕಾಶಸ್ಥಿತೋ ನಿತ್ಯಃ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

೬. ಹೇಗೆ ಎಲ್ಲೆಲ್ಲಿಯೂ ಸಂಚರಿಸುವ ದೊಡ್ಡವಾಯುವು ಯಾವಾಗಲೂ ಆಕಾಶದಲ್ಲಿರುವದೋ ಅದರಂತೆ ಎಲ್ಲಾ ಭೂತಗಳೂ ನನ್ನಲ್ಲಿರುವವೆಂದು ನಿಶ್ಚಯಿಸು.

* ಆತ್ಮನನ್ನು ಆಧಾರಮಾಡಿಕೊಂಡು ಯಾವದೊಂದು ವಸ್ತುವೂ ಆಧೇಯವಾಗಿರುವದಿಲ್ಲ, ಆತ್ಮನನ್ನು ಆಧೇಯವಾಗಿ ಮಾಡಿಕೊಂಡು ಯಾವದೊಂದು ವಸ್ತುವೂ ಅದಕ್ಕೆ ಆಧಾರವೂ ಆಗಿರುವದಿಲ್ಲ. ಈ ಅರ್ಥದಲ್ಲಿ ಆತ್ಮನು ಯಾವದೊಂದರಲ್ಲಿಯೂ ಇಲ್ಲ, ಯಾವದೂ ಆತ್ಮನಲ್ಲಿಲ್ಲ.

† ಆದ್ದರಿಂದ ನನ್ನ ಆತ್ಮನೆಂದರೆ 'ನಾನು' ಎಂದೇ ಅರ್ಥ.

[ಭಾಷ್ಯ]

ಎಲ್ಲೆಲ್ಲಿಯೂ ಸಂಚರಿಸುತ್ತಿರುವ ಗಾಳಿಯು ಪರಿಮಾಣದಿಂದ ದೊಡ್ಡದಾದರೂ ಯಾವಾಗಲೂ ಆಕಾಶದಲ್ಲಿಯೇ ಇದ್ದುಕೊಂಡಿರುವದೆಂದು ಲೋಕದಲ್ಲಿ ಕಂಡುಬರುತ್ತದೆಯಲ್ಲವೆ? ಇದರಂತೆ ಆಕಾಶದಂತೆ ಸರ್ವಗತನಾದ ನನ್ನಲ್ಲಿ ಯಾವ ಸಂಬಂಧವೂ ಇಲ್ಲದೆಯೇ ಸಮಸ್ತಭೂತಗಳೂ ಇರುವವೆಂದು ತಿಳಿ. ||೬||

ಈ ರೀತಿಯಲ್ಲಿ ಆಕಾಶದಲ್ಲಿ ವಾಯುವಿರುವಂತೆ ಸ್ಥಿತಿಕಾಲದಲ್ಲಿ ಸರ್ವಭೂತಗಳೂ ನನ್ನಲ್ಲಿರುವವು. ಇವು—

**ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

೭. ಎಲೈ ಕೌಂತೇಯನೆ, ಕಲ್ಪವು ಕ್ಷಯವಾಗುವಾಗ ಸರ್ವಭೂತಗಳೂ ನನ್ನ ಪ್ರಕೃತಿಯನ್ನು ಸೇರುತ್ತವೆ; ಕಲ್ಪದ ಆದಿಯಲ್ಲಿ ಮತ್ತೆ ನಾನು ಅವುಗಳನ್ನು ಹೊರಕ್ಕೆ ಬಿಡುತ್ತೇನೆ.

[ಭಾಷ್ಯ]

ಕೌಂತೇಯನೆ, ಎಲ್ಲಾ ಭೂತಗಳೂ ಮೂರು ಗುಣಗಳಿಂದಾಗಿರುವ ನನ್ನ ಕೀಳ್ತರದ ಪ್ರಕೃತಿಯನ್ನು ಕಲ್ಪವು ಕ್ಷಯವಾಗುವಾಗ ಎಂದರೆ ಪ್ರಲಯಕಾಲದಲ್ಲಿ ಹೊಂದುವವು; ಮತ್ತೆ ಆ ಭೂತಗಳನ್ನು ಹುಟ್ಟುವ ಕಾಲವಾದ ಕಲ್ಪದ ಆದಿಯಲ್ಲಿ ನಾನು ಮುನ್ನಿನಂತೆಯೇ ಉಂಟುಮಾಡುವೆನು, ಸೃಷ್ಟಿಸುತ್ತೇನೆ. ॥ ೭ ॥

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

೮. ನನ್ನ ಪ್ರಕೃತಿಯನ್ನು ಅವಲಂಬಿಸಿಕೊಂಡು ಪ್ರಕೃತಿಯ ವಶದಿಂದ ಪರಾಧೀನವಾಗಿರುವ ಈ ಭೂತಗ್ರಾಮವನ್ನು ಮತ್ತೆ ಮತ್ತೆ ಸೃಷ್ಟಿಮಾಡುತ್ತಿರುವೆನು.

[ಭಾಷ್ಯ]

ಹೀಗೆ ಅವಿದ್ಯಾಲಕ್ಷಣವಾದ * ನನ್ನ ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಂಡು ಪ್ರಕೃತಿಯಿಂದ ಹುಟ್ಟುವ ಈ ವರ್ತಮಾನಭೂತಸಮುದಾಯವನ್ನೆಲ್ಲ ಪರವಶವಾಗಿರುವ ಎಂದರೆ ಅವಿದ್ಯೆಯೇ ಮುಂತಾದ ದೋಷಗಳಿಂದ ಪರಾಧೀನ

* ಪ್ರಕೃತಿಯು ಅವಿದ್ಯಾಕಲ್ಪಿತವಾದದ್ದೆಂಬುದನ್ನು ನೆನೆಪುಕೊಡುವದಕ್ಕೆ ಈ ವಿಶೇಷಣವನ್ನು ಹಾಕಿದೆ. ನಿಜವಾಗಿ ಆತ್ಮನಲ್ಲಿ ಯಾವ ಪ್ರಕೃತಿಯೂ ಇರುವದಿಲ್ಲ.

ವಾಗಿರುವ, ಪ್ರಕೃತಿಯ ವಶದಿಂದ ಎಂದರೆ ಸ್ವಭಾವಕ್ಕೊಳಗಾಗುವದರಿಂದ (ಪರ ತಂತ್ರವಾಗಿರುವ ಈ ಭೂತಸಮುದಾಯ)ವನ್ನೆಲ್ಲವನ್ನೂ ಮತ್ತೆ ಮತ್ತೆ ಉಂಟು ಮಾಡುತ್ತಿರುವೆನು. ॥ ೮ ॥

ಹಾಗಾದರೆ ಈ ಭೂತಸಮುದಾಯವನ್ನು ಬಗೆಬಗೆಯಾಗಿ ಮಾಡುತ್ತಿರುವ ಪರಮೇಶ್ವರನಾದ ನಿನಗೆ, ಆ ಕಾರ್ಯದಿಂದಾಗುವ ಧರ್ಮಾಧರ್ಮಗಳ ಸಂಬಂಧ ವುಂಟಾಗಬೇಕಲ್ಲ? ಎಂದರೆ ಭಗವಂತನು ಇದನ್ನು ಹೇಳುತ್ತಾನೆ:—

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

೯. ಆದರೆ ಧನಂಜಯನೆ, ಈ ಕರ್ಮಗಳಲ್ಲಿ ಉದಾಸೀನನಂತೆ ಅಸಕ್ತನಾಗಿರುವ ನನ್ನನ್ನು ಈ ಕರ್ಮಗಳು ಕಟ್ಟಿಹಾಕುವದಿಲ್ಲ.

[ಭಾಷ್ಯ]

ಆದರೆ ಈಶ್ವರನಾದ ನನ್ನನ್ನು ಈ ಕರ್ಮಗಳು ಎಂದರೆ ಭೂತಸಮುದಾಯ ವನ್ನು ಒಗೆಬಗೆಯಾಗಿ* ಸೃಷ್ಟಿಮಾಡುವದರಿಂದಾದ ಕರ್ಮಗಳು ಕಟ್ಟಿಹಾಕುವದಿಲ್ಲ. ಆ ಕರ್ಮಗಳು (ನನಗೆ) ತಟ್ಟದೆ ಇರುವದಕ್ಕೆ ಕಾರಣವೇನೆಂದರೆ ಹೇಳುತ್ತಾನೆ: ಉದಾಸೀನನಂತೆ ಇರುವೆನು. ಉದಾಸೀನನು ಎಂದರೆ ಉಪೇಕ್ಷಕನಾದವನು ಹೇಗಿರುವನೋ ಹಾಗೆ ಇರುವೆನು ಎಂದರ್ಥ; ಏಕೆಂದರೆ ಆತ್ಮನು ಯಾವ ಮಾರ್ಪಾಡುಗಳೂ ಇಲ್ಲದವನಾಗಿರುತ್ತಾನೆ. ಅಸಕ್ತನಾಗಿರುವದರಿಂದಲೂ ಎಂದರೆ ಫಲದಲ್ಲಿ ಆಸಕ್ತಿಯಿಲ್ಲದವನಾಗಿರುವದರಿಂದಲೂ 'ನಾನು ಇವುಗಳನ್ನು ಮಾಡುತ್ತೇನೆ' ಎಂದು ಆ ಕರ್ಮಗಳಲ್ಲಿ ಅಭಿಮಾನವಿಲ್ಲದವನಾಗಿರುವದರಿಂದಲೂ (ನನ್ನನ್ನು ಅವು ಕಟ್ಟಿಹಾಕುವದಿಲ್ಲ.) ಆದ್ದರಿಂದ ಇನ್ನೊಬ್ಬರಿಗೂ (ಹೀಗೆಯೇ;) ನಾನು ಮಾಡುವವನೆಂಬ ಅಭಿಮಾನವಿಲ್ಲದಿರುವಿಕೆಯೂ ಫಲಾಸಕ್ತಿಯಿಲ್ಲದಿರು ವಿಕೆಯೂ ಬಂಧವಾಗದೆ ಇರುವದಕ್ಕೆ ಕಾರಣವು; ಹಾಗಿಲ್ಲದಿದ್ದರೆ ಮೂಢ ನಾದವನು ರೇಷ್ಮೆಹುಳುವಿನಂತೆ ಕರ್ಮಗಳಿಂದ ಕಟ್ಟುವಡೆಯುತ್ತಾನೆ ಎಂದಭಿ ಪ್ರಾಯವು. ॥ ೯ ॥

ಇಲ್ಲಿ 'ಭೂತಗ್ರಾಮವನ್ನು ಸೃಷ್ಟಿಮಾಡುತ್ತೇನೆ'ಂದೂ (೮) 'ಉದಾಸೀನ ನಂತೆ ಇರುವೆನೆ'ಂದೂ (೯) ಹೇಳಿದ್ದು ವಿರುದ್ಧವಾಯಿತಲ್ಲ!–ಎಂದರೆ ಅದನ್ನು ಬಗೆಹರಿಸುವದಕ್ಕಾಗಿ ಭಗವಂತನು ಇದನ್ನು ಹೇಳುತ್ತಿದ್ದಾನೆ:—

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ವಿಪರಿವರ್ತತೇ ॥ ೧೦ ॥**

* ೪–೧೩,೧೪ನೆಯ ಶ್ಲೋಕಗಳನ್ನೂ ಬ್ರ. ಸೂ. ೨–೧–೩೪ವನ್ನೂ ನೋಡಿ.

೧೦. ಅಧ್ಯಕ್ಷನಾದ ನನ್ನಿಂದ ಪ್ರಕೃತಿಯು ಚರಾಚರವನ್ನೆಲ್ಲ ಹಡೆಯುವದು. ಈ ಕಾರಣದಿಂದ, ಎಲೈ ಕೌಂತೇಯನೆ, ಜಗತ್ತು ಸುತ್ತುತ್ತಿರುವದು.

[ಭಾಷ್ಯ]

ಎಲ್ಲಾ ಬಗೆಯಿಂದಲೂ ಬರಿಯ ನೋಟಕನು ಮಾತ್ರವಾಗಿರುವ ಸ್ವರೂಪವುಳ್ಳ, ಮಾರ್ಪಾಡುಗಳಿಲ್ಲದ ಆತ್ಮನಾದ ನಾನು ಅಧ್ಯಕ್ಷನಾಗಿರಲು, ತ್ರಿಗುಣಾತ್ಮಕವಾದ ನನ್ನ ಮಾಯೆಯು, ಅವಿದ್ಯಾಲಕ್ಷಣವಾದ ಪ್ರಕೃತಿಯು, ಸ್ಥಾವರಜಂಗಮರೂಪವಾದ ಜಗತ್ತನ್ನು ಹಡೆಯುವದು, ಉಂಟುಮಾಡುತ್ತಿರುವದು. ಆದ್ದರಿಂದಲೇ ಹೀಗೆಂದು ಮಂತ್ರವರ್ಣವು ಹೇಳುತ್ತಿರುವದು : "ಸರ್ವವ್ಯಾಪಿಯೂ ಸರ್ವಭೂತಗಳಿಗೂ ಒಳಗಿನ ಆತ್ಮನೂ ಆದ ಒಬ್ಬನೇ ಒಬ್ಬ ದೇವನು ಸರ್ವಭೂತಗಳಲ್ಲಿಯೂ ಅಡಗಿರುವನು. ಆತನು ಕರ್ಮಗಳ ಅಧ್ಯಕ್ಷನು, ಸಮಸ್ತಭೂತಗಳಲ್ಲಿಯೂ ವಾಸವಾಗಿರುವನು, ಸಾಕ್ಷಿಯು, ಚೈತನ್ಯಸ್ವರೂಪನು, ತಾನೇ ಬೇರೆಯಾಗಿರುವವನು, ಮತ್ತು ನಿರ್ಗುಣನು." (ಶ್ವೇ.) ಎಲೈ ಕೌಂತೇಯನೆ, ಹೀಗೆ ನಾನು ಅಧ್ಯಕ್ಷನಾಗಿರುವೆನೆಂಬ ಹೇತುವಿನಿಂದ ಎಂದರೆ ನಿಮಿತ್ತದಿಂದ ಚರಾಚರಗಳಿಂದೊಡಗೂಡಿದ ವ್ಯಕ್ತ, ಅವ್ಯಕ್ತ- ಎಂಬ ರೂಪದಲ್ಲಿರುವ ಜಗತ್ತು ಎಲ್ಲಾ ಅವಸ್ಥೆಗಳಲ್ಲಿಯೂ ಸುತ್ತುತ್ತಿರುವದು.

ಜಗತ್ತಿನಲ್ಲಿ ಕಾಣುವ ಪ್ರವೃತ್ತಿಯೆಲ್ಲವೂ ಎಂದರೆ 'ನಾನು ಇದನ್ನು ಅನುಭವಿಸುವೆನು', 'ಇದನ್ನು ಕಾಣುತ್ತಿರುವೆನು', 'ಇದನ್ನು ಕೇಳುತ್ತಿರುವೆನು', 'ಸುಖವನ್ನನುಭವಿಸುತ್ತಿರುವೆನು', 'ದುಃಖವನ್ನನುಭವಿಸುತ್ತಿರುವೆನು', 'ಇದಕ್ಕಾಗಿ ಇದನ್ನು ಮಾಡುವೆನು', 'ಇದನ್ನು ಅರಿತುಕೊಳ್ಳುವೆನು'- ಎಂಬುದೇ ಮುಂತಾದ ಎಲ್ಲಾ ಬಗೆಯ ಪ್ರವೃತ್ತಿಯೂ ಚೈತನ್ಯಕ್ಕೆ ವಿಷಯವಾಗಿರುವದರಿಂದಲೇ ಆಗುವದು ; ಅದೆಲ್ಲವೂ ಅರಿವಿನಲ್ಲಿಯೇ ನಿಂತಿರುವದು, ಅರಿವಿನಲ್ಲಿಯೇ ಕೊನೆಗಾಣುವದು. "ಪರಮಾಕಾಶದಲ್ಲಿದ್ದುಕೊಂಡು ಯಾವಾತನು ಇದಕ್ಕೆ ಅಧ್ಯಕ್ಷನಾಗಿರುವನೋ" (ಋ., ತೈ. ಬ್ರಾ.) ಮುಂತಾದ ಮಂತ್ರಗಳೂ ಈ ಅಭಿಪ್ರಾಯವನ್ನೆ ತಿಳಿಯಪಡಿಸುತ್ತಿರುವವು.

ಹೀಗಿರುವದರಿಂದ ಎಲ್ಲಕ್ಕೂ ಸಾಕ್ಷಿಯಾಗಿರುವ ಬರಿಯ ಚೈತನ್ಯಮಾತ್ರನಾದ ನಿಜವಾಗಿ ಯಾವ ಭೋಗದ ಅಭಿಮಾನವೂ ಇಲ್ಲದ ಒಬ್ಬನೇ ಒಬ್ಬ ದೇವನಿಗಿಂತ ಬೇರೆಯಾದ ಚೈತನ್ಯವೇ ಇಲ್ಲದ್ದರಿಂದ ಆತನಿಗಿಂತ ಬೇರೆಯಾದ ಭೋಕ್ತೃವೇ ಇಲ್ಲವೆಂದಾಯಿತಾಗಿ " ಈ ಸೃಷ್ಟಿಗೆ ನಿಮಿತ್ತವೇನು ? " ಎಂಬ ವಿಷಯದಲ್ಲಿ ಪ್ರಶ್ನೆಯಾಗಲಿ ಉತ್ತರವಾಗಲಿ ಹೊಂದುಗಡೆಯಾಗುವದಿಲ್ಲ. "ಈ

ಬಗೆಬಗೆಯ ಸೃಷ್ಟಿಯು ಎಲ್ಲಿಂದ ಬಂದಿತೋ ಏತರಿಂದಾಯಿತೋ- ಇದನ್ನು ಚೆನ್ನಾಗಿ ಬಲ್ಲವರು ಯಾರು ? (ತೈ. ಬ್ರಾ.) ಎಂಬುದೇ ಮುಂತಾದ ಮಂತ್ರ ವರ್ಣಗಳು ಇದಕ್ಕೆ ಪ್ರಮಾಣವು. "ಜ್ಞಾನವು ಅಜ್ಞಾನದಿಂದ ಮುಸುಕಿ ಹೋಗಿರುತ್ತದೆ, ಆದ್ದರಿಂದ ಪ್ರಾಣಿಗಳು ಭ್ರಾಂತರಾಗುತ್ತಾರೆ" (೫-೧೫) ಎಂದು ಭಗವಂತನು ಮೊದಲೇ ಹೇಳಿಯೂ ಇರುತ್ತಾನೆ. ॥ ೧೦ ॥

## ದೈವಸಂಪತ್ತಿನ ಜನರು ಮಾತ್ರ ಪರಮಾತ್ಮನನ್ನು ಉಪಾಸನೆಮಾಡುತ್ತಾರೆ.

ಹೀಗೆ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿ ಸರ್ವಜ್ಞನಾಗಿ ನಾನು ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿರುತ್ತಿದ್ದರೂ-

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥ ೧೧ ॥**

೧೧. ಭೂತಗಳ ಮಹೇಶ್ವರನಾಗಿರುವ ನನ್ನ ಹೆಚ್ಚಿನ ಸ್ವರೂಪವನ್ನರಿಯದೆ, ಮೂಢರು ಮನುಷ್ಯದೇಹವನ್ನು ಧರಿಸಿದ ನನ್ನನ್ನು ತಿರಸ್ಕರಿಸುತ್ತಾರೆ.

[ ಭಾಷ್ಯ ]

ಮಾನುಷತನುವನ್ನಾಶ್ರಯಿಸಿದ ಎಂದರೆ ಮನುಷ್ಯಸಂಬಂಧವುಳ್ಳ ದೇಹವನ್ನು ಧರಿಸಿರುವ ಮನುಷ್ಯದೇಹದಿಂದ ವ್ಯವಹಾರಮಾಡುತ್ತಿರುವ ಎಂದರ್ಥ. ಇಂಥ ನನ್ನನ್ನು ಮೂಢರು ವಿಂಗಡಿಸಿ ತಿಳಿದುಕೊಳ್ಳಲಾರದೆ ತಿರಸ್ಕರಿಸುವರು, ಅಸಡ್ಡೆಮಾಡುತ್ತಾರೆ. ನನ್ನ ಹೆಚ್ಚಿನ ಭಾವವನ್ನು ಎಂದರೆ ಆಕಾಶದಂತಿರುವದಾಗಿ, ಆಕಾಶಕ್ಕಿಂತಲೂ ತಮ್ಮ ಒಳಗೇ ಇದ್ದುಕೊಂಡಿರುವದಾಗಿರುವ ಪರಮಾತ್ಮತತ್ತ್ವವನ್ನು, ಭೂತಗಳ ಮಹೇಶ್ವರನೆಂದು ಎಂದರೆ ಎಲ್ಲಾ ಪ್ರಾಣಿಗಳಿಗೂ ಪರಮೇಶ್ವರನಾಗಿರುವ ತಮ್ಮ ಆತ್ಮನೇ ಎಂದು ತಿಳಿಯದೆ ಹೀಗೆ ಅಸಡ್ಡೆಮಾಡುತ್ತಿರುವರು. ॥ ೧೧ ॥

ಆ ನನ್ನನ್ನು ಹೀಗೆ ಅನಾದರಮಾಡುವದರಿಂದ ಆ ಬಡಪ್ರಾಣಿಗಳು ಪಾಪ ! ಕೆಟ್ಟುಹೋಗುವರು. ಅದು ಹೇಗೆಂದರೆ:—

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

೧೨. ವ್ಯರ್ಥವಾದ ಆಶೆಗಳಿಂದಲೂ ವ್ಯರ್ಥವಾದ ಕರ್ಮಗಳಿಂದಲೂ ವ್ಯರ್ಥವಾದ ಜ್ಞಾನದಿಂದಲೂ ವಿವೇಕಹೀನರಾದ ಅವರು ರಾಕ್ಷಸರ ಮತ್ತು ಅಸುರರ ಮೋಹಕವಾದ ಪ್ರಕೃತಿಯನ್ನು ಹೊಂದಿರುತ್ತಾರೆ.

[ ಭಾಷ್ಯ ]

ಅವರು ವ್ಯರ್ಥವಾದ ಆಶೆಯುಳ್ಳವರು ; ಅವರ ಆಶೆಗಳು ಎಂದರೆ ಕೋರಿಕೆಗಳು. ವ್ಯರ್ಥವಾದವು. ಮತ್ತು ಅವರು ವ್ಯರ್ಥವಾದ ಕರ್ಮಗಳಿಂದ ಕೂಡಿರುವರು; ಅಗ್ನಿಹೋತ್ರವೇ ಮುಂತಾಗಿ ಅವರು ಮಾಡುವ ಕರ್ಮಗಳಿರುವವಲ್ಲ, ತಮ್ಮ ಆತ್ಮನಾಗಿರುವ ಭಗವಂತನನ್ನು ತಿರಸ್ಕರಿಸಿ ಅಪಶ್ರದ್ಧೆಯಿಂದ ಕಾಣುತ್ತಿರುವದರಿಂದ ಅವುಗಳಿಗೆ ಯಾವ ಫಲವೂ ಆಗುವದಿಲ್ಲವಾದ್ದರಿಂದ ಅವರ ಆ ಕರ್ಮಗಳೂ* ವ್ಯರ್ಥವೆ. ಇದರಂತೆ (ಅವರು) ವ್ಯರ್ಥವಾದ ಜ್ಞಾನವುಳ್ಳವರು,† ಅವರ ಜ್ಞಾನವೂ ವ್ಯರ್ಥವೆ. ಮತ್ತು (ಅವರು) ವಿಚೇತಸರು ಎಂದರೆ ವಿವೇಕವಿಲ್ಲದವರು ಆಗಿರುವರೆಂದು ಅಭಿಪ್ರಾಯ. ಅವರು ಮತ್ತೂ ಹೇಗಿರುವರು ? ಮೋಹಿನಿಯಾದ ಎಂದರೆ ದೇಹವೇ ಆತ್ಮನೆಂಬ ಮೋಹವನ್ನುಂಟುಮಾಡುವ ರಾಕ್ಷಸರ ಪ್ರಕೃತಿಯನ್ನೂ ಅಂದರೆ ಸ್ವಭಾವವನ್ನೂ ಅಸುರರ ಪ್ರಕೃತಿಯನ್ನೂ ಆಶ್ರಯಿಸಿರುವರು. ಕಡಿ, ಹೊಡಿ, ಕುಡಿ, ತಿನ್ನು, ಮತ್ತೊಬ್ಬರ ವಸ್ತುವನ್ನು ಕಸಿದುಕೊ- ಎನ್ನುತ್ತಾ ಕ್ರೂರಕರ್ಮವನ್ನೇ ಮಾಡುತ್ತಿರುವರೆಂದರ್ಥ. "ಅಸುರ್ಯವೆಂಬ ಲೋಕಗಳನ್ನು (ಅವರು ಪಡೆಯುತ್ತಾರೆ)" (ಈ.) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. ||೧೨||

ಆದರೆ ಯಾರು ಶ್ರದ್ಧೆಯುಳ್ಳವರಾಗಿ ಭಗವದ್ಭಕ್ತಿಯೆಂಬ ಮೋಕ್ಷದ ದಾರಿಯಲ್ಲಿ ಹೊರಟಿರುವರೋ—

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥**

೧೩. ಆದರೆ ಪಾರ್ಥನೆ, ದೈವಪ್ರಕೃತಿಯನ್ನು ಆಶ್ರಯಿಸಿರುವ ಮಹಾತ್ಮರು ಭೂತಗಳಿಗೆ ಆದಿಯೂ ಅವ್ಯಯನೂ ಆಗಿರುವ ನನ್ನನ್ನು ಅರಿತುಕೊಂಡು ಅನನ್ಯಮನಸ್ಸಿನಿಂದ ಭಜಿಸುವರು.

[ ಭಾಷ್ಯ ]

ಆದರೆ ಯಾರು ಅಲ್ಪವಾದ ಮನಸ್ಸಿನವರಲ್ಲವೊ ಅಂಥ ಮಹಾತ್ಮರು ಈಶ್ವರನಾದ ನನ್ನನ್ನು, ಎಲೈ ಪಾರ್ಥನೆ, ದೈವಪ್ರಕೃತಿಯನ್ನು ಎಂದರೆ ಶಮದಮದಯಾ

---

* ಕರ್ಮಕ್ಕೆ ಈಶ್ವರನೇ ಫಲದಾತನು. ಈಶ್ವರನಲ್ಲಿಯೇ ನಂಬಿಕೆಯಿಲ್ಲದವರು ಯಾವ ಕರ್ಮವನ್ನು ಮಾಡಿದರೇನು ?— ಎಂದು ಭಾವ. ಕರ್ಮಕ್ಕೆ ತಕ್ಕ ಫಲವು ಆಗಿಯೇ ತೀರಬೇಕಾದರೂ ಶಾಸ್ತ್ರೀಯಕರ್ಮವನ್ನು ಭಗವಂತನಿಗೆ ಅರ್ಪಣೆಮಾಡುವದರಿಂದ ಉಂಟಾಗುವ ಫಲವು ಬರಿಯ ಕರ್ಮಕ್ಕೆ ಎಂದಿಗೂ ಸಿಕ್ಕಲಾರದು.

† ಇಲ್ಲಿ ಜ್ಞಾನವೆಂದರೆ ಬರಿಯ ಶಾಸ್ತ್ರಪಾಂಡಿತ್ಯವು. ಈ ಪಾಂಡಿತ್ಯವು ಬುದ್ಧಿಯನ್ನು ಮಾತ್ರ ಬೆಳೆಸುತ್ತದೆಯೇ ಹೊರತು ಪರಮಾತ್ಮನ ಸ್ವರೂಪವನ್ನು ಎಂದಿಗೂ ತಿಳಿಸಿಕೊಡಲಾರದು.

ಶ್ರದ್ಧೆ ಮುಂತಾದ ದೇವತೆಗಳ ಸ್ವಭಾವವನ್ನು ಹೊಂದಿದವರಾಗಿ ಅನನ್ಯಮನಸ್ಸಿನಿಂದ ಬೇರೊಂದು ಕಡೆ ಹೋಗದ ಚಿತ್ತದಿಂದ, ಭೂತಗಳಿಗೆ ಆದಿಯಾಗಿರುವ ಎಂದರೆ ಆಕಾಶವೇ ಮುಂತಾದ ಭೂತಗಳಿಗೂ ಪ್ರಾಣಿಗಳಿಗೂ ಕಾರಣನಾಗಿಯೂ ಅವ್ಯಯನಾಗಿಯೂ ಇರುವ ನನ್ನನ್ನು ಅರಿತುಕೊಂಡು ಭಜಿಸುವರು, ಸೇವಿಸುತ್ತಾರೆ. ॥ ೧೩ ॥

## ಭಕ್ತರು ಮಾಡುವ ಉಪಾಸನೆಯ ರೀತಿ

ಹೇಗೆಂದರೆ,

**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ ।**
**ನಮಸ್ಯನ್ತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

೧೪. ಯಾವಾಗಲೂ ನನ್ನನ್ನು ಕೀರ್ತನೆಮಾಡುತ್ತಲೂ, ಪ್ರಯತ್ನಮಾಡುತ್ತಲೂ ದೃಢವ್ರತರಾಗಿ ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ ನಿತ್ಯಯುಕ್ತರಾಗಿ ಉಪಾಸನೆಮಾಡುತ್ತಾರೆ.

[ ಭಾಷ್ಯ ]

ಯಾವಾಗಲೂ ಬಿಡದೆ ಭಗವಂತನೂ ಬ್ರಹ್ಮಸ್ವರೂಪನೂ ಆದ ನನ್ನನ್ನು ಕೀರ್ತನೆಮಾಡುತ್ತಲೂ ಇಂದ್ರಿಯಗಳನ್ನು ಎಳೆದುಕೊಳ್ಳುವದು, ಶಮ, ದಮ, ದಯೆ, ಅಹಿಂಸೆ- ಮುಂತಾದ ರೂಪದ ಧರ್ಮಗಳಿಂದ ಪ್ರಯತ್ನಗೈಯುತ್ತಲೂ ದೃಢವ್ರತರಾಗಿ ಎಂದರೆ ದೃಢವಾಗಿ ಚಲಿಸದಂತೆ ಸ್ಥಿರವಾಗಿರುವ ವ್ರತವುಳ್ಳವರಾಗಿ, ಹೃದಯದಲ್ಲಿರುವ ಆತ್ಮನಾದ ನನ್ನನ್ನು ಭಕ್ತಿಯಿಂದ ನಮಸ್ಕರಿಸುತ್ತಲೂ ನಿತ್ಯಯುಕ್ತರಾಗಿ * ಉಪಾಸನೆಮಾಡುತ್ತಾರೆ. ॥ ೧೪ ॥

ಅವರು ಯಾವ ಯಾವ ರೀತಿಯಿಂದ ಉಪಾಸನೆಮಾಡುತ್ತಾರೆ? ಎಂದರೆ ಹೇಳುತ್ತಾನೆ:—

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

೧೫. ಕೆಲವರು ಜ್ಞಾನಯಜ್ಞದಿಂದಲೇ ನನ್ನನ್ನು ಪೂಜಿಸುತ್ತಾ ಏಕನೆಂದು ಉಪಾಸನೆಮಾಡುತ್ತಾರೆ; (ಮತ್ತೆ ಕೆಲವರು) ಬೇರೆಬೇರೆಯಾಗಿ, (ಇನ್ನು ಕೆಲವರು) ವಿಶ್ವತೋಮುಖನೆಂದು ಬಹುಪ್ರಕಾರವಾಗಿ ಉಪಾಸನೆ ಮಾಡುತ್ತಾರೆ.

* ಬಿಡದೆ ಪರಮಾತ್ಮನಲ್ಲಿಯೇ ನೆಟ್ಟ ಚಿತ್ತವುಳ್ಳವರಾಗಿ.

[ ಭಾಷ್ಯ ]

ಭಗವಂತನ ವಿಷಯವಾದ ಜ್ಞಾನವೇ ( ಒಂದು ಬಗೆಯ ) ಯಜ್ಞವು ; ಆ ಜ್ಞಾನಯಜ್ಞದಿಂದ ಈಶ್ವರನಾದ ನನ್ನನ್ನು ಪೂಜಿಸುತ್ತಾ ಕೆಲವರು ಮಿಕ್ಕ ಉಪಾಸನೆಯನ್ನೆಲ್ಲ * ಬಿಟ್ಟು (ಜ್ಞಾನದಿಂದಲೇ) ಉಪಾಸನೆಮಾಡುತ್ತಿರುವರು. ಆ ಜ್ಞಾನವು ಯಾವದೆಂದರೆ: ಏಕನೆಂದು ಎಂದರೆ ಪರಬ್ರಹ್ಮವು ಒಂದೇ ಎಂಬುದು. ಆ ಪರಮಾರ್ಥದರ್ಶನದಿಂದ ಉಪಾಸನೆಮಾಡುವರು. ಮತ್ತೆ ಕೆಲವರು ಬೇರೆಬೇರೆಯಾಗಿ ಎಂದರೆ ಸೂರ್ಯ, ಚಂದ್ರ- ಮುಂತಾದ ರೂಪಗಳಿಂದ ಇರುವವನೂ ಆ ಭಗವಂತನಾದ ವಿಷ್ಣುವೇ ಎಂದು ಭಾವಿಸಿ ಉಪಾಸನೆ ಮಾಡುತ್ತಾರೆ. ಮತ್ತೆ ಕೆಲವರು ಆ ಸರ್ವತೋಮುಖನಾದ ವಿಶ್ವರೂಪನೇ ಬಹುಪ್ರಕಾರಗಳಿಂದ ತೋರುತ್ತಿರುವನು ಎಂದು ಆ ಸರ್ವತೋಮುಖನಾದ ವಿಶ್ವರೂಪನನ್ನು ಬಹುಬಗೆಗಳಿಂದ † ಬಹುಪ್ರಕಾರದಿಂದ ಉಪಾಸನೆಮಾಡುತ್ತಾರೆ. ॥ ೧೫ ॥

ಬಹು ಬಗೆಗಳಿಂದ ಉಪಾಸನೆಮಾಡುವದಾದರೆ ನಿನ್ನನ್ನೇ ಉಪಾಸನೆ ಮಾಡುತ್ತಾರೆಂಬುದು ಹೇಗೆ ? ‡ ಎಂದರೆ ಅದಕ್ಕೆ ಭಗವಂತನು ಹೇಳುತ್ತಾನೆ:-

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

---

* ಜ್ಞಾನಿಯು ಮತ್ತೆ ಯಾವ ಉಪಾಸನೆಯನ್ನು ಮಾಡದಿದ್ದರೂ ಭಗವಂತನ ಜ್ಞಾನದಿಂದ ಆತನು ಮಾಡುವ ಸ್ವರೂಪಚಿಂತೆಯಲ್ಲಿಯೇ ಎಲ್ಲಾ ಬಗೆಯ ಉಪಾಸನೆಯ ಫಲವೂ ಅಡಗಿರುವದು.

† ಪರಮಾತ್ಮನೊಬ್ಬನೇ ಪರಮಾರ್ಥವು, ಆತನಿಗಿಂತ ಬೇರೆಯಾಗಿ ಮತ್ತೊಂದು ಇಲ್ಲವೆಂಬುದು ಏಕತ್ವೋಪಾಸನೆಯು , ಪರಮಾತ್ಮನೇ ಸೂರ್ಯ, ಚಂದ್ರ- ಮುಂತಾದ ವಿಭೂತಿಗಳ ರೂಪದಲ್ಲಿ ತೋರುತ್ತಿರುವನೆಂದು ಭಾವಿಸುತ್ತಿರುವದು ಪೃಥಕ್ತ್ವೋಪಾಸನೆಯು ; ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ಪರಮಾತ್ಮನೇ, ಎತ್ತ ನೋಡಿದರೆ ಅತ್ತ ಪರಮಾತ್ಮನ ರೂಪವೇ ಕಾಣಬರುತ್ತಿರುವದೆಂಬ ಚಿಂತನೆಯು ವಿಶ್ವರೂಪೋಪಾಸನೆಯು. ಇಲ್ಲಿ 'ಏಕತ್ವೇನ'- ಎಂಬುದು ಅದ್ವೈತವನ್ನೂ 'ಪೃಥಕ್ತ್ವೇನ- ಎಂಬುದು ದ್ವೈತವನ್ನೂ ಸೂಚಿಸುತ್ತದೆಯೆಂದು ಕೆಲವರು ಈಚಿನವರು ಊಹಿಸುತ್ತಾರೆ. ಆದರೆ ಒಂದಕ್ಕೊಂದಕ್ಕೆ ತೀರ ವಿರುದ್ಧವಾಗಿರುವ ಈ ಎರಡು ದರ್ಶನಗಳನ್ನೂ ಜ್ಞಾನಯಜ್ಞಗಳೆಂದು ಭಗವಂತನು ಹೇಳಿದ್ದಾನೆಂಬುದು ಅಸಂಗತವಾಗಿದೆ. ಈ ವಿಷಯವನ್ನು ಗೀತಾರ್ಥಸರ್ವಸ್ವದ ಭಕ್ತಿಯೋಗದಲ್ಲಿ ಚರ್ಚಿಸಿರುತ್ತದೆ.

‡ ಒಂದೊಂದು ವಸ್ತುವನ್ನೂ ಬೇರೆಬೇರೆಯೆಂದು ತಿಳಿದು ಮಾಡುವದು ಪರಮಾತ್ಮನ ಉಪಾಸನೆಯಾದೀತೆ ?- ಎಂದು ಆಕ್ಷೇಪಕನ ಭಾವ.

೧೬. ನಾನೇ ಕ್ರತುವು, ನಾನೇ ಯಜ್ಞವು, ನಾನೇ ಸ್ವಧಾಕಾರವು ನಾನೇ ಔಷಧವು, ನಾನೇ ಮಂತ್ರವು, ನಾನೇ ಆಜ್ಯವು, ನಾನೇ ಅಗ್ನಿಯು, ನಾನೇ ಹೋಮವು.

[ ಭಾಷ್ಯ ]

ನಾನೇ ಕ್ರತುವೆಂಬ ಶ್ರೌತಕರ್ಮವಿಶೇಷವು*, ನಾನೇ ಸ್ಮಾರ್ತಯಜ್ಞವು†, ಮತ್ತು ನಾನೇ ಪಿತೃಗಳಿಗೆ ಕೊಡುವ ಸ್ವಧಾ ಎಂಬ ಅನ್ನವು, ನಾನೇ ಔಷಧವು ಎಂದರೆ ಪ್ರಾಣಿಗಳು ತಿನ್ನುವ ಅಕ್ಕಿ, ಭತ್ತ, ಜವೆಗೋಧಿ- ಮುಂತಾದ ಪೈರನ್ನು ಸೇರಿಸಿಕೊಂಡಿರುವ ಪೈರುಪಚ್ಚೆ. ಅಥವಾ ಸ್ವಧಾ ಎಂದರೆ ಪ್ರಾಣಿಗಳೆಲ್ಲಕ್ಕೂ ಸಮಾನವಾಗಿರುವ ಆಹಾರವು, ಔಷಧವೆಂದರೆ ರೋಗವನ್ನು ಶಾಂತಿಗೊಳಿಸುವ (ವೈದ್ಯರ) ದ್ರವ್ಯವು. ನಾನೇ ಪಿತೃಗಳಿಗೂ ದೇವತೆಗಳಿಗೂ ಹವಿಸ್ಸನ್ನು ಕೊಡುವದಕ್ಕೆ ಉಪಯೋಗಿಸುವ ಮಂತ್ರವು, ನಾನೇ ತುಪ್ಪವು ಎಂದರೆ ಹೋಮ ಮಾಡುವ ದ್ರವ್ಯವು, ನಾನೇ ಅಗ್ನಿಯು ; ಹವಿಸ್ಸನ್ನು ಯಾವದರಲ್ಲಿ ಹೋಮ ಮಾಡುತ್ತಾರೋ ಆ ಅಗ್ನಿಯೂ ನಾನೇ ಹುತವು, ಎಂದರೆ ಹೋಮಕರ್ಮವು‡

ಮತ್ತು—

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥ ೧೭ ॥**

೧೭. ನಾನು ಈ ಜಗತ್ತಿಗೆ ತಂದೆಯು, ತಾಯಿಯು, ಧಾತನು, ಅಜ್ಜನು ವೇದ್ಯವು, ಪವಿತ್ರವು, ಓಂಕಾರವು, ಋಕ್ಕು, ಸಾಮ, ಮತ್ತು ಯಜುಸ್ಸು.

---

* ಅಗ್ನಿಷ್ಟೋಮವೇ ಮುಂತಾದದ್ದು.

† ವೈಶ್ವದೇವವೇ ಮುಂತಾದ ಮಹಾಯಜ್ಞಗಳು.

‡ ಯಜ್ಞದಿಂದಲೇ ಜಗತ್ತೆಲ್ಲವೂ ಆಗಿರುವದೆಂದು ಶ್ರುತಿಸ್ಮೃತಿಗಳಲ್ಲಿ ಅಲ್ಲಲ್ಲಿ ಹೇಳಿರುತ್ತದೆ. ಯಜ್ಞವೂ ಅದರ ಸಾಮಗ್ರಿಗಳೂ ಎಲ್ಲವೂ ಭಗವಂತನೇ ಎಂದದ್ದರಿಂದ ಕ್ರಿಯಾಕಾರಕಫಲರೂಪವಾಗಿರುವ ಜಗತ್ತೇ ಭಗವತ್ಸ್ವರೂಪವೆಂದು ಹೇಳಿದಂತೆ ಆಯಿತು. ಇಲ್ಲಿ ಭಗವಂತನೇ ಯಜ್ಞ, ಅದರಲ್ಲಿ ಉಪಯೋಗಿಸುವ ಮಂತ್ರ, ಹೋಮದ್ರವ್ಯ, ಅಗ್ನಿ, ಹೋಮಕರ್ಮ- ಎಂಬ ರೂಪವಾಗಿ ಇರುವನೆಂದು ಹೇಳಿರುವದು ಉಪಾಸನೆಗೆ; ಇದು ೪-೨೪ರಲ್ಲಿ ಹೇಳಿದಂತೆ ಜ್ಞಾನರೂಪವಲ್ಲ. ಈ ವಿಷಯವನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ. ಪ್ರತಿಯೊಂದು ವಸ್ತುವನ್ನೂ ಭಗವಂತನೆಂಬ ಬುದ್ಧಿಯಿಂದಲೇ ಉಪಾಸನೆಮಾಡುವದರಿಂದ ಬಹುಪ್ರಕಾರೋಪಾಸನೆಯೂ ಭಗವದುಪಾಸನೆಯೇ ಆಗುವದೆಂದು ಭಾವ.

[ಭಾಷ್ಯ]

ನಾನು ಈ ಜಗತ್ತಿಗೆ ತಂದೆಯೂ, ಇದನ್ನುಂಟುಮಾಡಿದವನು; ತಾಯಿಯೂ ಎಂದರೆ ಹಡೆದವನು *; ಧಾತನು ಎಂದರೆ ಪ್ರಾಣಿಗಳಿಗೆ ಕರ್ಮದ ಫಲವನ್ನು ಕೊಡುವವನು; ಅಜ್ಜನು † ಎಂದರೆ ತಂದೆಯ ತಂದೆ; ವೇದ್ಯವು ಎಂದರೆ ತಿಳಿಯಬೇಕಾದ (ಪರಮಾರ್ಥವು); ಪವಿತ್ರವು ಎಂದರೆ ಪಾವನವಾದ (ಯಜ್ಞಯಾಗಾದಿಗಳು); ಓಂಕಾರವು, ಋಕ್ಕು ‡ ಸಾಮ ಮತ್ತು ಯಜುಸ್ಸು. ॥ ೧೭ ॥

ಮತ್ತು—

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸಾಕ್ಷೀ ನಿಧಾನಂ ಬೀಜಮವ್ಯಯಮ್ ॥ ೧೮ ॥**

೧೮. ಗತಿಯೂ, ಭರ್ತನು, ಪ್ರಭುವು, ಸಾಕ್ಷಿಯೂ, ನಿವಾಸವು, ಶರಣನು, ಸ್ನೇಹಿತನು, ಉತ್ಪತ್ತಿಕಾರಣನು, ಪ್ರಲಯಕಾರಣನು, ಸ್ಥಾನವು, ನಿಕ್ಷೇಪವು, ಅವ್ಯಯವಾದ ಬೀಜವು.

[ಭಾಷ್ಯ]

ಗತಿಯೂ ಎಂದರೆ ಕರ್ಮದ ಫಲವು; ಭರ್ತನು ಎಂದರೆ ಪೋಷಣೆಮಾಡುವವನು; ಪ್ರಭು ಎಂದರೆ ಒಡೆಯನು; ಸಾಕ್ಷಿಯು ಎಂದರೆ ಪ್ರಾಣಿಗಳು ಮಾಡುವ ಮತ್ತು ಬಿಡುವ ಕರ್ಮಗಳನ್ನು ನೋಡುತ್ತಲಿರುವವನು; ನಿವಾಸವು ಎಂದರೆ ಪ್ರಾಣಿಗಳು ಯಾವುದರಲ್ಲಿಯೋ ಇರುತ್ತಿರುವವೋ ಆ (ಆಧಾರತತ್ತ್ವವು); ಶರಣವು ಎಂದರೆ ಸಂಕಟದಿಂದ ಶರಣುಹೊಕ್ಕವರಿಗೆ ಸಂಕಟವನ್ನು ಪರಿಹರಿಸುವವನು; ಸ್ನೇಹಿತನು ಎಂದರೆ ಯಾವದೊಂದು ಪ್ರತ್ಯುಪಕಾರವನ್ನೂ ಬಯಸದೆ ಉಪಕಾರವನ್ನು ಮಾಡುವವನು; ಪ್ರಭವನು ಎಂದರೆ ಜಗತ್ತಿನ ಉತ್ಪತ್ತಿಕಾರಣನು; ಪ್ರಲಯವು ಎಂದರೆ ಯಾವದರಲ್ಲಿ (ಜಗತ್ತೆಲ್ಲವೂ) ಲಯವಾಗುವದೋ (ಆ ತತ್ತ್ವವು);

* ತಂದೆಯೆಂದರೆ ನಿಮಿತ್ತಕಾರಣ; ತಾಯಿಯೆಂದರೆ ಉಪಾದಾನಕಾರಣ.

† ತಂದೆಯೆಂದರೆ ಮೂಲಕಾರಣವೆಂಬ ಅರ್ಥವಾಗದೆ ಇದ್ದರೂ ಇರಬಹುದು, ಇದಕ್ಕಾಗಿ ಪಿತಾಮಹ ಎಂಬ ಮಾತನ್ನು ಹೇಳಿದೆ.

‡ ಋಗ್ವೇದ, ಯಜುರ್ವೇದ, ಸಾಮವೇದ— ಎಂದು ಅರ್ಥಮಾಡಿ ಚಕಾರದಿಂದ ಅಥರ್ವವೇದವನ್ನೂ ಸೂಚಿಸಿರುತ್ತದೆಯೆಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ. ವೇದದಲ್ಲಿರುವ ಮಂತ್ರಗಳನ್ನು ಋಕ್ಕು, ಯಜುಸ್ಸು, ಸಾಮ— ಎಂದು ಮೂರು ಬಗೆಯಾಗಿ ವಿಂಗಡಿಸುವದುಂಟು. ಆದ್ದರಿಂದ ಈ ಮೂರು ರೂಪದಲ್ಲಿರುವ ವೇದವು ನಾನೇ ಎಂಬರ್ಥವನ್ನೂ ಮಾಡಬಹುದು.

ಮತ್ತು ಸ್ಥಾನವು ಎಂದರೆ ಯಾವದರಲ್ಲಿ (ಜಗತ್ತೆಲ್ಲವೂ ಆಸರೆಗೊಂಡು) ನಿಂತಿರುವದೋ (ಅದು); ನಿಧಾನವು ಎಂದರೆ ಬೇರೆಯ ಕಾಲದಲ್ಲಿ ಪ್ರಾಣಿಗಳು ಅನುಭವಿಸಬೇಕಾಗಿರುವ ನಿಕ್ಷೇಪವು.* ಬೀಜವು ಎಂದರೆ ಹುಟ್ಟುವ ಸ್ವಭಾವವುಳ್ಳವುಗಳಿಗೆಲ್ಲ ಮೊಳಕೆಯಾಗುವದಕ್ಕೆ ಕಾರಣವಾದದ್ದು; (ಅದು) ಅವ್ಯಯವು, ಏಕೆಂದರೆ ಸಂಸಾರವಿರುವವರೆಗೂ ಮತ್ತೆ ಮತ್ತೆ ಹುಟ್ಟುವದಕ್ಕೆ ಕಾರಣವಾದ (ಅಜ್ಞಾನ) ಬೀಜವು ಇದ್ದೇ ಇರುವದರಿಂದ ಅದು ನಾಶರಹಿತವಾಗಿರುವದು. ಬೀಜವಿಲ್ಲದೆ ಯಾವದೂ ಮೊಳಕೆಯಾಗದು; ಯಾವಾಗಲೂ ಹುಟ್ಟುತ್ತಲೇ ಇರುವದರಿಂದ ಈ ಬೀಜಸಂತತಿಯು ನಾಶವಾಗುವ ಹಾಗಿಲ್ಲವೆಂದೂ ತಿಳಿಯಬೇಕಾಗಿದೆ. ॥ ೧೮ ॥

ಮತ್ತು—

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

೧೯. ಎಲೈ ಅರ್ಜುನನೆ, ನಾನು ತಪಿಸುವೆನು, ಮಳೆಯನ್ನು ಎಳೆದು ಹಿಡಿಯುವೆನು, ಹೊರಕ್ಕೆ ಬಿಡುವೆನು. ನಾನು ಅಮೃತವು, ಮೃತ್ಯುವು. ಸತ್ತೂ ಅಸತ್ತೂ ನಾನೆ.

[ಭಾಷ್ಯ]

ನಾನು ಸೂರ್ಯನಾಗಿ ಕೆಲವು ಪ್ರಚಂಡವಾದ † ಕಿರಣಗಳಿಂದ ಸುಡುತ್ತಿರುವೆನು. ಕೆಲವು ಕಿರಣಗಳಿಂದ ಮಳೆಯನ್ನು ಬಿಡುವೆನು‡; ಹೀಗೆ ಬಿಟ್ಟ ಮೇಲೆ ಮುಂದೆ ಎಂಟು ತಿಂಗಳವರೆಗೆ ಬೇರೆ ಕಿರಣಗಳಿಂದ ಸೆಳೆದುಕೊಳ್ಳುವೆನು, ಮತ್ತೆ ಮಳೆಗಾಲವು ಬರುತ್ತಲೂ ಮಳೆಯನ್ನು ಸುರಿಸುವೆನು. ದೇವತೆಗಳಿಗೆ ಅಮೃತವೂ ಮರ್ತ್ಯರಿಗೆ ಮೃತ್ಯುವೂ ನಾನೆ. ಯಾವ (ಕಾರಣ)ಸಂಬಂಧದಿಂದ ಯಾವದು ಇರುವದೋ ಅದು ಸತ್ತು, § ಹಾಗಿಲ್ಲದ್ದೆ ಅಸತ್ತು; ಹೀಗಲ್ಲದೆ ಭಗವಂತನು

---

* ಕರ್ಮಫಲವು ಕರ್ಮವನ್ನು ಮಾಡಿದ ಕೂಡಲೆ ಉಪಭುಕ್ತವಾಗದೆ ಇರುವಾಗ ಪರಮಾತ್ಮನಲ್ಲಿದ್ದುಕೊಂಡಿದ್ದು ಕಾಲಾಂತರದಲ್ಲಿಯೂ ಲೋಕಾಂತರದಲ್ಲಿಯೂ ಪ್ರಾಣಿಗಳಿಗೆ ದೊರಕುವದು; ಆದ್ದರಿಂದ ಅದು ಬ್ಯಾಂಕುಗಳಲ್ಲಿ ನಾವು ಬೇರೊಂದು ಕಾಲದಲ್ಲಿ ಉಪಯೋಗಿಸುವದಕ್ಕೆಂದು ಇಟ್ಟುಕೊಂಡಿರುವ ನಿಕ್ಷೇಪ(deposit)ಕ್ಕೆ ಸಮಾನವಾಗಿರುವದು.

† ಉಲ್ಬಣೈಃ ಎಂಬ ಪದವು ಮ॥ ನಿ॥ ಪಾಠಗಳಲ್ಲಿಲ್ಲ.

‡ ಇಲ್ಲಿ 'ಉತ್ಸೃಜಾಮಿ ಚತುರೋ ಮಾಸಾನ್' ಎಂದು ಮ॥ ಪಾಠ.

§ ಕಾರಣದ ಸಂಬಂಧದಿಂದಲೇ ಕಾರ್ಯವು ಇರುವದರಿಂದ ಕಾರಣವು ಸತ್ತು; ಕಾರಣವು ಕಾರ್ಯದ ಸಂಬಂಧವನ್ನು ಕೋರದೆ ಇರುವದರಿಂದ ಅದು ಅಸತ್ತು. ಹೀಗೆ ನಿರಪೇಕ್ಷವಾದ ಇರವನ್ನೂ ಸಾಪೇಕ್ಷವಾದ ಇರವನ್ನೂ ಉಳ್ಳವೆಂಬುದರ ಮೇಲೆ ಕಾರಣವನ್ನು ಸತ್ತೆಂದೂ ಕಾರ್ಯವನ್ನು ಅಸತ್ತೆಂದೂ ಕರೆದಿದೆ ಎಂದು ಭಾವ.

ತಾನೇ ತೀರ ಅಸತ್ತಾಗಿಯೇ * ಇರುವನೆಂದು (ತಿಳಿಯಬಾರದು). ಅಥವಾ ಕಾರ್ಯಕಾರಣಗಳನ್ನೆ † ಸತ್ತು, ಅಸತ್ತು-ಎಂದು ಹೇಳಿದೆಯೆಂದಾದರೂ ಅರ್ಥ ಮಾಡಬಹುದು. ॥ ೧೯॥

ಸಕಾಮರಾಗಿ ಬೇರೆ ದೇವತೆಗಳನ್ನು ಪೂಜಿಸುವವರೂ
ಅರಿಯದೆ ಭಗವಂತನನ್ನೇ ಪೂಜಿಸುತ್ತಾರೆ;
ಅವರಿಗೆ ಪರಮಗತಿಯು ದೊರಕದು.

ಯಾರು ಹಿಂದೆ ಹೇಳಿದ ಬೇರೆ ಬೇರೆ ನಿವೃತ್ತಿಮಾರ್ಗಗಳಾದ ‡ ನಾನು ಒಬ್ಬನೆಂದು ಅಥವಾ ಬೇರೆಬೇರೆಯಾಗಿರುವನೆಂದು§ ಭಾವಿಸುವ ಜ್ಞಾನಯಜ್ಞಗಳಿಂದ ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುವರೊ ಜ್ಞಾನದ ಸ್ವರೂಪವನ್ನು ಬಲ್ಲ ಆ ಜನರು ಅವರ ಜ್ಞಾನಕ್ಕೆ ಅನುಗುಣವಾಗಿ ನನ್ನನ್ನೇ ಪಡೆಯುತ್ತಾರೆ; ಆದರೆ ಯಾರು ಕಾಮಗಳನ್ನೇ ಬಯಸುತ್ತಿರುವ ಅಜ್ಞರೋ ಅವರು-

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕ-**
**ಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥ ೨೦ ॥**

೨೦. ತ್ರೈವಿದ್ಯರು ಸೋಮವನ್ನು ಕುಡಿದು ಪಾಪದಿಂದ ಶುದ್ಧರಾಗಿ ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗವನ್ನು ಹೊಂದಬೇಕೆಂದು ಬೇಡುತ್ತಾರೆ. ಅವರು ಪುಣ್ಯಕರವಾದ ಸುರೇಂದ್ರಲೋಕವನ್ನು ಹೊಂದಿ ಆ ಸ್ವರ್ಗಲೋಕದಲ್ಲಿ ದಿವ್ಯವಾದ ದೇವಭೋಗಗಳನ್ನು ಅನುಭವಿಸುತ್ತಾರೆ.

[ಭಾಷ್ಯ]

ತ್ರೈವಿದ್ಯರೆಂದರೆ ಋಗ್ವೇದ, ಯಜುರ್ವೇದ, ಸಾಮವೇದ- ಈ ಮೂರನ್ನೂ ಬಲ್ಲವರು. ವಸುಗಳೇ ಮುಂತಾದ|| ರೂಪದಲ್ಲಿರುವ ನನ್ನನ್ನು (-ಸೋಮವನ್ನು

---

* ಶೂನ್ಯವಾಗಿಯೇ.

† ನಾಮರೂಪಗಳಾಗಿ ಹೊರತೋರುವ ಕಾರ್ಯಪ್ರಪಂಚವು ಸತ್ತು; ಹಾಗಿಲ್ಲದ ಕಾರಣವಾದ ಅವ್ಯಾಕೃತವು ಅಸತ್ತು. ಲೋಕದಲ್ಲಿ ನಾಮರೂಪಗಳಿಲ್ಲದ ವಸ್ತುವನ್ನು ಅಸತ್ತು (ಇಲ್ಲದ್ದು)-ಎಂದು ಭಾವಿಸುವ ರೂಢಿಯಿದೆಯಷ್ಟೆ; ಅದನ್ನನುಸರಿಸಿ ಇಲ್ಲಿ ವಿಂಗಡಿಸಿದೆಯೆಂದು ಭಾವ.

‡ 'ನಿವೃತ್ತಿಪ್ರಕಾರೈಃ॥' ಎಂಬ ಮೈ॥ ಮ॥ ಅ॥ ಪಾಠಗಳನ್ನು ಇಟ್ಟುಕೊಂಡಿದೆ.

§ ೧೫ನೆಯ ಶ್ಲೋಕವನ್ನು ನೋಡಿ.

|| 'ವಸು' 'ರುದ್ರ' ಆದಿತ್ಯ- ಮೊದಲಾದ ದೇವತೆಗಳ ರೂಪದಲ್ಲಿಯೂ ಪರಮಾತ್ಮನೇ ಇರುವನು. ಈ ದೃಷ್ಟಿಯಿಂದ 'ನನ್ನನ್ನು' ಎಂದು ಶ್ಲೋಕದಲ್ಲಿ ಹೇಳಿದೆಯೇ ಹೊರತು ಯಜ್ಞವನ್ನು ಮಾಡುವವನಿಗೆ ಆ ತಿಳಿವಳಿಕೆಯಿರುವದೆಂಬ ಅಭಿಪ್ರಾಯದಿಂದಲ್ಲ.

ಪಾನಮಾಡುವವರು ಸೋಮಪರು ; ಸೋಮವನ್ನು ಪಾನಮಾಡಿ) ಆ ಸೋಮ ಪಾನದಿಂದಲೇ ಪೂತಪಾಪರಾಗಿ ಎಂದರೆ ಪಾಪವನ್ನು ನೀಗಿ ಶುದ್ಧರಾಗಿ ಅಗ್ನಿಷ್ಟೋ ಮವೇ ಮುಂತಾದ ಯಜ್ಞಗಳಿಂದ ಯಜನಮಾಡಿ ಎಂದರೆ ಪೂಜಿಸಿ, ಸ್ವರ್ಗತಿ ಯನ್ನು ಸ್ವರ್ಗವೆಂಬ ಗತಿಯನ್ನು ಬೇಡುವರು, (ಬಯಸುತ್ತಾರೆ.) ಅವರು ಪುಣ್ಯ ವಾದ ಸುರೇಂದ್ರಲೋಕವನ್ನು ಎಂದರೆ (ತಾವು ಮಾಡಿದ) ಪುಣ್ಯದ ಫಲವಾಗಿ ನೂರು ಯಜ್ಞಗಳನ್ನು ಮಾಡಿರುವ (ಇಂದ್ರನ) ಸ್ಥಾನವನ್ನು ಹೊಂದಿ (ಆ) ಸ್ವರ್ಗ ದಲ್ಲಿ * ದಿವ್ಯವಾದ ಸ್ವರ್ಗದಲ್ಲಿ (ಮಾತ್ರ) ದೊರೆಯುವ ಅಪ್ರಾಕೃತಗಳಾದ, ದೇವತೆ ಗಳು (ಅನುಭವಿಸುವಂಥ) ಭೋಗಗಳನ್ನು ಅನುಭವಿಸುತ್ತಾರೆ. ॥ ೨೦ ॥

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥ ೨೧ ॥**

೨೧. ಅವರು ಆ ವಿಶಾಲವಾದ ಸ್ವರ್ಗಲೋಕವನ್ನು ಉಪಭೋಗಿಸಿ ಪುಣ್ಯವು ಕ್ಷೀಣವಾದ ಮೇಲೆ ಮರ್ತ್ಯಲೋಕವನ್ನು ಹೊಗುವರು. ಹೀಗೆ ತ್ರಯೀಧರ್ಮವನ್ನು ಅನುಸರಿಸಿದ ಕಾಮಕಾಮರು ಹೋಗೀಬಂದೂಮಾಡುವ ಗತಿಯನ್ನು ಪಡೆಯುತ್ತಾರೆ.

[ಭಾಷ್ಯ]

ಅವರು ವಿಶಾಲವಾಗಿ ಹರಡಿರುವ ಸ್ವರ್ಗಲೋಕವನ್ನು ಭೋಗಿಸಿ ಪುಣ್ಯವು ಸವೆಯಲು ಈ ಮನುಷ್ಯಲೋಕವನ್ನು ಹೊಗುತ್ತಾರೆ. ಹೀಗೆ ಮೇಲೆ ಹೇಳಿದಂತೆ ತ್ರಯೀಧರ್ಮವನ್ನು ಎಂದರೆ ಬರಿಯ ವೈದಿಕಕರ್ಮವನ್ನು ಮಾಡುತ್ತಿರುವವರು (ಸ್ವರ್ಗಕ್ಕೆ) ಹೋಗುವದು ಮತ್ತು (ಈ ಲೋಕಕ್ಕೆ ಮರಳಿ) ಬರುವದು- ಎಂದು ಹೋಗೀಬಂದೂ ಮಾಡುವ ಗತಿಯನ್ನು, ಕಾಮಗಳನ್ನು ಬಯಸುವ ಅವರು ಹೊಂದುವರು. ಮತ್ತೆಮತ್ತೆ ಹೋಗಬರುವ ಗತಿಯನ್ನು ಹೊಂದುವದೇ ಹೊರತು ಎಲ್ಲಿಯೂ ಅವರಿಗೆ ಸ್ವಾತಂತ್ರ್ಯವು † ಸಿಕ್ಕುವದಿಲ್ಲವೆಂದರ್ಥ. ॥ ೨೧ ॥

---

* 'ದಿವಿ' ಎಂಬ ಮಾತನ್ನು ಭಾಷ್ಯದಲ್ಲಿ ಏಕೋ ಕೈಬಿಟ್ಟಿದೆ. ಮೂಲಕ್ಕೆ ಅನುಸಾರವಾಗಿ 'ಅಪ್ರಾಕೃತಾನ್' ಎಂಬ ಮಾತಾದ ಮೇಲೆ 'ದಿವಿ' ಎಂದಿರಬೇಕೆಂದು ತೋರುತ್ತದೆ.

† ಪುಣ್ಯಕರ್ಮವನ್ನು ಮಾಡಿದರೆ ಅವರು ಒಲ್ಲೆನೆಂದರೂ ಸ್ವರ್ಗಲೋಕಕ್ಕೆ ಹೋಗಬೇಕಾಗು ವದು ; ಪುಣ್ಯವು ತೀರಿದರೆ ಇನ್ನಿಷ್ಟುಕಾಲ ಅಲ್ಲಿಯೇ ಇರಬೇಕೆಂದು ಇಚ್ಛಿಸಿದರೂ ಆಗಲೇ ಭೂಲೋಕಕ್ಕೆ ಬಂದುಬಿಡಬೇಕಾಗುವದು. ಹೀಗೆ ಸಕಾಮಕರ್ಮವನ್ನು ಮಾಡುವವರಿಗೆ ಎಲ್ಲಿಯೂ ಸ್ವಾತಂತ್ರ್ಯ ವಿಲ್ಲ.

ಆದರೆ ಯಾರು ಯಾವ ಬಯಕೆಯೂ ಇಲ್ಲದೆ ಸರಿಯಾದ ತಿಳಿವಳಿಕೆಯುಳ್ಳವರಾಗಿರುವರೋ ಅವರು--

**ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ೨೨ ॥**

೨೨. ಯಾವ ಜನರು ಅನನ್ಯರಾಗಿ ನನ್ನನ್ನು ಚಿಂತಿಸುತ್ತಾ ಉಪಾಸನೆ ಮಾಡುತ್ತಿರುವರೋ ನಿತ್ಯವೂ ಅಭಿಯುಕ್ತರಾಗಿರುವ ಅವರ ಯೋಗಕ್ಷೇಮವನ್ನು ನಾನು ಹೊರುತ್ತೇನೆ.

[ ಭಾಷ್ಯ ]

ಅನನ್ಯರಾಗಿ ಎಂದರೆ ಬೇರೆಯಾಗಿರದೆ, ಪರದೇವನಾದ **ನಾರಾಯಣನನ್ನೇ** * ತಮ್ಮ ಆತ್ಮನನ್ನಾಗಿ ಮಾಡಿಕೊಂಡು ಧ್ಯಾನಿಸುತ್ತಾ ಯಾವ ಸಂನ್ಯಾಸಿಗಳು ನನ್ನನ್ನು ಎಲ್ಲೆಲ್ಲಿಯೂ ಉಪಾಸನೆಮಾಡುತ್ತಿರುವರೋ, ಪರಮಾರ್ಥವನ್ನು ಕಂಡು ನಿತ್ಯವೂ ಅಭಿಯುಕ್ತರಾಗಿರುವ ಎಂದರೆ ಎಡೆಬಿಡದೆ ನನ್ನನ್ನೇ ಹೊಂದಿರುವವರ ಯೋಗಕ್ಷೇಮವನ್ನು- ಯೋಗವೆಂದರೆ ಪಡೆಯದೆ ಇದ್ದದ್ದನ್ನು ಪಡೆಯುವದು, ಕ್ಷೇಮವೆಂದರೆ ಅದನ್ನು ಕಾಪಾಡಿಕೊಳ್ಳುವದು. ಇವೆರಡನ್ನೂ- ನಾನು ಹೊರುವೆನು ಎಂದರೆ ನಡೆಯಿಸಿಕೊಡುವೆನು. "ಜ್ಞಾನಿಯು ನನ್ನ ಆತ್ಮನೇ ಎಂದು ನನ್ನ ಮತವು" (೭-೧೮), "ಅವನೂ ನನಗೆ ಪ್ರಿಯನಾಗಿರುವನು" (೭-೧೭). ಹೀಗಿರುವದರಿಂದ ಅವರು ನನಗೆ ಆತ್ಮರಾದವರೂ ಪ್ರಿಯರೂ ಆಗಿರುತ್ತಾರೆ.

(ಆಕ್ಷೇಪ):—ಭಗವಂತನು ಮಿಕ್ಕ ಭಕ್ತರ ಯೋಗಕ್ಷೇಮವನ್ನೂ ವಹಿಸಿಯೇ ವಹಿಸುತ್ತಾನಲ್ಲವೆ ?

(ಪರಿಹಾರ):—ನಿಜ, ವಹಿಸಿಯೇ ವಹಿಸುತ್ತಾನೆ. ಆದರೆ ಈ ವಿಶೇಷವುಂಟು: ಮಿಕ್ಕ ಭಕ್ತರುಂಟಷ್ಟೆ, ಅವರು ತಮಗಾಗಿ ತಾವೂ ಯೋಗಕ್ಷೇಮಕ್ಕೆ ಪ್ರಯತ್ನಪಡುತ್ತಿರುವರು ; ಅನನ್ಯ(ಭಕ್ತಿಯಿಂದ) ಕಾಣುವವರಾದರೋ ತಮ್ಮ ಯೋಗಕ್ಷೇಮಕ್ಕಾಗಿ ತಾವು ಪ್ರಯತ್ನಪಡುತ್ತಿರುವದಿಲ್ಲ. ಏಕೆಂದರೆ ಅವರು 'ತಾವು ಬದುಕಿರಬೇಕೆಂದಾಗಲಿ ಸಾಯಬೇಕೆಂದಾಗಲಿ ಬಯಸುತ್ತಿರುವದೇ ಇಲ್ಲ,' (ಶ್ರು.) † ಭಗವಂತನೊಬ್ಬನನ್ನೇ ಶರಣುಹೊಕ್ಕಿರುತ್ತಾರೆ. ಆದ್ದರಿಂದ ಭಗವಂತನೇ ಅವರ ಯೋಗಕ್ಷೇಮವನ್ನು ವಹಿಸುತ್ತಾನೆ. ॥ ೨೨ ॥

---

* 'ಆತ್ಮಾ ನಾರಾಯಣಃ ಪರಃ'-ಎಂಬ ತೈತ್ತಿರೀಯಾರಣ್ಯಕದ ಸೂಚನೆ.

† ಈ ಶ್ರುತಿ ಯಾವದೆಂಬುದು ತಿಳಿಯದು. ಇದನ್ನು ಈಶಾವಾಸ್ಯದ ಎರಡನೆಯ ಮಂತ್ರದ ಭಾಷ್ಯದಲ್ಲಿಯೂ ಉದಾಹರಿಸಿರುತ್ತದೆ.

(ಆಕ್ಷೇಪ):—ಬೇರೆ ದೇವತೆಗಳೂ ನೀನೇ ಆದರೆ ಅವರ ಭಕ್ತರೂ ನಿನ್ನನ್ನೇ ಪೂಜಿಸಿದಂತಾಯಿತಲ್ಲ?

(ಪರಿಹಾರ):—ನಿಜ. ಹಾಗೆಯೇ ಸರಿ.

**ಯೇಽಪ್ಯನ್ಯದೇವತಾ ಭಕ್ತಾ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥ ೨೩ ॥**

೨೩. ಎಲೈ ಕೌಂತೇಯನೆ, ಯಾರು ಬೇರೆ ದೇವತೆಗಳ ಭಕ್ತರಾಗಿ ಶ್ರದ್ಧೆಯಿಂದ ಕೂಡಿ ಪೂಜಿಸುವರೋ ಅವರೂ ನನ್ನನ್ನೇ ಅವಿಧಿಪೂರ್ವಕವಾಗಿ ಪೂಜಿಸುತ್ತಿರುತ್ತಾರೆ.

[ ಭಾಷ್ಯ ]

ಬೇರೆ ದೇವತೆಗಳ ಭಕ್ತರಾಗಿ ಎಂದರೆ ಬೇರೆ ದೇವತೆಗಳಲ್ಲಿ ಭಕ್ತಿಯುಳ್ಳವರಾಗಿ ಶ್ರದ್ಧೆಯಿಂದ ಎಂದರೆ ಆಸ್ತಿಕ್ಯಬುದ್ಧಿಯಿಂದ ಕೂಡಿ ಪೂಜಿಸುತ್ತಿರುವರೋ ಅವರೂ ಎಲೈ ಕೌಂತೇಯನೆ, ನನ್ನನ್ನೇ ಅವಿಧಿಪೂರ್ವಕವಾಗಿ- ಅವಿಧಿ ಎಂದರೆ ಅಜ್ಞಾನ, ಅದರಿಂದ ಕೂಡಿ ಎಂದರೆ– ಸರಿಯಾಗಿ ತಿಳಿಯದೆ (ನನ್ನನ್ನೇ) ಪೂಜಿಸುತ್ತಿರುತ್ತಾರೆ ಎಂದರ್ಥ. ॥ ೨೩ ॥

ಅವರು ಅವಿಧಿಪೂರ್ವಕವಾಗಿ ಪೂಜಿಸುತ್ತಾರೆಂದು ಹೇಳಿದ್ದೇಕೆ? ಏಕೆಂದರೆ,

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥ ೨೪ ॥**

೨೪. ಸರ್ವಯಜ್ಞಗಳಿಗೂ ಭೋಕ್ತನೂ ಪ್ರಭುವೂ ನಾನೇ ಅಲ್ಲವೆ? ಆದರೆ ನನ್ನನ್ನು ಅವರು (ಹಾಗೆಂದು) ಅರಿಯರು. ಆದ್ದರಿಂದ ಅವರು ಜಾರಿ ಬೀಳುವರು.

[ ಭಾಷ್ಯ ]

ಶ್ರೌತ, ಸ್ಮಾರ್ತ- ಎಂಬ ಎಲ್ಲಾ ಯಜ್ಞಗಳಿಗೂ ದೇವತೆಯ ರೂಪದಿಂದ ಭೋಕ್ತನೂ ನಾನೇ; ಒಡೆಯನೂ ನಾನೇ. ನಾನೇ ಯಜ್ಞಕ್ಕೆ ಒಡೆಯನಲ್ಲವೆ? ಇದನ್ನು 'ಇಲ್ಲಿ ಅಧಿಯಜ್ಞವು ನಾನೇ' (೮-೪) ಎಂಬಲ್ಲಿ ಹೇಳಿಯೇ ಇದೆಯಷ್ಟೆ.* ಆದರೆ ಹಾಗೆಂದು ನನ್ನನ್ನು ಗುರುತಿಸಿ ಅರಿಯರು; ಆದ್ದರಿಂದ ವಿಧಿ

---

* ಪರಮಾತ್ಮನೇ ಯಜ್ಞಭೋಕ್ತನೆಂಬುದಕ್ಕೆ ೫-೨೯ನ್ನು ನೋಡಿ.

ಪೂರ್ವಕವಾಗಿ ಯಜ್ಞವಮಾಡಿದವರಾಗದೆ* ಯೋಗಫಲದಿಂದ ಅವರು ಜಾರಿ ಬೀಳು ವರು, ಫಲವನ್ನು ಕಳೆದುಕೊಳ್ಳುವರು. ॥ ೨೪ ॥

ಯಾರು ಬೇರೆ ದೇವತೆಗಳಲ್ಲಿ ಭಕ್ತಿಯನ್ನಿಟ್ಟು ವಿಧಿಪೂರ್ವಕವಲ್ಲದೆ ಯಾಗ ಮಾಡುವರೋ ಅವರಿಗೂ ಯಾಗದ ಫಲವು ಅವಶ್ಯವಾಗಿ ಹೀಗೆಯೇ ತೀರುವದು. ಹೇಗೆಂದರೆ—

**ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಮ್ ॥**

೨೫. ದೇವತೆಗಳಲ್ಲಿ ವ್ರತವನ್ನಿಟ್ಟಿರುವವರು ದೇವತೆಗಳನ್ನು ಸೇರುವರು ; ಪಿತೃಗಳಲ್ಲಿ ವ್ರತವನ್ನಿಟ್ಟಿರುವವರು ಪಿತೃಗಳನ್ನು ಸೇರುವರು ; ಭೂತಗಳನ್ನು ಪೂಜಿಸುವವರು ಭೂತಗಳನ್ನು ಸೇರುತ್ತಾರೆ; ಮತ್ತು ನನ್ನನ್ನು ಪೂಜಿಸುವವರು ನನ್ನನ್ನು ಸೇರುತ್ತಾರೆ.

[ ಭಾಷ್ಯ ]

ದೇವತೆಗಳಲ್ಲಿ ನಿಯಮವನ್ನೂ ಭಕ್ತಿಯನ್ನೂ ಉಳ್ಳವರು ದೇವವ್ರತರು. ಆ ದೇವವ್ರತರು ದೇವತೆಗಳನ್ನು ಸೇರುವರು. ಪಿತೃಗಳಲ್ಲಿ ವ್ರತವುಳ್ಳವರಾಗಿ ಶ್ರಾದ್ಧವೇ ಮುಂತಾದ ಕ್ರಿಯೆಗಳಲ್ಲಿ ತತ್ಪರರಾಗಿರುವವರು **ಅಗ್ನಿಷ್ವಾತ್ತರೇ** ಮುಂತಾದ ಪಿತೃಗಳನ್ನು ಸೇರುವರು. ಭೂತಗಳನ್ನು ಪೂಜಿಸುವವರು **ವಿನಾಯಕ, ಮಾತೃಗಣ, ಚತುರ್ಭಗಿನೀ**- ಮುಂತಾದ ಭೂತಗಳನ್ನು ಸೇರುವರು. ಇದ ರಂತೆ ನನ್ನನ್ನು ಪೂಜಿಸುವವರು, ಎಂದರೆ ನನ್ನನ್ನೇ ಯಾವಾಗಲೂ ಸ್ವಭಾವದಿಂದ ಪೂಜಿಸುವ ವೈಷ್ಣವರು ನನ್ನನ್ನೇ ಸೇರುವರು. ಹೀಗೆ ಎಲ್ಲಾ ಪೂಜೆಯಲ್ಲಿಯೂ ಪಡಬೇಕಾದ ಶ್ರಮವು ಒಂದೇ ಆದರೂ ಅಜ್ಞಾನದಿಂದ † ದೇವತಾಭಕ್ತರು ನನ್ನನ್ನೇ ಭಜಿಸದೆ ಇರುವರು ; ಆದರಿಂದ ಅವರಿಗೆ ಸ್ವಲ್ಪ ಫಲವೇ ದೊರಕುವದು ಎಂದರ್ಥ. ॥ ೨೫ ॥

## ಭಕ್ತಿಯ ಸೌಲಭ್ಯ, ಅದರಿಂದಾಗುವ ಫಲ

ನನ್ನ ಭಕ್ತರಿಗೆ ಮತ್ತೆ ಇಲ್ಲಿಗೆ ಮರಳಿ ಬರದ ಅನಂತಫಲವಾಗುವದೊಂದು ದಿಷ್ಟೇ ಅಲ್ಲ, ನನ್ನನ್ನು ಆರಾಧನೆಮಾಡುವದೂ ಸುಲಭವು. ಹೇಗೆಂದರೆ—

---

* ಪರಮಾತ್ಮನೇ ಯಜ್ಞಕ್ಕೆ ಒಡೆಯನೆಂದು ತಿಳಿದರೆ ೯-೧೫ರಲ್ಲಿ ಹೇಳಿದ ಜ್ಞಾನಯಜ್ಞವೇ ಆಗಿ ಪೂರ್ಣಫಲವು ದೊರಕೀತು ; ಆದರೆ ಇಂದ್ರಾದಿದೇವತೆಗಳೇ ಯಜ್ಞದ ಒಡೆಯರೆಂದೂ ಅವರಿ ಗಾಗಿಯೇ ಯಜ್ಞವನ್ನು ಮಾಡುವೆವೆಂದೂ ಅವರ ಭಾವನೆಯಿರುವದರಿಂದ ಅದಕ್ಕೆ ತಕ್ಕಷ್ಟು ಫಲವನ್ನು ಪಡೆದು ಪುಣ್ಯವು ತೀರುತ್ತಲೂ ಮನುಷ್ಯಲೋಕದಲ್ಲಿ ಮತ್ತೆ ಹುಟ್ಟುವರು.

† ಈ ವಿಷಯದಲ್ಲಿ ೭-೨೩, ೮-೬, ೧೭-೪- ಈ ಶ್ಲೋಕಗಳನ್ನು ನೋಡಿ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

೨೬. ಯಾವನು ನನಗೆ ಒಂದು ಪತ್ರವನ್ನೋ ಒಂದು ಪುಷ್ಪವನ್ನೋ ಒಂದಿಷ್ಟು ನೀರನ್ನೋ ಭಕ್ತಿಯಿಂದ ಕೊಡುವನೋ, ಶುದ್ಧಾಂತಃಕರಣನಾದ ಆತನು ಭಕ್ತಿಯಿಂದ ಕೊಡುವ ಅದನ್ನೇ ನಾನು ತಿನ್ನುವೆನು.

[ ಭಾಷ್ಯ ]

ಒಂದು ಎಲೆಯ ದಳ, ಒಂದು ಹೂವು, ಒಂದಿಷ್ಟು ನೀರು- (ಇವುಗಳಲ್ಲಿ ಯಾವದನ್ನಾದರೂ ಒಂದನ್ನು) ಭಕ್ತಿಯಿಂದ * ಯಾವಾತನು ಕೊಡುವನೋ ಭಕ್ತಿಯಿಂದ ನನಗೆ ತಂದುಕೊಟ್ಟ ಆ ಎಲೆಯ ದಳವೇ ಮುಂತಾದದ್ದನ್ನೇ ನಾನು ತಿನ್ನುವೆನು, ಸ್ವೀಕರಿಸುವೆನು. (ಏಕೆಂದರೆ ಅವನು) ಪ್ರಯತಾತ್ಮನಾಗಿರುವನು, ಎಂದರೆ ಅಂತಃಕರಣಶುದ್ಧಿಯುಳ್ಳವನಾಗಿ (ಕೊಟ್ಟಿರುತ್ತಾನೆ.) ॥ ೨೬ ॥

ಹೀಗಿರುವದರಿಂದ—

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

೨೭. ಎಲೈ ಕೌಂತೇಯನೆ, ನೀನು ಏನು ಮಾಡುವೆಯೋ ಯಾವದನ್ನು ತಿನ್ನುವೆಯೋ, ಯಾವದನ್ನು ದಾನಮಾಡುವೆಯೋ, ಯಾವ ತಪಸ್ಸನ್ನು ಮಾಡುವೆಯೋ, ಅದನ್ನು ನನಗೆ ಅರ್ಪಣೆಮಾಡುತ್ತಿರು.

[ ಭಾಷ್ಯ ]

ತಾನಾಗಿಯೇ † ಒದಗಿದ ಯಾವ ಕೆಲಸವನ್ನು ಮಾಡುತ್ತೀಯೋ, ಯಾವದನ್ನು ತಿನ್ನುವೆಯೋ, ಮತ್ತು ಯಾವ ಶ್ರೌತ ಅಥವಾ ಸ್ಮಾರ್ತಹೋಮವನ್ನು ಮಾಡುವೆಯೋ, ಬ್ರಾಹ್ಮಣರೇ ಮೊದಲಾದವರಿಗೆ ಚಿನ್ನ, ಅನ್ನ- ಮುಂತಾಗಿ ‡

---

* ಅವನವನ ಶಕ್ತಿಗನುಸಾರವಾಗಿ ಇದ್ದದ್ದನ್ನು ಪ್ರೇಮದಿಂದ ಸಮರ್ಪಣೆಮಾಡುವದು ಮುಖ್ಯವೆಂದು ಭಾವ.

† ಭಗವಂತನಿಗಾಗಿಯೇ ಕರ್ಮವನ್ನು ಮಾಡುವದು ಒಳ್ಳೆಯದು ಅದಾಗದಿದ್ದರೆ ಮಾಡಿದ ಕರ್ಮದ ಫಲವನ್ನು ಕೋರದೆ ಅದನ್ನೆಲ್ಲ ಭಗವಂತನಿಗೆ ಅರ್ಪಣೆಮಾಡಿದರೂ ಆಗುತ್ತದೆ. ಅಷ್ಟರಿಂದಲೇ ಭಗವಂತನು ತೃಪ್ತನಾಗುತ್ತಾನೆ. ೧೨-೧೧ ನೋಡಿ.

‡ ಹಿರಣ್ಯಾನ್ನಾದಿ-ಎಂಬ ಮೂ॥ ಪಾಠವನ್ನಿಟ್ಟುಕೊಂಡಿದೆ. 'ಬ್ರಾಹ್ಮಣರಿಗೆ ದುಡ್ಡನ್ನೂ ಉಳಿದವರಿಗೆ ಅನ್ನಬಟ್ಟೆಯೇ ಮುಂತಾದದ್ದನ್ನೂ' ಎಂಬ ಅರ್ಥವು ಇದರಿಂದ ಹೊರಡುತ್ತದೆ.

ಏನನ್ನು ಕೊಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ- ಅದನ್ನು ನನಗೆ ಅರ್ಪಣೆಮಾಡುತ್ತಿರು, ಅದನ್ನೇ ನನಗೆ ಒಪ್ಪಿಸುತ್ತಾ ಬಾ. ॥ ೨೭ ॥

ಹೀಗೆ ಮಾಡುತ್ತಿದ್ದರೆ ನಿನಗೆ ಏನು (ಫಲ)ವಾಗುವದೆಂದರೆ ಕೇಳು—

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

೨೮. ಹೀಗೆ (ಮಾಡುತ್ತಿದ್ದರೆ) ಶುಭಾಶುಭಫಲಗಳುಳ್ಳ ಕರ್ಮದ ಬಂಧನಗಳಿಂದ ಬಿಡುಗಡೆಯಾಗುತ್ತೀಯೆ; ಮನಸ್ಸಿನಲ್ಲಿ ಸಂನ್ಯಾಸಯೋಗದಿಂದೊಡಗೂಡಿ ಮುಕ್ತನಾಗಿ ನನ್ನನ್ನೇ ಪಡೆಯುವೆ.

[ ಭಾಷ್ಯ ]

ಶುಭಾಶುಭಫಲಗಳುಳ್ಳ- ಶುಭಾಶುಭವೆಂದರೆ ಬೇಕಾದ ಒಳ್ಳೆಯ ಮತ್ತು ಬೇಡವಾದ ಕೆಟ್ಟ ಫಲಗಳು; (ಇವು)ಗಳನ್ನುಳ್ಳ ಕರ್ಮಗಳು ಶುಭಾಶುಭಫಲಗಳೆನಿಸುವವು. ಆ ಒಳ್ಳೆಯ ಫಲವೂ ಕೆಟ್ಟ ಫಲವೂ ಇರುವ ಕರ್ಮಬಂಧನಗಳಿಂದ ಎಂದರೆ ಕರ್ಮಗಳೆಂಬ ಕಟ್ಟುಗಳಿಂದ, ಹೀಗೆ ನನಗೆ ಅರ್ಪಣೆಮಾಡುತ್ತಿದ್ದರೆ, ಬಿಡುಗಡೆಯನ್ನು ಹೊಂದುವೆ. ಇದಕ್ಕೆ **ಸಂನ್ಯಾಸಯೋಗ**ವೆಂದು ಹೆಸರು. ಎಲ್ಲವನ್ನೂ ನನಗೆ ಸಮರ್ಪಣೆಮಾಡುವದರಿಂದ ಇದು ಸಂನ್ಯಾಸವೆನಿಸುವದು; ಕರ್ಮರೂಪವಾಗಿರುವದರಿಂದ **ಯೋಗ**ವೆನಿಸುವದು. ಈ ಸಂನ್ಯಾಸಯೋಗದಿಂದ, ಕೂಡಿದ ಅಂತಃಕರಣವುಳ್ಳವನಾಗಿ ನೀನು ಬದುಕಿರುವಾಗಲೇ ಕರ್ಮದ ಬಂಧನಗಳಿಂದ ಬಿಡುಗಡೆಯನ್ನು ಹೊಂದಿ ಈ ಶರೀರವು ಬಿದ್ದುಹೋದ ಮೇಲೆ * ನನ್ನನ್ನು ಬಂದು ಸೇರುವೆ. ॥ ೨೮ ॥

## ಪರಮಾತ್ಮನಿಗೆ ಯಾರಲ್ಲಿಯೂ ಪಕ್ಷಪಾತವಿಲ್ಲ

(ಆಕ್ಷೇಪ):— ಹಾಗಾದರೆ ಭಗವಂತನಲ್ಲಿ ರಾಗದ್ವೇಷಗಳಿರುವವೆಂದಾಯಿತು; ಏಕೆಂದರೆ ಆತನು ಭಕ್ತರಿಗೆ ಅನುಗ್ರಹಮಾಡುತ್ತಾನೆಯೇ ಹೊರತು ಮಿಕ್ಕವರಿಗೆ ಮಾಡುವದಿಲ್ಲ.

(ಪರಿಹಾರ):— ಹಾಗಲ್ಲ. (ಏಕೆಂದರೆ):—

---

* ಭಗವಂತನಿಗೆ ಎಡೆಬಿಡದೆ ಕರ್ಮದ ಸಮರ್ಪಣೆನಾಡಿದವನಿಗೆ ಮರಣಾನಂತರದಲ್ಲಿ ಭಗವತ್ಪ್ರಾಪ್ತಿಯೇ ಫಲವಾಗುವದೆಂದು ಭಾವ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥ ೨೯ ॥**

೨೯. ನಾನು ಸರ್ವಭೂತಗಳಲ್ಲಿಯೂ ಸಮನಾಗಿರುವೆನು ; ನನಗೆ ಬೇಡದವನೂ ಇಲ್ಲ, ಬೇಕಾದವನೂ ಇಲ್ಲ. ಆದರೆ ಯಾರು ನನ್ನನ್ನು ಭಕ್ತಿಯಿಂದ ಭಜಿಸುವರೋ ಅವರು ನನ್ನಲ್ಲಿರುವರು ; ನಾನೂ ಅವರಲ್ಲಿರುವೆನು.

[ ಭಾಷ್ಯ ]

ನಾನು ಎಲ್ಲಾ ಪ್ರಾಣಿಗಳಿಗೂ ಒಂದೇ ಸಮನಾಗಿರುವೆನು, ನನಗೆ ಶತ್ರುಗಳೂ ಇಲ್ಲ, ಮಿತ್ರರೂ ಇಲ್ಲ. ನಾನು ಬೆಂಕಿಯಂತೆ ಇರುವೆನು. ಬೆಂಕಿಯು ದೂರದಲ್ಲಿರುವವರಿಗೆ ಚಳಿಯನ್ನು ಹೋಗಲಾಡಿಸುವದಿಲ್ಲ, ಹತ್ತಿರಕ್ಕೆ ಬಂದರೆ ಹೋಗಲಾಡಿಸುತ್ತದೆ; ಅದರಂತೆ ನಾನು ಭಕ್ತರಿಗೆ ಅನುಗ್ರಹಮಾಡುತ್ತೇನೆ, ಮಿಕ್ಕವರಿಗಿಲ್ಲ. ಯಾರಾದರೆ ಈಶ್ವರನಾದ ನನ್ನನ್ನು ಭಕ್ತಿಯಿಂದ ಭಜಿಸುತ್ತಿರುವರೋ ಅವರು ಸ್ವಭಾವವಾಗಿಯೇ ನನ್ನಲ್ಲಿರುತ್ತಾರೆ, ಅವರಲ್ಲಿ (ನನಗೆ) ಹೆಚ್ಚಿನ ಅನುರಾಗವಿರುವದೆಂಬುದರಿಂದೇನೂ ಅಲ್ಲ ; ಅವರಲ್ಲಿಯೂ ನಾನು ಸ್ವಭಾವದಿಂದಲೇ ಇರುವೆನು, ಮಿಕ್ಕವರಲ್ಲಿರುವದಿಲ್ಲ. ಇಷ್ಟರಿಂದ ಅವರಲ್ಲಿ ನನಗೆ ಯಾವ ದ್ವೇಷವೂ ಇಲ್ಲ. ॥ ೨೯ ॥

## ಭಕ್ತಿಯ ಹೆಚ್ಚುಗಾರಿಕೆ

ನನ್ನ ಭಕ್ತಿಯ ಹೆಚ್ಚುಗಾರಿಕೆಯನ್ನು ಕೇಳು :—

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

೩೦. ಅತ್ಯಂತದುರಾಚಾರಿಯಾದರೂ ನನ್ನನ್ನು ಅನನ್ಯಭಕ್ತಿಯಿಂದ ಭಜಿಸಿದರೆ ಆತನನ್ನು ಸಾಧುವೆಂದೇ ಎಣಿಸಬೇಕು ; ಏಕೆಂದರೆ ಆತನು ಸರಿಯಾದ ನಿಶ್ಚಯವನ್ನು ಮಾಡಿರುತ್ತಾನೆ.

[ ಭಾಷ್ಯ ]

ಸುದುರಾಚಾರನಾದವನು ಎಂದರೆ ತೀರ ಕೆಟ್ಟ ಆಚಾರವುಳ್ಳವನು ; ಹಾಗೆ ಅತ್ಯಂತವಾಗಿ ನಿಂದಿತವಾದ ಆಚಾರವುಳ್ಳವನಾಗಿದ್ದರೂ ನನ್ನಲ್ಲಿ ಅನನ್ಯಭಕ್ತಿಯಿಂದ ಭಜನೆಮಾಡುತ್ತಾ ಬಂದರೆ ಅವನನ್ನು ಸಾಧುವೆಂದೇ, ಸರಿಯಾದ ನಡತೆಯವನೆಂದೇ, ತಿಳಿಯಬೇಕು. ಏಕೆಂದರೆ ಅವನು ಸರಿಯಾದ ಮಾರ್ಗದಲ್ಲಿ ನಿಶ್ಚಯ ಮಾಡಿರುತ್ತಾನೆ ; ಹೇಗೆ ಇರಬೇಕೋ ಹಾಗೆಯೇ ನಡೆಯಬೇಕೆಂದು ಉತ್ತಮವಾದ ನಿಶ್ಚಯವನ್ನು ಮಾಡಿಕೊಂಡಿರುತ್ತಾನೆ. ॥ ೩೦ ॥

ಹೊರಗೆ ಕೆಟ್ಟ ಆಚಾರವನ್ನು ಬಿಟ್ಟು ಒಳಗೆ ಒಳ್ಳೆಯ ನಿಶ್ಚಯವನ್ನು ಮಾಡಿಕೊಂಡಿರುವದರ ಸಾಮರ್ಥ್ಯದಿಂದ—

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।**
**ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

೩೧. ಅವನು ಬೇಗನೆ ಧರ್ಮಾತ್ಮನಾಗುವನು, ಶಾಶ್ವತವಾಗಿ ಶಾಂತಿಯನ್ನು ಹೊಂದುವನು. ಕೌಂತೇಯನೆ, ನನ್ನ ಭಕ್ತನು ನಾಶವಾಗುವದೇ ಇಲ್ಲ. ಇದನ್ನು ಚೆನ್ನಾಗಿ ತಿಳಿದುಕೊ.

[ ಭಾಷ್ಯ ]

ಆತನು ಸ್ವಲ್ಪಕಾಲದಲ್ಲಿಯೇ ಧರ್ಮಾತ್ಮನಾಗುವನು, ಧರ್ಮದಲ್ಲಿ ಚಿತ್ತವಿಡುವನು *; ಮತ್ತು ಯಾವಾಗಲೂ ಶಾಂತಿಯನ್ನೂ ಉಪಶಮನವನ್ನೂ † ಹೊಂದುವನು. ಕೌಂತೇಯನೆ, ನಿಜವನ್ನು ಕೇಳು : ನೀನಿದನ್ನು ನಿಶ್ಚಯವಾಗಿ ತಿಳಿಯುವನಾಗು. ನನ್ನ ಭಕ್ತನು, ನನ್ನಲ್ಲಿ ಅಂತಃಕರಣವನ್ನು ಸಮರ್ಪಿಸಿದಾತನೇ ನನ್ನ ಭಕ್ತನು; (ಅವನು) ಎಂದಿಗೂ ನಾಶವಾಗುವದಿಲ್ಲ(ವೆಂದು ತಿಳಿ). ॥ ೩೧ ॥

ಮತ್ತು—

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥ ೩೨ ॥**
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥**

೩೨–೩೩. ಪಾರ್ಥನೆ, ನನ್ನನ್ನು ಆಶ್ರಯಿಸಿದರೆ ಯಾರು ಪಾಪಯೋನಿಗಳೋ ಆ ಸ್ತ್ರೀಯರು, ವೈಶ್ಯರು, ಶೂದ್ರರು ಕೂಡ ಪರಮಗತಿಯನ್ನು ಹೊಂದುವರು; ಹೀಗಿರುವಲ್ಲಿ ಪುಣ್ಯಯೋನಿಗಳಾದ ಭಕ್ತರೂ ಬ್ರಾಹ್ಮಣರೂ ಆದ ರಾಜರ್ಷಿಗಳೂ (ಪರಮಗತಿಯನ್ನು ಹೊಂದುವರೆಂದು) ಹೇಳತಕ್ಕದ್ದೇನಿದೆ? ಅನಿತ್ಯವೂ ಅಸುಖವೂ ಆದ ಈ ಲೋಕವನ್ನು ಪಡೆದಿರುವ ನೀನು ನನ್ನನ್ನೇ ಭಜಿಸು.

---

* ದುರಾಚಾರಿಯಾಗಿದ್ದವನು ಕೂಡ ಭಗವಂತನಲ್ಲಿ ಭಕ್ತಿಯಿಟ್ಟಂದಿನಿಂದ ಧರ್ಮಬುದ್ಧಿಯುಳ್ಳವನಾಗುವನು; ಆದ್ದರಿಂದ ಅವನನ್ನು ಆಮೇಲೆ ಸಾಧುವೆಂದೇ ತಿಳಿಯಬೇಕು.

† ದುರಾಚಾರವನ್ನು ಬಿಟ್ಟು ಸದಾಚಾರವನ್ನು ಕೈಕೊಂಡು ಯಾವಾಗಲೂ ಮನಃಶಾಂತಿಯುಳ್ಳವನೂ ಆಗುತ್ತಾನೆ.

[ ಭಾಷ್ಯ ]

ಏಕೆಂದರೆ, ಎಲೈ ಪಾರ್ಥನೆ, ನನ್ನನ್ನು ಆಶ್ರಯಿಸಿದರೆ, ನಾನೇ ಆಶ್ರಯ ವೆಂದು ಇಟ್ಟುಕೊಂಡರೆ, ಯಾರುಯಾರು ಪಾಪಯೋನಿಗಳಾಗಿರುವರೋ ಪಾಪದ (ಫಲವಾಗಿರುವ) ಜನ್ಮವುಳ್ಳವರಾಗಿರುವರೋ ; ಅಂಥ ಪಾಪಜನ್ಮದವರು ಯಾರು? ಎಂದರೆ ಹೇಳುತ್ತಾನೆ : ಹೆಂಗಸರು, ವೈಶ್ಯರು, ಶೂದ್ರರು *; ಅವರೂ ಪರಮಗತಿಯನ್ನೇ ಹೊಂದುವರು. ಹೀಗಿರುವಲ್ಲಿ ಪುಣ್ಯರಾದ ಎಂದ ಪುಣ್ಯಜನ್ಮ ದಲ್ಲಿ ಹುಟ್ಟಿದ ಮತ್ತು ಭಕ್ತರಾದ ಬ್ರಾಹ್ಮಣರೂ† ರಾಜರ್ಷಿಗಳೂ- ರಾಜರೂ ಋಷಿಗಳೂ ಆಗಿರುವವರು ರಾಜರ್ಷಿಗಳು, ಅವರೂ- ಪರಮಪದವಿಯನ್ನು ಹೊಂದುವರೆಂಬುದನ್ನು ಬೇರೆ ಹೇಳಬೇಕೆ?

ಹೀಗಿರುವದರಿಂದ ಅನಿತ್ಯವೂ ಎಂದರೆ ಒಂದು ಕ್ಷಣದಲ್ಲಿ ನಾಶವಾಗು ವಂಥದ್ದೂ ಅಸುಖವೂ ಎಂದರೆ ಯಾವ (ನಿಜವಾದ) ಸುಖವೂ ಇಲ್ಲದ್ದೂ ಆಗಿರುವ ಈ ಲೋಕವನ್ನು ಎಂದರೆ ಮನುಷ್ಯಲೋಕವನ್ನು ಪಡೆದಿರುವ, ಪುರುಷಾರ್ಥ ಸಾಧನೆಮಾಡುವ ದುರ್ಲಭವಾದ ಮನುಷ್ಯಜನ್ಮವನ್ನು ಪಡೆದಿರುವ (ನೀನು) ನನ್ನನ್ನೇ ಭಜಿಸು, ಸೇವಿಸು. ॥ ೩೩ ॥

## ಭಕ್ತಿಯೋಗದ ರೀತಿ

ಹೇಗೆ(ನ್ನುವೆಯೋ?) :—

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

೩೪. ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಭಕ್ತನಾಗಿರು, ನನ್ನ ಯಾಗವನ್ನೇ ಮಾಡು, ನನ್ನನ್ನೇ ನಮಸ್ಕರಿಸು. ಹೀಗೆ ಯೋಗವನ್ನು ಮಾಡಿ ದರೆ ನನ್ನನ್ನೇ ಪರಾಯಣವಾಗಿ ತಿಳಿದು ನನ್ನನ್ನೇ ಸೇರುವೆ.

---

* ಸ್ತ್ರೀಯರೂ ಶೂದ್ರರೂ ವೈಶ್ಯರೂ- ಎಲ್ಲರೂ ಪಾಪಿಗಳೆಂದರ್ಥವಲ್ಲ ; ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲವಾಗಿ ಭಗವದ್ಭಕ್ತಿಗೆ ಅಡ್ಡಿಬರುವಂತೆ ಬರಿಯ ವ್ಯವಹಾರದಲ್ಲಿಯೇ ನಿರತರಾಗಿರು ವದಕ್ಕೆ ಹೆಚ್ಚಿನ ಆಸೆಯನ್ನುಂಟುಮಾಡುವ ಜನ್ಮದಲ್ಲಿ ಅವರು ಹುಟ್ಟಿರುತ್ತಾರೆ. ಆದರೆ ಅವರಿಗೆ ಭಗವದ್ಭಕ್ತಿ ಯನ್ನು ಮಾಡುವದಕ್ಕೂ ಪರಗತಿಯನ್ನು ಹೊಂದುವದಕ್ಕೂ ಯಾವ ಅಡ್ಡಿಯೂ ಇಲ್ಲ. ಗೀತಾರ್ಥ ಸರ್ವಸ್ವವನ್ನು ನೋಡಿ.

† ಪುಣ್ಯಾ ಭಕ್ತಾ-ಎಂಬುದನ್ನು ಬ್ರಾಹ್ಮಣರಿಗೂ ರಾಜರ್ಷಿಗಳಿಗೂ ಸೇರಿಸಬೇಕು ; ಅವರಿಗೆ ಪರಮಾತ್ಮನಿಷ್ಠೆಯೇ ಕರ್ತವ್ಯವಾಗಿರುವದರಿಂದ ಅವರು ಪರಮಗತಿಯನ್ನು ಹೊಂದುವರೆಂಬುದನ್ನು ಹೇಳಬೇಕಾದದ್ದೇ ಇಲ್ಲ.

[ಭಾಷ್ಯ]

ವಾಸುದೇವನಾದ ನನ್ನಲ್ಲಿ ಮನಸ್ಸಿಟ್ಟು ಮನ್ಮನನಾಗಿರು ; ಹಾಗೆಯೇ ನನ್ನ ಭಕ್ತನಾಗಿರು ; ನನ್ನ ಯಾಗವನ್ನೇ ಮಾಡುವ ಸ್ವಭಾವವುಳ್ಳವನಾಗಿ ಮದ್ಯಾಜಿಯಾಗು ; ಮತ್ತು ನನ್ನನ್ನೇ ನಮಸ್ಕರಿಸು. ಈಶ್ವರನಾದ ನನ್ನನ್ನೇ ಹೊಂದುವೆ. ಹೀಗೆ ಯೋಗಮಾಡಿದರೆ, ಚಿತ್ತಸಮಾಧಾನವನ್ನು ಪಡೆದರೆ, ಆತ್ಮನಾದ ನನ್ನನ್ನು– ನಾನೇ ಅಲ್ಲವೆ ಸಕಲ ಪ್ರಾಣಿಗಳಿಗೂ ಆತ್ಮನಾಗಿರುವವನು ?– ಪರಾಯಣವು ಎಂದರೆ ಪರಮಗತಿಯು, ಕೊನೆಗೆ ಸೇರುವ ಸ್ಥಾನವು. ಅದೂ ನಾನೆ, ಅಂಥ ನನ್ನನ್ನು ಮತ್ಪರಾಯಣನಾಗಿ ಸೇರುವೆ ಎಂದು ಹಿಂದಕ್ಕೆ ಸಂಬಂಧಮಾಡಿಕೊಳ್ಳಬೇಕು.

———

# ಒಂಬತ್ತನೆಯ ಅಧ್ಯಾಯದ ಸಾರ

೧-೩. ಭಗವಂತನು ಹೇಳಿದ್ದೇನೆಂದರೆ: "ಎಲ್ಲಕ್ಕೂ ಹೆಚ್ಚಿನ ಗುಟ್ಟೊಂದನ್ನು ಈಗ ಹೇಳು-ವೆನು ಕೇಳು. ಇದೇ ಜ್ಞಾನವು ಮತ್ತು ವಿಜ್ಞಾನವು ; ಇದನ್ನು ಅರಿತುಕೊಂಡರೆ ಸಂಸಾರಬಂಧದಿಂದ ಮುಕ್ತನಾಗುತ್ತೀಯೆ. ಇದು ವಿದ್ಯೆಗಳಲ್ಲೆಲ್ಲ ಹೆಚ್ಚಿನದು, ಅತ್ಯಂತಪವಿತ್ರವಾದದ್ದು, ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವಂಥದ್ದು. ಸುಲಭವಾಗಿ ಪಡೆದುಕೊಳ್ಳಬಹುದಾದದ್ದು, ಎಂದಿಗೂ ನಶಿಸದ ಫಲ ವುಳ್ಳದ್ದು. ಇದರಲ್ಲಿ ನಂಬಿಕೆಯಿಲ್ಲದವರು ಸಂಸಾರದಲ್ಲಿ ತೊಳಲುವರು.

೪-೧೦. "ಈ ಜಗತ್ತೆಲ್ಲವನ್ನೂ ಅವ್ಯಕ್ತರೂಪದಿಂದ ನಾನು ವ್ಯಾಪಿಸಿರುವೆನು, ಬ್ರಹ್ಮನು ಮೊದಲಾಗಿ ಸ್ತಂಬದವರೆಗಿನ ಪ್ರಾಣಿಗಳೆಲ್ಲವೂ ನನ್ನನ್ನೇ ಅವಲಂಬಿಸಿವೆಯಾದರೂ ಪರಮಾರ್ಥದೃಷ್ಟಿ-ಯಿಂದ ನೋಡಿದರೆ ಅವು ನನ್ನಲ್ಲಿರುವದಿಲ್ಲ. ಆಕಾಶದಲ್ಲಿ ವಾಯುವಿರುವಂತೆ ನನಗೆ ಯಾವ ಸಂಬಂಧವೂ ಇಲ್ಲದೆಯೇ ನನ್ನಲ್ಲಿ ಸರ್ವಭೂತಗಳೂ ಇರುತ್ತಿರುವವು. ಹೀಗೆ ಸ್ಥಿತಿಕಾಲದಲ್ಲಿ ನನ್ನಲ್ಲಿರುವ ಭೂತಗಳು ಕಲ್ಪಾಂತದಲ್ಲಿ ನನ್ನ ಪ್ರಕೃತಿಯಲ್ಲಿಯೇ ಲಯವಾಗುವವು ; ಆ ಪ್ರಕೃತಿಯ ಮೂಲಕ ನಾನೇ ಅವುಗಳನ್ನು ಹೊಸ ಕಲ್ಪದ ಆದಿಯಲ್ಲಿ ಸೃಷ್ಟಿಮಾಡುವೆನು. ಅವಿದ್ಯಾಕಲ್ಪಿತವಾಗಿರುವ ಈ ಪ್ರಕೃತಿಯ ಮೂಲಕವಾಗಿ ನಡೆಯುತ್ತಿರುವ ಸೃಷ್ಟಿಸ್ಥಿತಿಲಯಗಳಲ್ಲಿ ನಾನು ಉದಾಸೀನನಾಗಿರುವದ ರಿಂದ ನನಗೆ ಯಾವ ಕರ್ಮಬಂಧವೂ ಇಲ್ಲ ; ಕೇವಲ ಸಾಕ್ಷಿಯಾಗಿರುವ ನನ್ನ ಸನ್ನಿಧಿಯಲ್ಲಿ ಪ್ರಕೃತಿಯು ಸ್ಥಾವರಜಂಗಮರೂಪವಾಗಿ ಮಾರ್ಪಡುತ್ತಿರುವದು.

೧೧-೧೩. "ಇಂಥ ನಿತ್ಯಶುದ್ಧಸ್ವರೂಪನಾದ ನಾನೇ ಎಲ್ಲರ ಆತ್ಮನೆಂಬುದನ್ನು ತಿಳಿ ಯದೆ ಮೂಢರು ಆಸುರಸಂಪತ್ತಿನಿಂದ ಕೂಡಿ ಒಬ್ಬರನ್ನೊಬ್ಬರು ಹಿಂಸೆಮಾಡುವರು. ಮಹಾತ್ಮ ರಾದವರು ನಾನೇ ಸಕಲಭೂತಗಳಿಗೂ ಕಾರಣನೆಂಬುದನ್ನು ಅರಿತುಕೊಂಡು ದೈವಸಂಪತ್ತಿನಿಂದ ಕೂಡಿ ನನ್ನನ್ನು ಯಾವಾಗಲೂ ಭಜಿಸುತ್ತಾರೆ.

೧೪-೧೯. "ದೈವಸ್ವಭಾವದ ಜನರು ಅದ್ವಿತೀಯವಾದ ಬ್ರಹ್ಮರೂಪದಿಂದಲೂ ಸೂರ್ಯ ಚಂದ್ರಾದಿಪೃಥಗ್ರೂಪದಿಂದಲೂ ಇರುವವನು ನಾನೇ ಎಂದು ತಿಳಿದು ಜ್ಞಾನಯಜ್ಞಗಳಿಂದ ಯಾವಾಗಲೂ ನನ್ನನ್ನೇ ಪೂಜಿಸುವರು.

೨೦-೨೫. "ಈ ತತ್ತ್ವವನ್ನು ಅರಿಯದೆ ಸ್ವರ್ಗಸುಖಕ್ಕಾಗಿ ವೇದೋಕ್ತಕರ್ಮವನ್ನು ಮಾಡು ವವರು ಸ್ವರ್ಗವನ್ನು ಹೊಂದಿ ತಾವು ಮಾಡಿದ ಪುಣ್ಯವು ಸವೆಯಲು ಮತ್ತೆ ಮನುಷ್ಯಲೋಕವನ್ನು ಹೊಂದುವರು. ನಿಷ್ಕಾಮರಾಗಿ ನನ್ನನ್ನೇ ಸೇವಿಸುವವರ ಯೋಗಕ್ಷೇಮವನ್ನು ಕೂಡ ನಾನೇ ವಹಿಸು ವೆನು. ಸಕಾಮಿಗಳೂ ನಿಷ್ಕಾಮಿಗಳೂ ನನ್ನನ್ನೇ ಪೂಜಿಸುತ್ತಾರೆ ; ಏಕೆಂದರೆ ನಾನೇ ಸರ್ವಯಜ್ಞ ಗಳನ್ನೂ ಆಯಾ ದೇವತೆಗಳ ರೂಪದಿಂದ ಸ್ವೀಕರಿಸುವವನು. ಆದರೂ ಈ ತತ್ತ್ವವನ್ನು ಸಕಾಮಿಗಳು ಅರಿಯದ್ದರಿಂದ ಅವರು ಪರಮಗತಿಯಾದ ನನ್ನನ್ನು ಪಡೆಯದೆ ಮರಳಿ ಸಂಸಾರದಲ್ಲಿ ಬೀಳುವರು. ಇಂದ್ರಾದಿದೇವತೆಗಳು, ಅಗ್ನಿಷ್ವಾತ್ತಾದಿಪಿತೃಗಳು, ಮಾತೃಗಣಾದಿಭೂತಗಳು- ಇವುಗಳನ್ನು ಸೇವಿಸು

ವವರು ಈ ದೇವತೆಗಳು ಮುಂತಾದವರನ್ನೆ ದೇಹಾಂತರದಲ್ಲಿ ಪಡೆಯುವಂತೆ ನನ್ನನ್ನೇ ಸೇವಿಸುವವರು ನನ್ನನ್ನೇ ಪಡೆಯುವರು.

೨೬-೨೯. "ನನ್ನನ್ನು ಆರಾಧನೆಮಾಡುವದು ಬಹು ಸುಲಭ. ಒಂದು ಎಲೆ, ಒಂದು ಹೂ, ಒಂದಿಷ್ಟು ನೀರು- ಇವುಗಳನ್ನು ಭಕ್ತಿಯಿಂದ ಕೊಟ್ಟರೂ ನಾನು ತೃಪ್ತನಾಗುವೆನು. ಆದ್ದರಿಂದ ನೀನು ಮಾಡುವದನ್ನು, ನೀನು ತಿನ್ನುವದನ್ನು, ನೀನು ಮಾಡುವ ಹೋಮವನ್ನು ಅಥವಾ ತಪಸ್ಸನ್ನು ನನಗೇ ಅರ್ಪಿಸು ; ಇದರಿಂದ ಪಾಪಪುಣ್ಯಗಳನ್ನು ಮೀರಿ ಕರ್ಮಬಂಧದಿಂದ ಬಿಡುಗಡೆಹೊಂದಿ ನನ್ನನ್ನೇ ಪಡೆಯುವೆ. ನಾನು ಎಲ್ಲರಲ್ಲಿಯೂ ಸಮವಾಗಿಯೇ ವರ್ತಿಸುವೆನು ; ಆದರೂ ನನ್ನಲ್ಲಿಯೇ ಪ್ರೇಮವುಳ್ಳವರು ನನ್ನಲ್ಲಿಯೇ ಸ್ವಭಾವದಿಂದ ನಿಲ್ಲುವರು, ನಾನೂ ಅವರಲ್ಲಿಯೇ ಇರುವೆನು.

೩೦-೩೩. "ಎಂಥ ದುರಾಚಾರವುಳ್ಳವನಾಗಿರಲಿ, ನನ್ನನ್ನು ಅನನ್ಯಭಕ್ತಿಯಿಂದ ಭಜನೆಮಾಡುವದಕ್ಕೆ ಮೊದಲುಮಾಡಿದನೆಂದರೆ ಅಂಥವನು ಭಕ್ತಿಯ ಸಾಮರ್ಥ್ಯದಿಂದ ಒಳ್ಳೆಯ ನಡತೆಯನ್ನು ಹೊಂದಿ ಶಾಂತಿಯನ್ನು ಪಡೆಯುತ್ತಾನೆ. ಪಾಪನಿಮಿತ್ತದಿಂದ ಸ್ತ್ರೀವೈಶ್ಯಶೂದ್ರಜನ್ಮಗಳಲ್ಲಿ ಹುಟ್ಟಿರುವವರು ಕೂಡ ನನ್ನನ್ನು ಆಶ್ರಯಿಸಿದರೆ ಉತ್ತಮಗತಿಯನ್ನೈದುವರು ; ಇನ್ನು ಉತ್ತಮಜನ್ಮವನ್ನು ಪಡೆದು ಭಕ್ತರಾಗುವ ಬ್ರಾಹ್ಮಣರೂ ರಾಜರ್ಷಿಗಳೂ ಉತ್ತಮಗತಿಯನ್ನು ಹೊಂದುವರೆಂಬುದನ್ನು ಬೇರೆ ಹೇಳಬೇಕೆ? ಈ ಮನುಷ್ಯಜನ್ಮವು ಅನಿತ್ಯವಾದದ್ದು, ಇದರಲ್ಲಿ ಸುಖವೆಳ್ಳಷ್ಟು ಇಲ್ಲ ; ಆದರೆ ಇದರಲ್ಲಿ ಪರಮಪುರುಷಾರ್ಥವನ್ನು ಪಡೆಯುವ ಭಕ್ತಿಯನ್ನು ಹೊಂದಬಹುದಾಗಿದೆ. ಇಂಥ ದುರ್ಲಭವಾದ ಮನುಷ್ಯಜನ್ಮದಲ್ಲಿ ಕ್ಷತ್ರಿಯನಾಗಿ ಹುಟ್ಟಿರುವ ನೀನು ನನ್ನ ಭಕ್ತನಾಗಿ ನನ್ನನ್ನೇ ಬಿಡದೆ ಭಜಿಸು. ಇದರಿಂದ ನನ್ನನ್ನೇ ಹೊಂದುವೆ.

---

# ಹತ್ತನೆಯ ಅಧ್ಯಾಯ

(ವಿಭೂತಿಯೋಗ)

## ಪರಮಾತ್ಮನ ವಿಭೂತಿ ಮತ್ತು ಯೋಗ

[ ಭಾಷ್ಯ ]

ಏಳನೆಯ ಅಧ್ಯಾಯದಲ್ಲಿ ಭಗವಂತನ ತತ್ತ್ವವನ್ನೂ ವಿಭೂತಿಗಳನ್ನೂ ತಿಳಿಸಿದ್ದಾಗಿದೆ, ಒಂಬತ್ತನೆಯ ಅಧ್ಯಾಯದಲ್ಲಿಯೂ ಹೇಳಿದ್ದಾಗಿದೆ. ಇನ್ನು ಈಗ ಭಗವಂತನನ್ನು ಯಾವ ಯಾವ ಭಾವಗಳಲ್ಲಿ ಧ್ಯಾನಮಾಡಬೇಕೋ ಅವುಗಳನ್ನು ಹೇಳಬೇಕಾಗಿದೆ; ಭಗವಂತನ ತತ್ತ್ವವನ್ನು ಆಗಲೇ ಹೇಳಿದ್ದರೂ ಅದು ತಿಳಿಯುವದಕ್ಕೆ ಕಷ್ಟವಾದದ್ದು, ಆದ್ದರಿಂದ (ಅದನ್ನು ಮತ್ತೆ) ಹೇಳಬೇಕಾಗಿದೆ. ಇದಕ್ಕಾಗಿ ಶ್ರೀಭಗವಂತನು ಹೀಗೆಂದು ಹೇಳಿದನು:—

**ಶ್ರೀಭಗವಾನುವಾಚ:—**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧ ॥**

ಶ್ರೀಭಗವಂತನು ಹೇಳಿದ್ದೇನೆಂದರೆ:—

೧. ಎಲೈ ಮಹಾಬಾಹುವೆ, ನನ್ನ ಹೆಚ್ಚಿನ ಮಾತನ್ನು ಮತ್ತೊಮ್ಮೆ ಕೇಳು, ಇದನ್ನು (ಕೇಳಿ) ಸಂತೋಷಪಡುವ ನಿನಗೆ ಹಿತವಾಗಲೆಂಬ ಬಯಕೆಯಿಂದ ನಾನು ಹೇಳುವೆನು.

[ ಭಾಷ್ಯ ]

ಮತ್ತೂ ಇನ್ನೊಮ್ಮೆಯೂ, ಎಲೈ ಮಹಾಬಾಹುವಾದ (ಅರ್ಜುನನೆ,) ನನ್ನ ಹೆಚ್ಚಿನ ಮಾತನ್ನು, ಮಿಗಿಲಿಲ್ಲದ ವಸ್ತುವನ್ನು ತಿಳಿಯಪಡಿಸುವ ಉತ್ತಮವಾದ ಮಾತನ್ನು, ಕೇಳು. ಈ ಹೆಚ್ಚಿನ (ಮಾತನ್ನು) ಸಂತೋಷಪಡುವ- ನೀನು ನನ್ನ ಮಾತನ್ನು ಕೇಳಿದರೆ ಅಮೃತವನ್ನು ಕುಡಿಯುತ್ತಿರುವವನಂತೆ ಬಹಳವಾಗಿ ಹಿಗ್ಗುತ್ತೀಯೆ. ಆದ್ದರಿಂದ (ಹೀಗೆ ನಲಿಯುವ) ನಿನಗಾಗಿ -ಹಿತವಾಗಲೆಂಬ ಬಯಕೆಯಿಂದ ಎಂದರೆ ಒಳ್ಳೆಯದಾಗಬೇಕೆಂಬ ಇಚ್ಛೆಯಿಂದ ಹೇಳುತ್ತಿರುವೆನು.

ನಾನೇ ಹೇಳುತ್ತಿರುವೆನೆಂಬುದೇಕೆ? ಎಂದರೆ ಹೇಳುತ್ತಾನೆ:—

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥**

೨. ನನ್ನ ಪ್ರಭವವನ್ನು ದೇವತೆಗಳ ಗಣಗಳು ಅರಿಯವು, ಮಹರ್ಷಿಗಳೂ (ಅರಿಯರು). ಏಕೆಂದರೆ ನಾನೇ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲಾ ರೀತಿಯಿಂದಲೂ ಆದಿಯಾಗಿರುವೆನು.

[ ಭಾಷ್ಯ ]

ಬ್ರಹ್ಮನೇ ಮೊದಲಾದ ದೇವತೆಗಳ ಗಣಗಳು ನನ್ನನ್ನು ಅರಿಯರು. ನನ್ನ ಯಾವುದನ್ನು ಅರಿಯರು ? ಎಂದರೆ ನನ್ನ ಪ್ರಭವವನ್ನು ಎಂದರೆ ಪ್ರಭಾವವನ್ನು, ಪ್ರಭುಶಕ್ತಿಯ ಮೇಲ್ಮೆಯನ್ನು ; ಅಥವಾ ಪ್ರಭವವೆಂದರೆ ಆಗೋಣ, ಹುಟ್ಟು ಏಕೆಯೂ (ಹೇಗಾಯಿತೆಂಬುದನ್ನು ದೇವತೆಗಳು ಅರಿಯರು). ಭೃಗುವೇ ಮೊದಲಾದ ಮಹರ್ಷಿಗಳೂ (ಇದನ್ನು) ಅರಿಯರು. ಅವರಿಗೆ ಇದೇಕೆ ತಿಳಿಯದು ? ಎಂದರೆ ಹೇಳುತ್ತೇನೆ. ಏಕೆಂದರೆ ನಾನೇ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲಾ ರೀತಿಯಿಂದಲೂ ಸರ್ವಪ್ರಕಾರಗಳಿಂದಲೂ * ಆದಿಯಾಗಿರುವೆನು, ಎಂದರೆ ಕಾರಣನಾಗಿರುವೆನು. ॥ ೨ ॥

ಮತ್ತು—

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

೩. ಯಾವನು ನನ್ನನ್ನು ಜನ್ಮರಹಿತನೆಂದೂ ಅನಾದಿಯೆಂದೂ ಲೋಕಕ್ಕೆಲ್ಲ ಮಹೇಶ್ವರನೆಂದೂ ತಿಳಿಯುತ್ತಾನೋ ಆತನು ಮನುಷ್ಯರಲ್ಲಿ ಸಮ್ಮೂಢನಲ್ಲದವನಾಗಿ ಸಕಲಪಾಪಗಳಿಂದಲೂ ಮುಕ್ತನಾಗುತ್ತಾನೆ.

[ ಭಾಷ್ಯ ]

ನಾನು ದೇವತೆಗಳಿಗೂ ಮಹರ್ಷಿಗಳಿಗೂ ಆದಿಯಾಗಿದ್ದು ನನಗೆ ಮತ್ತೊಬ್ಬನು ಯಾರೂ ಆದಿಯಿರುವದಿಲ್ಲವಾದ್ದರಿಂದ ನಾನು ಜನ್ಮರಹಿತನೂ ಮೊದಲಿಲ್ಲದವನೂ ಆಗಿರುವೆನು ; (ಇಲ್ಲಿ) ಅನಾದಿಯಾಗಿರುವನೆಂಬುದು ಹುಟ್ಟಿಲ್ಲದವನಾಗಿರುವದಕ್ಕೆ ಕಾರಣವಾಗಿರುವದು. ಹೀಗೆ ಹುಟ್ಟಿಲ್ಲದವನೂ ಮೊದಲಿಲ್ಲದವನೂ ಆಗಿರುವೆನೆಂದು ಯಾವನು ತಿಳಿದುಕೊಳ್ಳುತ್ತಾನೋ, ಚೆನ್ನಾಗಿ ಅರಿತುಕೊಳ್ಳುವನೋ, ಲೋಕಮಹೇಶ್ವರನೆಂದೂ -ಲೋಕಗಳಿಗೆಲ್ಲ ದೊಡ್ಡ ಈಶ್ವರನು, ಅಜ್ಞಾನವಾಗಲಿ

---

* ಸೃಷ್ಟಿಮಾಡುವದು, ಅವರಿಗೆ ಬುದ್ಧಿಯನ್ನು ಕೊಡುವದು, ಅವರ ಪ್ರವೃತ್ತಿಯ ಕ್ರಮವನ್ನು ಗೊತ್ತುಪಡಿಸುವದು— ಮುಂತಾದ ರೀತಿಗಳಿಂದ.

ಅದರ ಕಾರ್ಯವಾಗಲಿ ಇಲ್ಲದ **ತುರೀಯನೆಂದೂ***— (ಯಾವನು ತಿಳಿಯು ಪನೋ), ಅವನು ಮನುಷ್ಯರಲ್ಲಿ ಅಸಮ್ಮೂಢನಾಗಿ ಎಂದರೆ ಯಾವ ಬಗೆಯ ಮೋಹವೂ ಇಲ್ಲದವನಾಗಿ ಸಕಲ ಪಾಪಗಳಿಂದಲೂ ಎಂದರೆ ತಿಳಿದು ಮಾಡಿದ ಮತ್ತು ತಿಳಿಯದೆ ಮಾಡಿದ (ಎಲ್ಲಾ ಪಾಪಗಳಿಂದಲೂ) ಮುಕ್ತನಾಗುತ್ತಾನೆ,† ಬಿಡುಗಡೆಹೊಂದುವನು.

ಈ ಕಾರಣದಿಂದಲೂ ನಾನು ಲೋಕಗಳಿಗೆಲ್ಲ ಮಹೇಶ್ವರನಾಗಿರುವೆನು :—

**ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥ ೪ ॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

೪-೫. ಬುದ್ಧಿಯು, ಜ್ಞಾನವು, ಸಮ್ಮೋಹವಿಲ್ಲದಿರುವದು, ಕ್ಷಮೆ, ಸತ್ಯ, ದಮ, ಶಮ, ಸುಖ, ದುಃಖ, ಭವ, ಅಭಾವ, ಭಯ, ಅಭಯ, ಅಹಿಂಸೆ, ಸಮತೆ, ತುಷ್ಟಿ, ತಪಸ್ಸು, ದಾನ, ಯಶಸ್ಸು, ಅಯಶಸ್ಸು- ಈ ಬೇರೆಬೇರೆಯಾದ ಭಾವಗಳು ಭೂತಗಳಿಗೆ ನನ್ನಿಂದಲೇ ಆಗುತ್ತಿರುವವು.

[ ಭಾಷ್ಯ ]

ಬುದ್ಧಿಯೆಂದರೆ ಸೂಕ್ಷ್ಮವಾಗಿರುವದೇ ಮುಂತಾದ ವಿಷಯಗಳನ್ನು ಅರಿಯುವ ಅಂತಃಕರಣದ ಸಾಮರ್ಥ್ಯವು. ಆ ಬುದ್ಧಿಯಿರುವವನನ್ನೇ ಬುದ್ಧಿವಂತನೆನ್ನುತ್ತಾರೆ.‡ ಜ್ಞಾನವೆಂದರೆ ಆತ್ಮನೇ ಮುಂತಾದ ಪದಾರ್ಥಗಳನ್ನು

* ಸುಷುಪ್ತಿಯಲ್ಲಿ ಏನನ್ನೂ ಅರಿಯದಿರುವಿಕೆಯೆಂಬ ಅಜ್ಞಾನವಿರುವದು ; ಜಾಗ್ರತ್ಸ್ವಪ್ನಗಳಲ್ಲಿ ತನಗೆರಡನೆಯದಾದ ಅನಾತ್ಮವಸ್ತುವನ್ನು ಕಾಣುವದೆಂಬ ಅನ್ಯಥಾಜ್ಞಾನವಿರುವದು. ಈ ಅನ್ಯಥಾಜ್ಞಾನವು ಅಜ್ಞಾನದ ಕಾರ್ಯವು, ಎಂದರೆ ತತ್ತ್ವವನ್ನು ತಿಳಿಯದ್ದರಿಂದ ಉಂಟಾಗಿರುವದು. ಈ ಎರಡಕ್ಕೂ ಸಾಕ್ಷಿಯಾಗಿರುವ ಶುದ್ಧಚೈತನ್ಯವು ಅಜ್ಞಾನ ಮತ್ತು ಅದರ ಕಾರ್ಯ- ಎರಡರಿಂದಲೂ ಬಿಡುಗಡೆಯಾಗಿ ಸಕಲವನ್ನೂ ಆಳುವ ಈಶ್ವರನಾಗಿರುವದು. ಈಶ್ವರನು ಆತ್ಮನಿಗಿಂತ ಬೇರೆಯಾದರೆ ಅನಾತ್ಮನಾಗಿ ಜಡನಾಗಬೇಕಾಗುವದಾದ್ದರಿಂದ ಅಂಥ ಈಶ್ವರನನ್ನು ಸಿದ್ಧಾಂತದಲ್ಲಿ ಒಪ್ಪಿಲ್ಲ. ಇದನ್ನು ಭಕ್ತಿಯೋಗದಲ್ಲಿಯೂ ಜ್ಞಾನಯೋಗದಲ್ಲಿಯೂ ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿದೆ.		† ೪-೩೦ ನೋಡಿ.

‡ ಬುದ್ಧಿಯೆಂದರೆ ಅಂತಃಕರಣವೆಂಬರ್ಥವೂ ಉಂಟು ; ಆದರೆ ಇಲ್ಲಿ ವಸ್ತುವನ್ನು ನಿಶ್ಚಯಿಸುವ ಸಾಮರ್ಥ್ಯವೆಂದೇ ಅರ್ಥ, ಏಕೆಂದರೆ ಈ ಸಾಲಿನಲ್ಲಿ ಬಂದಿರುವ ಮಾತುಗಳೆಲ್ಲ ಪ್ರಾಣಿಗಳಿಗೆ ಆಗುವ ಮನೋಭಾವಗಳನ್ನೇ ಹೇಳುತ್ತವೆ.

ಅರಿತುಕೊಳ್ಳುವದು.* ಅಸಮ್ಮೋಹವೆಂದರೆ ತಿಳಿಯಬೇಕಾಗಿ ಎದುರಿಗೆ ಕಾಣುವ ವಿಷಯಗಳಲ್ಲಿ ವಿವೇಕದಿಂದ ಮುಂದೆ ಹೋಗುವದು.† ಕ್ಷಮೆ ಎಂದರೆ (ಮತ್ತೊಬ್ಬರು) ಬಯ್ದರೆ ಅಥವಾ ಹೊಡೆದರೆ ಚಿತ್ತದಲ್ಲಿ ಯಾವ ವಿರುಪೇರೂ ಇಲ್ಲದಿರುವದು. ಸತ್ಯವು; ಕಂಡದ್ದನ್ನು ಕಂಡಂತೆಯೂ ಕೇಳಿದ್ದನ್ನು ಕೇಳಿದಂತೆಯೂ ತನ್ನ ಅನುಭವವು ಮತ್ತೊಬ್ಬರ ಬುದ್ಧಿಗೆ ಹಿಡಿಯಲೆಂದು ಹಾಗೆಯೇ (ಎಂದರೆ ಕಂಡಂತೆಯೇ, ಕೇಳಿದಂತೆಯೇ) ಹೇಳುವ ವಾಕ್ಯವನ್ನು (ಇಲ್ಲಿ) ಸತ್ಯವೆಂದು ಕರೆದಿದೆ. ದಮವೆಂದರೆ ಹೊರಗಿನ ಇಂದ್ರಿಯಗಳನ್ನು ಬಿಗಿಹಿಡಿಯುವದು; ಶಮವೆಂದರೆ ಒಳಗಿನ ಇಂದ್ರಿಯವಾದ (ಮನಸ್ಸನ್ನು) ಬಿಗಿಹಿಡಿಯುವದು; ಸುಖವೆಂದರೆ ಉಬ್ಬುವದು; ದುಃಖವೆಂದರೆ ಮನಸ್ಸಿನಲ್ಲಿ ಬೇಗುದಿಗೊಳ್ಳುವದು; ಭವವೆಂದರೆ ಹುಟ್ಟುವದು, ಅಭಾವವೆಂದರೆ ಅದಕ್ಕೆ ವಿರುದ್ಧವಾದದ್ದು (ನಾಶವಾಗುವದು); ಭಯವೆಂದರೆ ಹೆದರಿಕೆ, ಅಭಯವೆಂದರೆ ಅದಕ್ಕೆ ವಿರುದ್ಧವಾದದ್ದು (ಧೈರ್ಯದಿಂದಿರುವದು).

ಅಹಿಂಸೆಯೆಂದರೆ ಪ್ರಾಣಿಗಳನ್ನು ಕೊಲೆಗೊಳಿಸದಿರುವದು. ಸಮತೆ ಎಂದರೆ ಚಿತ್ತವನ್ನು ವಿರುಪೇರಿಲ್ಲದಂತೆ ಇಟ್ಟುಕೊಂಡಿರುವದು. ತುಷ್ಟಿಯೆಂದರೆ ತೃಪ್ತಿ, ಏನಾದರೂ ಸಿಕ್ಕರೆ ಇಷ್ಟೇ ಸಾಕೆಂಬ ಬುದ್ಧಿ. ತಪಸ್ಸೆಂದರೆ ಇಂದ್ರಿಯಗಳನ್ನು ಬಿಗಿಯುಹಿಡಿಯುವದರ ಮೂಲಕ ಶರೀರವನ್ನು ದಂಡಿಸುವದು.‡ ದಾನವೆಂದರೆ ತನ್ನ ಶಕ್ತಿಯಿದ್ದಮಟ್ಟಿಗೆ ತನ್ನ ವಸ್ತುಗಳನ್ನು ಮತ್ತೊಬ್ಬರಿಗೆ ಹಂಚುವದು. ಯಶಸ್ಸೆಂದರೆ ಧರ್ಮದಿಂದ ಬರುವ ಕೀರ್ತಿಯು; ಅಯಶಸ್ಸೆಂದರೆ ಅಧರ್ಮದಿಂದ ಬರುವ ಕೆಟ್ಟ ಹೆಸರು.

ಮೇಲೆ ಹೇಳಿದ ಬುದ್ಧಿಯೇ ಮುಂತಾದ ಬೇರೆಬೇರೆಯಾದ ಎಂದರೆ ಬಗೆಬಗೆಯಾಗಿರುವ ಭಾವಗಳು ಭೂತಗಳಿಗೆ ಎಂದರೆ ಪ್ರಾಣಿಗಳಿಗೆ ಅವರವರ ಕರ್ಮಕ್ಕೆ§ ತಕ್ಕಂತೆ ನನ್ನಿಂದಲೇ ಆಗುವವು. ‖ ೫ ‖

---

* ಬುದ್ಧಿಯೆಂಬ ಮಾತಿನಿಂದ ಜಾಣತನವನ್ನು ಹೇಳಿದ್ದಾಯಿತು; ಜ್ಞಾನವೆಂಬ ಮಾತಿನಿಂದ ಅರಿತಿರುವದನ್ನು ಹೇಳಿದೆ ಎಂದು ಭಾವ.

† ಬೆಪ್ಪಾಗಿ ಸುಮ್ಮನೆ ಇರದೆ ಇರುವದು.

‡ ವಿಷಯಭೋಗಕ್ಕೆ ಹಾತುವರಿಯದಂತೆ ಉಪವಾಸಾದಿಗಳಿಂದ ಹಿಡಿತದಲ್ಲಿಟ್ಟುಕೊಳ್ಳುವದು.

§ ಕರ್ಮವು ಒಂದು ಕ್ಷಣದಲ್ಲಿ ನಾಶವಾಗುವದಾದ್ದರಿಂದ ಅದರಿಂದಲೇ ಈ ಭಾವಗಳುಂಟಾಗುವದಿಲ್ಲ; ಕರ್ಮವನ್ನು ಜೀವರು ಮಾಡಲು ಅದಕ್ಕನುಗುಣವಾಗಿ ಪರಮೇಶ್ವರನಾದ ನಾನೇ ಫಲವನ್ನು ಕೊಡುವೆನು. ಬ್ರ॥ ಸೂ॥ ೩–೨–೩೮ ನೋಡಿ.

ಮತ್ತು—

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ* ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥**

೬. ಹಿಂದಿನ ಏಳು ಮಹರ್ಷಿಗಳು, ಮತ್ತು ನಾಲ್ಕು ಜನ ಮನುಗಳೂ ನನ್ನಲ್ಲಿಯೇ ಭಾವವುಳ್ಳವರಾಗಿ ನನ್ನಿಂದಲೇ ಮಾನಸಪುತ್ರರಾಗಿ ಉಂಟಾದವರು. ಲೋಕದಲ್ಲಿರುವ ಈ ಪ್ರಜೆಗಳೆಲ್ಲ ಅವರಿಗೆ (ಸೇರಿದವರೇ.)

[ ಭಾಷ್ಯ ]

ಮಹರ್ಷಿಗಳು ಏಳು† ಜನ, ಭೃಗುವೇ ಮೊದಲಾದವರು ; (ಇವರು) ಹಿಂದಿನವರು ಎಂದರೆ ಹಿಂದಿನ ಕಾಲಕ್ಕೆ ಸಂಬಂಧಪಟ್ಟವರು. ಮತ್ತು ನಾಲ್ಕು ಜನ ಮನುಗಳು‡ ಸಾವರ್ಣರೆಂದು ಪ್ರಸಿದ್ಧರಾಗಿರುವರು. ಇವರು ಮದ್ಭಾವ ರಾಗಿ ಎಂದರೆ ನನ್ನಲ್ಲಿಯೇ ಇಟ್ಟ ಭಾವನೆಯುಳ್ಳವರು, ವೈಷ್ಣವಸಾಮರ್ಥ್ಯದಿಂದ ಕೂಡಿದವರು ; ನನ್ನಿಂದ ಮನಸ್ಸಿನಿಂದಲೇ ಉತ್ಪಾದಿತರಾಗಿ ಉಂಟಾದವರು,

* ಪೂರ್ವೇ ಚತ್ವಾರಃ (ಹಿಂದಿನ ನಾಲ್ಕು ಜನ) ಎಂದು ಕೆಲವರು ಅನ್ವಯಮಾಡಿಕೊಂಡು ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರೆಂಬ ನಾಲ್ಕು ಜನರೆಂದು ಅರ್ಥಮಾಡಿದ್ದಾರೆ ; ಇದೇ ಅನ್ವಯ ವನ್ನು ಹಿಡಿದು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ– ಎಂಬರ್ಥವನ್ನು ತಿಲಕರವರು ತೆಗೆದಿದ್ದಾರೆ. ಸನಕಾದಿಗಳು ಪ್ರಜೆಗಳಿಗೆ ಕಾರಣರಲ್ಲ, ವಾಸುದೇವನು ಉತ್ಪನ್ನನಲ್ಲ ; ಉಳಿದವರು ಇಷ್ಟೆಂಬ ಸಂಖ್ಯೆಯನ್ನು ಹೇಳಿ, ಮನುಗಳ ಸಂಖ್ಯೆಯನ್ನು ಮಾತ್ರ ಹೇಳದೆ ಇರುವದೆಂಬ ದೋಷವೂ ಈ ಪಕ್ಷಕ್ಕೆ ಬರುವದು. ಅಂತೂ ಈ ಶ್ಲೋಕಕ್ಕೆ ಅರ್ಥವು ಇಷ್ಟೇ : "ಮಹರ್ಷಿಗಳು, ಮನುಗಳು– ಇವರು ಜಗತ್ಸೃಷ್ಟಿಗೆ ಕಾರಣರೆಂದೂ ಸರ್ವಜ್ಞಕಲ್ಪರೆಂದೂ ಪ್ರಸಿದ್ಧರಾಗಿರುವರಷ್ಟೆ ; ಅವರನ್ನು ಕೂಡ ನಾನು ಮನಸ್ಸಿನ ಸಂಕಲ್ಪಮಾತ್ರದಿಂದ ಹುಟ್ಟಿಸುವೆನು."

† ಮಹರ್ಷಿಗಳು ಏಳು: ಭೃಗು, ನಭ, ವಿವಸ್ವಂತ, ಸುಧಾಮಾ, ವಿರಜಾ, ಅತಿನಾಮಾ, ಸಹಿಷ್ಣು ; ಇವರು ಹಿಂದಿನ ಚಾಕ್ಷುಷಮನ್ವಂತರಕ್ಕೆ ಸೇರಿದವರಾದ್ದರಿಂದ 'ಪೂರ್ವೇ' ಎಂಬ ವಿಶೇಷಣ ವನ್ನು ಪಯೋಗಿಸಿದೆಯೆಂದು ಕೆಲವರೆನ್ನುವರು. ಭೃಗು, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ– ಎಂಬ ಏಳು ಜನರೇ ಎಂದು ಮತ್ತೆ ಕೆಲವರೆನ್ನುವರು. ನಾರಾಯಣೀಯದಲ್ಲಿ ಇವರನ್ನು ಪ್ರವೃತ್ತಿಧರ್ಮಕ್ಕೆ ಕಾರಣರಾದ ಮೂಲಋಷಿಗಳೆಂದಿರುವದರಿಂದ ಈ ಪಕ್ಷವೇ ಯುಕ್ತವೆಂದು ತೋರು ವದು. ಈ ಅಧ್ಯಾಯದ ೨೫ನೆಯ ಶ್ಲೋಕವನ್ನು ನೋಡಿ.

‡ ಮನುಗಳು ಹದಿನಾಲ್ಕು ಜನ: ಸ್ವಾಯಂಭುವ, ಸ್ವಾರೋಚಿಷ, ಔತ್ತಮಿ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರ ಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ; ಮನುಗಳಲ್ಲಿ ಮುಂದೆ ಬರುವ ಸಾವರ್ಣಿಗಳೆಂಬ ನಾಲ್ಕೇ ಜನರನ್ನು ಏತಕ್ಕೆ ತೆಗೆದುಕೊಂಡರೆಂಬುದಕ್ಕೆ ಕಾರಣವು ಸ್ಪಷ್ಟವಾಗಿಲ್ಲ.

ಹುಟ್ಟಿದವರು. ಈ ಲೋಕದಲ್ಲಿರುವ ಸ್ಥಾವರಜಂಗಮರೂಪರಾದ ಪ್ರಜೆಗಳೆಲ್ಲರೂ (ಪ್ರಾಣಿಗಳೆಲ್ಲರೂ) ಈ ಮನುಗಳ ಮತ್ತು ಮಹರ್ಷಿಗಳ ಸೃಷ್ಟಿಯೇ. ॥ ೬ ॥

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಮ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

೭. ಈ ನನ್ನ ವಿಭೂತಿಯನ್ನೂ ಯೋಗವನ್ನೂ ಯಾವಾತನು ಸರಿಯಾಗಿ ತಿಳಿದುಕೊಳ್ಳುವನೊ ಅವನಿಗೆ ಅಲುಗಾಡದ ಯೋಗವು ಸಿಕ್ಕುವದು, ಇದರಲ್ಲಿ ಸಂಶಯವಿಲ್ಲ.

[ ಭಾಷ್ಯ ]

ಈ ಮೇಲೆ ಹೇಳಿದ ವಿಭೂತಿಯನ್ನು ಎಂದರೆ (ನನ್ನ ಮಾಹಾತ್ಮ್ಯದ) ವಿಸ್ತಾರವನ್ನೂ ಯೋಗವನ್ನೂ ಎಂದರೆ ನಾನು ಮಾಡಿರುವ ಯೋಜನೆಯನ್ನೂ ಅಥವಾ ಘಟನೆಯನ್ನೂ –ಅಥವಾ ಯೋಗದಿಂದ ಉಂಟಾಗಿರುವ ಯೋಗೈಶ್ವರ್ಯಸಾಮರ್ಥ್ಯವಾದ ಸರ್ವಜ್ಞತ್ವವನ್ನೇ ಇಲ್ಲಿ ಯೋಗವೆಂದು ಕರೆದಿದೆ; ನನ್ನ ಈ ಯೋಗವನ್ನೂ- ಯಾವನು ಸರಿಯಾಗಿ ಇದ್ದದ್ದು ಇದ್ದಂತೆ* ತಿಳಿದುಕೊಳ್ಳುವನೋ ಆತನು ಅಲುಗಾಡದ ಸ್ವಲ್ಪವೂ ಚಲಿಸದ ಸಮ್ಯಗ್ದರ್ಶನವು ನೆಲೆಯಾಗಿ ನಿಲ್ಲುವದೆಂಬ ಯೋಗದಿಂದೊಡಗೂಡುವನು, (ಅದರ) ಸಂಬಂಧವನ್ನು ಪಡೆಯುವನು. (ಅವನು ಇಂಥ ಯೋಗವನ್ನು ಪಡೆಯುವನೆಂಬ) ಇದರಲ್ಲಿ ಈ ವಿಷಯದಲ್ಲಿ ಸಂಶಯವಿಲ್ಲ.

## ಪರಮಾತ್ಮನನ್ನು ಅರಿತುಕೊಂಡವರಿಗೆ ದೊರಕುವ ಬುದ್ಧಿಯೋಗ

ಎಂಥ ಅಲುಗಾಡದ ಯೋಗದಿಂದೊಡಗೂಡುವನು ? ಎಂದರೆ-

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

೮. ನಾನು ಎಲ್ಲಕ್ಕೂ ಕಾರಣನು, ನನ್ನಿಂದ ಎಲ್ಲವೂ ಪ್ರವೃತ್ತಿಯಾಗುತ್ತದೆ- ಎಂದು ಪಂಡಿತರು ಭಾವದಿಂದೊಡಗೂಡಿ ನನ್ನನ್ನು ಭಜಿಸುವರು.

[ ಭಾಷ್ಯ ]

ವಾಸುದೇವನೆಂಬ ಹೆಸರಿನ ಪರಬ್ರಹ್ಮವಾದ ನಾನು ಜಗತ್ತಿಗೆಲ್ಲ ಕಾರಣನು, ಉತ್ಪತ್ತಿಯನ್ನುಂಟುಮಾಡುವವನು. ನನ್ನಿಂದಲೇ ಇರುವದು, ನಾಶವಾಗುವದು,

---

* ಪರಮಾತ್ಮನೇ ಸಕಲಜಗದಾದಿಯು; ಮಹರ್ಷಿಗಳು, ದೇವತೆಗಳು, ಮನುಗಳು- ಇವರೆಲ್ಲರೂ ಆತನಿಂದಲೇ ತಮ್ಮ ಐಶ್ವರ್ಯವನ್ನು ಪಡೆದಿದ್ದಾರೆ; ಪರಮಾತ್ಮನೇ ಸರ್ವಜ್ಞನು, ಆತನಿಂದಲೇ ಮಹರ್ಷಿಗಳೇ ಮುಂತಾದವರು ತಮ್ಮ ಅತಿಶಯವಾದ ಜ್ಞಾನವನ್ನು ಹೊಂದಿರುವರು ಎಂದು.

ಕೆಲಸವಮಾಡುವದು, ಫಲವನ್ನು ಅನುಭೋಗಿಸುವದು- ಎಂಬ ಮಾರ್ಪಾಡಿನ ರೂಪಿನಲ್ಲಿರುವ ಸಕಲ ಜಗತ್ತೂ ತನ್ನತನ್ನ ಕೆಲಸದಲ್ಲಿ ತೊಡಗುತ್ತಿರುವದು. ಹೀಗೆಂದು ತಿಳಿದು, ಬುಧರು ಎಂದರೆ ಪರಮಾರ್ಥವನ್ನರಿತುಕೊಂಡವರು ಭಾವ ದಿಂದೊಡಗೂಡಿ- ಭಾವವೆಂದರೆ ಪರಮಾರ್ಥದಲ್ಲಿಯೇ ಹೆಚ್ಚಿನ ಅಭಿಮಾನವು, ಅದರಿಂದೊಡಗೂಡಿ- ನನ್ನನ್ನು ಭಜಿಸುತ್ತಾರೆ, ಸೇವಿಸುತ್ತಾರೆ ಎಂದರ್ಥ. ॥ ೮ ॥

ಮತ್ತು—

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ ೯ ॥**

೯. ಮಚ್ಚಿತ್ತರಾಗಿ, ನನ್ನಲ್ಲಿಯೇ ಪ್ರಾಣಗಳನ್ನು ಹೊಂದಿಸಿದವರಾಗಿ, ಒಬ್ಬರಿಗೊಬ್ಬರು ತಿಳಿಯಹೇಳುತ್ತಾ, ಯಾವಾಗಲೂ ನನ್ನ ಕಥೆಯನ್ನೇ ಹೇಳುತ್ತಾ, (ಅವರು) ತೃಪ್ತರಾಗಿ ಆನಂದಪಡುತ್ತಿರುವರು.

[ ಭಾಷ್ಯ ]

ಮಚ್ಚಿತ್ತರಾಗಿ ಎಂದರೆ ನನ್ನಲ್ಲಿಯೇ ಇಟ್ಟ ಚಿತ್ತವುಳ್ಳವರಾಗಿ, ಮದ್ಗತ ಪ್ರಾಣರಾಗಿ ಎಂದರೆ ನನ್ನಲ್ಲಿಯೇ ಚಕ್ಷುರಿಂದ್ರಿಯವೇ ಮುಂತಾದ ಪ್ರಾಣ ಗಳನ್ನು* ಹೊಂದಿಸಿ, ಎಂದರೆ ನನ್ನಲ್ಲಿಯೇ ತಮ್ಮ ಕರಣಗಳನ್ನೆಲ್ಲಾ ಉಪಸಂಹಾರ ಮಾಡಿದವರಾಗಿ ಎಂದರ್ಥ. ಅಥವಾ ಮದ್ಗತಪ್ರಾಣರಾಗಿ ಎಂದರೆ ನನ್ನಲ್ಲಿಯೇ ತಮ್ಮ ಜೀವನವನ್ನು† ಇಟ್ಟವರಾಗಿ ಎಂದರ್ಥ; ಒಬ್ಬರೊಬ್ಬರಿಗೆ (ನನ್ನ ತತ್ತ್ವ ವನ್ನು) ತಿಳಿಸುತ್ತಲೂ ಜ್ಞಾನ, ಬಲ, ವೀರ್ಯ- ಮುಂತಾದ ಗುಣಗಳಿಂದ ಕೂಡಿದ ನನ್ನ ಕಥೆಯನ್ನು ಹೇಳುತ್ತಲೂ ತೃಪ್ತರಾಗಿರುವರು ; ಮತ್ತು ಪ್ರಿಯ ನೊಡನೆ ಸೇರಿದರೆ (ಆನಂದಪಡು)ವಂತೆ ಆನಂದವನ್ನೂ ಹೊಂದುವರು. ॥ ೯ ॥

ಯಾರು ಮೇಲೆ ಹೇಳಿದ ರೀತಿಗಳಲ್ಲಿ ಭಕ್ತರಾಗಿ ನನ್ನನ್ನು ಭಜಿಸು ತ್ತಿರುವರೋ—

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥ ೧೦ ॥**

೧೦. ಹೀಗೆ ಬಿಡದೆ ನನ್ನನ್ನೇ ಹೊಂದಿಕೊಂಡು ಪ್ರೀತಿಪೂರ್ವಕವಾಗಿ ಭಜಿಸುತ್ತಿರುವ ಅವರಿಗೆ ಆ ಬುದ್ಧಿಯೋಗವನ್ನು ಕೊಡುವೆನು ; ಅದರಿಂದ ಅವರು ನನ್ನನ್ನೇ ಸೇರುವರು.

---

* ಕರಣಗಳನ್ನು.

† ನನಗಾಗಿಯೇ ಬಾಳಿಕೊಂಡಿರುವವರಾಗಿ.

[ ಭಾಷ್ಯ ]

ಬಿಡದೆ ನನ್ನನ್ನೇ ಹೊಂದಿಕೊಂಡು ಎಂದರೆ ಯಾವಾಗಲೂ ಮನಸ್ಸನ್ನು ನನ್ನಲ್ಲಿಯೇ* ನಿಲ್ಲಿಸಿ ಹೊರಗಿನ ಬಯಕೆಗಳೆಲ್ಲವನ್ನೂ ತೊರೆದು (ನನ್ನನ್ನೇ) ಭಜಿಸುತ್ತಿರುವ ಸೇವಿಸುತ್ತಿರುವ ಅವರಿಗೆ- ಏನಾದರೂ ಬೇಕೆಂಬುದೇ ಮುಂತಾದ ಕಾರಣದಿಂದ (ಭಜಿಸುವರೇನು?) ಎಂದರೆ ಹಾಗಲ್ಲ. ಪ್ರೀತಿಯಿಂದ ಎಂದರೆ ಪ್ರೇಮದಿಂದೊಡಗೂಡಿ ನನ್ನನ್ನು ಭಜಿಸುತ್ತಿರುವ (ಅವರಿಗೆ)† ಎಂದರ್ಥ. ಅವರಿಗೆ- ಆ ಬುದ್ಧಿಯೋಗವನ್ನು ಕೊಡುವೆನು. ಬುದ್ಧಿಯೆಂದರೆ ನನ್ನ ತತ್ತ್ವವನ್ನು ಸರಿಯಾಗಿ ಕಂಡುಕೊಳ್ಳುವ ಅರಿವು. ಆ (ಅರಿವಿನ) ಸಂಬಂಧವೇ ಬುದ್ಧಿಯೋಗವು. ಯಾವ ಸರಿಯಾದ ಜ್ಞಾನವೆಂಬ ಬುದ್ಧಿಯೋಗದಿಂದ ಪರಮೇಶ್ವರನಾದ ತಮ್ಮ ಆತ್ಮನೇ ಆದ ನನ್ನನ್ನು (ತಮ್ಮ) ಆತ್ಮನೆಂದು ಅವರು (ನನ್ನನ್ನು) ಸೇರುವರೋ ಎಂದರೆ ಅರಿತುಕೊಳ್ಳುವರೋ ಆ ಬುದ್ಧಿಯೋಗವನ್ನು (ಕೊಡುವೆನು). ಹೀಗೆ ಅರಿತುಕೊಳ್ಳುವರು ಯಾರು? ಎಂದರೆ ಯಾರು ಮಚ್ಚಿತ್ತರಾಗಿರುವದೇ ಮುಂತಾದ ರೀತಿಯಿಂದ ನನ್ನನ್ನು ಭಜಿಸುತ್ತಾರೋ ಅವರು. ॥ ೧೦ ॥

ಆ ನಿನ್ನ ಭಕ್ತರಿಗೆ ಏತಕ್ಕೆ ಬುದ್ಧಿಯೋಗವನ್ನು ಕೊಡುತ್ತೀಯೆ? ಮತ್ತು ನಿನ್ನನ್ನು ಹೊಂದುವದಕ್ಕೆ ಅಡ್ಡಿಯಾಗಿರುವ ಯಾವ ಅಡಚಣೆಯನ್ನು ನಾಶಗೊಳಿಸುವದಕ್ಕೆ (ಕೊಡುತ್ತೀಯೆ?) ಎಂದು ಕೇಳಿದರೆ ಅದಕ್ಕೆ (ಭಗವಂತನು) ಹೇಳುತ್ತಾನೆ:—

**ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

೧೧. ಅವರ ಮೇಲೆಯೇ ಕನಿಕರದಿಂದ ನಾನು ಅಜ್ಞಾನದಿಂದ‡ ಆಗಿರುವ ತಮಸ್ಸನ್ನು ಅವರ ಮನಸ್ಸಿನ ಭಾವದಲ್ಲಿದ್ದುಕೊಂಡು ಬೆಳಗುವ ಜ್ಞಾನದೀಪದಿಂದ ನಾಶಗೊಳಿಸುವೆನು.

---

* ೯-೨೨ನ್ನು ನೋಡಿ.

† ೭-೧೬ರಲ್ಲಿ ಹೇಳಿದ ಆರ್ತ, ಅರ್ಥಾರ್ಥಿ, ಜಿಜ್ಞಾಸು- ಎಂಬ ಮೂರು ಬಗೆಯವರನ್ನೂ ಬಿಟ್ಟು ಯಾವ ಕಾರಣವೂ ಇಲ್ಲದ್ದೇ ಪರಮಾತ್ಮನನ್ನೇ ಭಜಿಸುತ್ತಿರುವವರಿಗೆ ಎಂದರ್ಥ.

‡ ತತ್ತ್ವವನ್ನು ಸರಿಯಾಗಿ ತಿಳಿಯದ್ದು ಅಜ್ಞಾನವಾದರೆ ಇದರಿಂದ ತಪ್ಪುತಿಳಿವು ಹೇಗಾಗುವದು?— ಎಂದು ಕೆಲವರಿಗೆ ಸಂಶಯವು ಬರಬಹುದು. ಆದರೆ ವಿಷಯವನ್ನು ವಿಂಗಡಿಸಿ ತಿಳಿದುಕೊಳ್ಳದೆ ಯಾವದು ಹೇಗೆ ತೋರುವದೋ ಅದನ್ನು ಹಾಗೆಯೇ ನಂಬಿಬಿಡುವದನ್ನು ಇಲ್ಲಿ ಅಜ್ಞಾನವೆಂದು ಕರೆದಿರುತ್ತದೆ.

[ ಭಾಷ್ಯ ]

ನಾನು ಅವರ ಮೇಲೆಯೇ ಕನಿಕರದಿಂದ-(ಇವರಿಗೆ) ಹೇಗಾದರೂ ಶ್ರೇಯಸ್ಸಾಗಲಿ ಎಂಬ ಮರುಕದಿಂದ, ದಯೆಯಿಂದ, ಅಜ್ಞಾನದಿಂದ ಹುಟ್ಟಿರುವ ಎಂದರೆ ಅವಿವೇಕದಿಂದ ಆಗಿರುವ ಮಿಥ್ಯಾಪ್ರತ್ಯಯವೆಂಬ ಮೋಹದ ಕತ್ತಲೆಯನ್ನು ನಾಶಗೊಳಿಸುವೆನು. ಆತ್ಮಭಾವದಲ್ಲಿದ್ದುಕೊಂಡು (ನಾಶಗೊಳಿಸುವೆನು.) ಆತ್ಮಭಾವವೆಂದರೆ ಅಂತಃಕರಣವೆಂಬ ಆಶಯವು, ಅದರಲ್ಲಿಯೇ ಇದ್ದುಕೊಂಡು* (ನಾಶಗೊಳಿಸುವೆನು.) ವಿಂಗಡಿಸಿ ಅರಿಯುವದೆಂಬ ಜ್ಞಾನದೀಪದಿಂದ- ಭಕ್ತಿಯಿಂದಾದ ಪ್ರಸನ್ನತೆಯೆಂಬ ಎಣ್ಣೆಯನ್ನು ಹಾಕಿ ನನ್ನ ಭಾವನೆಯಲ್ಲಿಯೇ ಇಟ್ಟ ಅಭಿಮಾನವೆಂಬ ವಾಯುವಿನಿಂದ ಉರಿಯುತ್ತಿರುವದಾಗಿಯೂ ಬ್ರಹ್ಮಚರ್ಯವೇ ಮುಂತಾದ ಸಾಧನಗಳ ಸಂಸ್ಕಾರವುಳ್ಳ ಪ್ರಜ್ಞೆಯೆಂಬ ಬತ್ತಿಯಿಂದ ಕೂಡಿದ್ದಾಗಿಯೂ, ವಿರಾಗದಿಂದ ಕೂಡಿದ ಅಂತಃಕರಣವೆಂಬ ದೀಪದ ಕಂಭದಲ್ಲಿರುವದಾಗಿಯೂ, ಚಿತ್ತವು ವಿಷಯಗಳಿಂದ ಹಿಂತಿರುಗಿಟ್ಟ ರಾಗದ್ವೇಷಗಳಿಂದ ಕದಡದೆ ಇರುವದೆಂಬ ಗಾಳಿಯಿಲ್ಲದ ಕೋಣೆಯಲ್ಲಿ (ಉರಿಯುತ್ತಿರು) ವದಾಗಿಯೂ, ಯಾವಾಗಲೂ ಸಾಧನಮಾಡಿದ ಏಕಾಗ್ರತೆಯ ಧ್ಯಾನದಿಂದುಂಟಾದ ಸಮ್ಯಗ್ದರ್ಶನವೆಂಬ ಬೆಳಗುತ್ತಿರುವ ಜ್ಞಾನದೀಪದಿಂದ- (ಮೋಹದ ಕತ್ತಲೆಯನ್ನು ನಾಶಗೊಳಿಸುವೆನು) ಎಂದರ್ಥ. ॥ ೧೧ ॥

## ಪರಮಾತ್ಮನ ಯೋಗಶಕ್ತಿಯ ಮತ್ತು ವಿಭೂತಿಯ ವಿಷಯವಾಗಿ ಅರ್ಜುನನು ಕೇಳಿದ್ದು

ಇದುವರೆಗೆ ಹೇಳಿದ ಭಗವಂತನ ವಿಭೂತಿಯನ್ನೂ ಯೋಗವನ್ನೂ ಕೇಳಿ ಅರ್ಜುನನು ಹೀಗೆಂದನು:—

**ಅರ್ಜುನ ಉವಾಚ—**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

೧೨–೧೩. ನೀನು ಪರಬ್ರಹ್ಮ, ಪರಮಧಾಮವು, ಪರಮಪವಿತ್ರವು. (ನೀನು) ಶಾಶ್ವತನಾದ ಪುರುಷನೆಂದೂ ದಿವ್ಯನೆಂದೂ ಆದಿದೇವನೆಂದೂ ಅಜ

* ಆಶಯವೆಂದರೆ ವಾಸನೆಗಳಿರುವ ಸ್ಥಾನ; ಅದರಲ್ಲಿರುವದೆಂದರೆ ಅದಕ್ಕೆ ಸಾಕ್ಷಿಯಾಗಿರುವದೇ.

ನೆಂದೂ ವಿಭುವೆಂದೂ ಋಷಿಗಳೆಲ್ಲರೂ ಹೇಳುತ್ತಾರೆ. ದೇವರ್ಷಿಯಾದ ನಾರದನೂ ಅಸಿತದೇವಲನೂ ವ್ಯಾಸನೂ (ಹಾಗೆಂದು) ಹೇಳುತ್ತಾರೆ. ನೀನೂ (ಹಾಗೆಂದೇ) ನನಗೆ ಹೇಳುತ್ತಿರುವೆ.

[ ಭಾಷ್ಯ ]

ನೀನು ಪರಬ್ರಹ್ಮವು ಎಂದರೆ ಪರಮಾತ್ಮನು. ಪರಮಧಾಮವು, ಎಂದರೆ ಹೆಚ್ಚಿನ ಪ್ರಕಾಶವು. ಪರಮಪವಿತ್ರವು, ಎಲ್ಲಕ್ಕೂ ಹೆಚ್ಚಿನ ಪಾವನವಸ್ತುವು. ನೀನು ಶಾಶ್ವತನಾದ ಪುರುಷನೆಂದೂ ಎಂದರೆ ನಿತ್ಯನಾದ (ಪುರುಷನೆಂದೂ), ದಿವ್ಯನೆಂದೂ ಎಂದರೆ ಸ್ವರ್ಗದಲ್ಲಿರುವವನೆಂದೂ, ಆದಿದೇವನೆಂದೂ ಎಂದರೆ ಎಲ್ಲಾ ದೇವತೆಗಳಿಗೂ ಮೊದಲು ಇದ್ದವನೆಂದೂ, ಅಜನೆಂದೂ ವಿಭುವೆಂದೂ ಎಂದರೆ ವ್ಯಾಪನಶೀಲನೆಂದೂ- ಹೀಗೆಲ್ಲ ಇರುವವನೆಂದು ವಸಿಷ್ಠನೇ ಮೊದಲಾದ ಋಷಿಗಳೆಲ್ಲರೂ ಹೇಳುತ್ತಾರೆ. ದೇವರ್ಷಿಯಾದ ನಾರದನೂ, (ಹಾಗೆಂದೇ) ಹೇಳುತ್ತಾನೆ. ಮತ್ತು ಅಸಿತದೇವಲನೂ* ಹೀಗೆಂದೇ ಹೇಳುತ್ತಾನೆ . ವ್ಯಾಸನೂ (ಹಾಗೆಯೇ). ನೀನೂ ನೇರಾಗಿ ಹಾಗೆಯೇ ಹೇಳುತ್ತಿದ್ದೀಯೆ. ‖ ೧೨-೧೩ ‖

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ‖ ೧೪ ‖**

೧೪. ನೀನು ಹೇಳುವ ಇದೆಲ್ಲವನ್ನೂ ಎಲೈ ಕೇಶವನೆ, ಸತ್ಯವೆಂದೇ ತಿಳಿಯುತ್ತೇನೆ. ಏಕೆಂದರೆ ಎಲೈ ಭಗವಂತನೆ, ದೇವತೆಗಳಾಗಲಿ ದಾನವರಾಗಲಿ ನಿನ್ನ ವ್ಯಕ್ತಿಯನ್ನು ಅರಿಯರು.

[ ಭಾಷ್ಯ ]

ಈ ಮೇಲೆ ಹೇಳಿದ್ದೆಲ್ಲವನ್ನೂ ಎಂದರೆ ಋಷಿಗಳೂ ನೀನೂ ಹೇಳಿದ್ದನ್ನು ಸತ್ಯವೆಂದೇ ನಂಬುತ್ತೇನೆ. ಎಲೈ ಕೇಶವನೆ, ನೀನು ನನಗೆ ಏನೇನು ಹೇಳಿದೆಯೊ (ಇದೆಲ್ಲವೂ ನಿಜವೆಂದೇ ತಿಳಿಯುತ್ತೇನೆ); ಏಕೆಂದರೆ ಎಲೈ ಭಗವಂತನೆ, ನಿನ್ನ ವ್ಯಕ್ತಿಯನ್ನು ಎಂದರೆ ಉತ್ಪತ್ತಿಯನ್ನು ದೇವತೆಗಳಾಗಲಿ ದಾನವರಾಗಲಿ ಅರಿಯರು; ಏಕೆಂದರೆ ನೀನು (ಆ) ದೇವತೆಗಳೇ ಮುಂತಾದವರಿಗೂ ಕಾರಣನಾಗಿರುತ್ತೀಯೆ. ‖ ೧೪ ‖

ಆದ್ದರಿಂದ—

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ‖ ೧೫ ‖**

---

* ಅಸಿತದೇವಲನೆಂಬುದು ಒಬ್ಬ ಋಷಿಯ ಹೆಸರು; ಅಸಿತನೆಂದು ಬೇರೆ, ದೇವಲನೆಂದು ಬೇರೆ- ಹೀಗೆ ಇಬ್ಬರ ಹೆಸರಲ್ಲ. ಮೋ॥ ೨೭೯-೪ ನೋಡಿ.

೧೫. ಎಲೈ ಪುರುಷೋತ್ತಮನೆ, ಭೂತಭಾವನನೆ, ಭೂತೇಶನೆ, ದೇವದೇವನೆ, ಜಗತ್ಪತಿಯೆ, ನೀನೇ ನಿನ್ನಿಂದಲೇ ನಿನ್ನನ್ನು ತಿಳಿದುಕೊಂಡಿರುವೆ.

[ ಭಾಷ್ಯ ]

ಎಲೈ ಪುರುಷೋತ್ತಮನೆ, ನೀನು ಮಿಗಿಲಿಲ್ಲದ ಜ್ಞಾನ, ಐಶ್ವರ್ಯ, ಬಲ- ಮುಂತಾದ ಶಕ್ತಿಗಳುಳ್ಳ ಈಶ್ವರನೆಂಬುದನ್ನು ನೀನೇ ನಿನ್ನಿಂದಲೇ* ನಿನ್ನನ್ನು ತಿಳಿದುಕೊಂಡಿರುವೆ, ಬಲ್ಲವನಾಗಿದ್ದೀಯೆ. ಎಲೈ ಭೂತಭಾವನನೆ, ಎಂದರೆ ಭೂತಗಳನ್ನುಂಟುಮಾಡುವವನೆ, ಭೂತೇಶನೆ ಎಂದರೆ ಭೂತಗಳನ್ನು ಆಳುವವನೆ, ಎಲೈ ದೇವದೇವನೆ, ಜಗತ್ತಿಗೊಡೆಯನೆ, (ನಿನ್ನನ್ನು ಮತ್ತಾರೂ ಅರಿಯರು.) ||೧೫||

**ವಕ್ತುಮರ್ಹಸ್ಯಶೇಷೇಣ ದಿವ್ಯಾಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥**

೧೬. ನಿನ್ನ ದಿವ್ಯವಾದ ವಿಭೂತಿಗಳನ್ನು ಒಂದೂ ಬಿಡದಂತೆ ಹೇಳಬೇಕು; ಯಾವ ವಿಭೂತಿಗಳಿಂದ ಈ ಲೋಕಗಳನ್ನು ನೀನು ವ್ಯಾಪಿಸಿಕೊಂಡು ಇರುವೆಯೋ (ಅವುಗಳನ್ನು ಹೇಳುವನಾಗು).

[ ಭಾಷ್ಯ ]

ಒಂದೂ ಬಿಡದಂತೆ ಹೇಳಬೇಕು, ತಿಳಿಸಬೇಕು. ದಿವ್ಯವಾದ ನಿನ್ನ ವಿಭೂತಿಗಳುಂಟಷ್ಟೆ. ಅವುಗಳನ್ನು ಹೇಳುವನಾಗು; ಯಾವ ವಿಭೂತಿಗಳಿಂದ ಎಂದರೆ ನಿನ್ನ ಮಾಹಾತ್ಮ್ಯವನ್ನು ವಿಸ್ತರಿಸುವ ರೂಪಗಳಿಂದ ಈ ಲೋಕಗಳನ್ನು ನೀನು ಹಬ್ಬಿಕೊಂಡು ಇರುವೆಯೋ (ಅವನ್ನು ಹೇಳು). || ೧೬ ||

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋऽಸಿ ಭಗವನ್ಮಯಾ ॥ ೧೭ ॥**

೧೭. ಎಲೈ ಯೋಗಿಯೆ, ನಿನ್ನನ್ನು ಯಾವಾಗಲೂ ಚಿಂತಿಸುತ್ತಾ ನಾನು ಹೇಗೆ† ತಿಳಿದುಕೊಳ್ಳಲಿ? ಮತ್ತು ಎಲೈ ಭಗವಂತನೆ, ಯಾವ ಯಾವ ಭಾವಗಳಲ್ಲಿ ನನ್ನಿಂದ ಚಿನ್ತ್ಯನಾಗಿದ್ದೀಯೆ?

---

* ಪರಮಾತ್ಮನು ತನ್ನ ಸ್ವರೂಪಜ್ಞಾನದಿಂದಲೇ ತನ್ನನ್ನು ತಿಳಿದುಕೊಳ್ಳುತ್ತಾನೆ. ಅವನಿಗೆ ಕರಣಾದಿಗಳೊಂದೂ ಬೇಡ.

† ನಿನ್ನನ್ನು ನಾನು ಹೇಗೆ ಧ್ಯಾನಮಾಡಬೇಕು, ಯಾವ ವಸ್ತುಗಳಲ್ಲಿ ಧ್ಯಾನಮಾಡಬೇಕು? ಎಲ್ಲಾ ಜಗತ್ತಿಗೂ ನಾನೇ ಕಾರಣನೆಂದು ಭಗವಂತನು ಎಂಟನೆಯ ಶ್ಲೋಕದಲ್ಲಿ ಹೇಳಿಯೇ ಇರುತ್ತಾನಾದರೂ ಈ ಜಗತ್ತಿನಲ್ಲಿ ಯಾವ ಯಾವ ವಸ್ತುಗಳಲ್ಲಿ ಭಗವಂತನ ಧ್ಯಾನಕ್ಕೆ ಹೆಚ್ಚಿನ ಸೌಕರ್ಯವುಂಟೆಂಬುದನ್ನು ತಿಳಿಯಲು ಅರ್ಜುನನು ಈ ಪ್ರಶ್ನೆಯನ್ನು ಮಾಡಿರುತ್ತಾನೆ. 'ಹೇಗೆ ತಿಳಿದುಕೊಳ್ಳಲಿ?' ಎಂದರೆ 'ಹೇಗೆ ಭಾವನೆಮಾಡುವದು ನನಗೆ ಶ್ರೇಯಸ್ಕರ?' ಎಂಬುದೇ ಅರ್ಜುನನಭಾವವು.

[ ಭಾಷ್ಯ ]

ಎಲೈ ಯೋಗಿಯೆ, ನಿನ್ನನ್ನು ಯಾವಾಗಲೂ ಧ್ಯಾನಮಾಡುತ್ತಾ ನಾನು ಹೇಗೆ ತಿಳಿದುಕೊಳ್ಳಲಿ? ಮತ್ತು ಭಗವಂತನೆ, ಯಾವ ಯಾವ ಭಾವಗಳಲ್ಲಿ ಎಂದರೆ ವಸ್ತುಗಳಲ್ಲಿ ನಿನ್ನನ್ನು ನಾನು ಚಿಂತಿಸಬೇಕು, ಎಂದರೆ ಧ್ಯಾನಿಸಬೇಕು? ॥ ೧೭ ॥

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್॥ ೧೮ ॥**

೧೮. ಎಲೈ ಜನಾರ್ದನನೆ, ನಿನ್ನ ಯೋಗವನ್ನೂ ವಿಭೂತಿಯನ್ನೂ ವಿಸ್ತಾರವಾಗಿ ಮತ್ತೆ ಹೇಳು. ಏಕೆಂದರೆ (ಈ) ಅಮೃತವನ್ನು ಕೇಳಿಯೂ ನನಗೆ ತೃಪ್ತಿಯಿಲ್ಲ.

[ ಭಾಷ್ಯ ]

ನಿನ್ನ ಯೋಗವನ್ನೂ ಎಂದರೆ ಯೋಗದಿಂದುಂಟಾದ* ಅಸಾಧಾರಣವಾದ ಐಶ್ವರ್ಯಶಕ್ತಿಯನ್ನೂ ವಿಭೂತಿಯನ್ನೂ ಎಂದರೆ ಧ್ಯಾನಮಾಡತಕ್ಕ ವಸ್ತುಗಳ ವಿವರವನ್ನೂ ಎಲೈ ಜನಾರ್ದನನೆ– 'ಹೋಗು' ಎಂಬರ್ಥವುಳ್ಳ ಅರ್ದ್ ಎಂಬ ಧಾತುವಿನಿಂದ (ಜನಾರ್ದನನೆಂಬ ಶಬ್ದ)ರೂಪವಾಗಿದೆ. ದೇವತೆಗಳಿಗೆ ವಿರೋಧಿಗಳಾಗಿರುವ ಅಸುರಜನಗಳನ್ನು ನರಕವೇ ಮುಂತಾದ ಸ್ಥಾನಗಳಿಗೆ ಕಳುಹಿಸುವವರಿಂದ ಜನಾರ್ದನನೆಂದು ಹೆಸರು; ಅಥವಾ ಅಭ್ಯುದಯ, ನಿಶ್ಶ್ರೇಯಸ- ಎಂಬ ಪುರುಷಾರ್ಥಪ್ರಯೋಜನಗಳಿಗಾಗಿ ಎಲ್ಲಾ ಜನರೂ (ಈತನನ್ನೇ) ಬೇಡುವರೆಂಬ ಕಾರಣದಿಂದಾದರೂ (ಜನಾರ್ದನನೆಂಬ† ಹೆಸರು ಬಂದಿದೆ ಎಂದು ಹೇಳಬಹುದಾಗಿದೆ).–(ಎಲೈ ಜನಾರ್ದನನೆ,) ಹಿಂದೆ ನೀನು ಹೇಳಿಯೇ ಇರುತ್ತೀಯಾದರೂ ಮತ್ತೊಂದು ಸಲ ಹೇಳು; ಏಕೆಂದರೆ ನಿನ್ನ ಮುಖದಿಂದ ಹರಿದುಬರುವ ವಾಕ್ಯಾಮೃತವನ್ನು (ಎಷ್ಟು) ಕೇಳಿದರೂ ನನಗೆ ತೃಪ್ತಿಯಾಗುವ (ಹಾಗಿ)ಲ್ಲ.

## ಭಗವಂತನು ತನ್ನ ವಿಭೂತಿಗಳನ್ನು ವಿಸ್ತರಿಸಿದ್ದು

**ಶ್ರೀಭಗವಾನುವಾಚ—**
**ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥ ೧೯ ॥**

† ೭ನೆಯ ಶ್ಲೋಕದ ಭಾಷ್ಯವನ್ನು ನೋಡಿ.

* ಅರ್ದ್ ಎಂಬ ಧಾತುವಿಗೆ ಹೋಗು, ಬೇಡು- ಎಂಬೆರಡು ಅರ್ಥಗಳಿರುವವು. ಜನರು ಕೆಟ್ಟ ಕರ್ಮಗಳನ್ನು ಮಾಡಿದರೆ ನರಕಾದಿಗತಿಗಳನ್ನು ಪಡೆಯುವಂತೆ ಮಾಡುವವನೂ ಪ್ರವೃತ್ತಿನಿವೃತ್ತಿ ಧರ್ಮಗಳನ್ನನುಸರಿಸಿ ಭಗವಂತನನ್ನು ಶರಣುಹೊಕ್ಕಗೆ ಅಭ್ಯುದಯನಿಶ್ಶ್ರೇಯಸಗಳೆಂಬ ಫಲಗಳನ್ನು ಕೊಡುವವನೂ ಪರಮಾತ್ಮನೇ ಎಂಬುದನ್ನು ಜನಾರ್ದನನೆಂಬ ಹೆಸರು ಸೂಚಿಸುತ್ತದೆಯೆಂದು ಭಾವ.

೧೯. ಅಯ್ಯ, ಕುರುಶ್ರೇಷ್ಠನೆ, ಈಗ ದಿವ್ಯವಾದ ನನ್ನ ವಿಭೂತಿಗಳನ್ನು ಮುಖ್ಯತೆಯಿಂದ ತಿಳಿಸುವೆನು. ನನ್ನ ವಿಸ್ತಾರಕ್ಕೆ ಕೊನೆಯಿಲ್ಲ.

[ ಭಾಷ್ಯ ]

ಅಯ್ಯ, ಕುರುಶ್ರೇಷ್ಠನೆ, ಈಗ ನಿನಗೆ ನನ್ನ ದಿವ್ಯವಾದ ವಿಭೂತಿಗಳುಂಟಷ್ಟೆ, ಅವುಗಳನ್ನು ಹೇಳುತ್ತೇನೆ. ಪ್ರಾಧಾನ್ಯದಿಂದ ಹೇಳುತ್ತೇನೆ, ಎಂದರೆ ಎಲ್ಲೆಲ್ಲಿ ಯಾವ ಯಾವ ವಿಭೂತಿಯು ಮುಖ್ಯವೋ, ಆ ಮುಖ್ಯವಾದದ್ದನ್ನು ಮುಖ್ಯವಾಗಿ ಟ್ಟುಕೊಂಡು ಹೇಳುವೆನು ಆದರೆ ಅವುಗಳನ್ನು ಒಂದೂ ಬಿಡದಂತೆ ಹೇಳುವದಕ್ಕೆ ನೂರು ವರ್ಷಗಳಾದರೂ ಆಗಲಾರದು; ಏಕೆಂದರೆ ನನ್ನ ವಿಸ್ತಾರಕ್ಕೆ ಕೊನೆಯಿಲ್ಲ, ಎಂದರೆ ನನ್ನ ವಿಭೂತಿಗಳು (ಇಷ್ಟೇ ಎಂಬ ಲೆಕ್ಕವಿಲ್ಲ)ವೆಂದರ್ಥ. ॥ ೧೯ ॥

ಇವುಗಳಲ್ಲಿ ಮೊಟ್ಟಮೊದಲು (ಈ ವಿಭೂತಿಯನ್ನು) ಕೇಳು :—

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥ ೨೦ ॥**

೨೦. ಎಲೈ ಗುಡಾಕೇಶನೆ, ಸರ್ವಭೂತಗಳ ಆಶಯದಲ್ಲಿರುವ ಆತ್ಮನು ನಾನು; ಭೂತಗಳಿಗೆ ಆದಿಯೂ ಮಧ್ಯವೂ ಕೊನೆಯೂ ನಾನೇ.

[ ಭಾಷ್ಯ ]

ನಾನು ಆತ್ಮನು, ಎಂದರೆ ಎಲ್ಲರೊಳಗಿನ ಆತ್ಮನು. ಗುಡಾಕೇಶನೆ,– ಗುಡಾಕಾ ಎಂದರೆ ನಿದ್ರೆಯು, ಅದರ ಈಶನೆಂದರೆ ಒಡೆಯನು : ನಿದ್ರೆಯನ್ನು ಗೆದ್ದವನು ಎಂದರ್ಥ. ಅಥವಾ (ಗುಡಾಕೇಶನೆಂದರೆ) ದಟ್ಟವಾದ ತಲೆಗೂದಲುಳ್ಳವನು ಎಂದರ್ಥ.– ಸರ್ವಭೂತಗಳ ಆಶಯದಲ್ಲಿರುವ ಎಂದರೆ ಎಲ್ಲಾ ಪ್ರಾಣಿಗಳ ಹೃದಯದೊಳಗಿರುವ ಆತ್ಮನು, (ಅವರವರೊಳಗಿನ ಆತ್ಮನು ಎಂದು) ಯಾವಾಗಲೂ ಚಿಂತಿಸಬೇಕು.* ಹೀಗೆ ಚಿಂತಿಸುವದಕ್ಕೆ ಕೈಲಾಗದವನು ಇನ್ನುಮುಂದೆ ಹೇಳುವ ವಸ್ತುಗಳಲ್ಲಿ ನನ್ನನ್ನು ಧ್ಯಾನಮಾಡಬೇಕು; ಏಕೆಂದರೆ ನಾನೇ (ಎಲ್ಲಾ) ಭೂತಗಳಿಗೂ ಆದಿಯು, ಕಾರಣವು; ಮಧ್ಯವು ಎಂದರೆ ನಿಲ್ಲುವದಕ್ಕೆ ಆಶ್ರಯನು; ಮತ್ತು ಕೊನೆಯು ಎಂದರೆ ಅಡಗುವ ಸ್ಥಾನವು. ॥ ೨೦ ॥

ನನ್ನನ್ನು ಹೀಗೂ ಚಿಂತಿಸಬಹುದು :—

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

---

* ಇಲ್ಲಿ ವಿಭೂತಿಗಳನ್ನು ಹೇಳಿರುವದು ಧ್ಯಾನಕ್ಕಾಗಿ ; ಸರ್ವರಲ್ಲಿಯೂ ಒಬ್ಬ ಈಶ್ವರನೇ ಆತ್ಮನಾಗಿರುವನೆಂದು ಧ್ಯಾನಿಸುವದು ಇಂಥ ಧ್ಯಾನಗಳಲ್ಲಿ ಹೆಚ್ಚಿನದು.

೨೧. ನಾನು ಆದಿತ್ಯರಲ್ಲಿ ವಿಷ್ಣುವು, ಜ್ಯೋತಿಸ್ಸುಗಳಲ್ಲಿ ರಶ್ಮಿಗಳಿಂದ ಕೂಡಿದ ಸೂರ್ಯನು, ಮರುತ್ತರಲ್ಲಿ ಮರೀಚಿಯು, ನಕ್ಷತ್ರಗಳಲ್ಲಿ ನಾನು ಚಂದ್ರನು

[ ಭಾಷ್ಯ ]

ಹನ್ನೆರಡು ಜನ ಆದಿತ್ಯರಷ್ಟೆ*; ಅವರಲ್ಲಿ ವಿಷ್ಣುವೆಂಬ ಆದಿತ್ಯನು ನಾನು. ಜ್ಯೋತಿಗಳಲ್ಲಿ ಎಂದರೆ ಪದಾರ್ಥಗಳನ್ನು ಬೆಳಗುವವರಲ್ಲಿ ಅಂಶುಮಂತನಾದ ರವಿಯು (ನಾನು), ಎಂದರೆ ಕಿರಣಗಳಿಂದ ಕೂಡಿದ ಸೂರ್ಯನು ನಾನು. ಮರುತ್ತರಲ್ಲಿ ಮರುದ್ಗಣಗಳೆಂಬ ದೇವತೆಗಳಲ್ಲಿ ಮರೀಚಿಯೆಂಬವನು ನಾನು. ನಕ್ಷತ್ರಗಳಲ್ಲಿ† (ನಾನು) ಚಂದ್ರನು. ॥ ೨೧ ॥

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇನ್ದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

೨೨. ವೇದಗಳಲ್ಲಿ ಸಾಮವೇದವಾಗಿರುವೆನು; ದೇವತೆಗಳಲ್ಲಿ ವಾಸವನಾಗಿರುವೆನು; ಇಂದ್ರಿಯಗಳಲ್ಲಿ ಮನಸ್ಸಾಗಿರುವೆನು, ಭೂತಗಳಲ್ಲಿ ಚೇತನವಾಗಿರುವೆನು.

[ ಭಾಷ್ಯ ]

ವೇದಗಳಲ್ಲಿ ನಾನು ಸಾಮವೇದವಾಗಿರುವೆನು ರುದ್ರ, ಆದಿತ್ಯ- ಮೊದಲಾದ ದೇವತೆಗಳಲ್ಲಿ ವಾಸವನು, ಎಂದರೆ ಇಂದ್ರನಾಗಿರುವೆನು. ಮತ್ತು ಕಣ್ಣೇ ಸಿಂದ್ರಿಯವೇ ಮುಂತಾದ ಹನ್ನೊಂದು‡ ಇಂದ್ರಿಯಗಳಲ್ಲಿ ಸಂಕಲ್ಪವಿಕಲ್ಪರೂಪವಾದ ಮನಸ್ಸಾಗಿರುವೆನು. ಭೂತಗಳಲ್ಲಿ ಚೇತನವಾಗಿರುವೆನು,– ದೇಹೇಂದ್ರಿಯಸಮೂಹದಲ್ಲಿ ಯಾವಾಗಲೂ ತೋರಿಕೊಂಡಿರುವ ಬುದ್ಧಿವೃತ್ತಿಯು ಚೇತನವು-(ಆ ಚೇತನವಾಗಿರುವೆನು). ॥ ೨೨ ॥

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥**

---

* ಭಗ, ಅಂಶ, ಅರ್ಯಮಾ, ಮಿತ್ರ, ವರುಣ, ಸವಿತೃ, ಧಾತ, ವಿವಸ್ವಂತ, ತ್ವಷ್ಟೃ, ಪೂಷ, ಇಂದ್ರ, ವಿಷ್ಣು– ಇವರು ದ್ವಾದಶಾದಿತ್ಯರು (ಶಾಂ. ಮೋ. ೨೦೮-೧೬); ಅಂಶ, ಭಗ, ಮಿತ್ರ, ವರುಣ, ಧಾತ, ಅರ್ಯಮಾ, ಜಯಂತ, ಭಾಸ್ಕರ, ತ್ವಷ್ಟೃ, ಪೂಷ, ಇಂದ್ರ, ವಿಷ್ಣು (ಅನು. ೧೫೦-೧೫).

† ಇಲ್ಲಿ ನಕ್ಷತ್ರಗಳೆಂದರೆ ಆಕಾಶದಲ್ಲಿ ರಾತ್ರಿಯಲ್ಲಿ ತೋರುವ ಜ್ಯೋತಿಗಳು.

‡ ಮನಸ್ಸು ಇಂದ್ರಿಯವಲ್ಲವೆಂದು ಹೇಳುವದು ಆಚಾರ್ಯರಿಗೆ ಸಮ್ಮತವಲ್ಲವೆಂದು ಇದರಿಂದ ತೋರುತ್ತದೆ. ಬ್ರ॥ ಸೂ॥ ಭಾ॥ ೨-೪-೬ ನೋಡಿ.

೨೩. ರುದ್ರರಲ್ಲಿ ಶಂಕರನಾಗಿರುವೆನು ; ಯಕ್ಷರಾಕ್ಷಸರಲ್ಲಿ ವಿತ್ತೇಶನು ; ವಸುಗಳಲ್ಲಿ ಪಾವಕನು ; ಪರ್ವತಗಳಲ್ಲಿ ಮೇರುವು.

[ ಭಾಷ್ಯ ]

ಹನ್ನೊಂದು ಜನ ರುದ್ರರಲ್ಲಿ* ನಾನು ಶಂಕರನು; ಯಕ್ಷರು, ರಾಕ್ಷಸರು-ಇವರುಗಳಲ್ಲಿ ನಾನು ವಿತ್ತೇಶನು, (ಹಣಕ್ಕೆಲ್ಲ ಅಧಿಪತಿಯಾದ) ಕುಬೇರನು ; ಎಂಟು ಜನ† ವಸುಗಳಲ್ಲಿ ನಾನು ಪಾವಕನು ಎಂದರೆ ಅಗ್ನಿಯು ; ಶಿಖರಿಗಳಲ್ಲಿ, (ಎಂದರೆ ಕುಲ)ಪರ್ವತಗಳಲ್ಲಿ ಮೇರು(ಪರ್ವತವು.) ॥ ೨೩ ॥

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕನ್ದಃ ಸರಸಾಮಸ್ಮಿ ಸಾಗರಃ ॥ ೨೪ ॥**

೨೪. ಎಲೈ ಪಾರ್ಥನೆ, ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೆಂದು ತಿಳಿ. ಸೇನಾನಾಯಕರಲ್ಲಿ ನಾನು ಸ್ಕಂದನು ; ಸರೋವರಗಳಲ್ಲಿ ಸಾಗರವಾಗಿರುತ್ತೇನೆ.

[ ಭಾಷ್ಯ ]

ಎಲೈ ಪಾರ್ಥನೆ, ಪುರೋಹಿತರಲ್ಲಿ ಎಂದರೆ ರಾಜರಿಗೆ ಪುರೋಹಿತರಾಗಿರುವವರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೆಂದು ತಿಳಿ. ಏಕೆಂದರೆ ಅವನು ಇಂದ್ರನಿಗೆ (ಪುರೋಹಿತನಾ)ದ್ದರಿಂದ ಮುಖ್ಯ ಪುರೋಹಿತನಾಗಿರುವನು. ಸೇನಾನಾಯಕರಲ್ಲಿ ಎಂದರೆ ಸೇನಾಪತಿಗಳಲ್ಲಿ ನಾನು ದೇವತೆಗಳ ಸೇನಾಪತಿಯಾದ ಸ್ಕಂದನು. ಸರಸ್ಸುಗಳಲ್ಲಿ, ಎಂದರೆ ದೇವತೆಗಳು ಮಾಡಿರುವ‡ ಸರೋವರಗಳಲ್ಲಿ ನಾನು ಸಾಗರನಾಗಿರುವೆನು. ॥ ೨೪ ॥

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥೨೫॥**

೨೫. ಮಹರ್ಷಿಗಳಲ್ಲಿ ಭೃಗುವು ನಾನು. ಮಾತುಗಳಲ್ಲಿ ಒಂದಕ್ಷರವು ನಾನು. ಯಜ್ಞಗಳಲ್ಲಿ ಜಪಯಜ್ಞವಾಗಿರುವೆನು. ಸ್ಥಾವರಗಳಲ್ಲಿ ಹಿಮಾಲಯನು.

---

* ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಅಪರಾಜಿತ, ಋತ, ಪಿತೃರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಹವನ, ಈಶ್ವರ (ಅನು. ೧೫೦-೧೩). ಇಲ್ಲಿ ಶಂಕರನೆಂಬ ಹೆಸರು ಯಾರದೋ ತಿಳಿಯದು.

† ಧರ, ಧ್ರುವ, ಸೋಮ, ಸಾವಿತ್ರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ (ಅನು ೧೫೦-೧೬).

‡ ಯಾರೂ ಅಗೆಯದೆ ತಾನೇ ಆಗಿರುವ.

[ ಭಾಷ್ಯ ]

ಮಹರ್ಷಿಗಳಲ್ಲಿ ಭೃಗುವು ನಾನು. ಪದರೂಪವಾಗಿರುವ ಮಾತುಗಳಲ್ಲಿ ಒಂದಕ್ಷರವು ಎಂದರೆ ಓಂಕಾರವು ನಾನು. ಯಜ್ಞಗಳಲ್ಲಿ ಜಪಯಜ್ಞವಾಗಿರುವೆನು*. ಸ್ಥಾವರಗಳಲ್ಲಿ ಎಂದರೆ ನಿಂತಿರುವ ವಸ್ತುಗಳಲ್ಲಿ ನಾನು ಹಿಮಾಲಯ ಪರ್ವತವು. ॥ ೨೫ ॥

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗನ್ಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

೨೬. ವೃಕ್ಷಗಳೆಲ್ಲೆಲ್ಲ ಅಶ್ವತ್ಥವು ; ಮತ್ತು ದೇವರ್ಷಿಗಳಲ್ಲಿ ನಾರದನು ; ಗಂಧರ್ವರಲ್ಲಿ ಚಿತ್ರರಥನು ; ಸಿದ್ಧರಲ್ಲಿ ಕಪಿಲಮುನಿಯು.

[ ಭಾಷ್ಯ ]

ಮರಗಳೆಲ್ಲೆಲ್ಲ ಅರಳಿಯ ಮರವು (ನಾನು). ದೇವರ್ಷಿಗಳಲ್ಲಿ– ದೇವತೆಗಳೂ ಆಗಿದ್ದು ಮಂತ್ರಗಳನ್ನೂ ಕಂಡುಹಿಡಿದು ಋಷಿಗಳಾದವರು ದೇವರ್ಷಿಗಳು ; ಅವರಲ್ಲಿ- ನಾರದನಾಗಿರುವೆನು. ಗಂಧರ್ವರಲ್ಲಿ ಚಿತ್ರರಥನೆಂಬ ಗಂಧರ್ವನಾಗಿರುವೆನು. ಸಿದ್ಧರಲ್ಲಿ ಎಂದರೆ ಹುಟ್ಟುತ್ತಲೇ† ಹೆಚ್ಚಿನ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ- ಇವುಗಳನ್ನು ಪಡೆದವರಲ್ಲಿ ಕಪಿಲಮುನಿಯು (ನಾನು). ॥ ೨೬ ॥

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭ ॥**

೨೭. ಕುದುರೆಗಳಲ್ಲಿ ಅಮೃತದಲ್ಲಿ ಹುಟ್ಟಿದ ಉಚ್ಚೈಃಶ್ರವಸ್ಸೆಂದು ನನ್ನನ್ನು ತಿಳಿ. ಗಜೇಂದ್ರರಲ್ಲಿ ಐರಾವತನೆಂದೂ ನರರಲ್ಲಿ ನರಾಧಿಪನೆಂದೂ (ತಿಳಿ.)

[ ಭಾಷ್ಯ ]

ಕುದುರೆಗಳಲ್ಲಿ ಉಚ್ಚೈಃಶ್ರವಸ್ಸು, ಉಚ್ಚೈಃಶ್ರವಸ್ಸೆಂಬುದು ಕುದುರೆಗಳಲ್ಲೆಲ್ಲ ಶ್ರೇಷ್ಠವಾದದ್ದು ; ಅದು ಅಮೃತದಿಂದ ಹುಟ್ಟಿದ್ದು ಎಂದರೆ ಅಮೃತಕ್ಕಾಗಿ (ಸಮುದ್ರವನ್ನು) ಕಡೆದಾಗ ಹುಟ್ಟಿದ್ದು. ಅದು ನಾನೆಂದು ತಿಳಿ. ಐರಾವತವೆಂಬುದು ಇರಾವತಿಯ‡ ಮಗನು ; ಗಜೇಂದ್ರರಲ್ಲಿ ಎಂದರೆ ಶ್ರೇಷ್ಠವಾದ ಆನೆ

---

* ಹಿಂಸೆಯೇ ಮುಂತಾದವುಗಳಿಲ್ಲದ್ದರಿಂದ ಜಪಯಜ್ಞವು ಯಜ್ಞಗಳಲ್ಲಿ ಶ್ರೇಷ್ಠವೆಂದು (ಆ॥) ಟೀಕಾಕಾರರು ಬರೆದಿದಾರೆ. ಮಿಕ್ಕದ್ದನ್ನು ಮಾಡಲಿ, ಬಿಡಲಿ- ಜಪದಿಂದಲೇ ಬ್ರಾಹ್ಮಣ್ಯವು ಸಿದ್ಧಿಯಾಗುವದೆಂದು ಮನುವು ಹೇಳಿರುತ್ತಾನೆ.

† ಪೂರ್ವಜನ್ಮಸಂಸ್ಕಾರದಿಂದ.

‡ ಇದು ಒಂದು ನದಿ.

ಗಳಲ್ಲಿ ಆ (ಐರಾವತ)ವು 'ನಾನೆಂದು ತಿಳಿ' ಎಂದು ಸೇರಿಸಿಕೊಳ್ಳಬೇಕು. ನರರಲ್ಲಿ ನರಾಧಿಪನೆಂದು, ಮನುಷ್ಯರಲ್ಲಿ ರಾಜನೆಂದು ನನ್ನನ್ನು ತಿಳಿಯುವವನಾಗು. ॥ ೨೭ ॥

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕನ್ದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

೨೮. ಆಯುಧಗಳಲ್ಲಿ ನಾನು ವಜ್ರವು, ಧೇನುಗಳಲ್ಲಿ ಕಾಮಧೇನು ವಾಗಿರುವೆನು. ಮತ್ತು ಪ್ರಜೋತ್ಪಾದಕನಾದ ಕಂದರ್ಪನಾಗಿರುವೆನು, ಸರ್ಪ ಗಳಲ್ಲಿ ವಾಸುಕಿಯಾಗಿರುವೆನು.

[ ಭಾಷ್ಯ ]

ಆಯುಧಗಳಲ್ಲಿ ದಧೀಚಿಯ ಎಲುಬಿನಿಂದ ಉಂಟಾದ ವಜ್ರವು ನಾನು. ಧೇನುಗಳಲ್ಲಿ ಎಂದರೆ ಹಾಲುಕೊಡುವ ಪ್ರಾಣಿಗಳಲ್ಲಿ ಕಾಮಧೇನು, ಎಂದರೆ ವಸಿಷ್ಠನಿಗೆ ಸಕಲ ಕಾಮಗಳನ್ನೂ ಕರೆದಿರುವ ಕಾಮಧೇನು, ಅಥವಾ ಸಾಮಾನ್ಯ ವಾದ ಕಾಮಧೇನುವಾಗಿರುವೆನು. ಪ್ರಜೋತ್ಪಾದಕನಾದ ಎಂದರೆ ಪ್ರಜೆಗಳ ನ್ನುಂಟುಮಾಡುವ ಕಂದರ್ಪನಾಗಿರುವೆನು, ಎಂದರೆ ಕಾಮನಾಗಿರುತ್ತೇನೆ. ಸರ್ಪಗಳಲ್ಲಿ ಎಂದರೆ ಬಗೆಬಗೆಯ ಹಾವುಗಳಲ್ಲಿ ವಾಸುಕಿಯೆಂಬ ಸರ್ಪರಾಜ ನಾಗಿರುವೆನು. ॥ ೨೮ ॥

**ಅನನ್ತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥ ೨೯ ॥**

೨೯. ಮತ್ತು ನಾಗಗಳಲ್ಲಿ ಅನಂತನಾಗಿರುವೆನು, ಯಾದಸ್ಸುಗಳಲ್ಲಿ ವರುಣನು ನಾನು, ಪಿತೃಗಳಲ್ಲಿ ಅರ್ಯಮನಾಗಿರುವೆನು ಮತ್ತು ಸಂಯಮಿ ಗಳಲ್ಲಿ ಯಮನು ನಾನು.

[ ಭಾಷ್ಯ ]

ಮತ್ತು ಬಗೆಬಗೆಯ ನಾಗರುಗಳಲ್ಲಿ ಅನಂತನೆಂಬ ನಾಗರಾಜನಾಗಿರುವೆನು. ಜಲಚರರುಗಳಲ್ಲಿ ಜಲದೇವತೆಗಳ ರಾಜನಾದ ವರುಣನು ನಾನು. ಪಿತೃಗಳಲ್ಲಿ ಅರ್ಯಮನೆಂಬ ಪಿತೃರಾಜನಾಗಿರುವೆನು. ಸಂಯಮಿಗಳಲ್ಲಿ, ಸಂಯಮವನ್ನು ಮಾಡುವವರಲ್ಲಿ (ಎಂದರೆ ಆಳುವವರಲ್ಲಿ) ಯಮನು ನಾನು. ॥ ೨೯ ॥

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥೩೦॥**

೩೦. ಮತ್ತು ದೈತ್ಯರಲ್ಲಿ ಪ್ರಹ್ಲಾದನಾಗಿರುವೆನು, ಎಣಿಸುವವರಲ್ಲಿ ಕಾಲನು ನಾನು. ಮೃಗಗಳಲ್ಲಿ ಮೃಗೇಂದ್ರನು ನಾನು. ಪಕ್ಷಿಗಳಲ್ಲಿ ವೈನತೇ ಯನು (ನಾನು).

[ ಭಾಷ್ಯ ]

ಮತ್ತು ದೈತ್ಯರಲ್ಲಿ ಎಂದರೆ ದಿತಿಯ ವಂಶದಲ್ಲಿ ಹುಟ್ಟಿದವರಲ್ಲಿ ಪ್ರಹ್ಲಾದನೆಂಬುವನು ನಾನೇ. ಕಲನೆಮಾಡುವವರಲ್ಲಿ ಎಂದರೆ ಎಣಿಕೆಮಾಡುವವರಲ್ಲಿ ನಾನು ಕಾಲನು.* ಮೃಗಗಳಲ್ಲಿ ಮೃಗೇಂದ್ರನು ಎಂದರೆ ಹುಲಿಯು ಅಥವಾ ಸಿಂಹವು ನಾನು. ಪಕ್ಷಿಗಳಲ್ಲಿ ಎಂದರೆ ರೆಕ್ಕೆಯ ಪ್ರಾಣಿಗಳಲ್ಲಿ ವೈನತೇಯನು, ಎಂದರೆ ವಿನತೆಯ ಮಗನಾದ ಗರುಡನು. ॥ ೩೦ ॥

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

೩೧. ಪಾವನಮಾಡುವವರಲ್ಲಿ ಪವನನಾಗಿರುವೆನು, ಶಸ್ತ್ರಧಾರಿಗಳಲ್ಲಿ ನಾನು ರಾಮನು, ಜಲಚರಗಳಲ್ಲಿ ನಾನು ಮಕರವಾಗಿರುವೆನು, ನದಿಗಳಲ್ಲಿ ಜಾಹ್ನವಿಯಾಗಿರುವೆನು.

[ ಭಾಷ್ಯ ]

ಪಾವನಮಾಡುವವರಲ್ಲಿ, ಎಂದರೆ ಶುದ್ಧಿಗೊಳಿಸುವವರಲ್ಲಿ ಪವನನಾಗಿರುವೆನು, ಎಂದರೆ ವಾಯುವಾಗಿದ್ದೇನೆ. ಶಸ್ತ್ರಧಾರಿಗಳಲ್ಲಿ ಶಸ್ತ್ರಗಳನ್ನು ಹಿಡಿದು (ಯುದ್ಧಮಾಡುವ ವೀರರಲ್ಲಿ) ನಾನು ದಶರಥಪುತ್ರನಾದ ರಾಮನು. ಮೀನು ಮುಂತಾದ ಜಲಚರಗಳಲ್ಲಿ ಮೊಸಳೆಯ† ಜಾತಿಗೆ ಸೇರಿದ ಪ್ರಾಣಿಯು ನಾನು. ಹರಿಯುವ ನದಿಗಳಲ್ಲಿ ಜಾಹ್ನವಿಯು ಎಂದರೆ ಗಂಗೆಯಾಗಿರುತ್ತೇನೆ. ॥ ೩೧ ॥

**ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

೩೨. ಎಲೈ ಅರ್ಜುನನೆ, ಸೃಷ್ಟಿಗಳ ಆದಿಯೂ ಅಂತವೂ ಮಧ್ಯವೂ ನಾನು. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯು (ನಾನು), ವಾದಮಾಡುವವರಿಗೆ ವಾದವು ನಾನು.

[ ಭಾಷ್ಯ ]

ಸೃಷ್ಟಿಗಳ ಆದಿಯೂ ಅಂತವೂ ಮಧ್ಯವೂ ನಾನೇ ; ಎಲೈ ಅರ್ಜುನನೆ, ಹುಟ್ಟುವದು, ಇರುವದು, ಅಡಗುವದು- ಇವುಗಳೆಲ್ಲವೂ ನಾನೆ. ಜೀವರು

---

* ಕಾಲವು ಮಿಕ್ಕದ್ದೆಲ್ಲದರ ಲೆಕ್ಕವನ್ನೂ ಹಚ್ಚುವದರಿಂದ ಅನಂತವೆನಿಸುವಂತೆ ಪರಮಾತ್ಮನು ಕಾಲಾದಿಗಳನ್ನೂ ಅಳೆಯುವದರಿಂದ ಅನಂತನಾಗಿರುವನು. ಆದ್ದರಿಂದ ಮಿಕ್ಕೆಲ್ಲವನ್ನೂ ಲೆಕ್ಕಮಾಡುವ ಕಾಲವು ಪರಮಾತ್ಮನ ವಿಭೂತಿಯು.

† ೨೯ನೆಯ ಶ್ಲೋಕದಲ್ಲಿ ಜಲಜಂತುಗಳಿಗೆ ಒಡೆಯನಾದ ವರುಣನನ್ನು ಪರಮಾತ್ಮವಿಭೂತಿಯಾಗಿ ಹೇಳಿತ್ತು; ಇಲ್ಲಿ ಮೀನುಜಾತಿಯ ಪ್ರಾಣಿಗಳಲ್ಲಿ ದೊಡ್ಡದಾದ ಮಕರವನ್ನೂ ಒಂದು ವಿಭೂತಿಯೆಂದು ಹೇಳಿದೆ.

ಗಳಿಂದ ಕೂಡಿದ ಭೂತಗಳಿಗೆ ಮಾತ್ರ ಆದಿಯೂ ಅಂತವೂ ನಾನೇ ಎಂದು ಮೊದಲು (೧೦–೨೦) ಹೇಳಿತ್ತು, ಈಗ ಒಟ್ಟು ಸೃಷ್ಟಿಗೇ* (ಆದಿಯೂ ಅಂತವೂ ನಾನು) ಎಂದು ಹೇಳಿದೆ ಎಂಬುದೇ (ಇವೆರಡು ವಾಕ್ಯಗಳಿಗೂ ಇರುವ) ಭೇದವು.

ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯಾಗಿರುವೆನು, ಮೋಕ್ಷವನ್ನುಂಟುಮಾಡು ವದರಿಂದ (ಈ ವಿದ್ಯೆಯೇ ವಿದ್ಯೆಗಳಲ್ಲೆಲ್ಲ) ಮುಖ್ಯವಾದದ್ದು.† (ಅದು ನಾನೇ) ಆಗಿರುವೆನು. ವಾದಮಾಡುವವರಿಗೆ ವಾದವೇ ಮುಖ್ಯವು, ಏಕೆಂದರೆ (ವಾದವು) ವಿಷಯವನ್ನು ನಿರ್ಣಯಮಾಡುವದಕ್ಕೆ ಕಾರಣವಾಗಿರುವದು ; ಆದ್ದರಿಂದ ಅದು ನಾನಾಗಿರುವೆನು. ಇಲ್ಲಿ 'ವಾದಮಾಡುವವರಿಗೆ' ಎಂದು ಹೇಳುವ ಮೂಲಕ ಚರ್ಚೆಯ ಭೇದಗಳಾದ ವಾದ, ಜಲ್ಪ, ವಿತಂಡಾ‡- ಎಂಬ (ಮೂರು) ಬಗೆ ಗಳನ್ನೇ ತೆಗೆದುಕೊಂಡಿರುತ್ತದೆ.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩ ॥**

೩೩. ಅಕ್ಷರಗಳಲ್ಲಿ ಅಕಾರನಾಗಿರುವೆನು ; ಸಮಾಸಗಳ ಗುಂಪಿನಲ್ಲಿ ನಾನು ದ್ವಂದ್ವ(ಸಮಾಸವು) ; ನಾನೇ ಅಕ್ಷಯವಾದ ಕಾಲನು ; ವಿಶ್ವತೋಮುಖ ನಾದ ಧಾತನು ನಾನು.

[ ಭಾಷ್ಯ ]

ಅಕ್ಷರಗಳಲ್ಲಿ, ವರ್ಣಗಳಲ್ಲಿ, ಅಕಾರವೆಂಬ§ ವರ್ಣವಾಗಿರುತ್ತೇನೆ. ಸಾಮಾ ಸಿಕದಲ್ಲಿ ಎಂದರೆ ಸಮಾಸಗಳ ಗುಂಪಿನಲ್ಲಿ ನಾನು ದ್ವಂದ್ವವು||. ಮತ್ತು ನಾನು

---

* ಸೃಷ್ಟಿಗಳು ಲೆಕ್ಕವಿಲ್ಲದಷ್ಟಿರುವದರಿಂದ ಮೂಲದಲ್ಲಿ 'ಸೃಷ್ಟಿಗಳು' ಎಂದು ಬಹುವಚನ ವನ್ನು ಪಯೋಗಿಸಿದೆ. ಸೃಷ್ಟಿಮಾತ್ರಕ್ಕೇ ಪರಮಾತ್ಮನು ಆಧಾರನೆಂದು ಭಾವ.

† ಮಿಕ್ಕ ವಿದ್ಯೆಗಳು ವ್ಯವಹಾರದ ತಿಳಿವಳಿಕೆಯನ್ನುಂಟುಮಾಡಿದರೂ ಸಂಸಾರಬಂಧಕ್ಕೆ ಕಾರಣವಾದ ಅವಿದ್ಯೆಯನ್ನು ಕಳೆಯಲಾರವಾದ್ದರಿಂದ ಅವುಗಳಿಗೆ ವಿದ್ಯೆಯೆಂಬ ಹೆಸರು ಮುಖ್ಯ ವೃತ್ತಿಯಿಂದ ಒಪ್ಪುವದಿಲ್ಲವೆಂದು ಭಾವ.

‡ ತತ್ತ್ವವನ್ನು ನಿರ್ಣಯಮಾಡಬೇಕೆಂದು ಮಾಡುವ ಚರ್ಚೆಗೆ 'ವಾದ'ವೆಂದು ಹೆಸರು ; ಎದು ರಾಳಿಯನ್ನು ಗೆದ್ದು ತನ್ನ ಪಕ್ಷವನ್ನು ಹೆಚ್ಚಿನದೆಂದು ತೋರಿಸಬೇಕೆಂಬ ಬಯಕೆಯಿಂದ ಮಾಡುವ ಚರ್ಚೆಗೆ 'ಜಲ್ಪ'ವೆಂದು ಹೆಸರು ; ತನ್ನ ಪಕ್ಷವು ಇಂಥದ್ದೆಂಬ ನಿರ್ಣಯವನ್ನು ಮಾಡದೆ ಮತ್ತೊಬ್ಬರ ಪಕ್ಷವನ್ನು ಖಂಡನೆಮಾಡುವ ಉದ್ದೇಶದಿಂದಲೇ ಮಾಡುವ ಚರ್ಚೆಗೆ 'ವಿತಂಡಾ' ಎಂದು ಹೆಸರು.

§ ಅಕಾರವು ಎಲ್ಲಾ ಅಕ್ಷರಗಳಲ್ಲಿಯೂ ಸೇರಿಕೊಂಡೇ ಇರುವದೆಂದು ಶ್ರುತಿವಾದ (ಐ. ಆ.) ಗಂಟಲುತೆಗೆಯದೆ ಯಾವ ವರ್ಣವೂ ಹುಟ್ಟದು ; ತೆಗೆದ ಮಾತ್ರದಿಂದ ಅಕಾರವು ಹುಟ್ಟುವದು.

|| ದ್ವಂದ್ವಸಮಾಸದಲ್ಲಿ ಹಿಂದುಮುಂದಿನ ಎರಡು ಶಬ್ದಗಳ ಅರ್ಥವೂ ಮುಖ್ಯವಾಗಿರುವದು.

ಅಕ್ಷಯವಾದ ಎಂದರೆ ಸವೆಯದ ಕಾಲವು ಎಂದರೆ ಎಲ್ಲರಿಗೂ ತಿಳಿದಿರುವ ಕ್ಷಣ ಮುಂತಾದ ಹೆಸರುಳ್ಳ (ಕಾಲವು) ನಾನು; ಅಥವಾ ಕಾಲಕ್ಕೂ ಕಾಲನಾದ* ಪರಮೇಶ್ವರನು ನಾನು. ವಿಶ್ವತೋಮುಖನಾದ, ಎಂದರೆ ಎಲ್ಲೆಲ್ಲಿಯೂ† ಮುಖ ವುಳ್ಳ ಧಾತನು, ಎಂದರೆ ಜಗತ್ತಿಗೆಲ್ಲ ಕರ್ಮಫಲವನ್ನು ಗೊತ್ತುಮಾಡುವವನು ನಾನು. ॥ ೩೩ ॥

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥೩೪॥**

೩೪. ಎಲ್ಲವನ್ನೂ ನಾಶಗೊಳಿಸುವ ಮೃತ್ಯುವು ನಾನು, ಮತ್ತು ಮುಂದೆ ಬರತಕ್ಕವರಿಗೆ ಉದ್ಭವನು ನಾನು. ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಾ, ಧೃತಿ, ಕ್ಷಮೆ- (ಇವರು ನಾನು.)

[ ಭಾಷ್ಯ ]

ಹಣವೇ ಮುಂತಾದವುಗಳನ್ನು ನಾಶಪಡಿಸುವದೆಂದೂ ಪ್ರಾಣವನ್ನು ನಾಶ ಗೊಳಿಸುವದೆಂದೂ ಮೃತ್ಯುವು ಎರಡು ಬಗೆ; ಇವುಗಳಲ್ಲಿ ಪ್ರಾಣವನ್ನು ಕಳೆ ಯುವ ಮೃತ್ಯುವು ಎಲ್ಲವನ್ನೂ ನಾಶಗೊಳಿಸುವ (ಮೃತ್ಯು)ವೆನಿಸುವದು. ಅದು ನಾನು ಎಂದರ್ಥ. ಅಥವಾ ಪ್ರಲಯಕಾಲದಲ್ಲಿ ಎಲ್ಲವನ್ನೂ ನಾಶಗೊಳಿಸು ವದರಿಂದ ಪರಮೇಶ್ವರನೇ ಸರ್ವಹರನಾದ (ಮೃತ್ಯುವು); ಅವನು ನಾನು. ಮತ್ತು ಉದ್ಭವವೆಂದರೆ ಮೇಲ್ಮೆ, ಅಭ್ಯುದಯವು ಮತ್ತು ಅದು ಒದಗುವದಕ್ಕೆ ಕಾರಣವು ನಾನು. ಯಾರಿಗೆ? ಎಂದರೆ ಮುಂದೆ ಬರತಕ್ಕವರಿಗೆ, ಮುಂದೆ ಆಗ ಬೇಕಾಗಿರುವ ಕಲ್ಯಾಣಗಳುಳ್ಳವರಿಗೆ, ಮೇಲ್ಮೆಯುಂಟಾಗುವದಕ್ಕೆ ತಕ್ಕವರಿಗೆ (ಕಾರಣನು) ಎಂದರ್ಥ. ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಾ, ಧೃತಿ, ಕ್ಷಮೆ- ಎಂಬೀ ಉತ್ತಮಸ್ತ್ರೀಯರು‡ ನಾನು. ಇವರ ಬರಿಯ ನೆರಳಿನ ಸಂಬಂಧವಿದ್ದರೂ ಸಾಕು, ಮನುಷ್ಯನು ತಾನು ಕೃತಾರ್ಥ ನೆಂದುಕೊಳ್ಳುವನು. ॥ ೩೪ ॥

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ॥ ೩೫ ॥**

---

* ವ್ಯವಹಾರದಲ್ಲಿ ಕ್ಷಣಮುಹೂರ್ತಾದಿರೂಪವಾಗಿರುವ ಕಾಲದ ಪ್ರವಾಹವು ನಾಶವಿಲ್ಲ ದ್ದಾದ್ದರಿಂದ ಅದನ್ನು ಅಕ್ಷಯವೆಂದಿದೆ; ಆದರೆ ಅಕ್ಷಯವೆಂಬ ವಿಶೇಷಣವು ಕಾಲಕ್ಕಿಂತಲೂ ಪರ ಮೇಶ್ವರನಿಗೇ ಹೆಚ್ಚು ಒಪ್ಪುವದು. † ಸರ್ವಜ್ಞನಾಗಿರುವ.

‡ ಕೀರ್ತಿ ಮುಂತಾದವು ಒಳ್ಳೆಯ ಹೆಸರೇ ಮುಂತಾದವುಗಳಿಗೆ ಅಭಿಮಾನದೇವತೆಗಳು. ಆ ದೇವತೆಗಳ ಅನುಗ್ರಹದಿಂದ ಕೀರ್ತಿಯೇ ಮುಂತಾದವುಗಳು ಆಗುವವೆಂದು ಭಾವ.

೩೫. ಹಾಗೂ ಸಾಮಗಳಲ್ಲಿ ಬೃಹತ್ಸಾಮವು; ಛಂದಸ್ಸುಗಳಲ್ಲಿ ಗಾಯತ್ರಿಯು ನಾನು. ಮಾಸಗಳಲ್ಲಿ ಮಾರ್ಗಶೀರ್ಷವು ನಾನು. ಋತುಗಳಲ್ಲಿ ವಸಂತವು.

[ ಭಾಷ್ಯ ]

ಸಾಮಗಳಲ್ಲೆಲ್ಲ ಮುಖ್ಯವಾದ ಬೃಹತ್ಸಾಮವು* (ನಾನು.) ಛನ್ದಸ್ಸುಗಳಲ್ಲಿ ಗಾಯತ್ರಿಯು† ನಾನು. ಗಾಯತ್ರಿಯೇ ಮುಂತಾದ ಛಂದಸ್ಸುಗಳಿಂದ ಕೂಡಿದ ಋಕ್ಕುಗಳಲ್ಲಿ ನಾನು ಗಾಯತ್ರಿಯೆಂಬ ಋಕ್ಕು ಎಂದರ್ಥ. ಮಾಸಗಳಲ್ಲಿ ಮಾರ್ಗಶೀರ್ಷವು‡ ನಾನು; ಋತುಗಳಲ್ಲಿ ಹೂಬಿಡುವ ವಸಂತನು§ (ನಾನು). ॥ ೩೫ ॥

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥ ೩೬ ॥**

೩೬. ವಂಚಕರಲ್ಲಿ ದ್ಯೂತವಾಗಿರುವೆನು; ತೇಜಸ್ವಿಗಳಿಗೆ ತೇಜಸ್ಸು ನಾನು. ಜಯವಾಗಿರುವೆನು, ನಿಶ್ಚಯವಾಗಿರುವೆನು, ಸತ್ತ್ವವುಳ್ಳವರಿಗೆ ಸತ್ತ್ವವು ನಾನು.

[ ಭಾಷ್ಯ ]

ವಂಚಕರಲ್ಲಿ ಎಂದರೆ ಮೋಸಮಾಡುವವರಲ್ಲಿ ದ್ಯೂತವು ಎಂದರೆ ಪಗಡೆಯಾಟವೇ ಮುಂತಾದದ್ದು ನಾನು. ತೇಜಸ್ವಿಗಳಲ್ಲಿ ತೇಜವು ನಾನು. ಗೆಲ್ಲುವವರಿಗೆ ಗೆಲವು ನಾನು, ನಿಶ್ಚಯಮಾಡುವವರಿಗೆ ನಿಶ್ಚಯವು ನಾನು. ಸತ್ತ್ವವುಳ್ಳವರಿಗೆ, ಸಾತ್ತ್ವಿಕರಿಗೆ, ಸತ್ತ್ವವು ನಾನು.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

೩೭. ವೃಷ್ಣಿಗಳಲ್ಲಿ ವಾಸುದೇವನಾಗಿರುವೆನು; ಪಾಂಡವರಲ್ಲಿ ಧನಂಜಯನಾ(ಗಿರುವೆನು); ಮತ್ತು ಮುನಿಗಳಲ್ಲಿ ನಾನು ವ್ಯಾಸನು; ಕವಿಗಳಲ್ಲಿ ಉಶನನೆಂಬ ಕವಿಯು.

---

* 'ತ್ವಾಮಿದ್ಧಿ ಹವಾಮಹೇ' ಎಂಬ ಋಕ್ಕಿನ ಒಂದಾನೊಂದು ಗೀತೆಗೆ ಬೃಹತ್ಸಾಮವೆಂದು ಹೆಸರು; ಇಂದ್ರನೇ ಸರ್ವೇಶ್ವರನೆಂದು ಇದರಲ್ಲಿ ಸ್ತೋತ್ರಮಾಡಿರುತ್ತದೆ.

† ದ್ವಿಜತ್ವವನ್ನುಂಟುಮಾಡುವದೇ ಮುಂತಾದ ಕಾರಣಗಳಿಂದ ಗಾಯತ್ರೀಮಂತ್ರವು ಸಕಲ ವೇದಮಂತ್ರಗಳಲ್ಲಿಯೂ ಶ್ರೇಷ್ಠವೆನಿಸಿರುವದು; ಇಲ್ಲಿ ಛಂದಸ್ಸುಗಳೆಂದರೆ ವೇದಮಂತ್ರಗಳು.

‡ ಪೈರುಗಳು ಪಕ್ವವಾಗುವ ಕಾಲವು ಮಾರ್ಗಶೀರ್ಷ.

§ ನೋಡುವದಕ್ಕೆ ರಮಣೀಯವಾಗಿರುವದು ವಸಂತಋತು.

[ ಭಾಷ್ಯ ]

ವೃಷ್ಣಿಗಳಲ್ಲಿ ಎಂದರೆ ಯಾದವರಲ್ಲಿ ವಾಸುದೇವನಾಗಿರುವೆನು*, ಎಂದರೆ ಇಗೋ ಈ ನಿನ್ನ ಸ್ನೇಹಿತನಾದ ನಾನೇ; ಪಾಂಡವರಲ್ಲಿ ಧನಂಜಯನು ಎಂದರೆ ನೀನೇ.† ಮುನಿಗಳಲ್ಲಿ ಎಂದರೆ ಮನನಶೀಲರಾಗಿ ಸರ್ವಪದಾರ್ಥಗಳನ್ನೂ ಅರಿತವರಲ್ಲಿ ನಾನು ವ್ಯಾಸನು. ಕವಿಗಳಲ್ಲಿ ಎಂದರೆ ದೂರದರ್ಶಿಗಳಲ್ಲಿ ಉಶನನೆಂಬ ಕವಿಯಾಗಿರುವೆನು.

**ದಣ್ಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥ ೩೮ ॥**

೩೮. ದಮವನ್ನು ಮಾಡುವವರಲ್ಲಿ ದಂಡವಾಗಿರುವೆನು; ಜಿಗೀಷುಗಳಲ್ಲಿ ನೀತಿಯಾಗಿರುವೆನು; ಗುಹ್ಯರಲ್ಲಿ ಮೌನವಾಗಿರುವೆನು; ಜ್ಞಾನವಂತರಲ್ಲಿ ನಾನು ಜ್ಞಾನವು.

[ ಭಾಷ್ಯ ]

ದಮವನ್ನು ಮಾಡುವವರಲ್ಲಿ ಎಂದರೆ (ಜನರನ್ನು) ದಂಡಿಸುವವರಲ್ಲಿ ದಂಡವಾಗಿರುವೆನು, ದಾಂತರಲ್ಲದವರನ್ನು ಪಳಗಿಸುವದಕ್ಕೆ ಕಾರಣವಾದ (ದಂಡ)ವಾಗಿರುವೆನು. ಜಿಗೀಷುಗಳಲ್ಲಿ, ಗೆಲ್ಲಬೇಕೆಂಬವರಲ್ಲಿ (ರಾಜ)ನೀತಿಯಾಗಿರುವೆನು. ಗುಟ್ಟುಗಳಲ್ಲಿ ಮೌನವಾಗಿರುವೆನು, ಜ್ಞಾನವಂತರಲ್ಲಿ ಜ್ಞಾನವು ನಾನು.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

೩೯. ಎಲೈ ಅರ್ಜುನನೆ, ಸರ್ವಭೂತಗಳಿಗೂ ಯಾವದು ಬೀಜವೋ, ಅದು ನಾನು. ನಾನಿಲ್ಲದೆ ಯಾವ ಚರಾಚರಭೂತವೂ ಇರುವದಿಲ್ಲ.

[ ಭಾಷ್ಯ ]

ಎಲೈ ಅರ್ಜುನನೆ, ಎಲ್ಲಾ ಭೂತಗಳಿಗೂ ಬೀಜವು ಯಾವದೋ, ಯಾವದು ಹುಟ್ಟುವದಕ್ಕೆ ಕಾರಣವೋ, ಅದು ನಾನು. (ಈಗ ಈ) ಪ್ರಕರಣವನ್ನು ಮುಗಿಸಬೇಕೆಂದು ವಿಭೂತಿಗಳ ವಿಷಯವನ್ನು (ಇಲ್ಲಿ) ಸಂಕ್ಷೇಪವಾಗಿ ಹೇಳುತ್ತಾನೆ: ನಾನು ಇಲ್ಲದೆ ಇರಬಹುದೆಂಬ ಯಾವ ಚರಾಚರಭೂತವೂ ಇಲ್ಲ,

---

* ವಾಸುದೇವನೆಂಬ ಹೆಸರನ್ನು ಗೀತಾರ್ಥಸರ್ವಸ್ವದಲ್ಲಿ ಭಕ್ತಿಯೋಗದಲ್ಲಿ ಚರ್ಚಿಸಿದೆ.

† ಸರ್ವಾತ್ಮವಿಭೂತಿಯನ್ನು ಅರಿಯುವಾಗ ಸರ್ವರ ಆತ್ಮನೆಂದು ತಿಳಿದುಕೊಳ್ಳಬೇಕೆಂದು ಹಿಂದೆ ಸಾಮಾನ್ಯವಾಗಿ ತಿಳಿಸಿತ್ತು; ಪಾಂಡವರಲ್ಲಿ ವಿಶೇಷಪ್ರಖ್ಯಾತಿಗೆ ಬಂದ ಅರ್ಜುನನು ನಾನೇ ಎಂದು ಇಲ್ಲಿ ಹೇಳಿದೆ.

ಸ್ಥಾವರವಾಗಲಿ ಜಂಗಮವಾಗಲಿ (ಯಾವ ಭೂತವೂ ನಾನಿಲ್ಲದೆ ಇಲ್ಲ); ಏಕೆಂದರೆ ನನ್ನನ್ನು ಬಿಟ್ಟರೆ ಅದು ನಿರಾತ್ಮಕವಾಗಿ ಶೂನ್ಯವಾಗುವದು.* ಆದ್ದರಿಂದ ಎಲ್ಲವೂ ನನ್ನನ್ನು ಆತ್ಮವಾಗುಳ್ಳದ್ದು – ಎಂದರ್ಥ. ॥ ೩೯ ॥

## ಭಗವದ್ವಿಭೂತಿಯ ಸಂಕ್ಷೇಪವರ್ಣನೆ

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥ ೪೦ ॥**

೪೦. ಎಲೈ ಪರಂತಪನೆ, ನನ್ನ ದಿವ್ಯವಿಭೂತಿಗಳಿಗೆ ಕೊನೆಯೇ ಇಲ್ಲ. ಆದರೆ ನನ್ನಿಂದ ಈ ವಿಭೂತಿವಿಸ್ತಾರವು ಉದ್ದೇಶದಿಂದ ಹೇಳಲ್ಪಟ್ಟಿದೆ.

[ ಭಾಷ್ಯ ]

ನನ್ನ ದಿವ್ಯವಿಭೂತಿಗಳಿಗೆ ಎಂದರೆ ನನ್ನ ವಿಸ್ತಾರಗಳಿಗೆ, ಎಲೈ ಪರಂತಪನೆ, ಕೊನೆಯೆಂಬುದಿಲ್ಲ. ಎಲ್ಲದರ ರೂಪದಲ್ಲಿಯೂ ಇರುತ್ತಿರುವ ಈಶ್ವರನ ವಿಭೂತಿಗಳು ಇಲ್ಲಿಗೆ ಮುಗಿದವೆಂದು ಹೇಳುವದಕ್ಕಾಗಲಿ ಅರಿಯುವದಕ್ಕಾಗಲಿ ಯಾರಿಂದಲೂ ಆಗಲಾರದಷ್ಟೆ†. ಆದರೆ ಈ ವಿಭೂತಿವಿಸ್ತಾರವನ್ನು ಉದ್ದೇಶದಿಂದ, ಸ್ವಲ್ಪಭಾಗವನ್ನು ತಿಳಿಸಬೇಕೆಂದು, ನಾನು ಹೇಳಿರುತ್ತೇನೆ. ॥ ೪೦ ॥

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧ ॥**

೪೧. ಯಾವಯಾವ ಸತ್ತ್ವವು ವಿಭೂತಿಯಿಂದ ಕೂಡಿರುವದೋ, ಶ್ರೀಯುಕ್ತವಾಗಿರುವದೋ, ಅಥವಾ ಊರ್ಜಿತವಾಗಿರುವದೋ, ಅದದನ್ನೇ ನನ್ನ ತೇಜಸ್ಸಿನ ಅಂಶದಿಂದ ಉಂಟಾದದ್ದೆಂದು ನೀನು ತಿಳಿ.

[ ಭಾಷ್ಯ ]

ಲೋಕದಲ್ಲಿ ಯಾವಯಾವ ಸತ್ತ್ವವು ಎಂದರೆ ವಸ್ತುವು ವಿಭೂತಿಯಿಂದ ಕೂಡಿರುವದೋ, ಮಹಿಮಾಯುತವಾಗಿರುವದೋ, ಅಥವಾ ಶ್ರೀಯುಕ್ತ

---

* ಯಾವದು ಇದೆ ಎಂದರೂ ಆತ್ಮನಿಗೆ ಹೊಂದಿಕೊಂಡೇ ಇರುವದು; ಆತ್ಮನಿಗಿಂತ ಬೇರೆಯಾಗಿ ಅದರ ಇರವನ್ನು ಕಲ್ಪಿಸುವದಕ್ಕೆ ಕೂಡ ಆಗುವ ಹಾಗಿಲ್ಲ. ಶೂನ್ಯವೆಂಬ ಕಲ್ಪನೆಯೂ ನಿಜವಾಗಿ ನೋಡಿದರೆ ಆತ್ಮನ ಆಧಾರದಿಂದಲೇ ಆಗಿರುತ್ತದೆ. ವ್ಯವಹಾರದಲ್ಲಿ ಶೂನ್ಯವೆಂದರೆ ಏನೂ ಇಲ್ಲವೆಂಬರ್ಥವಷ್ಟೆ, ಇದನ್ನು ಇಟ್ಟುಕೊಂಡು ಆತ್ಮಾತಿರಿಕ್ತವಾಗಿರುವದೆಲ್ಲ ಶೂನ್ಯವೆಂದು ಹೇಳಿದೆ.

† ಇಲ್ಲಿಗೆ ವಿಭೂತಿಯು ಮುಗಿಯಿತೆಂದರೆ ಉಳಿದದ್ದು ಭಗವಂತನ ವಿಭೂತಿಯಲ್ಲವೆಂದು ಆಗುವದು; ಆದರೆ ಭಗವಂತನು ಸರ್ವಾತ್ಮಕನು, ಎಲ್ಲವೂ ಅವನ ವಿಭೂತಿಯೇ. ಆದ್ದರಿಂದ ಇಷ್ಟೇ ವಿಭೂತಿಗಳೆಂದು ಲೆಕ್ಕಮಾಡಿ ಕೊನೆಗಾಣುವದಕ್ಕೆ ಯಾರಿಂದಲೂ ಆಗಲಾರದು.

ವಾಗಿಯೂ ಊರ್ಜಿತವಾಗಿಯೂ ಇರುವದೋ; ಶ್ರೀಯೆಂದರೆ ಲಕ್ಷ್ಮಿಯು (ಸಂಪತ್ತು), ಅದರಿಂದ ಕೂಡಿರುವದೋ, ಅಥವಾ ಊರ್ಜಿತವಾಗಿರುವದೋ* ಉತ್ಸಾಹಶಕ್ತಿಯಿಂದ ಕೂಡಿರುವದೋ, ಅದದನ್ನೇ ನೀನು ನನ್ನ ತೇಜಸ್ಸಿನ ಅಂಶದಿಂದ ಎಂದರೆ ಒಂದು† ಭಾಗದಿಂದ ಉಂಟಾದದ್ದೆಂದು ತಿಳಿ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥**

೪೨. ಅಥವಾ ಅರ್ಜುನನೇ, ಇಷ್ಟೊಂದನ್ನು ನೀನು ತಿಳಿದುಕೊಂಡು ಏನಾಗಬೇಕು? ನಾನು ಈ ಜಗತ್ತೆಲ್ಲವನ್ನೂ ಒಂದಂಶದಿಂದ ಹಿಡಿದಿಟ್ಟುಕೊಂಡು ಇರುವೆನು.

[ ಭಾಷ್ಯ ]

ಅಥವಾ ಇದೇ ಮುಂತಾದದ್ದೆಲ್ಲವನ್ನೂ ತಿಳಿದರೆ, ಇನ್ನೂ ಉಳಿದೇ ಇರುವದರಿಂದ, ಏನು ಪ್ರಯೋಜನವಾದೀತು? ಸ್ವಲ್ಪವೂ ಉಳಿಯದಂತೆ ಹೇಳಿಬಿಡುತ್ತೇನೆ. ಈ ವಿಷಯವನ್ನು ಕೇಳು: ಈ ಎಲ್ಲಾ ಜಗತ್ತನ್ನೂ ಏಕಾಂಶದಿಂದ,- ಎಂದರೆ ಒಂದು ಭಾಗವಾದ, ಒಂದು ಪಾದವಾದ, ಈ ಎಲ್ಲಾ ಭೂತಗಳ ಸ್ವರೂಪದಿಂದ ಎಂದರ್ಥ- ವಿಶೇಷವಾಗಿ ಗಟ್ಟಿಯಾಗಿ ಬಿಗಿಹಿಡಿದುಕೊಂಡು ನಾನಿರುತ್ತಿರುವೆನು. ಹೀಗೆಂದು ಮಂತ್ರವರ್ಣವೂ ಹೇಳುತ್ತದೆ: "ಭೂತಗಳೆಲ್ಲವೂ ಈತನ (ಒಂದು) ಪಾದವು" (ಛಾಂ. ೩. ; ೧೨.) ॥ ೪೨ ॥

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ವಿಭೂತಿಯೋಗೋ** ನಾಮ
ದಶಮೋಽಧ್ಯಾಯಃ

—*—

* 'ಊರ್ಜಿತಮೇವ ವಾ' ಎಂಬ ಮಾತುಗಳು ಕೆಲವು ಪುಸ್ತಕಗಳಲ್ಲಿ ಬರೆಯುವರ ಕೈತಪ್ಪಿನಿಂದ ಬಿಟ್ಟುಹೋಗಿವೆ.

† ವಿಭೂತಿಯ ರೂಪದಿಂದ ಅದು ಪರಮಾತ್ಮನ ಒಂದು ಭಾಗವು ; ನಿಜಸ್ವರೂಪದಿಂದ ಅದು ಪರಮಾತ್ಮನೇ.

# ಹತ್ತನೆಯ ಅಧ್ಯಾಯದ ಸಾರ

೧-೧೧. ಭಗವಂತನು ಅರ್ಜುನನನ್ನು ಕುರಿತು ಹೇಳಿದ್ದೇನೆಂದರೆ: "ಅರ್ಜುನನೆ, ನಿನಗೆ ಒಳ್ಳೆಯ ದಾಗಲೆಂದು ಮತ್ತೊಮ್ಮೆ ಹೇಳುವೆನು ಕೇಳು. ನನ್ನ ಆದಿಯನ್ನು ದೇವತೆಗಳಾಗಲಿ, ಮಹರ್ಷಿ ಗಳಾಗಲಿ ಅರಿಯರು; ಏಕೆಂದರೆ ನಾನೇ ಅವರಿಗೂ ಆದಿಯು. ನಾನು ಜನ್ಮರಹಿತನೆಂದೂ ನನಗೆ ಮೊದಲೆಂಬುವೇ ಇಲ್ಲವೆಂದೂ ಪ್ರಪಂಚದ ಎಲ್ಲಾ ಪ್ರಾಣಿಗಳಿಗೂ ಬುದ್ಧಿಯೇ ಮುಂತಾದವುಗಳನ್ನು ನಾನೇ ಅನುಗ್ರಹಿಸುವೆನೆಂದೂ ಮಹರ್ಷಿಗಳೂ ಮನುಗಳೂ ನನ್ನ ಸಂಕಲ್ಪಮಾತ್ರದಿಂದ ಉಂಟಾಗಿರು ವರೆಂದೂ ತಿಳಿದವರು ಪಾಪರಹಿತರಾಗಿ ಸ್ಥಿರವಾದ ಭಕ್ತಿಯೋಗವನ್ನು ಪಡೆಯುತ್ತಾರೆ. ಈ ಭಕ್ತಿ ಯೋಗದ ಫಲವಾಗಿ ಅಜ್ಞಾನದ ಕತ್ತಲೆಯನ್ನೆಲ್ಲ ತೊಲಗಿಸುವ ಜ್ಞಾನದ ಬೆಳಕನ್ನು ನಾನು ಅವರ ಹೃದಯದಲ್ಲೇ ಇದ್ದುಕೊಂಡು ಅನುಗ್ರಹಿಸುವೆನು."

೧೨-೪೨. ಅರ್ಜುನನು ಭಗವಂತನ ಈ ಮಾತನ್ನು ಕೇಳಿ ಭಗವಂತನು ಪ್ರಪಂಚದಲ್ಲಿ ಯಾವ ಯಾವ ವಿಭೂತಿಯ ರೂಪದಲ್ಲಿರುವನೆಂದು ಧ್ಯಾನಮಾಡುವದರಿಂದ ತನಗೆ ಒಳ್ಳೆಯದಾದೀತೆಂಬುದನ್ನು ತಿಳಿಯಬೇಕೆಂದು ಕುತೂಹಲವನ್ನು ತೋರಿಸಿದನು. ಆಗ ಭಗವಂತನು ಇಂತೆಂದನು: "ಅಯ್ಯ, ನನ್ನ ವಿಭೂತಿಗಳಿಗೆ ಇಷ್ಟೆಂಬ ಲೆಕ್ಕವಿಲ್ಲದ್ದರಿಂದ ಮುಖ್ಯವಾದ ವಿಭೂತಿಗಳನ್ನು ಹೇಳುತ್ತೇನೆ, ಕೇಳು: ಎಲ್ಲಾ ಪ್ರಾಣಿಗಳ ಹೃದಯದಲ್ಲಿರುವ ಆತ್ಮನು ನಾನು ಎಲ್ಲಕ್ಕೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನು ನಾನೆಂದು ತಿಳಿ. ವಿಷ್ಣುವೆಂಬ ಆದಿತ್ಯನು, ಸೂರ್ಯನು, ಮರೀಚಿಯು, ಚಂದ್ರನು, ಸಾಮವೇದ, ಇಂದ್ರನು, ಮನಸ್ಸು, ಚೇತನ, ಶಂಕರನು, ಕುಬೇರನು, ಅಗ್ನಿಯು, ಮೇರು, ಬೃಹಸ್ಪತಿ, ಸ್ಕಂದನು, ಸಾಗರವು, ಭೃಗುಮಹರ್ಷಿ, ಓಂಕಾರ, ಜಪಯಜ್ಞ, ಹಿಮಾಲಯ, ಅಶ್ವತ್ಥ, ನಾರದ, ಚಿತ್ರರಥ, ಕಪಿಲ, ಉಚ್ಚೈಃಶ್ರವಸ್ಸು, ಐರಾವತ, ರಾಜನು, ವಜ್ರಾಯುಧ, ಕಾಮಧೇನು, ಕಾಮನು, ವಾಸುಕಿ, ಅನಂತನು, ವರುಣನು, ಅರ್ಯಮ, ಯಮ, ಪ್ರಹ್ಲಾದ, ಕಾಲ, ಸಿಂಹ, ಹುಲಿ, ಗರುಡ, ಗಾಳಿ, ರಾಮನು, ಮಕರ, ಗಂಗೆ, ಅಧ್ಯಾತ್ಮವಿದ್ಯೆ, ವಾದ, ಅಕಾರ, ದ್ವಂದ್ವಸಮಾಸ, ಅಕ್ಷಯ, ಕಾಲ, ಧಾತನು, ಮೃತ್ಯು, ಮುಂದಿನ ಕಲ್ಯಾಣಕ್ಕೆ ಕಾರಣ, ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಧೃತಿ, ಕ್ಷಮೆ, ಬೃಹತ್ಸಾಮ, ಗಾಯತ್ರೀಮಂತ್ರ, ಮಾರ್ಗಶೀರ್ಷ, ವಸಂತ, ಋತು, ಜೂಜಿನ ಆಟ, ತೇಜಸ್ಸು, ವಾಸುದೇವ, ಅರ್ಜುನ, ವ್ಯಾಸನು, ಶುಕ್ರಾಚಾರ್ಯ, ದಂಡ, ರಾಜನೀತಿ, ಮೌನ, ಜ್ಞಾನ, ಸರ್ವ ಭೂತಗಳಿಗೂ ಕಾರಣವಾದದ್ದು - ಇವೆಲ್ಲವೂ ನಾನೇ. ನನ್ನನ್ನು ಬಿಟ್ಟು, ಯಾವದೊಂದೂ ಇರುವದಿಲ್ಲ ನನ್ನ ವಿಭೂತಿಗಳಿಗೆ ಕೊನೆಯೇ ಇಲ್ಲದಿದ್ದರೂ ಒಂದು ಸ್ವಲ್ಪ ನಿನಗೆ ತಿಳಿಸಿರುತ್ತೇನೆ. ಯಾವಯಾವದು ಮಹಿಮೆಯಿಂದ ಕೂಡಿಯೂ ಶ್ರೀಯುತವಾಗಿಯೂ ಉತ್ಸಾಹಯುತವಾಗಿಯೂ ಇರುವದೋ ಅದೆಲ್ಲ ನನ್ನ ತೇಜಸ್ಸಿನಿಂದ ಆಗಿರುವದೆಂದು ಚಿಂತಿಸು. ಅಥವಾ ಇಷ್ಟೆಲ್ಲಾ ಏಕೆ? ಈ ಜಗತ್ತೆಲ್ಲವೂ ನನ್ನ ದೊಂದಂಶವೆಂದು ತಿಳಿ."

---

# ಹನ್ನೊಂದನೆಯ ಅಧ್ಯಾಯ

(ವಿಶ್ವರೂಪದರ್ಶನಯೋಗ)

## ವಿಶ್ವರೂಪವನ್ನು ನೋಡಬೇಕೆಂಬ ಅರ್ಜುನನ ಇಚ್ಛೆ

ಭಗವಂತನ ವಿಭೂತಿಗಳನ್ನು ಹೇಳಿದ್ದಾಯಿತು. ಅಲ್ಲಿ 'ನಾನು ಈ ಜಗತ್ತೆಲ್ಲವನ್ನೂ ನನ್ನ ಒಂದಂಶದಿಂದ ಹಿಡಿದು ನಿಲ್ಲಿಸಿಕೊಂಡಿರುವೆನು' (೧೦-೪೨) ಎಂದು ಭಗವಂತನು ಹೇಳಿದ್ದನ್ನು ಕೇಳಿ, ಜಗದಾತ್ಮಕವಾಗಿರುವ* ಆ ಈಶ್ವರನ ಮೊದಲನೆಯ† ರೂಪವುಂಟಲ್ಲವೆ, ಅದನ್ನು ನೇರಾಗಿ (ನಾನು) ಕಾಣಬೇಕು- ಎಂಬ ಇಚ್ಛೆಯಿಂದ ಅರ್ಜುನನಿಂತೆಂದನು :

**ಅರ್ಜುನ ಉವಾಚ :—**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥ ೧ ॥**

ಅರ್ಜುನನು ಹೇಳಿದ್ದೇನೆಂದರೆ :—

೧. ನನ್ನಲ್ಲಿ ಅನುಗ್ರಹ ಮಾಡುವುದಕ್ಕಾಗಿ ಅಧ್ಯಾತ್ಮವೆಂಬ ಹೆಸರಿನ ಪರಮ ರಹಸ್ಯವಾದ ಯಾವ ಮಾತನ್ನು ನೀನು ಹೇಳಿರುವೆಯೋ, ಅದರಿಂದ ನನ್ನ ಈ ಮೋಹವು ತೊಲಗಿತು.

[ ಭಾಷ್ಯ ]

ನನ್ನ ಅನುಗ್ರಹಕ್ಕಾಗಿ ಎಂದರೆ ನನ್ನ ಮೇಲೆ ಅನುಗ್ರಹಮಾಡಬೇಕೆಂದು, ಪರಮಗುಹ್ಯವಾದ, ಎಲ್ಲಕ್ಕೂ ಹೆಚ್ಚಾಗಿ ಗುಟ್ಟನಲ್ಲಿಡುವದಕ್ಕೆ ಅರ್ಹವಾದ, **ಅಧ್ಯಾತ್ಮ**ವೆಂಬ ಹೆಸರಿನ ಆತ್ಮ ಮತ್ತು ಅನಾತ್ಮರುಗಳನ್ನು ವಿಂಗಡಿಸಿ ತಿಳಿಯುವ ವಿಷಯವಾದ ಯಾವ ಮಾತನ್ನು ನೀನು ಹೇಳಿರುವೆಯೋ‡ ಆ ನಿನ್ನ ಮಾತಿನಿಂದ

---

* ಪರಮಾತ್ಮನೇ ಜಗತ್ತಾಗಿ ತೋರುವ.

† ಸೃಷ್ಟಿಯಲ್ಲಿ ಜಗದ್ರೂಪವಾಗಿ ಮೊದಲು ಪರಮಾತ್ಮನು ಆಗುವನು ; ಆಮೇಲೆ ಅದರಲ್ಲಿರುವ ವಿಶೇಷವಿಭೂತಿಗಳ ರೂಪವನ್ನು ಸ್ವೀಕರಿಸುವನು- ಎಂದು ಭಾವ.

‡ ಆತ್ಮನು ನಿತ್ಯನು, ಅನಾತ್ಮವು ಅನಿತ್ಯವಾದ ಅಶುಚಿಯಾದ ದುಃಖರೂಪವಾದ ರೂಪವು- ಎಂದು ಎರಡನೆಯ ಅಧ್ಯಾಯವೇ ಮುಂತಾದವುಗಳಲ್ಲಿ ಹೇಳಿರುತ್ತೀಯೆ- ಎಂದಭಿಪ್ರಾಯ. ಅಧ್ಯಾತ್ಮವೆಂಬ ಮಾತನ್ನು ಹಿಂದೆ (೮-೩ರಲ್ಲಿ) ಭಗವಂತನೇ ವಿವರಿಸಿರುತ್ತಾನೆ

ಸನ್ನ: ಈ ಮೋಹವು ಎಂದರೆ ಅವಿವೇಕಬುದ್ಧಿಯು* ತೊಲಗಿತು, ಹೋಗಿ ಬಿಟ್ಟಿತು ಎಂದರ್ಥ. ॥ ೧ ॥

ಮತ್ತು—

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

೨. ಭೂತಗಳ ಭವ, ಅಪ್ಯಯ- ಇವೆರಡನ್ನೂ ವಿಸ್ತಾರವಾಗಿ ನಿನ್ನಿಂದ ನಾನು ಕೇಳಿದ್ದಾಗಿದೆಯಷ್ಟೆ; ಎಲೈ ಕಮಲಪತ್ರಾಕ್ಷನೆ, ಅವ್ಯಯವಾದ ಮಾಹಾತ್ಮ್ಯವನ್ನೂ (ಕೇಳಿದ್ದಾಗಿದೆಯಷ್ಟೆ).

[ಭಾಷ್ಯ]

ಭವ ಎಂದರೆ ಹುಟ್ಟುವಿಕೆ, ಅಪ್ಯಯವೆಂದರೆ ಅಡಗುವದು ; ಭೂತಗಳ ಭವ ಮತ್ತು ಅಪ್ಯಯ- ಇವುಗಳೆರಡನ್ನೂ ಸಂಕ್ಷೇಪವಾಗಿಯಲ್ಲ, ವಿಸ್ತಾರವಾಗಿ ನಿನ್ನಿಂದ ನಿನ್ನ ಕಡೆಯಿಂದ ನಾನು ಕೇಳಿ (ತಿಳಿದು)ಕೊಂಡದ್ದಾಗಿದೆ. ಕಮಲದ ದಳವು ಕಮಲಪತ್ರವು ; ಅದರಂತೆ ಕಣ್ಣುಗಳುಳ್ಳವನಾದ್ದರಿಂದ ನಿನಗೆ ಕಮಲ ಪತ್ರಾಕ್ಷನೆಂದು ಹೆಸರು. ಎಲೈ ಕಮಲಪತ್ರಾಕ್ಷನೆ, ಅವ್ಯಯವಾದ ಎಂದರೆ ನಾಶವಿಲ್ಲದ ನಿನ್ನ ಮಾಹಾತ್ಮ್ಯವನ್ನೂ† (ನಾನು ಕೇಳಿದ್ದಾಗಿದೆ). 'ಕೇಳಿದ್ದಾಗಿದೆ' ಎಂಬುದು (ಹಿಂದಿನ ವಾಕ್ಯದಿಂದ) ಇಲ್ಲಿಗೂ ಸೇರಿಕೊಂಡಿರುತ್ತದೆ.

**ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥**

೩. ಎಲೈ ಪರಮೇಶ್ವರನೆ, ನೀನು ನಿನ್ನನ್ನು ಹೇಗೆ (ಇರುವೆಯೆ)ಂದು ಹೇಳಿಕೊಂಡಿರುವೆಯೋ ಇದು ಹೀಗೆಯೇ ಸರಿ. ಎಲೈ ಪುರುಷೋತ್ತಮನೆ, ನಿನ್ನ ಐಶ್ವರರೂಪವನ್ನು ನೋಡಲು ಇಚ್ಛಿಸುತ್ತೇನೆ.

[ ಭಾಷ್ಯ ]

ಎಲೈ ಪರಮೇಶ್ವರನೆ, ನೀನು ನಿನ್ನನ್ನು ಹೇಗೆಂದು ಯಾವ ಪ್ರಕಾರದಿಂದ (ಇರುವವನೆಂದು) ಹೇಳಿಕೊಂಡಿರುವೆಯೋ, ಇದು ಹೀಗೆಯೇ ಸರಿ.‡ ಮತ್ತೆ

---

* ಆತ್ಮನಿಗೆ ಜನನಮರಣಾದಿಗಳುಂಟೆಂಬ ಅವಿವೇಕಬುದ್ಧಿಯು.

† 'ಮಹಾತ್ಮನೋ ಭಾವಃ'-ಎಂದು ಮೂ॥ ಪಾಠದಲ್ಲಿರುವದು ಆ॥ ವ್ಯಾಖ್ಯಾನದಿಂದ ಲೇಖಕರು ಸೇರಿಸಿಕೊಂಡದ್ದೆಂದು ತೋರುವದು.

‡ ಜಗತ್ಸೃಷ್ಟಿಲಯಗಳಿಗೆ ಕರ್ತೃವಾದ ನಿನ್ನ ರೂಪವನ್ನು ನೀನೇ ವರ್ಣಿಸಿರುವದರಿಂದ ಇದೇ ನಿಜವಿರಬೇಕು ; ಆದರೆ ಅದನ್ನು ಎಂದರೆ ನಿನ್ನಿಂದ ಜಗತ್ತು ಸೃಷ್ಟಿಯಾಗುವದನ್ನೂ ನಿನ್ನಲ್ಲಿ ಪ್ರಲಯವಾಗುವದನ್ನೂ ಕಣ್ಣಾರೆ ನೋಡಬೇಕೆಂಬ ಆಸೆಯಿದೆ.

ಬೇರೆಯಿಲ್ಲ. ಆದರೂ ಎಲೈ ಪುರುಷೋತ್ತಮನೆ, ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ, ಮತ್ತು ತೇಜಸ್ಸು- ಇವುಗಳಿಂದ ಕೂಡಿರುವ ಐಶ್ವರರೂಪವನ್ನು ವೈಷ್ಣವ(ಸ್ವರೂಪವನ್ನು)* ನೋಡಬಯಸುತ್ತೇನೆ.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪ ॥**

೪. ಪ್ರಭುವೆ, ಅದನ್ನು ನೋಡುವದು ನನ್ನಿಂದ ಆದೀತೆಂದು (ನೀನು) ಎಣಿಸಿದರೆ, ಆಗ ಎಲೈ ಯೋಗೇಶ್ವರನೆ, ಅವ್ಯಯವಾದ ನಿನ್ನ (ರೂಪ)ವನ್ನು ನನಗೆ ನೀನು ತೋರಿಸು.

[ ಭಾಷ್ಯ ]

ಪ್ರಭುವೆ, (ಜಗ)ದೊಡೆಯನೆ, ಈ ಅರ್ಜುನನೆಂಬ ನನ್ನಿಂದ ಆ ನಿನ್ನ (ರೂಪ) ವನ್ನು ನೋಡುವದು ಆಗಬಹುದೆಂದು ನೀನು ಎಣಿಸುವೆಯಾದರೆ, ಯೋಗೇಶ್ವರನೆ- ಯೋಗರೆಂದರೆ ಯೋಗಿಗಳು†; ಅವರಿಗೆ ಒಡೆಯನಾದ್ದರಿಂದ (ನೀನು) ಯೋಗೇಶ್ವರನು. ಎಲೈ ಯೋಗೇಶ್ವರನೆ,- ನಾನು (ಈ ರೂಪವನ್ನು) ನೋಡಬೇಕೆಂದು ಒಲುವಾಗಿ ಬಯಸಿರುವೆನು! ಆದ್ದರಿಂದ ನನಗೆ, ನನಗೋಸ್ಕರವಾಗಿ, ನೀನು ನಾಶವಿಲ್ಲದ ಆ ನಿನ್ನ (ರೂಪವನ್ನು) ತೋರಿಸು. ॥ ೪ ॥

## ಭಗವಂತನು ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟದ್ದು

ಹೀಗೆಂದು ಅರ್ಜುನನು ಕೇಳಲು ಶ್ರೀಭಗವಂತನಿಂತೆಂದನು :—

**ಶ್ರೀಭಗವಾನುವಾಚ:—**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

೫. ಪಾರ್ಥನೆ, ನೂರುಗಟ್ಟಲೆಯಾಗಿರುವ ಮತ್ತು ಸಾವಿರಗಟ್ಟಲೆಯಾಗಿರುವ ನಾನಾವಿಧವಾದ, ನಾನಾವರ್ಣಾಕೃತಿಗಳುಳ್ಳ ನನ್ನ ದಿವ್ಯರೂಪಗಳನ್ನು ನೋಡು.

---

* ಪರಮಾತ್ಮನು ತನ್ನ ಶಕ್ತಿಯಿಂದ ತಾನೇ ಎಲ್ಲವೂ ಆಗಿರುವ ರೂಪವು ವೈಷ್ಣವರೂಪವು.

† ಯೋಗದಿಂದಲೇ ನೀನು ಜಗತ್ತಿನ ಸೃಷ್ಟಿಯನ್ನೂ ಲಯವನ್ನೂ ಮಾಡುತ್ತೀಯೆಂಬುದಕ್ಕೆ ಸಂಶಯವಿಲ್ಲ ; ಅದನ್ನು ಯೋಗಸಾಮರ್ಥ್ಯದಿಂದಲೇ ಸಂಕ್ಷೇಪವಾಗಿ ನನಗೆ ತೋರಿಸು —ಎಂಬ ಭಾವವು ಈ ವಿಶೇಷಣದಲ್ಲಿ ಅಡಗಿದೆ.

[ ಭಾಷ್ಯ ]

ಎಲೈ ಪಾರ್ಥನೆ, ನೂರುಗಟ್ಟಲೆಯಾಗಿಯೂ ಸಾವಿರಗಟ್ಟಲೆಯಾಗಿಯೂ ಇರುವ ನನ್ನ ರೂಪಗಳನ್ನು ನೋಡು, ಎಂದರೆ ಅನೇಕವಾಗಿರುವ (ರೂಪಗಳನ್ನು ನೋಡು) ಎಂದರ್ಥ. ಅವು ನಾನಾವಿಧವಾಗಿರುವವು, ಎಷ್ಟೋ ಬಗೆಯಾಗಿರುವವು; ದಿವ್ಯವಾಗಿರುವವು ಎಂದರೆ ಸ್ವರ್ಗದಲ್ಲಿರತಕ್ಕವು, ಅಪ್ರಾಕೃತವಾದವು; ನಾನಾವರ್ಣಾಕೃತಿಗಳುಳ್ಳವು, ನಾನಾ ಎಂದರೆ ಕಪ್ಪು ಹಸುರು ಮುಂತಾದ ಬಗೆಬಗೆಯ ಬಣ್ಣಗಳನ್ನೂ ಮತ್ತು (ಬಗೆಬಗೆಯ) ಆಕೃತಿಗಳನ್ನೂ ಎಂದರೆ ಅವಯವಗಳ ಜೋಡಣೆಗಳನ್ನೂ ಉಳ್ಳ ರೂಪಗಳಾಗಿರುವವು. ಅಂಥ ನಾನಾವರ್ಣಾಕೃತಿಗಳ (ರೂಪಗಳನ್ನು ನೋಡು.) ‖ ೫ ‖

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ‖ ೬ ‖**

೬. ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಅಶ್ವಿನೀದೇವತೆಗಳನ್ನೂ ಮರುತ್ತರನ್ನೂ ನೋಡು ; ಎಲೈ ಭರತವಂಶೋತ್ಪನ್ನನೆ, ಹಿಂದೆ ನೋಡದೆ ಇದ್ದ ಅನೇಕ ಆಶ್ಚರ್ಯಗಳನ್ನೂ ನೋಡು.

[ ಭಾಷ್ಯ ]

ಎಲೈ ಭರತವಂಶೋತ್ಪನ್ನನೆ, ಹನ್ನೆರಡು ಜನ **ಆದಿತ್ಯ**ರನ್ನೂ* ಎಂಟು ಜನ **ವಸು**ಗಳನ್ನೂ ಹನ್ನೊಂದು ಜನ ರುದ್ರರನ್ನೂ ಇಬ್ಬರು **ಅಶ್ವಿನೀದೇವತೆ**ಗಳನ್ನೂ, ಏಳೇಳರ ಗುಂಪುಗಳುಳ್ಳ **ಮರುತ್ತರನ್ನೂ** ನೋಡು. ಮತ್ತು ಮನುಷ್ಯಲೋಕದಲ್ಲಿ ನೀನಾಗಲಿ ಮತ್ತೆ ಯಾರಾಗಲಿ ಹಿಂದೆ ಎಂದೂ ನೋಡದೆ ಇರುವ ಇನ್ನೂ ಅನೇಕ ಆಶ್ಚರ್ಯಗಳನ್ನೂ ಎಂದರೆ ಅದ್ಭುತಗಳನ್ನೂ ನೋಡು. ‖ ೬ ‖

ಇಷ್ಟೇ ಅಲ್ಲ,

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ‖ ೭ ‖**

---

* ಆದಿತ್ಯರೇ ಮೊದಲಾದ ವೈದಿಕದೇವತೆಗಳ ಹೆಸರುಗಳನ್ನು ಭಾರತದ ಶಾಂತಿಪರ್ವದ ೨೦೮ನೆಯ ಅಧ್ಯಾಯದಲ್ಲಿ ಕೊಟ್ಟಿದೆ; ಭಾರತದ ಆದಿಪರ್ವ, ಅನುಶಾಸನಿಕಪರ್ವ- ಇವುಗಳಲ್ಲಿಯೂ ಕೊಟ್ಟಿದೆ. ಸರ್ವದೇವಾತ್ಮಕವಾದ ಇದೇ ಬಗೆಯ ವಿಶ್ವರೂಪವನ್ನು ಪರಮಾತ್ಮನು ನಾರದರಿಗೆ ತೋರಿಸಿದನೆಂದು ಮೋಕ್ಷಧರ್ಮದ ೩೩೯ನೆಯ ಅಧ್ಯಾಯದಲ್ಲಿ ವರ್ಣನೆಯಿದೆ. ಪರಮಾತ್ಮನನ್ನು ಭಜಿಸುವವರು ಎಲ್ಲ ದೇವತೆಗಳನ್ನೂ ಭಜಿಸಿದಂತಾಯಿತೆಂಬುದಕ್ಕೆ ಇದೊಂದು ನಿದರ್ಶನವನ್ನು ಕೊಟ್ಟಂತಾಯಿತು. ಗೀತಾರ್ಥಸರ್ವಸ್ವವನ್ನು ನೋಡಿ.

೭. ಎಲೈ ಗುಡಾಕೇಶನೆ, ಇಲ್ಲಿ ನನ್ನ ದೇಹದಲ್ಲಿ ಒಂದೇ ಕಡೆಯಲ್ಲಿ ಚರಾಚರವಾದ ಜಗತ್ತೆಲ್ಲವೂ (ಇರುವದನ್ನು) ಈಗ ನೋಡು. ಮತ್ತು ಬೇರೆ ಯಾವ ಯಾವದನ್ನು ನೋಡಲಿಚ್ಛಿಸುವೆಯೋ (ಅದನ್ನೆಲ್ಲ ನೋಡು).

[ ಭಾಷ್ಯ ]

ಇಲ್ಲಿ ಒಂದೇ ಕಡೆಯಲ್ಲಿ ಜಗತ್ತೆಲ್ಲವೂ ಇರುವದನ್ನು ಈಗ ನೋಡು. ಚರಾಚರವಾದ ಎಂದರೆ ಸ್ಥಾವರಗಳಿಂದಲೂ ಜಂಗಮಗಳಿಂದಲೂ ಕೂಡಿರುವ (ಜಗತ್ತೆಲ್ಲವೂ) ನನ್ನ ದೇಹದಲ್ಲಿ ಇರುವದನ್ನು (ನೋಡು); ಎಲೈ ಗುಡಾಕೇಶನೆ, ಮತ್ತು ಏನನ್ನು ಎಂದರೆ '(ನಾವು) ಜಯಿಸುತ್ತೇವೆಯೋ ಅಥವಾ ನಮ್ಮನ್ನೇ ಗೆಲ್ಲುವರೋ' (೨-೬.) ಎಂದು ಸಂದೇಹಪಟ್ಟೆಯಲ್ಲ, ಆ (ಗೆಲವುಸೋಲುಗಳ ನಿಜವನ್ನು) ನೋಡಲೆಳಸುವೆಯಾದರೆ ಅದನ್ನೂ (ನೋಡು.) ॥ ೭ ॥

ಆದರೆ,

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮ ॥**

೮. ಆದರೆ ಈ ನಿನ್ನ ಕಣ್ಣಿನಿಂದಲೇ ನನ್ನನ್ನು ನೀನು ನೋಡಲಾರೆ. ನಿನಗೆ ದಿವ್ಯಚಕ್ಷುವನ್ನು ಕೊಡುವೆನು. ನನ್ನ ಐಶ್ವರಯೋಗವನ್ನು ನೋಡು.

[ ಭಾಷ್ಯ ]

ವಿಶ್ವರೂಪಧರನಾದ ನನ್ನನ್ನು ಈ ಪ್ರಾಕೃತವಾದ ನಿನ್ನ ಕಣ್ಣಿನಿಂದಲೇ ನೋಡಲಾರೆ; ಯಾವ ದಿವ್ಯಚಕ್ಷುವಿನಿಂದಲಾದರೆ ನೋಡಲಾಪೆಯೋ ಅಂಥ ದಿವ್ಯ ಚಕ್ಷುಸ್ಸನ್ನು ನಿನಗೆ ಕೊಡುವೆನು, ಆ (ಚಕ್ಷುಸ್ಸಿನಿಂದ) ನನ್ನ ಐಶ್ವರಯೋಗವನ್ನು ಎಂದರೆ ಈಶ್ವರನಾದ ನನ್ನ ಯೋಗಶಕ್ತಿಯ ಹೆಚ್ಚುಗಾರಿಕೆಯನ್ನು ನೋಡು ಎಂದರ್ಥ. ॥ ೮ ॥

## ಭಗವಂತನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದು

**ಸಂಜಯ ಉವಾಚ:—**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

ಸಂಜಯನು ಹೇಳಿದ್ದೇನೆಂದರೆ :—

೯. ರಾಜನೆ, ಮಹಾಯೋಗೇಶ್ವರನಾದ ಹರಿಯು ಹೀಗೆಂದು ನುಡಿದು, ಪಾರ್ಥನಿಗೆ ಐಶ್ವರವಾದ ಪರಮರೂಪವನ್ನು ತೋರಿಸಿದನು.

[ ಭಾಷ್ಯ ]

ಹೀಗೆ ಮೇಲೆ ಹೇಳಿದಂತೆ ನುಡಿದು ಆಮೇಲೆ, ಎಲೈ ಧೃತರಾಷ್ಟ್ರರಾಜನೆ, ಮಹಾಯೋಗೇಶ್ವರನಾದ ಹರಿಯು ಎಂದರೆ ದೊಡ್ಡವನೂ ಯೋಗಿಗಳೊಡೆಯನೂ ಆದ **ನಾರಾಯಣನು** ಪೃಥೆಯ ಮಗನಾದ ಅರ್ಜುನನಿಗೆ ಈಶ್ವರಸಂಬಂಧವಾದ ಪರಮರೂಪವನ್ನು ಎಂದರೆ ಈಶ್ವರನಾದ (ತನ್ನ) ವಿಶ್ವರೂಪವನ್ನು ತೋರಿಸಿದನು.

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

೧೦. ಅನೇಕ ವಕ್ತ್ರನಯನಗಳುಳ್ಳದ್ದಾಗಿಯೂ ಅನೇಕವಾದ ಅದ್ಭುತ ದರ್ಶನಗಳುಳ್ಳದ್ದಾಗಿಯೂ ಅನೇಕ ದಿವ್ಯಾಭರಣಗಳುಳ್ಳದ್ದಾಗಿಯೂ ಅನೇಕ ದಿವ್ಯಾಯುಧಗಳನ್ನು ಎತ್ತಿಹಿಡಿದುಕೊಂಡಿರುವದಾಗಿಯೂ (ಇರುವ ರೂಪವನ್ನು ತೋರಿಸಿದನು.)

[ ಭಾಷ್ಯ ]

(ಅದು) ಅನೇಕವಕ್ತ್ರನಯನಗಳುಳ್ಳದ್ದು, ಎಂದರೆ ಆ ರೂಪದಲ್ಲಿ ಲೆಕ್ಕವಿಲ್ಲದಷ್ಟು ಮುಖಗಳೂ ಕಣ್ಣುಗಳೂ ಇದ್ದವು; ಮತ್ತು ಅನೇಕವಾದ ಅದ್ಭುತದರ್ಶನಗಳುಳ್ಳದ್ದು ಎಂದರೆ ಅದ್ಭುತವಾಗಿ ಅಚ್ಚರಿಗೊಳಿಸುವಂಥ ಲೆಕ್ಕವಿಲ್ಲದಷ್ಟು ನೋಟಗಳು ಆ ರೂಪದಲ್ಲಿದ್ದವು ; ಅದರಂತೆ ಅದು ಅನೇಕ ದಿವ್ಯಾಭರಣಗಳುಳ್ಳದ್ದು, ಲೆಕ್ಕವಿಲ್ಲದಷ್ಟು ದಿವ್ಯವಾದ ಒಡವೆಗಳು ಅದರಲ್ಲಿದ್ದವು ; ಮತ್ತು ಅದು ದಿವ್ಯವಾದ ಅನೇಕಾಯುಧಗಳನ್ನು ಎತ್ತಿಹಿಡಿದದ್ದು, ಎಂದರೆ ಲೆಕ್ಕವಿಲ್ಲದಷ್ಟು ಅತ್ಯುತ್ತಮವಾದ ಶಸ್ತ್ರಾಸ್ತ್ರಗಳನ್ನು ಅದು ತೊಟ್ಟಿತ್ತು. '(ಇಂಥ ರೂಪವನ್ನು) ತೋರಿಸಿದನು' ಎಂದು ಹಿಂದಿನ (ಶ್ಲೋಕದಲ್ಲಿರುವ ಮಾತಿಗೆ) ಸಂಬಂಧಿಸಿಕೊಳ್ಳಬೇಕು. ॥ ೧೦ ॥

ಮತ್ತು—

**ದಿವ್ಯಮಾಲ್ಯಾಮ್ಬರಧರಂ ದಿವ್ಯಗನ್ಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥ ೧೧ ॥**

೧೧. ದಿವ್ಯಮಾಲ್ಯಾಂಬರಗಳನ್ನು ಧರಿಸಿರುವವನಾಗಿಯೂ ದಿವ್ಯಗಂಧವನ್ನು ಅನುಲೇಪನಮಾಡಿಕೊಂಡಿರುವವನಾಗಿಯೂ ಸರ್ವಾಶ್ಚರ್ಯಮಯನಾಗಿಯೂ ಅನಂತನಾಗಿಯೂ ವಿಶ್ವತೋಮುಖನಾಗಿಯೂ ಇರುವ ದೇವನನ್ನು (ತೋರಿಸಿದನು.)

[ ಭಾಷ್ಯ ]

ದಿವ್ಯಮಾಲ್ಯಾಂಬರಗಳನ್ನು ಧರಿಸಿದ್ದನು ; ಎಂದರೆ ಆ ಈಶ್ವರನು ದಿವ್ಯವಾದ ಹೂಗಳನ್ನೂ ಮುಡಿದುಕೊಂಡಿದ್ದನು, ದಿವ್ಯವಾದ ವಸ್ತ್ರಗಳನ್ನೂ ಹಾಕಿಕೊಂಡಿ

ದ್ದನು; ದಿವ್ಯಗಂಧವನ್ನು ಅನುಲೇಪನಮಾಡಿಕೊಂಡಿದ್ದನು, ಎಂದರೆ ಅತ್ಯುತ್ತಮ ವಾದ ಗಂಧವನ್ನು ಪೂಸಿದ್ದನು; ಸರ್ವಾಶ್ಚರ್ಯಮಯನು, ಎಂದರೆ- ಎಲ್ಲಾ ಬಗೆಯ ಆಶ್ಚರ್ಯಕರವಾದ ನೋಟಗಳಿಂದಲೂ ಕೂಡಿದ್ದನು; ಅನಂತನು ಎಂದರೆ ಆತನಿಗೆ ಅಂತವೇ ಇರಲಿಲ್ಲ; ವಿಶ್ವತೋಮುಖನು, ಎಂದರೆ ಸಕಲಪ್ರಾಣಿಗಳಿಗೂ ಆತ್ಮನಾದ್ದರಿಂದ (ಎಲ್ಲಾ ಕಡೆಗೂ ಮುಖವುಳ್ಳವನಾಗಿದ್ದನು.) ಇಂಥ (ರೂಪ ವನ್ನು* ಶ್ರೀಕೃಷ್ಣನು) 'ತೋರಿಸಿದನು' ಎಂದು (೭ನೆಯ ಶ್ಲೋಕಕ್ಕೆ ಅನುಗುಣ ವಾಗಿ) ಅಥವಾ ಅರ್ಜುನನು ಕಂಡನು ಎಂದು (೧೩ನೆಯ ಶ್ಲೋಕಕ್ಕೆ ಅನುಗುಣ ವಾಗಿ) ಅಧ್ಯಾಹಾರಮಾಡಿಕೊಳ್ಳಬೇಕು. ‖ ೧೧ ‖

ಇನ್ನು ವಿಶ್ವರೂಪನಾದ ಭಗವಂತನ ಪ್ರಕಾಶವುಂಟಷ್ಟೆ, ಅದಕ್ಕೆ ಉಪ ಮಾನವನ್ನು ಹೇಳುತ್ತಾರೆ :—

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ‖ ೧೨ ‖**

೧೨. ದ್ಯುಲೋಕದಲ್ಲಿ ಸೂರ್ಯಸಹಸ್ರದ ಬೆಳಕು ಒಮ್ಮೆಗೇ ಏಳುವ ದಾದರೆ ಅದು ಆ ಮಹಾತ್ಮನ ಪ್ರಕಾಶಕ್ಕೆ ಸಮಾನವಾದೀತು.

[ ಭಾಷ್ಯ ]

(ಮೂಲದಲ್ಲಿರುವ) 'ದಿವಿ' ಎಂಬ ಮಾತಿಗೆ ಅಂತರಿಕ್ಷದಲ್ಲಿ ಎಂದಾಗಲಿ ಮೂರನೆಯದಾದ ಸ್ವರ್ಗದಲ್ಲಿ ಎಂದಾಗಲಿ (ಅರ್ಥಮಾಡಬಹುದು); (ಅಲ್ಲಿ) ಸೂರ್ಯಸಹಸ್ರವು ಎಂದರೆ ಸಾವಿರ ಸೂರ್ಯರು ಒಟ್ಟಿಗೆ ಹುಟ್ಟುವದಾದರೆ ಆ ಸೂರ್ಯರಿಂದ ಒಂದೇ ಕಾಲದಲ್ಲಿ ಬೆಳಕು ಏಳುವದಾದರೆ ಆ ವಿಶ್ವರೂಪನಾದ ಮಹಾತ್ಮನ ಬೆಳಕಿಗೆ ಸಮನಾದರೂ ಆದೀತೋ, ಅಥವಾ ಆಗದೋ; ಎಂದರೆ ಅದಕ್ಕಿಂತಲೂ ವಿಶ್ವರೂಪನ ಬೆಳಕೇ ಹೆಚ್ಚಾದೀತು† ಎಂದಭಿಪ್ರಾಯ. ‖ ೧೨ ‖

ಮತ್ತು—

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ‖ ೧೩ ‖**

---

* ಇದುವರೆಗೆ ವರ್ಣನೆಮಾಡಿರುವ ವಿಶ್ವರೂಪದ ವಿಚಾರವನ್ನು ಗೀತಾರ್ಥಸರ್ವಸ್ವದ ಭಕ್ತಿಯೋಗದಲ್ಲಿ ಚರ್ಚಿಸಿರುತ್ತದೆ.

† ಒಬ್ಬ ಸೂರ್ಯನ ಬೆಳಕನ್ನೇ ಪೂರ್ಣವಾಗಿ ನೋಡುವದಕ್ಕಾಗುವದಿಲ್ಲ; ಸಾವಿರ ಸೂರ್ಯರು ಒಂದೇ ಕಾಲದಲ್ಲಿ ಹುಟ್ಟಿದರೆ, ಅವರ ಬೆಳಕನ್ನು ನೋಡುವದಕ್ಕಾಗಲಿ, ಆ ಬೆಳಕಿನ ಪರಿಣಾಮವನ್ನು ಗೊತ್ತುಹಚ್ಚುವದಕ್ಕಾಗಲಿ ಆಗುವದೆಂಬುದು ಅಸಂಭವವೇ. ಒಂದು ವೇಳೆ ಅದನ್ನು ಗೊತ್ತುಮಾಡಿದರೂ ಮಾಡಬಹುದು, ಪರಮಾತ್ಮನ ಪ್ರಕಾಶವನ್ನು ಇಷ್ಟೆಂದು ನಿರ್ಣಯಿ ಸುವದಕ್ಕಂತೂ ಆಗಲಾರದು- ಎಂದು ಭಾವ.

೧೩. ಅನೇಕಪ್ರಕಾರವಾಗಿ ವಿಂಗಡವಾಗಿರುವ ಜಗತ್ತೆಲ್ಲವೂ ಅಲ್ಲಿ ದೇವತೆಗಳಿಗೆಲ್ಲ ದೇವನಾದ (ಅವನ) ಶರೀರದಲ್ಲಿ ಏಕಸ್ಥವಾಗಿದ್ದುದನ್ನು ಆಗ ಪಾಂಡವನು ಕಂಡನು.

[ ಭಾಷ್ಯ ]

ಅಲ್ಲಿ ಎಂದರೆ ಆ ವಿಶ್ವರೂಪದಲ್ಲಿ ಅನೇಕಪ್ರಕಾರವಾಗಿ ಎಂದರೆ ದೇವತೆಗಳು, ಪಿತೃಗಳು, ಮನುಷ್ಯರು– ಎಂಬಿವೇ ಮುಂತಾದ ಭೇದಗಳಿಂದ ವಿಂಗಡವಾಗಿರುವ ಜಗತ್ತೆಲ್ಲವೂ ದೇವತೆಗಳಿಗೆಲ್ಲ ದೇವನಾದ ಹರಿಯ ಶರೀರದಲ್ಲಿ ಏಕಸ್ಥವಾಗಿರುವದನ್ನು ಎಂದರೆ ಒಕ್ಕಡೆಯಲ್ಲಿಯೇ ಇರುವದನ್ನು ಆಗ ಪಾಂಡವನಾದ ಅರ್ಜುನನು ಕಂಡನು. ॥ ೧೩ ॥

ಅರ್ಜುನನು ಕಂಡ ವಿಶೇಷಗಳು, ಆಗ ಅವನು ಆಡಿದ ಮಾತು.

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

೧೪. ಆಮೇಲೆ ವಿಸ್ಮಯಾವಿಷ್ಟನಾದ ಹೃಷ್ಟರೋಮನಾದ ಧನಂಜಯನು (ಆ) ದೇವನಿಗೆ ಶಿರಸ್ಸಿನಿಂದ ಪ್ರಣಾಮಮಾಡಿ ಕೃತಾಂಜಲಿಯಾಗಿ ಹೀಗೆಂದನು.

[ ಭಾಷ್ಯ ]

ಬಳಿಕ ಆತನನ್ನು ಕಂಡು ಧನಂಜಯನು ವಿಸ್ಮಯದಿಂದ ಕೂಡಿದವನಾಗಿ ಬೆರಗಾಗಿ ಹೃಷ್ಟರೋಮನಾದನು ಎಂದರೆ ನೆಟ್ಟಗೆ ಎದ್ದುನಿಂತ ಮೈಗೂದಲುಳ್ಳವನಾದನು. ವಿಶ್ವರೂಪಧರನಾದ ಆ ದೇವನಿಗೆ ಶಿರಸ್ಸಿನಿಂದ ಪ್ರಣಾಮಮಾಡಿ, ಎಂದರೆ ಚೆನ್ನಾಗಿ ತಲೆಬಾಗಿ ಅಡ್ಡಬಿದ್ದು ಕೃತಾಂಜಲಿಯಾಗಿ ಎಂದರೆ ನಮಸ್ಕಾರಕ್ಕಾಗಿ ಕೈಮುಗಿದುಕೊಂಡು ಹೀಗೆಂದನು. ॥ ೧೪ ॥

ಹೇಗೆಂದರೆ, ನೀನು ತೋರಿಸಿದೆಯಲ್ಲ, ಆ ವಿಶ್ವರೂಪವು ನನಗೆ ಕಾಣುತ್ತಿದೆ– ಎಂದು ತನ್ನ ಅನುಭವವನ್ನು ತೋರ್ಪಡಿಸುವದಕ್ಕಾಗಿ ಅರ್ಜುನನಿಂತೆಂದನು.

**ಅರ್ಜುನ ಉವಾಚ:—**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಙ್ಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

೧೫. ದೇವನೆ, ನಿನ್ನ ದೇಹದಲ್ಲಿ ಎಲ್ಲಾ ದೇವತೆಗಳನ್ನೂ ಭೂತವಿಶೇಷಗಳ ಸಂಘಗಳನ್ನೂ ಕಮಲಾಸನಸ್ಥನಾದ ಈಶ್ವರನಾದ ಬ್ರಹ್ಮನನ್ನೂ ಸರ್ವ ಋಷಿಗಳನ್ನೂ ದಿವ್ಯರಾದ ಉರಗರನ್ನೂ ಕಾಣುತ್ತಿದೇನೆ.

[ ಭಾಷ್ಯ ]

ಎಲೈ ದೇವನೆ, ನಿನ್ನ ದೇಹದಲ್ಲಿ ಎಲ್ಲಾ ದೇವತೆಗಳನ್ನೂ ಭೂತವಿಶೇಷಗಳ ಸಂಘಗಳನ್ನೂ-- ಸ್ಥಾವರ, ಜಂಗಮ-- ಎಂಬ ಬಗೆಬಗೆಯ ಆಕಾರಗಳ ಪ್ರಾಣಿಗಳ ಗುಂಪುಗಳೇ ಭೂತವಿಶೇಷಸಂಘಗಳು; ಅವುಗಳನ್ನೂ-- ಮತ್ತು ಈಶ್ವರನಾದ ಎಂದರೆ ಪ್ರಜೆಗಳೊಡೆಯನಾದ **ಚತುರ್ಮುಖಬ್ರಹ್ಮ**ದೇವನು ಕಮಲಾಸನದಲ್ಲಿರುವದನ್ನೂ ಎಂದರೆ ಭೂಮಿಯೆಂಬ* ತಾವರೆಯ ನಡುವೆ ಮೇರುವೆಂಬ ಕರ್ಣಿಕೆಯ ಮೇಲೆ ಕೂತಿರುವದನ್ನೂ ಎಂದರ್ಥ; ವಸಿಷ್ಠರೇ ಮೊದಲಾದ ಎಲ್ಲಾ **ಋಷಿ**ಗಳನ್ನೂ ದಿವ್ಯರಾದ ಎಂದರೆ ದೇವಲೋಕದಲ್ಲಿರುವ ವಾಸುಕಿಯೇ ಮೊದಲಾದ **ಉರಗರ**ನ್ನೂ (ಸರ್ಪಗಳನ್ನೂ) ಕಾಣುತ್ತಿದೇನೆ. ॥ ೧೫ ॥

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾ ಸರ್ವತೋಽನನ್ತರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

೧೬. ವಿಶ್ವರೂಪನಾದ ವಿಶ್ವೇಶ್ವರನೆ, ಅನೇಕವಾದ ಬಾಹೂದರವಕ್ತ್ರನೇತ್ರಗಳುಳ್ಳವನನ್ನಾಗಿಯೂ ಅನಂತರೂಪನನ್ನಾಗಿಯೂ ಎಲ್ಲಾ ಕಡೆಯಲ್ಲಿಯೂ ನಿನ್ನನ್ನು ಕಾಣುತ್ತಿದೇನೆ. ಎಲೈ ವಿಶ್ವೇಶ್ವರನೆ, ವಿಶ್ವರೂಪನೆ, ನಿನ್ನ ಅಂತವನ್ನಾಗಲಿ, ಮಧ್ಯವನ್ನಾಗಲಿ, ಆದಿಯನ್ನಾಗಲಿ ಕಾಣದಿರುವೆನು.

[ ಭಾಷ್ಯ ]

ಎಲೈ ಎಲ್ಲಕ್ಕೂ ಒಡೆಯನಾದ ವಿಶ್ವರೂಪಿಯಾದ ದೇವನೆ, ಅನೇಕವಾದ ಬಾಹೂದರವಕ್ತ್ರನೇತ್ರನನ್ನಾಗಿಯೂ ಎಂದರೆ ಎಷ್ಟೋ ತೋಳುಗಳೂ ಹೊಟ್ಟೆಗಳೂ ಬಾಯಿಗಳೂ ಕಣ್ಣುಗಳೂ ಇರುವವನು ನೀನು-- ಇಂಥವನನ್ನಾಗಿಯೂ; ಅನಂತರೂಪನನ್ನಾಗಿಯೂ ಎಂದರೆ ನಿನ್ನ ರೂಪಗಳು ಲೆಕ್ಕವಿಲ್ಲದಷ್ಟಿರುವವು-- ಅಂಥವನನ್ನಾಗಿಯೂ ಇರುವ ನಿನ್ನನ್ನು ಎಲ್ಲಾ ಕಡೆಯಲ್ಲಿಯೂ ಕಾಣುತ್ತಿದೇನೆ. ನಿನ್ನ ಅಂತವೂ ಎಂದರೆ ಕಡೆಯೂ-ಮಧ್ಯವೂ-- ಮಧ್ಯವೆಂದರೆ ಎರಡು ಕಡೆ

---

* ಬ್ರಹ್ಮನು ಪೃಥ್ವೀಪದ್ಮದ ಕರ್ಣಿಕೆಯಾದ ಮೇರುವಿನಲ್ಲಿ ಕುಳಿತುಕೊಂಡು ಸೃಷ್ಟಿಮಾಡುವನೆಂದು ಶಾಂತಿಪರ್ವ ಮೋ॥ ೧೮೨-೮೮ರಲ್ಲಿ ವರ್ಣಿಸಿದೆ.

ಗಳ ನಡುವಣ ಭಾಗವು- ಮತ್ತು ನಿನ್ನ ಆದಿಯೂ (ಕಾಣುವದಿಲ್ಲ). ದೇವ ನಾದ ನಿನ್ನ ಕೊನೆ ಯಾವದೆಂಬುದೂ ಕಾಣುವದಿಲ್ಲ, ನಡುವಣ ಭಾಗವಾವುದೋ ಅದೂ ಕಾಣುವದಿಲ್ಲ, ಮತ್ತು ಮೊದಲು ಯಾವದೋ ಅದೂ ಕಾಣುವದಿಲ್ಲ (ಎಂದಭಿಪ್ರಾಯು).

ಮತ್ತು—

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮನ್ತಂ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮನ್ತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

೧೭. ಕಿರೀಟಿಯೂ ಗದಿಯೂ ಚಕ್ರಿಯೂ ತೇಜಸ್ಸಿನ ರಾಶಿಯೂ ಎಲ್ಲೆಲ್ಲಿಯೂ ದೀಪ್ತಿಯುಳ್ಳವನಾಗಿ ನೋಡುವದಕ್ಕೆ ಕಷ್ಟವಾಗಿರುವವನಾಗಿ ಎಲ್ಲಾ ಕಡೆಯಲ್ಲಿಯೂ ಬೆಳಗುವ ಬೆಂಕಿ ಮತ್ತು ಸೂರ್ಯ- ಇವುಗಳಂತೆ ದ್ಯುತಿಯುಳ್ಳವನಾಗಿಯೂ ಅಪ್ರಮೇಯನಾಗಿಯೂ ನನಗೆ ಕಾಣಿಸುತ್ತಿರುವೆ.

[ ಭಾಷ್ಯ ]

ಕಿರೀಟವೆಂಬುದು ತಲೆಗೆ ಹಾಕಿಕೊಳ್ಳುವ ಒಂದು ಒಡವೆಯು; ಅದು ಯಾವಾತನಿಗಿದೆಯೋ ಅವನು ಕಿರೀಟಿಯು. ಅಂಥ ಕಿರೀಟಿಯಾಗಿ (ನನಗೆ ಕಾಣಿಸುತ್ತಿರುವೆ). ಮತ್ತು ಗದೆಯು ಯಾವಾತನಲ್ಲಿರುವದೋ ಆತನು ಗದಿಯು; ಅಂಥ ಗದಿಯಾಗಿ (ಕಾಣುತ್ತಿರುವೆ). ಮತ್ತು ಚಕ್ರವಿರುವಾತನಿಗೆ ಚಕ್ರಿ ಎಂದು ಹೆಸರು; ಅಂಥ ಚಕ್ರಿಯಾಗಿ (ಕಾಣಿಸುತ್ತಿರುವೆ). ಎಲ್ಲೆಲ್ಲಿಯೂ ಬೆಳಗುತ್ತಿರುವ ತೇಜೋರಾಶಿಯಾಗಿ ಎಂದರೆ ಬೆಳಕಿನ ಸಮೂಹವಾಗಿ (ಕಾಣಿಸುತ್ತಿರುವೆ). ನೀನು ದುರ್ನಿರೀಕ್ಷ್ಯನು, ಎಂದರೆ ನಿನ್ನನ್ನು ನೋಡುವದು ಕಷ್ಟವು. ಎಲ್ಲಾ ಕಡೆಯಲ್ಲಿಯೂ ಬೆಳಗುತ್ತಿರುವ ಬೆಂಕಿ ಮತ್ತು ಸೂರ್ಯ- ಇವುಗಳ ದ್ಯುತಿಯಂತೆ ದ್ಯುತಿಯುಳ್ಳವನಾಗಿ ಆ ಬೆಳಕಿನಿಂದ ಝಗಝಗಿಸುವವನಾಗಿಯೂ (ಕಾಣಿಸುತ್ತಿರುವೆ.) ಅಪ್ರಮೇಯನಾಗಿಯೂ ಎಂದರೆ (ಪ್ರಮಾಣಗಳಿಂದ) ಗೊತ್ತುಪಡಿಸುವದಕ್ಕೆ ಅಶಕ್ಯನಾಗಿಯೂ (ಕಾಣಿಸುತ್ತಿರುವೆ) ಎಂದರ್ಥ. ॥ ೧೭ ॥

ಹೀಗೆ ನಿನ್ನ ಯೋಗಶಕ್ತಿಯನ್ನು ಕಂಡದ್ದರಿಂದಲೇ ನಾನು ಊಹಿಸುವದೇನೆಂದರೆ:—

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥**

೧೮. ಅರಿತುಕೊಳ್ಳತಕ್ಕದ್ದಾದ ಹೆಚ್ಚಿನ ಅಕ್ಷರವು ನೀನು ; ಈ ವಿಶ್ವಕ್ಕೆ ಪರಮನಿಧಾನವು ನೀನು ; ಅವ್ಯಯನು ನೀನು ; ಶಾಶ್ವತವಾದ ಧರ್ಮವನ್ನು ಕಾಪಾಡುವವನು (ನೀನು); ನೀನು ಸನಾತನನಾದ ಪುರುಷನೆಂದು ನನ್ನ ಮತವು.

[ ಭಾಷ್ಯ ]

ನೀನು ಮುಮುಕ್ಷುಗಳು ಅರಿತುಕೊಳ್ಳಬೇಕಾಗಿರುವ ಪರಮ ಅಕ್ಷರವು, ಎಂದರೆ ನಾಶವಾಗದೆ ಇರುವ ಪರಬ್ರಹ್ಮವು. ಈ ಜಗತ್ತಿಗೆಲ್ಲ ನೀನು ಹೆಚ್ಚಿನ ಉತ್ಕೃಷ್ಟವಾದ ನಿಧಾನವು-ಯಾವದರಲ್ಲಿ ಯಾವದಾದರೊಂದನ್ನು ಇಡಬಹುದೋ ಅದು ನಿಧಾನವು; (ನೀನು ಈ ಜಗತ್ತಿಗೆ ಅಂಥ ನಿಧಾನವು)– ಎಂದರೆ ಹೆಚ್ಚಿನ ಆಶ್ರಯವಾಗಿರುವೆ ಎಂದರ್ಥ. ಮತ್ತು ನೀನು ಅವ್ಯಯನು, ಎಂದರೆ ನೀನು ನಾಶವಾಗುವದೆಂಬುದಿಲ್ಲ. ಶಾಶ್ವತಧರ್ಮಗೋಪ್ತನು: ಶಾಶ್ವತವಾದ ಎಂದರೆ ಯಾವಾಗಲೂ ಇರುವ ನಿತ್ಯವಾದ ಧರ್ಮವು ಶಾಶ್ವತಧರ್ಮವು; ಅದನ್ನು ಕಾಪಾಡುವವನು. ನೀನು ಸನಾತನನಾದ ಎಂದೆಂದಿಗೂ ಇರುವ ಪರಮ ಪುರುಷನೆಂದು ನನ್ನ ಮತವು, (ಹೀಗೆಂದು) ನನ್ನ ಅಭಿಪ್ರಾಯವು. ॥ ೧೮ ॥

ಮತ್ತು—

**ಅನಾದಿಮಧ್ಯಾನ್ತಮನನ್ತವೀರ್ಯ-**
**ಮನನ್ತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥ ೧೯ ॥**

೧೯. ಆದಿಮಧ್ಯಾನ್ತಗಳಿಲ್ಲದವನಾಗಿಯೂ ಅನನ್ತವೀರ್ಯನನ್ನಾಗಿಯೂ ಅನನ್ತಬಾಹುವನ್ನಾಗಿಯೂ ಶಶಿಸೂರ್ಯರೆಂಬ ನೇತ್ರಗಳುಳ್ಳವನಾಗಿಯೂ ಹೊತ್ತಿ ಉರಿಯುತ್ತಿರುವ ಅಗ್ನಿಯೆಂಬ ಮುಖವುಳ್ಳವನಾಗಿಯೂ ನಿನ್ನ ತೇಜಸ್ಸಿನಿಂದ ಈ ವಿಶ್ವವನ್ನು ಸುಡುತ್ತಿರುವವನನ್ನಾಗಿಯೂ ನಿನ್ನನ್ನು ಕಾಣುತ್ತಿದ್ದೇನೆ

[ ಭಾಷ್ಯ ]

ಆದಿಮಧ್ಯಾನ್ತಗಳಿಲ್ಲದವನನ್ನಾಗಿಯೂ- ಯಾವಾತನಿಗೆ ಮೊದಲು, ನಡುವೆ, ಕೊನೆ- ಇವುಗಳಿಲ್ಲವೋ ಆ ನೀನು ಆದಿಮಧ್ಯಾನ್ತಗಳಿಲ್ಲದವನು ಹೀಗೆ.- ಆದಿ

ಮಧ್ಯಾಂತರಹಿತನನ್ನಾಗಿಯೂ; ಅನಂತವೀರ್ಯನನ್ನಾಗಿಯೂ– ನಿನ್ನ ವೀರ್ಯಕ್ಕೆ ಕೊನೆಯೇ ಇಲ್ಲದ್ದರಿಂದ ನೀನು ಅನನ್ತವೀರ್ಯನು, ಹೀಗೆ– ಕೊನೆಗಾಣದ ಸಾಮರ್ಥ್ಯವುಳ್ಳವನನ್ನಾಗಿಯೂ ; ಮತ್ತು ಅನನ್ತಬಾಹುವನ್ನಾಗಿಯೂ– ಲೆಕ್ಕವಿಲ್ಲದಷ್ಟು ಬಾಹುಗಳಿರುವದ್ದರಿಂದ ನೀನು ಅನನ್ತಬಾಹುವು, ಆದ್ದರಿಂದ– ಅಗಣಿತಸಂಖ್ಯೆಯ ತೋಳುಗಳಿರುವವನನ್ನಾಗಿಯೂ ; ಶಶಿಸೂರ್ಯನೇತ್ರನನ್ನಾಗಿಯೂ– ಶಶಿಸೂರ್ಯರೇ ನಿನ್ನ ನೇತ್ರಗಳಾಗಿರುವದರಿಂದ ನೀನು ಶಶಿಸೂರ್ಯನೇತ್ರನಾಗಿರುವೆ, ಹೀಗೆ– ಚಂದ್ರಸೂರ್ಯರೆಂಬ ಕಣ್ಣುಗಳುಳ್ಳವನನ್ನಾಗಿಯೂ, ನಿನ್ನನ್ನು ಕಾಣುತ್ತಿರುವೆನು. ದೀಪ್ತಹುತಾಶವಕ್ತ್ರನನ್ನಾಗಿಯೂ– ಹೊತ್ತಿಕೊಂಡುರಿಯುತ್ತಿರುವ ಬೆಂಕಿಯೇ ನಿನ್ನ ಮುಖವಾಗಿರುವದರಿಂದ ನೀನು ದೀಪ್ತಹುತಾಶವಕ್ತ್ರನು, ಹೀಗೆ– ಧಗಧಗನೆ ಉರಿಯುವ ಅಗ್ನಿಯೆಂಬ ಮುಖವುಳ್ಳವನನ್ನಾಗಿಯೂ ನಿನ್ನ ತೇಜಸ್ಸಿನಿಂದ ಈ ಜಗತ್ತನ್ನೇ* ಸುಡುತ್ತಿರುವವನನ್ನಾಗಿಯೂ (ಕಾಣುತ್ತಿರುವೆನು.) ॥ ೧೯ ॥

**ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥**

೨೦. ಸ್ವರ್ಗಲೋಕ ಮತ್ತು ಭೂಲೋಕ– ಇವುಗಳ ನಡುವಣ ಪ್ರದೇಶವೂ ಎಲ್ಲಾ ದಿಕ್ಕುಗಳೂ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವವು, ಎಲೈ ಮಹಾತ್ಮನೆ, ಅದ್ಭುತವಾದ ಉಗ್ರರೂಪವನ್ನು ನೋಡಿ ಲೋಕತ್ರಯವೂ ವ್ಯಥೆಗೊಂಡಿದೆ.

[ಭಾಷ್ಯ]

ಸ್ವರ್ಗ ಮತ್ತು ಭೂಲೋಕ ಇವುಗಳ ನಡುವೆ ಇರುವ ಅಂತರಿಕ್ಷವು ವಿಶ್ವರೂಪವನ್ನು ಧರಿಸಿರುವ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವದು, ಎಲ್ಲಾ ದಿಕ್ಕುಗಳೂ (ನಿನ್ನಿಂದಲೇ) ವ್ಯಾಪ್ತವಾಗಿರುವವು. ಎಲೈ ಮಹಾತ್ಮನೆ, ಎಂದರೆ ಸಾಮಾನ್ಯವಾದ ಸ್ವಭಾವದವನಲ್ಲದ (ಭಗವಂತನೆ,) ಈ ಅದ್ಭುತವಾದ ಎಂದರೆ ಆಶ್ಚರ್ಯವನ್ನುಂಟುಮಾಡುವ ನಿನ್ನ ಉಗ್ರವಾದ ಎಂದರೆ ಕ್ರೂರವಾದ ರೂಪವನ್ನು ಕಂಡು ಮೂರುಲೋಕವೂ ವ್ಯಥೆಗೊಂಡಿರುವದು, ಎಂದರೆ ಹೆದರಿರುವದು ಅಥವಾ ನಡುಗುತ್ತಿರುವದು. ॥ ೨೦ ॥

* 'ವಿಶ್ವಮಿದಂ ಸಮಸ್ತಂ' ಎಂಬ ಮ॥ ಪಾಠದಲ್ಲಿ ಜಗತ್ತನ್ನೆಲ್ಲ ಎಂದು ಕನ್ನಡಿಸಿಕೊಳ್ಳಬೇಕು.

ಹಿಂದೆ 'ನಾವು ಗೆಲ್ಲುವೆವೋ ನಮ್ಮನ್ನೇ ಗೆಲ್ಲುವರೋ!' (೨-೬) ಎಂದು ಅರ್ಜುನನು ಸಂಶಯಗೊಂಡಿದ್ದನಷ್ಟೆ, ಅದನ್ನು (ಹೀಗೆಯೇ ಸರಿ) ಎಂದು ತೀರ್ಮಾನಮಾಡಿ ಪಾಂಡವರು ಗೆಲ್ಲುವರೆಂಬುದೇ ನಿಶ್ಚಯವೆಂಬುದನ್ನೂ ತೋರಿ ಸೋಣವೆಂದು ಈಗ ಭಗವಂತನು ಹೊರಟಿರುತ್ತಾನೆ. ಆತನನ್ನು ಕಂಡು ಅರ್ಜು ನನು ಮತ್ತೂ ಹೇಳುತ್ತಾನೇನೆಂದರೆ:—

**ಅಮೀ ಹಿ ತ್ವಾ ಸುರಸಙ್ಘಾ ವಿಶನ್ತಿ**
**ಕೇಚಿದ್ಭೀತಾಃ ಪ್ರಾಞ್ಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಙ್ಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

೨೧. ಈ ಸುರಸಂಘಗಳು ನಿನ್ನನ್ನೇ ಹೊಗುತ್ತಿರುವವು; ಕೆಲವರು ಹೆದರಿ ಕೈಮುಗಿದುಕೊಂಡು ಸ್ತುತಿಸುತ್ತಿರುವರು; ಮಹರ್ಷಿಗಳ ಮತ್ತು ಸಿದ್ಧರ ಸಂಘಗಳು 'ಸ್ವಸ್ತಿ' ಎಂದು ಹೇಳುತ್ತಾ ನಿನ್ನನ್ನು ಪುಷ್ಕಲವಾದ ಸ್ತುತಿಗಳಿಂದ ಸ್ತುತಿಗೈಯುತ್ತಿರುವವು.

[ ಭಾಷ್ಯ ]

ಯುದ್ಧಮಾಡುತ್ತಿರುವ ಈ ಪಟುಭಟರ ರೂಪದಲ್ಲಿರುವ ಸುರರಸಂಘಗಳು ಎಂದರೆ ಯಾರು ಇಲ್ಲಿ ಭೂಮಿಯ ಭಾರವನ್ನು ಇಳಿಸುವದಕ್ಕೋಸ್ಕರ ಮನುಷ್ಯ ರೂಪದಿಂದ ಅವತರಿಸಿರುವರೋ (ಆ) ವಸುಗಳೇ ಮೊದಲಾದ **ಗಣದೇವತೆ**ಗಳು ನಿನ್ನನ್ನು ಹೊಗುತ್ತಿರುವರು ಎಂದರೆ ಹೊಗುತ್ತಿರುವದನ್ನು ನೋಡುತ್ತಿದ್ದೇನೆ. ಅವರಲ್ಲಿ ಇನ್ನು ಕೆಲವರು ಓಡಿಹೋಗುವದರಲ್ಲಿಯೂ ಅಶಕ್ತರಾಗಿ ಹೆದರಿ ಕೈಮುಗಿದುಕೊಂಡವರಾಗಿ ನಿನ್ನನ್ನು ಸ್ತುತಿಮಾಡುತ್ತಿರುವರು. (ಮತ್ತು) ಯುದ್ಧವು ಮೊದಲಾಗಲು (ಆದ) ಉತ್ಪಾತವೇ ಮುಂತಾದ ಕೆಟ್ಟ ಶಕುನಗಳನ್ನು ಕಂಡು 'ಜಗತ್ತಿಗೆ ಕಲ್ಯಾಣವಾಗಲಿ' ಎನ್ನುತ್ತಾ ಮಹರ್ಷಿಸಿದ್ಧ ಸಂಘಗಳು ಎಂದರೆ ಮಹರ್ಷಿಗಳ ಮತ್ತು ಸಿದ್ಧರ ಗುಂಪುಗಳು ಪುಷ್ಕಲವಾದ ಎಂದರೆ ಸಂಪೂರ್ಣವಾದ ಸ್ತುತಿಗಳಿಂದ ನಿನ್ನನ್ನು ಸ್ತುತಿಗೈಯುತ್ತಿರುವವು. ॥ ೨೧ ॥

ಇದೂ ಅಲ್ಲದೆ—

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗನ್ಧರ್ವಯಕ್ಷಾಸುರಸಿದ್ಧಸಙ್ಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

೨೨. ರುದ್ರರು, ಆದಿತ್ಯರು, ವಸುಗಳು, ಮತ್ತು ಸಾಧ್ಯರು, ವಿಶ್ವರು, ಅಶ್ವಿನರು, ಮರುತರು, ಊಷ್ಮಪರು, (ಮತ್ತು) ಗಂಧರ್ವ, ಯಕ್ಷ, ಅಸುರ, ಸಿದ್ಧ-ಇವರ ಸಂಘಗಳು; ಇವರೆಲ್ಲರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಿರುವರು.

[ ಭಾಷ್ಯ ]

'ರುದ್ರರು, ಆದಿತ್ಯರು, ವಸುಗಳು, ಮತ್ತು ಸಾಧ್ಯರು'– ಈ ರುದ್ರರೇ ಮೊದಲಾದವರು ಗಣದೇವತೆಗಳು; ವಿಶ್ವೇದೇವರು, ಇಬ್ಬರು ಅಶ್ವಿನೀಕುಮಾರರು- (ಇವರು) ದೇವತೆಗಳು. ಮರುತ್ತರು; ಊಷ್ಮಪರೆಂಬ ಪಿತೃಗಳು*; ಗಂಧರ್ವಯಕ್ಷಾಸುರಸಿದ್ಧಸಂಘಗಳು ಎಂಬಲ್ಲಿ ಹಾಹಾ ಹೂಹೂ ಮೊದಲಾದವರು ಗಂಧರ್ವರು, ಕುಬೇರನೇ ಮೊದಲಾದವರು ಯಕ್ಷರು, ವಿರೋಚನನೇ ಮೊದಲಾದವರು ಅಸುರರು, ಕಪಿಲನೇ ಮೊದಲಾದವರು ಸಿದ್ಧರು. ಇವರೆ(ಲ್ಲರ) ಗುಂಪುಗಳನ್ನು ಗಂಧರ್ವಯಕ್ಷಾಸುರಸಿದ್ಧಸಂಘಗಳು (ಎಂದಿದೆ). ಇವು ವಿಸ್ಮಿತವಾಗಿ ಎಂದರೆ ಬೆರಗಾಗಿ ನಿನ್ನನ್ನು ನೋಡುತ್ತಿರುವವು; ಇವೆಲ್ಲವೂ (ನೋಡುತ್ತಿರುವವು.) ॥ ೨೨ ॥

ಏಕೆಂದರೆ—

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩ ॥**

೨೩. ಎಲೈ ಮಹಾಬಾಹುವೇ, ಬಹುವಕ್ತ್ರನೇತ್ರಗಳಿಂದಲೂ ಬಹು ಬಾಹು, ಊರು, ಪಾದ- ಇವುಗಳಿಂದಲೂ, ಬಹು ಉದರಗಳಿಂದಲೂ (ಕೂಡಿರುವ) ಬಹು ದಂಷ್ಟ್ರಗಳಿಂದ ಕರಾಳವಾಗಿರುವ ನಿನ್ನ ಈ ಮಹಾರೂಪವನ್ನು ನೋಡಿ ಲೋಕಗಳೆಲ್ಲವೂ ಬಹಳವಾಗಿ ವ್ಯಥೆಗೊಂಡಿವೆ, ಮತ್ತು ನಾನೂ ವ್ಯಥೆಗೊಂಡಿದೇನೆ.

---

* ಹಿರಣ್ಯಗರ್ಭನ ಮಗನು ಮನು; ಮನುವಿನ ಮಕ್ಕಳು ಮರೀಚ್ಯಾದಿ ಋಷಿಗಳು; ಇವರ ಮಕ್ಕಳು ಪಿತೃಗಣಗಳು. ಪಿತೃಗಳಲ್ಲಿ ಸೋಮಸದರೆಂಬವರು ಸಾಧ್ಯರ ಪಿತೃಗಳು; ಅಗ್ನಿಷ್ವಾತ್ತರೆಂಬವರು ದೇವತೆಗಳ ಪಿತೃಗಳು; ಬರ್ಹಿಷದರೆಂಬುವರು ದೈತ್ಯದಾನವಯಕ್ಷಕಿನ್ನರಗಂಧರ್ವೋರಗರಾಕ್ಷಸಸುಪರ್ಣಕಿನ್ನರರ ಪಿತೃಗಳು; ಸೋಮಪರು, ಹವಿರ್ಭುಜರು, ಆಜ್ಯಪರು, ಮತ್ತು ಸುಕಾಲಿಗಳೆಂಬವರು ಬ್ರಾಹ್ಮಣಾದಿಗಳ ಪಿತೃಗಳು- ಹೀಗೆ ಏಳು ಪಿತೃಗಣಗಳಿರುವರು. (ಮನು ೩ನೆಯ ಅಧ್ಯಾಯ.) ಪಿತೃಗಳಿಗೆ ಬಿಸಿಯೂಟದಲ್ಲಿ ಹೆಚ್ಚು ಮೆಚ್ಚಿಗೆ; ಆದ್ದರಿಂದ ಅವರಿಗೆ ಊಷ್ಮಪರೆಂದು ಹೆಸರು.

[ ಭಾಷ್ಯ ]

ಎಲೈ ಮಹಾಬಾಹುವೆ. ನಿನ್ನ ಮಹಾರೂಪವನ್ನು ಬಲುದೊಡ್ಡದಾದ ನಿನ್ನ ರೂಪವನ್ನು- (ಅದು ಎಂಥ ರೂಪವೆಂದರೆ:—) ಬಹುವಕ್ತ್ರನೇತ್ರಗಳಿಂದ ಕೂಡಿದ್ದು, ಎಂದರೆ ಎಷ್ಟೋ ಮುಖಗಳಿಂದಲೂ ಕಣ್ಣುಗಳಿಂದಲೂ ಕೂಡಿರುವದು; ಬಹುಬಾಹೂರುಪಾದಗಳಿಂದ ಕೂಡಿದ್ದು, ಎಂದರೆ ಎಷ್ಟೋ ಭುಜಗಳಿಂದಲೂ ತೊಡೆಗಳಿಂದಲೂ ಕಾಲುಗಳಿಂದಲೂ ಕೂಡಿರುವದು; ಮತ್ತು ಬಹು ಉದರಗಳಿಂದ ಕೂಡಿದ್ದು, ಎಂದರೆ ಎಷ್ಟೋ ಹೊಟ್ಟೆಗಳಿರುವಂಥದ್ದು; ಮತ್ತು ಬಹುದಂಷ್ಟ್ರಗಳಿಂದ ಕರಾಳವಾದದ್ದು, ಎಂದರೆ ಎಷ್ಟೋ ಕೋರೆದಾಡೆಗಳಿಂದ ಕರಾಳವಾದದ್ದು ವಿಕಾರವಾಗಿರುವಂಥದ್ದು. ಇಂಥ ರೂಪವನ್ನು- ನೋಡಿ ಲೋಕಗಳು ವ್ಯಥೆಗೊಂಡಿವೆ, ಎಂದರೆ ಲೋಕದಲ್ಲಿರುವ ಪ್ರಾಣಿಗಳು ಬಹಳವಾಗಿ ಭಯದಿಂದ ನಡುಗುತ್ತಿವೆ. ನಾನೂ ಹಾಗೆಯೇ (ಹೆದರಿ ನಡುಗುತ್ತಿದ್ದೇನೆ) ॥೨೩॥

ಇದಕ್ಕೆ ಕಾರಣವೇನೆಂದರೆ—

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾನ್ತರಾತ್ಮಾ**
**ಧೃತಿಂ ನ ವಿನ್ದಾಮಿ ಶಮಂ ಚ ವಿಷ್ಣೋ ॥ ೨೪ ॥**

೨೪. ಎಲೈ ವಿಷ್ಣುವೆ, ಅಂತರಿಕ್ಷವನ್ನು ಮುಟ್ಟುತ್ತಿರುವ, ಜ್ವಲಿಸುತ್ತಿರುವ, ಅನೇಕವರ್ಣಗಳುಳ್ಳ, ಬಾಯಿತೆರೆದಿರುವ, ಉರಿಯುತ್ತಿರುವ ದೊಡ್ಡ ಕಣ್ಣುಗಳುಳ್ಳ, ನಿನ್ನನ್ನು ನೋಡಿ ನಾನು ನಿಜವಾಗಿಯೂ ಅಂತರಾತ್ಮದಲ್ಲಿ ಬಹಳ ವ್ಯಥೆಗೊಂಡಿರುವೆನು, ಧೃತಿಯನ್ನಾಗಲಿ ಶಮವನ್ನಾಗಲಿ ಪಡೆಯದೆ ಇರುವೆನು.

[ ಭಾಷ್ಯ ]

ನಭಸ್ಸನ್ನು ಮುಟ್ಟುವ ಎಂದರೆ ಅಂತರಿಕ್ಷವನ್ನು ಮುಟ್ಟುವ ಎಂದರ್ಥ ದೀಪ್ತವಾದ ಎಂದರೆ ಪ್ರಜ್ವಲಿಸುತ್ತಿರುವ; ಅನೇಕವರ್ಣಗಳುಳ್ಳ ಎಂದರೆ ಭಯಂಕರವಾದ ಬಗೆಬಗೆಯ ಆಕಾರಗಳುಳ್ಳ, ಬಾಯಿತೆರೆದಿರುವ ಎಂದರೆ ಬಾಯಿಗಳನ್ನು ಅಗಲಿಸಿ ಕೊಂಡಿರುವ; ದೀಪ್ತವಿಶಾಲನೇತ್ರನಾದ ಎಂದರೆ ಉರಿಯುತ್ತಿರುವ ದೊಡ್ಡ ಕಣ್ಣುಗಳುಳ್ಳ (ಇಂಥ) ನಿನ್ನನ್ನು ಕಂಡು ಅಂತರಾತ್ಮದಲ್ಲಿ ಬಹಳ ವ್ಯಥೆಗೊಂಡಿರುವೆನು; (ನನ್ನ) ಅಂತರಾತ್ಮವು ಎಂದರೆ ಮನಸ್ಸು ಬಹಳ ವ್ಯಥೆಗೊಂಡಿರುವದು ಎಂದರೆ ತುಂಬ ಹೆದರಿರುವದು. (ಹೀಗೆ) ಅಂತರಾತ್ಮದಲ್ಲಿ ಬಹಳ ವ್ಯಥೆಗೊಂಡಿರುವ ನಾನು ಧೃತಿಯನ್ನು ಎಂದರೆ ಧೈರ್ಯವನ್ನು ಪಡೆಯದೆ

ಇರುವೆನು ; ಶಮವನ್ನು ಎಂದರೆ ಉಪಶಮವನ್ನೂ ಅಥವಾ ಮನಸ್ಸಂತುಷ್ಟಿಯನ್ನೂ (ಪಡೆಯದೆ ಇರುವೆನು). ‖ ೨೪ ‖

ಅದೇಕೆ? (ಎಂದರೆ)—

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ‖ ೨೫ ‖**

೨೫. ಕೋರೆದಾಡೆಗಳಿಂದ ಕರಾಳವಾಗಿ ಪ್ರಲಯಕಾಲದ ಅಗ್ನಿಯಂತೆ ಕಾಣುತ್ತಿರುವ ನಿನ್ನ ಮುಖಗಳನ್ನು ನೋಡಿದ ನನಗೆ ದಿಕ್ಕುಗಾಣದಂತಾಗಿದೆ, ಸಮಾಧಾನವೂ ಸಿಗುವಂತಿಲ್ಲ. ಎಲೈ ದೇವೇಶನೆ, ಜಗನ್ನಿವಾಸನೆ, ಪ್ರಸನ್ನನಾಗು.

[ ಭಾಷ್ಯ ]

ಕೋರೆದಾಡೆಗಳಿಂದ ಕರಾಳವಾಗಿರುವ ವಿಕಾರವಾಗಿ (ಭೀಕರವಾಗಿ)ರುವ ಕಾಲಾನಿಲನ ಹಾಗೆ- ಪ್ರಲಯಕಾಲದಲ್ಲಿ ಲೋಕಗಳನ್ನು ಸುಡುವ ಅಗ್ನಿಯು ಕಾಲಾನಲವೆನಿಸುವದು ; ಅದರಂತೆ- ತೋರುತ್ತಿರುವ ನಿನ್ನ ಮುಖಗಳನ್ನು ನೋಡಿ ಎಂದು ತಾತ್ಪರ್ಯ. ದಿಕ್ಕುಗಾಣದಂತಾಗಿರುವೆನು ; ಇದು ಪೂರ್ವ, ಇದು ಪಶ್ಚಿಮ—ಎಂದು ವಿಂಗಡಿಸಿ ತಿಳಿಯದೆ ದಿಙ್ಮೂಢನಾಗಿರುವೆನು. ಆದ್ದರಿಂದಲೇ (ಮನಸ್ಸಿಗೆ) ಸುಖವೂ ತೋರಬೊಲ್ಲದು. ಆದಕಾರಣ ಎಲೈ ದೇವೇಶನೆ, ಜಗನ್ನಿವಾಸನೆ, ನನ್ನಲ್ಲಿ ಪ್ರಸನ್ನನಾಗು. ‖ ೨೫ ‖

ಯಾರಿಂದ (ನಮಗೆ) ಸೋಲಾದೀತೆಂಬ ಶಂಕೆಯು ನನಗುಂಟಾಗಿತ್ತೋ, ಅದೂ ಹೋಯಿತು. ಏಕೆಂದರೆ—

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಙ್ಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ‖ ೨೬ ‖**

**ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾನ್ತರೇಷು**
**ಸನ್ದೃಶ್ಯನ್ತೇ ಚೂರ್ಣಿತೈರುತ್ತಮಾಙ್ಗೈಃ ‖ ೨೭ ‖**

೨೬-೨೭. ಭೂಪಾಲರ ಗುಂಪುಗಳಿಂದೊಡಗೂಡಿದ ಈ ಧೃತರಾಷ್ಟ್ರನ ಮಕ್ಕಳೆಲ್ಲರೂ- ಭೀಷ್ಮ, ದ್ರೋಣ, ಮತ್ತು ಸೂತಪುತ್ರ- ಇವರು ನಮ್ಮವರಾದ ಮುಖ್ಯ ವೀರರೊಂದಿಗೆ ಒಟ್ಟಾಗಿ ಓಡಿಬಂದು ಕೋರದಾಡೆಗಳಿಂದ ವಿಕಾರವಾಗಿ ಭೀಕರವಾಗಿರುವ ನಿನ್ನ ಮುಖಗಳನ್ನು ಹೊಗುತ್ತಿರುವರು. ಕೆಲವರು ಹಲ್ಲು ಸಂದುಗಳಲ್ಲಿ ಸಿಕ್ಕಿಕೊಂಡು ಪುಡಿಪುಡಿಯಾದ ತಲೆಗಳುಳ್ಳವರಾಗಿ ಕಾಣಬರುತ್ತಿರುವರು.

[ ಭಾಷ್ಯ ]

'ಈ ದುರ್ಯೋಧನನೇ ಮುಂತಾದ ಧೃತರಾಷ್ಟ್ರನ ಮಕ್ಕಳೆಲ್ಲರೂ' ಎಂಬುದನ್ನು 'ಓಡಿಬಂದು ಹೊಗುತ್ತಿರುವರು' ಎಂದು (ಮುಂದಿನ ಶ್ಲೋಕದಲ್ಲಿ) ದೂರವಾಗಿರುವ ಮಾತುಗಳಿಗೆ ಸಂಬಂಧಿಸಿಕೊಳ್ಳಬೇಕು. ಒಟ್ಟಾಗಿ ಅವನಿಪಾಲರ ಸಂಘಗಳೊಡನೆ, ಭೂಮಿಯನ್ನು ಕಾಪಾಡುವ ದೊರೆಗಳ ಸಂಘಗಳೊಡನೆ ಮತ್ತು ಭೀಷ್ಮ, ದ್ರೋಣ, ಸೂತಪುತ್ರನಾದ ಕರ್ಣ, ಮತ್ತು ನಮ್ಮವರಾದ ಧೃಷ್ಟದ್ಯುಮ್ನ- ಇವರೇ ಮುಂತಾದ ಮುಖ್ಯ ಮುಖ್ಯ ಕಲಿಗಳೊಡನೆ (ಕೌರವರು ಬಂದು ನಿನ್ನ ಮುಖಗಳನ್ನು ಹೊಗುತ್ತಿರುವರು.) ॥ ೨೬ ॥

ಮತ್ತು ನಿನ್ನ ಬಾಯಿಗಳನ್ನು ಅವರು ಓಡೋಡಿ ಬಂದು ಅವಸರದೊಡನೆ ಕೂಡಿದವರಾಗಿ ಹೊಗುತ್ತಿರುವರು. ಎಂಥ ಬಾಯಿಗಳನ್ನು? ಎಂದರೆ ಕೋರದಾಡೆಗಳಿಂದ ವಿಕಾರವಾಗಿಯೂ ಭಯಂಕರವಾಗಿಯೂ ಇರುವ (ಮುಖಗಳನ್ನು ಹೊಗುತ್ತಿರುವರು.) ಇದಲ್ಲದೆ (ಹೀಗೆ) ಬಾಯಿಗಳನ್ನು ಹೊಕ್ಕವರಲ್ಲಿ ಕೆಲವರು ಅಗಿದ ಮಾಂಸದಂತೆ ಹಲ್ಲುಸಂದುಗಳಲ್ಲಿ ಸಿಕ್ಕಿಕೊಂಡು ಪುಡಿಪುಡಿಯಾದ ಉತ್ತಮಾಂಗಗಳುಳ್ಳವರಾಗಿ ಎಂದರೆ ತಲೆಗಳುಳ್ಳವರಾಗಿ ಕಾಣಿಸಿಕೊಳ್ಳುತ್ತಿರುವರು. ॥ ೨೭ ॥

ಬಾಯಿಗಳನ್ನು ಹೇಗೆ ಹೊಗುತ್ತಿರುವರು? ಎಂದರೆ ಹೇಳುತ್ತಾನೆ—

**ಯಥಾ ನದೀನಾಂ ಬಹವೋಽಮ್ಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವನ್ತಿ ।**
**ತಥಾ ತವಾಮೀ ನರಲೋಕವೀರಾ**
**ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥ ೨೮ ॥**

೨೮. ಹೇಗೆ ನದಿಗಳ ಎಷ್ಟೋ ಪ್ರವಾಹಗಳು ಸಮುದ್ರದ ಕಡೆಗೆ ಎದುರಾಗಿ ಓಡುತ್ತಿರುವವೋ ಅದರಂತೆ ಈ ನರಲೋಕದ ವೀರರು ನಿನ್ನ ಹೊಳೆಯುವ ಬಾಯಿಗಳೊಳಕ್ಕೆ ಹೊಗುತ್ತಿರುವರು.

[ ಭಾಷ್ಯ ]

ಹೇಗೆ ಹರಿಯುತ್ತಿರುವ ನದಿಗಳ ಎಷ್ಟೋ ಲೆಕ್ಕವಿಲ್ಲದಷ್ಟು ನೀರಿನ ಪ್ರವಾಹ ಗಳು ಎಂದರೆ ಆಯಾ ನೆಳವುಗಳು ಸಮುದ್ರದ ಕಡೆಗೇ ಎದುರಾಗಿ ಹರಿದುಬಂದು ಸೇರುತ್ತಿರುವವೋ, ಹಾಗೆಯೇ ಅದರಂತೆಯೇ ಈ ನರಲೋಕವೀರರಾದ ಎಂದರೆ ಮನುಷ್ಯಲೋಕದ ಶೂರರಾದ ಭೀಷ್ಮನೇ ಮೊದಲಾದವರು, ಉರಿದುಕಾಣು ತ್ತಿರುವ ಈ ನಿನ್ನ ಹೊಳೆಯುತ್ತಿರುವ ಬಾಯಿಗಳೊಳಕ್ಕೆ ಬಂದು ಹೊಗುತ್ತಿರು ವರು. ॥ ೨೮ ॥

ಅವರು ಏತಕ್ಕೆ ಹೊಗುತ್ತಿರುವರು ಮತ್ತು ಹೇಗೆ (ಹೊಗುತ್ತಿರುವರು?) ಎಂದರೆ ಹೇಳುತ್ತಾನೆ:—

**ಯಥಾ ಪ್ರದೀಪ್ತಂ ಜ್ವಲನಂ ಪತಙ್ಗಾ**
**ವಿಶನ್ತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶನ್ತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥**

೨೯. ಧಗಧಗನೆ ಉರಿಯುವ ಬೆಂಕಿಯಲ್ಲಿ ಪತಂಗಗಳು ಸಾಯುವದಕ್ಕೆ ಪೂರ್ಣವೇಗದಿಂದ ಬಂದು ಹೇಗೆ ಸೇರುತ್ತಿರುವವೋ, ಅದರಂತೆಯೇ ಲೋಕಗಳು ನಾಶವನ್ನು ಹೊಂದುವದಕ್ಕಾಗಿ ನಿನ್ನ ಬಾಯಿಗಳನ್ನು ಸಮೃದ್ಧವೇಗದಿಂದ ಬಂದು ಸೇರುತ್ತಲಿವೆ.

[ ಭಾಷ್ಯ ]

ಧಗಧಗನೆ ಉರಿಯುತ್ತಿರುವ ಬೆಂಕಿಯನ್ನು ಪತಂಗಗಳು ಎಂದರೆ ಹಕ್ಕಿಗಳು ಹೆಚ್ಚಿದ ವೇಗದೊಡನೆ ಹೇಗೆ ನಾಶಕ್ಕಾಗಿ ಸಮೃದ್ಧವೇಗದಿಂದ ಎಂದರೆ ಹೆಚ್ಚಿನ ವೇಗದಿಂದ ಬಂದು ಹೊಗುತ್ತಿರುವವೋ, ಅದರಂತೆಯೇ ನಾಶವಾಗುವದಕ್ಕೆಂದು ಲೋಕಗಳು ಎಂದರೆ ಪ್ರಾಣಿಗಳು ನಿನ್ನ ಬಾಯಿಗಳನ್ನು ಹೆಚ್ಚಿದ ವೇಗದೊಡನೆ ಬಂದು ಹೊಗುತ್ತಿರುವವು. ॥ ೨೯ ॥

ನೀನಾದರೋ—

**ಲೇಲಿಹ್ಯಸೇ ಗ್ರಸಮಾನಃ ಸಮನ್ತಾ-**
**ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ॥ ೩೦ ॥**

೩೦. ನೀನು ಸುತ್ತಲೂ ಎಲ್ಲಾ ಪ್ರಾಣಿಗಳನ್ನೂ ಉರಿಯುತ್ತಿರುವ ಬಾಯಿಗಳಿಂದ ನುಂಗುತ್ತಾ ನೆಕ್ಕಿಕೊಳ್ಳುತ್ತಿರುವೆ. ಎಲೈ ವಿಷ್ಣುವೆ, ಉಗ್ರವಾಗಿರುವ ನಿನ್ನ ಪ್ರಭೆಗಳು ಜಗತ್ತೆಲ್ಲವನ್ನೂ ತೇಜಸ್ಸುಗಳಿಂದ ತುಂಬಿ ಚೆನ್ನಾಗಿ ಸುಡುತ್ತಿರುವವು.

[ ಭಾಷ್ಯ ]

ಸುತ್ತುಮುತ್ತಲೂ ಪ್ರಾಣಿಗಳೆಲ್ಲವನ್ನೂ ನುಂಗಿ ಒಳಕ್ಕೆ ಸೇರಿಸಿಕೊಳ್ಳುತ್ತಾ ಉರಿಯುತ್ತಿರುವ ಧಗಧಗಿಸುತ್ತಿರುವ ಬಾಯಿಗಳಿಂದ ಚಪ್ಪರಿಸುತ್ತಲಿದ್ದೀಯೆ. ಎಲೈ ವಿಷ್ಣುವೆ, ವ್ಯಾಪನಶೀಲನಾದ (ಪರಮಾತ್ಮನೆ), ತೇಜಸ್ಸುಗಳಿಂದ ಸಮಗ್ರವಾದ ಜಗತ್ತನ್ನು, ಎಂದರೆ ಅಗ್ರದೊಡನೆ ಕೂಡಿ ಜಗತ್ತೆಲ್ಲವನ್ನೂ ಎಂದರ್ಥ: ತುಂಬಿಕೊಂಡು ನಿನ್ನ ಉಗ್ರವಾದ ಎಂದರೆ ಕ್ರೂರವಾದ ಪ್ರಭೆಗಳು ಚೆನ್ನಾಗಿ ಕಾಸಿ ಸುಡುತ್ತಲಿವೆ. || ೩೦ ||

ಹೀಗೆ (ನೀನು) ಕ್ರೂರಸ್ವಭಾವನಾಗಿರುವದರಿಂದ—

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್** || ೩೧ ||

೩೧. (ಈ) ಉಗ್ರರೂಪಿಯಾದ ನೀನು ಯಾರೆಂಬುದನ್ನು ಹೇಳು; ಎಲೈ ದೇವವರನೆ, ನಿನಗೆ ನಮಸ್ಕಾರವಿರಲಿ. ಪ್ರಸನ್ನನಾಗು. ಆದ್ಯನಾದ ನಿನ್ನನ್ನು ತಿಳಿಯಲಿಚ್ಛಿಸುವೆನು; ಏಕೆಂದರೆ ನಿನ್ನ ಪ್ರವೃತ್ತಿಯನ್ನು ನಾನು ತಿಳಿಯದೆ ಇರುವೆನು.

[ ಭಾಷ್ಯ ]

ಉಗ್ರರೂಪಿಯಾದ ಎಂದರೆ ಕ್ರೂರವಾದ ಆಕಾರವುಳ್ಳ (ಈ) ನೀನು ಯಾರೆಂಬುದನ್ನು ಹೇಳು. ಎಲೈ ದೇವವರನೆ, ದೇವತೆಗಳಲ್ಲಿ ಶ್ರೇಷ್ಠನಾದವನೆ, ನಿನಗೆ ನಮಸ್ಕಾರವಿರಲಿ, (ನನ್ನಲ್ಲಿ) ಪ್ರಸನ್ನನಾಗು. (ಇಂಥವನೆಂದು) ಆದ್ಯನನ್ನು ಎಂದರೆ ಆದಿಯಲ್ಲಿರುವ (ಪುರುಷನಾದ) ನಿನ್ನನ್ನು ವಿಶೇಷವಾಗಿ ಅರಿತುಕೊಳ್ಳಲು ಅಪೇಕ್ಷಿಸುತ್ತೇನೆ; ಏಕೆಂದರೆ ನಿನ್ನ ಪ್ರವೃತ್ತಿಯನ್ನು ಎಂದರೆ ನೀನು ಏನು (ಮಾಡುವದಕ್ಕೆ ತೊಡಗಿರುವೆಯೋ) ಅದನ್ನು ನಾನು ಅರಿಯದೆ ಇರುವೆನು. || ೩೧ ||

## ಭಗವಂತನು ಭೂಭಾರಹರಣಕ್ಕಾಗಿ ತಾನು ಬಂದಿದ್ದೇನೆಂದು ಹೇಳಿದ್ದು

**ಶ್ರೀಭಗವಾನುವಾಚ :—**

**ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ಶ್ರೀಭಗವಂತನು ಹೇಳಿದ್ದೇನೆಂದರೆ :—

೩೨. ಲೋಕಗಳ ಕ್ಷಯವನ್ನು ಮಾಡುವ(ದಕ್ಕೆ) ಬೆಳೆದುಕೊಂಡಿರುವ ಕಾಲನಾಗಿರುವೆನು. ಲೋಕಗಳನ್ನು ಸಂಹರಿಸುವದಕ್ಕಾಗಿ ಇಲ್ಲಿ ಹೊರಟಿರುವೆನು. ಎದುರು ಸೇನೆಗಳಲ್ಲಿ ಯಾವ ಯೋಧರು ನಿಂತಿರುವರೋ (ಅವರು) ನೀನಿಲ್ಲದಿದ್ದರೂ ಇನ್ನಿಲ್ಲವಾಗುವರು.

[ ಭಾಷ್ಯ ]

ಲೋಕಗಳ ನಾಶಗಳನ್ನು ಮಾಡುವ(ದಕ್ಕೆಂದು) ಬೆಳೆದುಕೊಂಡಿರುವ ಕಾಲನು ನಾನು. ಏತಕ್ಕೆ ಬೆಳೆದುಕೊಂಡಿರುವೆನೆಂದರೆ ಅದನ್ನು ಕೇಳು : ಲೋಕಗಳನ್ನು ಸಂಹಾರಗೊಳಿಸುವದಕ್ಕೆ ಇಲ್ಲಿ ಎಂದರೆ ಈ ಕಾಲದಲ್ಲಿ ಹೊರಟಿರುವೆನು. ಪ್ರತ್ಯನೀಕಗಳಲ್ಲಿ ಎಂದರೆ ಒಂದೊಂದು ಸೇನೆಯಲ್ಲಿಯೂ, ಎದುರು ಪಕ್ಷದವರ ಸೇನೆಗಳಲ್ಲಿ ಯೋಧರು ಎಂದರೆ ಕಲಿಗಳು ಯಾರು ಯಾರು ನಿಂತಿರುವರೋ, ಯಾರಿಂದ ನಿನಗೆ (ಗೆಲ್ಲುವೆನೋ ಇಲ್ಲವೋ ಎಂಬ) ಶಂಕೆಯುಂಟಾಗಿರುವದೋ, ಈ ಭೀಷ್ಮದ್ರೋಣ ಮೊದಲಾದವರೆಲ್ಲರೂ ನೀನಿಲ್ಲದಿದ್ದರೂ* ಇನ್ನಿಲ್ಲವಾಗುವರು. ॥ ೩೨ ॥

ಹೀಗಿರುವದರಿಂದ—

**ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಙ್ಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

೩೩. ಆದ್ದರಿಂದ ನೀನೇಳು, ಕೀರ್ತಿಯನ್ನು ಪಡೆದುಕೊ; ಶತ್ರುಗಳನ್ನು ಗೆದ್ದು ಸಮೃದ್ಧವಾಗಿರುವ ರಾಜ್ಯವನ್ನು ಅನುಭವಿಸು. ಇವರು ಮೊದಲೇ ನನ್ನಿಂದಲೇ ಹತರಾಗಿರುವರು. ಸವ್ಯಸಾಚಿಯೆ, (ನೀನು) ಬರಿಯ ನಿಮಿತ್ತವಾಗು.

---

* ನೀನು ಯುದ್ಧಮಾಡದೆ ಸುಮ್ಮನಿದ್ದರೂ ಮಡಿದುಹೋಗುವರು ಎಂದು ಭಾವ.

[ ಭಾಷ್ಯ ]

ಆದ್ದರಿಂದ ನೀನು ಏಳು. ಭೀಷ್ಮ, ದ್ರೋಣ- ಮೊದಲಾದ ಅತಿರಥರು ದೇವತೆಗಳಿಂದಲೂ ಸೋಲಿಸುವದಕ್ಕಾಗದವರಾದರೂ ಅರ್ಜುನನು ಅವರನ್ನು ಸೋಲಿಸಿದನು- ಎಂಬ ಕೀರ್ತಿಯನ್ನು ಗಳಿಸಿಕೊ. ಇದು ಪುಣ್ಯಶಾಲಿಗಳಿಗೆ ಮಾತ್ರವೇ ದೊರಕತಕ್ಕ (ಕೀರ್ತಿಯು). ದುರ್ಯೋಧನನೇ ಮೊದಲಾದ ಶತ್ರುಗಳನ್ನು ಗೆದ್ದು ಶತ್ರುಗಳಿಲ್ಲದೆ ನಿಷ್ಕಂಟಕವಾಗಿ ರಾಜ್ಯವನ್ನು ಉಪಭೋಗಿಸು.

ಇವರು ನಿಜವಾಗಿ ನನ್ನಿಂದಲೇ ಮೊದಲೇ ನಿಜವಾಗಿ ಹತರಾಗಿರುವರು, (ನಾನೇ) ಅವರನ್ನು ಪ್ರಾಣಗಳಿಂದ ಬಿಡಿಸಿರುವೆನು ಎಲೈ ಸವ್ಯಸಾಚಿಯೆ,- ಎಡಗೈಯಿಂದಲೂ ಬಲಗೈಯಿಂದಲೂ ಬಾಣಗಳನ್ನು ಬಿಡುವದರಿಂದ ಅರ್ಜುನನಿಗೆ ಸವ್ಯಸಾಚಿಯೆಂದು ಹೆಸರು. (ಎಲೈ ಅರ್ಜುನನೆ)- ನೀನು ನಿಮಿತ್ತಮಾತ್ರ* ನಾಗು. ॥ ೩೩ ॥

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

೩೪. ದ್ರೋಣನನ್ನೂ ಭೀಷ್ಮನನ್ನೂ ಜಯದ್ರಥನನ್ನೂ ಕರ್ಣನನ್ನೂ ಮತ್ತು ಯುದ್ಧಮಾಡುವದರಲ್ಲಿ ಗಟ್ಟಿಗರಾದ ಬೇರೆಯುವರನ್ನೂ ನಾನು ಮೊದಲೇ ಕೊಂದಿರುವೆನು; ಅವರನ್ನೇ ನೀನು (ಈಗ) ಕೊಲ್ಲು. ವ್ಯಥೆಪಡಬೇಡ, ಯುದ್ಧಮಾಡು, ಶತ್ರುಗಳನ್ನು ಗೆಲ್ಲುವೆ.

[ ಭಾಷ್ಯ ]

ದ್ರೋಣನನ್ನೂ (ಎಂದು ಮೊದಲಾಗಿ) ಯಾರ ಯಾರ ವಿಷಯದಲ್ಲಿ ಅರ್ಜುನನಿಗೆ (ನಾನು ಇವರನ್ನು ಗೆದ್ದೇನೋ ಇಲ್ಲವೋ ಎಂಬ) ಆ ಶಂಕೆಯುಂಟಾಗಿತ್ತೋ ಅವರವರನ್ನು ಭಗವಂತನು ಇಲ್ಲಿ 'ನಾನು ಕೊಂದವರನ್ನೇ (ನೀನು ಕೊಲ್ಲು)' ಎಂದು ಹೇಳುತ್ತಿದ್ದಾನೆ. ಇವರಲ್ಲಿ ದ್ರೋಣ, ಭೀಷ್ಮ- ಇವರಿಬ್ಬರ ವಿಷಯದಲ್ಲಿ ಆ ಶಂಕೆಯಾಗಲು ಕಾರಣವು ಗೊತ್ತೇ ಇದೆ. ದ್ರೋಣನು ಧನುರ್ವೇದದ ಆಚಾರ್ಯನು, ದಿವ್ಯಾಸ್ತ್ರಗಳಿಂದ ಕೂಡಿದವನು, ಮತ್ತು ತನಗೆ ಎಲ್ಲರಿಗಿಂತಲೂ ಹೆಚ್ಚಿನ ಗುರುವಾಗಿದ್ದಾನೆ; ಭೀಷ್ಮನು ಸ್ವೇಚ್ಛೆಯ ಮರಣವುಳ್ಳವನು, ದಿವ್ಯಾಸ್ತ್ರಗಳಿಂದ

* ಕಾಲಕರ್ಮಯೋಗದಿಂದ ಅವರವರೇ ಮಡಿಯುವರು ; ನೀನು ಅವರನ್ನು ಕೊಲ್ಲುವದಕ್ಕೆ ಹೊರಗಿನ ನಿಮಿತ್ತವು ಮಾತ್ರವಾಗಬೇಕು- ಎಂದು ಭಾವ.

ಕೂಡಿರುವಾತನು. ಮತ್ತು ಪರಶುರಾಮನೊಡನೆ ದ್ವಂದ್ವಯುದ್ಧಮಾಡಿದಾಗಲೂ (ಅವನು) ಸೋಲಲಿಲ್ಲ; ಜಯದ್ರಥನೂ ಇದರಂತೆ, ಅವನ ತಂದೆಯು 'ನನ್ನ ಮಗನ ತಲೆಯನ್ನು ಯಾರು ನೆಲದ ಮೇಲಕ್ಕೆಳಸುವನೋ ಅವನ ತಲೆಯೂ ಬೀಳಲಿ' ಎಂದು ತಪಸ್ಸುಮಾಡುತ್ತಿರುವನು. ಕರ್ಣನೂ ಇಂದ್ರನಿತ್ತಿರುವ ಅಮೋಘವಾದ ಶಕ್ತಿಯೊಡಗೂಡಿದವನು, ಕನ್ಯೆಯ ದೆಸೆಯಿಂದ ಹುಟ್ಟಿದ ಸೂರ್ಯಪುತ್ರನು. ಆದ್ದರಿಂದ ಅವರ(ವರ) ಹೆಸರಿಂದಲೇ (ಈ ವೀರರನ್ನು)* ಹೇಳಿರುತ್ತದೆ.

(ಇವರೇ ಮುಂತಾದವರು) ನನ್ನಿಂದ ಹತರಾಗಿಯೇ ಇರುವರು. (ಅವರನ್ನೇ) ನೀನು ನಿಮಿತ್ತಮಾತ್ರನಾಗಿ, ಕೊಲ್ಲು; ನೀನು ವ್ಯಥೆಪಡಬೇಡ, ಅವರಿಗೆ ಹೆದರದಿರು. ಯುದ್ಧಮಾಡು, ದುರ್ಯೋಧನನೇ ಮೊದಲಾದ ಸಪತ್ನರನ್ನು ಎಂದರೆ ಹಗೆಗಳನ್ನು ಕೊಲ್ಲುವೆ. ॥ ೩೪ ॥

## ಅರ್ಜುನನ ಸ್ತೋತ್ರ ಮತ್ತು ಕ್ಷಮಾಪಣೆ

**ಸಂಜಯ ಉವಾಚ :—**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಞ್ಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

ಸಂಜಯನು ನುಡಿದನೇನೆಂದರೆ:—

೩೫. ಕೇಶವನ ಈ ವಚನವನ್ನು ಕೇಳಿ ಅರ್ಜುನನು ಕೈಮುಗಿದುಕೊಂಡು ನಡುಗುತ್ತಾ ನಮಸ್ಕರಿಸಿ ಗದ್ಗದಕಂಠದಿಂದ ಹೆದರುತ್ತ ಹೆದರುತ್ತ ತಲೆಬಾಗಿ ಮತ್ತೆ ಕೃಷ್ಣನನ್ನು ಕುರಿತು ಇಂತೆಂದನು.

[ ಭಾಷ್ಯ ]

ಈ ಮೇಲೆ ಹೇಳಿದ ಕೇಶವನ ನುಡಿಯನ್ನು ಕೇಳಿದ ಅರ್ಜುನನು ಕೈಮುಗಿದುಕೊಂಡು ನಡುನಡುಗುತ್ತಾ ಕಿರೀಟಿ(ಯಾದ ಅರ್ಜುನನು) ಕಾಲ್ಗೆರಗಿ ಮತ್ತೂ ಕೃಷ್ಣನನ್ನು ಗದ್ಗದದಿಂದ ಕೂಡಿ ಇಂತೆಂದನು. ಹೆದರುವವನಿಗೆ ದುಃಖವು

* ದ್ರೋಣ, ಭೀಷ್ಮ, ಜಯದ್ರಥ, ಕರ್ಣ- ಇವರು ಮುಖ್ಯವೀರರು; ಆದ್ದರಿಂದ ಅವರ ಹೆಸರಿನಿಂದಲೇ ಶ್ರೀಕೃಷ್ಣನು ಅವರನ್ನು ತಿಳಿಸಿರುತ್ತಾನೆಂದು ಭಾವ. 'ತಥಾನ್ಯಾನಪಿ ಯೋಧವೀರಾನ್' ಎಂಬ ಭಾಗದ ಭಾಷ್ಯವು ಏಕೋ ಕೈಬಿಟ್ಟುಹೋಗಿರುವದು.

ಹೆಚ್ಚಾಗುವದರಿಂದಲೂ ಸ್ನೇಹವು ಹೆಚ್ಚಾದವನಿಗೆ ಹರ್ಷವುಂಟಾಗುವದರಿಂದಲೂ ಕಣ್ಣುಗಳಲ್ಲಿ ನೀರು ತುಂಬಿ ಶ್ಲೇಷ್ಮದಿಂದ ಕುತ್ತಿಗೆಯು ಕಟ್ಟಿಕೊಂಡು ಅದರಿಂದ ಮಾತಿನಲ್ಲಿ ಪಾಟವವಿಲ್ಲದೆ ಮಾತು ಮೆಲ್ಲಗಾಗುವದು ಗದ್ಗದವೆನಿಸುವದು. ಅದರೊಡನೆ ಇಂತೆಂದನು- ಎಂದು ಮಾತನಾಡೋಣವೆಂಬ ಕ್ರಿಯೆಗೆ ಈ ('ಸಗದ್ಗದಂ' ಎಂಬುದು) ವಿಶೇಷಣವು. ಹೆದರುತ್ತ ಹೆದರುತ್ತ ಮತ್ತೆ ಮತ್ತೆ ಅಂಜಿಕೆಯಿಂದೊಡಗೂಡಿದ ಚಿತ್ತವುಳ್ಳವನಾಗಿ ತಲೆಬಾಗಿ 'ಹೇಳಿದನು' ಎಂಬ ಹಿಂದಿನ ಮಾತಿಗೆ ಸಂಬಂಧಮಾಡಿಕೊಳ್ಳಬೇಕು.

ಈ ಸಂದರ್ಭದಲ್ಲಿ ಸಂಜಯನ ಮಾತು ಒಂದಾನೊಂದು (ವಿಶೇಷವಾದ) ಅಭಿಪ್ರಾಯದಿಂದೊಡಗೂಡಿರುವದು. ಹೇಗೆಂದರೆ, ಯಾರಿಂದಲೂ ಗೆಲ್ಲಲಾಗದ ದ್ರೋಣನೇ ಮೊದಲಾದ ನಾಲ್ಕು ಜನ ವೀರರೂ ಅರ್ಜುನನಿಂದ ಹತರಾದರೆ ಯಾವ ಆಶ್ರಯವೂ ಇಲ್ಲದ ದುರ್ಯೋಧನನು ಹತನಾದಂತೆಯೇ ಸರಿ- ಎಂದು ಧೃತರಾಷ್ಟ್ರನು (ನಮ್ಮ ಕಡೆಯವರೇ) ಗೆದ್ದಾರೆಂಬ ಆಶೆಯಿಲ್ಲದೆ ಸಂಧಿಯನ್ನು ಮಾಡಿಕೊಳ್ಳುವನು, ಇದರಿಂದ ಇಬ್ಬರಲ್ಲಿಯೂ ಶಾಂತಿಯುಂಟಾಗುವದು— ಎಂಬುದು (ಅವನ ಅಭಿಪ್ರಾಯವು). ಆದರೆ ಆಗಬೇಕಾದದ್ದು ಆಗಲೇಬೇಕಾಗಿದ್ದುದರಿಂದ ಇದನ್ನೂ ಧೃತರಾಷ್ಟ್ರನು ಕೇಳದೆ ಹೋದನು. ॥ ೩೫ ॥

**ಅರ್ಜುನ ಉವಾಚ :—**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಙ್ಘಾಃ ॥ ೩೬ ॥**

ಅರ್ಜುನನು ನುಡಿದನೇನೆಂದರೆ:—

೩೬. ಎಲೈ ಹೃಷೀಕೇಶನೆ, ನಿನ್ನ ಕೀರ್ತನದಿಂದ ಜಗತ್ತು ಹರ್ಷದಿಂದ ಕೂಡಿ ಅನುರಾಗದಿಂದ ಕೂಡಿಕೊಳ್ಳುತ್ತಿರುವದು- ರಾಕ್ಷಸರು ಹೆದರಿ ದಿಕ್ಕು ದಿಕ್ಕುಗಳಿಗೆ ಓಡುತ್ತಿರುವರು, ಸಿದ್ಧರ ಗುಂಪುಗಳೆಲ್ಲವೂ ನಮಸ್ಕರಿಸುತ್ತಿರುವವು. ಇದು ಯುಕ್ತವೆ.

[ ಭಾಷ್ಯ ]

ಇದು ಯುಕ್ತವು. ಯಾವದೆಂದರೆ ನಿನ್ನ ಮಾಹಾತ್ಮ್ಯವನ್ನು ಕೀರ್ತನೆಮಾಡಿದ್ದನ್ನು ಕೇಳಿದ ಮಾತ್ರದಿಂದ, ಎಲೈ ಹೃಷೀಕೇಶನೆ, ಜಗತ್ತು ಹೆಚ್ಚಿನ ಹರ್ಷದಿಂದೊಡಗೂಡುತ್ತಿದೆಯಷ್ಟೆ, ಅದು ಯುಕ್ತವೆ- ಎಂದರ್ಥ. ಅಥವಾ ಇಲ್ಲಿ

'ಸ್ಥಾನೇ' * ಎಂಬ ಪದಾತು ವಿಷಯವಿಶೇಷಣವು (ಎಂದೂ ಹೇಳಬಹುದು). ಭಗವಂತನು ಹರ್ಷ ಪ್ರೀತಿ ಮುಂತಾದವುಗಳಿಗೆ ವಿಷಯನಾಗಿರುವದೆಂಬುದು ಯುಕ್ತವೆ; ಏಕೆಂದರೆ ಈಶ್ವರನು ಎಲ್ಲರ ಆತ್ಮನೂ, ಎಲ್ಲಾ ಪ್ರಾಣಿಗಳಿಗೂ ಒಳ್ಳೆಯದನ್ನು ಕೋರುವವನೂ ಆಗಿರುತ್ತಾನೆ. ಹೀಗೆಯೇ (ನಿನ್ನ ಕೀರ್ತನೆಯನ್ನು ಕೇಳಿ) ಅನುರಾಗದಿಂದೊಡಗೂಡುವದು; ಅದೂ (ಸರಿಯಾದ) ವಿಷಯದಲ್ಲಿಯೇ– ಎಂದು ಅರ್ಥವಿವರಣೆ ಮಾಡಬೇಕು. ಮತ್ತು, ರಾಕ್ಷಸರು ಭೀತರಾಗಿ, ಅಂಜಿಕೆಯಿಂದ ಕೂಡಿ ದಿಕ್ಕುದಿಕ್ಕುಗಳಿಗೆ ಓಡಿಹೋಗುತ್ತಿರುವರು; ಅದೂ (ಸರಿಯಾದ) ವಿಷಯದಲ್ಲಿಯೇ (ಆಗಿದೆ). ಸಿದ್ಧರು ಎಂದರೆ ಕಪಿಲಾದಿಗಳ ಸಮುದಾಯಗಳು ನಮಸ್ಕಾರಮಾಡುತ್ತಲಿವೆ. ಇದೂ (ಯುಕ್ತವಾದ) ವಿಷಯದಲ್ಲಿಯೇ ಆಗಿದೆ. ‖ ೩೬ ‖

ಭಗವಂತನು ಹರ್ಷಾದಿಗಳಿಗೆ ವಿಷಯನೆಂಬುದಕ್ಕೆ ಕಾರಣವನ್ನು ತಿಳಿಯಿಸುತ್ತಿದ್ದಾನೆ:—

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ‖ ೩೭ ‖**

೩೭. ಮತ್ತು ಎಲೈ ಮಹಾತ್ಮನೆ, ಬ್ರಹ್ಮನಿಗೆ ಕೂಡ ಆದಿಕರ್ತನಾದ ಎಲ್ಲರಿಗಿಂತಲೂ ಹೆಚ್ಚಿನವನಾದ (ನಿನಗೆ) ಏತಕ್ಕೆ ತಾನೆ ನಮಸ್ಕರಿಸದೆ ಇರುವರು? ಅನಂತನೆ, ದೇವೇಶನೆ, ಜಗನ್ನಿವಾಸನೆ, ನೀನು ಅಕ್ಷರವು, ಸತ್ತು, ಅಸತ್ತು– (ಇವೆರಡನ್ನೂ) ಮೀರಿರುವದು ಯಾವದೋ ಅದು.

[ ಭಾಷ್ಯ ]

ಮತ್ತು ಯಾವ ಕಾರಣದಿಂದ ತಾನೆ ನಿನಗೆ ಅವರು ನಮಸ್ಕರಿಸದೆ ಇರುವರು? ಏಕೆಂದರೆ (ನೀನು) ಬ್ರಹ್ಮನಿಗೆ ಎಂದರೆ ಹಿರಣ್ಯಗರ್ಭನಿಗೆ ಕೂಡ ಆದಿಕರ್ತನು ಮೂಲಕಾರಣನು, ಆದ್ದರಿಂದ **ಆದಿಕರ್ತ**ನಾದ (ನಿನಗೆ) ಇವರು ಹೇಗೆ ತಾನೆ ನಮಸ್ಕಾರಮಾಡದೆ ಇದ್ದಾರು? ಆದ್ದರಿಂದ ಹರ್ಷಾದಿಗಳಿಗೂ ನಮಸ್ಕಾರಕ್ಕೂ ನೀನು ಸ್ಥಾನವು. ಅರ್ಹನು, ವಿಷಯವು– ಎಂದರ್ಥವು.

ಎಲೈ ಅನಂತನೆ, ದೇವತೆಗಳ ಒಡೆಯನೆ, ಜಗತ್ತಿಗೆಲ್ಲ ಆಶ್ರಯನಾದವನೆ, ಯಾವದು ವೇದಾಂತವಚನಗಳಲ್ಲಿ ಹೆಚ್ಚಿನ ಅಕ್ಷರವೆಂದು ಹೇಳಲ್ಪಟ್ಟಿರುವದೋ

* 'ಸ್ಥಾನೇ' ಎಂಬುದನ್ನು ಕ್ರಿಯಾವಿಶೇಷಣವೆಂದು ಮೊದಲು ಹೇಳಿತ್ತು; ಈಗ ಹರ್ಷಕ್ಕೆ ವಿಷಯನಾಗಿರುವದೆಂಬುದು ಯುಕ್ತವೆಂದು ವಿಷಯವಿಶೇಷಣವಾಗಿ ಹೇಳಿದೆ.

ಅದು ನೀನೇ- ಅದು ಯಾವದೆಂದರೆ, ಸತ್ತು ಎಂದರೆ ಇರುವದು, ಅಸತ್ತು ಎಂದರೆ ಯಾವದರಲ್ಲಿ ಇಲ್ಲವೆಂಬ ಬುದ್ಧಿಯುಂಟಾಗುವದೋ ಅದು. **ಈ ಸದಸತ್ತುಗಳೆರಡೂ ಅಕ್ಷರಕ್ಕೆ ಉಪಾಧಿಗಳಾಗಿರುವವು- ಅವುಗಳ ಮೂಲಕ ಈ ಅಕ್ಷರವೂ ಸತ್ತೆಂದೂ ಅಸತ್ತೆಂದೂ ಉಪಚಾರಕ್ಕಾಗಿ ಕರೆಯಲ್ಪಡುವದು.** ಆದರೆ ಪರಮಾರ್ಥವಾಗಿ ನೋಡಿದರೆ ಸತ್ತು, ಅಸತ್ತು- ಈ ಎರಡನ್ನೂ ಮೀರಿದ ಅಕ್ಷರವೆಂದು ವೇದವಿದರು ಯಾವದನ್ನು ಹೇಳುತ್ತಿರುವರೋ ಅದು ನೀನೇ ಮತ್ತೊಂದಲ್ಲ- ಎಂದಭಿಪ್ರಾಯ. ॥ ೩೭ ॥

ಮತ್ತೂ (ಪರಮಾತ್ಮನನ್ನು) ಹೊಗಳುತ್ತಿದ್ದಾನೆ:—

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ॥ ೩೮ ॥**

೩೮. ನೀನು ಆದಿದೇವನು, ಪುರುಷನು, ಪುರಾಣನು. ನೀನು ಈ ವಿಶ್ವದ ಹೆಚ್ಚಿನ ಆಧಾರವು. ತಿಳಿಯುವವನೂ ತಿಳಿಯಲ್ಪಡತಕ್ಕವನೂ ಹೆಚ್ಚಿನ ಸ್ಥಾನವೂ ಆಗಿರುವೆ. ಅನಂತರೂಪನೆ, ನಿನ್ನಿಂದ ವಿಶ್ವವು ವ್ಯಾಪಿಸಲ್ಪಟ್ಟಿರುವದು.

[ ಭಾಷ್ಯ ]

ನೀನು ಜಗತ್ತಿಗೆ ಮೊದಲು ದೇವನು, ಏಕೆಂದರೆ (ನೀನೇ ಅದನ್ನು) ಸೃಷ್ಟಿ ಮಾಡುವಾತನು. **ಪುರುಷನು,** ಏಕೆಂದರೆ ಪುರದಲ್ಲಿ* ಇರುವವನು. **ಪುರಾಣನು** (ಎಲ್ಲರಿಗಿಂತಲೂ) ಹಳಬನು. ನೀನೇ ಈ ವಿಶ್ವಕ್ಕೆ ಹೆಚ್ಚಿನ ನಿಧಾನವು, ಮೇಲಾದ (ಆಧಾರವು). ಜಗತ್ತೆಲ್ಲವೂ ಈ (ಪರಮಾತ್ಮನಲ್ಲಿ) ಮಹಾಪ್ರಲಯನೇ ಮುಂತಾದ† ಕಾಲದಲ್ಲಿ ಇಡಲ್ಪಡುವದರಿಂದ (ಈತನಿಗೆ ನಿಧಾನವೆಂದು ಹೆಸರು).

ಮತ್ತು (ನೀನು) ತಿಳಿಯಬೇಕಾದ **ಎಲ್ಲವನ್ನೂ ತಿಳಿಯುವವನಾಗಿದ್ದೀಯೆ; ಮತ್ತು ತಿಳಿಯಬೇಕಾದದ್ದು ಏನೇನಿರುವದೋ ಅದೂ (ನೀನೇ) ಆಗಿರುವೆ.** ಮತ್ತು ಪರಮಧಾಮವೂ (ಆಗಿರುವೆ), ಎಂದರೆ ಹೆಚ್ಚಿನ ವೈಷ್ಣವ ಪದವೂ* (ನೀನೇ). ಎಲೈ ಅನಂತರೂಪನೆ, ನಿನ್ನ ರೂಪಗಳಿಗೆ ಕೊನೆಯಿಲ್ಲ; (ಅಂಥ) ನಿನ್ನಿಂದ ವಿಶ್ವವೆಲ್ಲವೂ ವ್ಯಾಪ್ತವಾಗಿರುವದು. ॥ ೩೮ ॥

---

* ಶರೀರರೂಪವಾದ ಅಥವಾ ಅದರಲ್ಲಿರುವ ಹೃದಯವೆಂಬ ಪುರದಲ್ಲಿ.

† ಸುಷುಪ್ತ್ಯವಸ್ಥೆಯೇ ಮುಂತಾದದ್ದರಲ್ಲಿ.

ಮತ್ತು—

**ವಾಯುರ್ಯಮೋಽಗ್ನಿರ್ವರುಣಃ ಶಶಾಙ್ಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

೩೯. ವಾಯು, ಯಮ, ಅಗ್ನಿ, ವರುಣ, ಶಶಾಂಕ, ಪ್ರಜಾಪತಿ, ಪ್ರಪಿತಾಮಹ– (ಇವರೆಲ್ಲರೂ) ನೀನೆ. ನಿನಗೆ ನಮಸ್ಕಾರ, ಸಾವಿರ ಬಾರಿ ನಮಸ್ಕಾರವಿರಲಿ; ಮತ್ತೂ ಮತ್ತೂ ನಮಸ್ಕಾರ, ನಿನಗೆ ನಮಸ್ಕಾರ.

[ ಭಾಷ್ಯ ]

ನೀನು ವಾಯು; ಯಮನೂ, ನೀರಿಗೆ ಒಡೆಯನಾದ ವರುಣನೂ ನೀನೆ. ಶಶಾಂಕನು ಎಂದರೆ ಚಂದ್ರನು, ಪ್ರಜಾಪತಿ ಎಂದರೆ ಕಶ್ಯಪನೇ* ಮೊದಲಾದ ರೂಪದಲ್ಲಿರುವವನು, ಮತ್ತು ಪ್ರಪಿತಾಮಹನು ಎಂದರೆ ಅಜ್ಜನಿಗೂ ತಂದೆಯು, ಬ್ರಹ್ಮನಿಗೂ ತಂದೆ ಎಂದರ್ಥ. ನಮಸ್ಕಾರ, ನಿನಗೆ ಸಾವಿರಬಾರಿ ನಮಸ್ಕಾರವಿರಲಿ. ಮತ್ತು ಮತ್ತು ನಿನಗೆ ನಮಸ್ಕಾರ, ನಮಸ್ಕಾರ. (ಸಹಸ್ರಕೃತ್ವಃ ಎಂದು) 'ಕೃತ್ವಸ್' ಎಂಬ ಪ್ರತ್ಯಯವನ್ನು ಸೇರಿಸಿರುವದರಿಂದ ನಮಸ್ಕಾರಕ್ರಿಯೆಯನ್ನು ಬಾರಿಬಾರಿಗೂ ಮಾಡಿದನೆಂದು ಹೇಳಿದಂತಾಯಿತು. 'ಪುನಶ್ಚ ಭೂಯೋಽಪಿ' (ಮತ್ತು, ಇನ್ನೂ) ಎಂಬ ಶಬ್ದಗಳಿಂದ ಹೆಚ್ಚಿನ ಶ್ರದ್ಧೆ ಮತ್ತು ಭಕ್ತಿಯುಂಟಾಗಿ (ಅರ್ಜುನನು ಎಷ್ಟು ನಮಸ್ಕಾರಮಾಡಿದರೂ) ತನಗೆ ತೃಪ್ತಿಯಿಲ್ಲವೆಂಬುದನ್ನು ತೋರಿಸುತ್ತಾನೆ. ॥ ೩೯ ॥

ಮತ್ತು—

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನನ್ತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

೪೦. ಎಲೈ ಸರ್ವನೆ, ನಿನಗೆ ಮುಂದೆ ನಮಸ್ಕಾರ, ಹಿಂದೆಯೂ ನಮಸ್ಕಾರವಿರಲಿ. ಎಲೈ ಸರ್ವನೆ, ಎಲ್ಲಾ ಕಡೆಗಳಲ್ಲಿಯೂ (ನಮಸ್ಕಾರವಿರಲಿ). ನೀನು ಅನಂತವೀರ್ಯನು, ಅಮಿತವಿಕ್ರಮನು. ಸರ್ವವನ್ನೂ ಚೆನ್ನಾಗಿ ವ್ಯಾಪಿಸಿಕೊಂಡಿರುವದರಿಂದ ಸರ್ವನಾಗಿರುವೆ.

---

* ಬ್ರಹ್ಮನ ರೂಪದಲ್ಲಿರುವ ಪರಮಾತ್ಮನಿಂದ ಮರೀಚ್ಯಾದಿಗಳು ಹುಟ್ಟಿದರು; ಮರೀಚಿಯಿಂದ ಕಶ್ಯಪನೂ ಕಶ್ಯಪನಿಂದ ಸಕಲಪ್ರಜೆಗಳೂ ಹುಟ್ಟಿದರು; ಆದ್ದರಿಂದ ಕಶ್ಯಪನೇ ಮೊದಲಾದ ರೂಪದಿಂದ ತೋರಿಕೊಳ್ಳುವವನೂ ಪರಮಾತ್ಮನೇ, ಬ್ರಹ್ಮದೇವರಂತೂ ಪರಮಾತ್ಮನೇ.

[ ಭಾಷ್ಯ ]

ನಿನಗೆ ಮುಂದೆ- ಎಂದರೆ ಪೂರ್ವದಿಕ್ಕಿನಲ್ಲಿ ನಮಸ್ಕಾರ. ಮತ್ತು ಹಿಂದೆಯೂ ನಿನಗೆ (ನಮಸ್ಕಾರ). ಎಲೈ ಸರ್ವನೆ, ಎಲ್ಲಾ ದಿಕ್ಕುಗಳಲ್ಲಿ ಎಲ್ಲೆಲ್ಲಿಯೂ ಇರುವ ನಿನಗೆ ಎಲ್ಲೆಲ್ಲಿಯೂ ನಮಸ್ಕಾರವಿರಲಿ. ನೀನು ಅನಂತ ವೀರ್ಯನು, ಅನಂತವಿಕ್ರಮನು; ಕೊನೆಯಿಲ್ಲದ ವೀರ್ಯವುಳ್ಳವನು, ಅಳತೆಯಿಲ್ಲದಷ್ಟು ವಿಕ್ರಮವುಳ್ಳವನು. ವೀರ್ಯವೆಂದರೆ ಸಾಮರ್ಥ್ಯವು, ವಿಕ್ರಮವೆಂದರೆ ಪರಾಕ್ರಮವು. ವೀರ್ಯವಂತರಾದರೂ ಒಬ್ಬರು ಶಸ್ತ್ರಾದಿವಿಷಯಗಳಲ್ಲಿ ಪರಾಕ್ರಮವನ್ನು ತೋರಿಸುವದಿಲ್ಲ, ಅಥವಾ ಸ್ವಲ್ಪ ಪರಾಕ್ರಮವುಳ್ಳವರಾಗಿರುತ್ತಾರೆ; ಆದರೆ ನೀನು (ಹಾಗಲ್ಲ). ಅನಂತವೀರ್ಯನು ಮತ್ತು ಅಮಿತ ವಿಕ್ರಮನು.

ಎಲ್ಲವನ್ನೂ ಎಂದರೆ ಜಗತ್ತೆಲ್ಲವನ್ನೂ ಚೆನ್ನಾಗಿ ನಿನ್ನ ಒಂದೇ ಆತ್ಮ(ರೂಪ)ದಿಂದ ವ್ಯಾಪಿಸಿಕೊಂಡಿರುವೆಯಾದ್ದರಿಂದ (ನೀನು) ಸರ್ವನಾಗಿರುವೆ, ನಿನ್ನನ್ನು ಬಿಟ್ಟು ಏನೊಂದೂ ಇರುವದಿಲ್ಲವೆಂದರ್ಥ. ॥ ೪೦ ॥

ನಾನು ನಿನ್ನ ಮಹಾತ್ಮ್ಯವನ್ನು ಅರಿಯದ್ದರಿಂದ ಅಪರಾಧವನ್ನು ಮಾಡಿರುವೆನು. ಆದ್ದರಿಂದ—

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ ೪೧ ॥**

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

೪೧-೪೨. ಈ ನಿನ್ನ ಮಹಿಮೆಯನ್ನರಿಯದೆ ನೀನು ಸಖನೆಂದು ತಿಳಿದು ಕೊಂಡು 'ಕೃಷ್ಣ, ಯಾದವ, ಗೆಳೆಯ' ಎಂದು ದಿಟ್ಟತನದಿಂದ ಪ್ರಮಾದದಿಂದ

* ಎಲ್ಲದರ ಸ್ವರೂಪವೂ ಆತ್ಮನೇ, ಆತ್ಮನನ್ನು ಬಿಟ್ಟರೆ ಮತ್ತೇನೇನೂ ಇಲ್ಲವೇ ಇಲ್ಲ; ಆದ್ದರಿಂದ ವ್ಯವಹಾರದಲ್ಲಿ ಏನೇನು ಕಂಡುಬರುವದೋ ಅದನ್ನೆಲ್ಲ, ಭ್ರಾಂತಿಯಲ್ಲಿ ಕಂಡ ಹಾವನ್ನು ಹಗ್ಗವು ಪೂರ್ಣವಾಗಿ ವ್ಯಾಪಿಸಿಕೊಂಡಿರುವಂತೆ, ಆತ್ಮವಸ್ತುವು ಪೂರ್ಣವಾಗಿ ವ್ಯಾಪಿಸಿಕೊಂಡಿರುವದೆಂಬ ಭಾವವನ್ನು 'ಸಮಾಪ್ನೋಷಿ' ಎಂಬ ಮಾತಿನಲ್ಲಿರುವ 'ಸಮ್' ಎಂಬ ಉಪಸರ್ಗದಿಂದ ಭಾಷ್ಯಕಾರರು ಇಲ್ಲಿ ತೆಗೆದಿರುತ್ತಾರೆ.

ಅಥವಾ ಪ್ರೇಮದಿಂದ ಏನೇನು ಹೇಳಿರುವೆನೋ; ವಿಹಾರ, ಶಯ್ಯೆ, ಆಸನ, ಭೋಜನ– ಇವುಗಳಲ್ಲಿ ಹಾಸ್ಯಕ್ಕಾಗಿ ನಾನು ಒಬ್ಬನೇ ಇರುವಾಗ ಅಥವಾ ಎದುರಿಗೆ ಏನೇನು ಅಸತ್ಕಾರಮಾಡಿರುವೆನೋ. ಅದನ್ನು ಕ್ಷಮಿಸಬೇಕೆಂದು ಅಪ್ರಮೇಯನಾದ ನಿನ್ನನ್ನು ಬೇಡಿಕೊಳ್ಳುವೆನು.

[ಭಾಷ್ಯ]

(ನೀನು) ಸಖನು ನನ್ನ ಸಮಾನವಯಸ್ಸಿನವನು ಎಂದು ತಿಳಿದುಕೊಂಡು ತಪ್ಪುತಿಳಿವಳಿಕೆಯಿಂದ ನಿನ್ನನ್ನು ತಿರಸ್ಕಾರಮಾಡಿ ದಿಟ್ಟತನದಿಂದ 'ಕೃಷ್ಣ', 'ಯಾದವ', 'ಗೆಳೆಯ'– ಎಂದು ತೀರಿಯುವ ಮೂಢನಾಗಿ; ಏನನ್ನರಿಯದೆ? ಎಂದರೆ ನಿನ್ನ ಮಹಿಮೆಯನ್ನು ಈಶ್ವರನಾದ ನಿನ್ನ ಈ ವಿಶ್ವರೂಪವೆಂಬ ಮಾಹಾತ್ಮ್ಯೆಯನ್ನು (ಅರಿಯದೆ); ಇಲ್ಲ 'ತವೇದಂ ಮಹಿಮಾನಂ ಅಜಾನತಾ' (ಎಂಬಲ್ಲಿ ಇದಮ್ ಎಂಬುದು ನಪುಂಸಕವಾಗಿ 'ಮಹಿಮಾನಮ್' ಎಂಬುದು ಪುಲ್ಲಿಂಗವಾಗಿರುವದರಿಂದ ಇದು ನಿನ್ನ ಮಾಹಾತ್ಮ್ಯವು, ಮಹಿಮೆಯನ್ನರಿಯದೆ) ಎಂದು ವೈಯಧಿಕರಣ್ಯವಾಗಿ ಸಂಬಂಧವನ್ನು ಮಾಡಿಕೊಳ್ಳಬೇಕು. 'ತವ ಇಮಮ್' ಎಂಬ ಪಾಠವಿದ್ದರೆ ಸಾಮಾನಾಧಿಕರಣ್ಯವೇ ('ಈ ನಿನ್ನ ಮಹಿಮೆಯನ್ನು' ಎಂದು ಸಮಾನಾಧಿಕರಣಸಂಬಂಧವನ್ನೇ ಮಾಡಿಕೊಳ್ಳಬಹುದು). ಪ್ರಮಾದದಿಂದ ಚಿತ್ತವು ಎತ್ತಲೋ ಹೋಗಿದ್ದುದರಿಂದ, ಅಥವಾ ಪ್ರಣಯದಿಂದ– ಪ್ರಣಯವೆಂದರೆ ಸ್ನೇಹದಿಂದುಂಟಾದ ವಿಶ್ವಾಸವು. ಆ ಕಾರಣದಿಂದಲಾದರೂ– ಏನೇನು ಹೇಳಿರುವೆನೋ, ‖ ೪೧ ‖

ಮತ್ತು ಹಾಸ್ಯಕ್ಕಾಗಿ ಏನೇನು ತಿರಸ್ಕರಿಸಿರುವೆನೋ, ವಿಹಾರ, ಶಯ್ಯೆ, ಆಸನ, ಭೋಜನ– ಇವುಗಳಲ್ಲಿ ಎಂದರೆ ಓಡಾಡುವದು, ಮಲಗಿರುವದು, ಕೂತಿರುವದು, ಊಟಮಾಡುವದು– ಈ ಕಾರ್ಯಗಳಲ್ಲಿ (ತೊಡಗಿರುವಾಗ) ನಾನೊಬ್ಬನೇ ಇರುವಾಗ ಪರೋಕ್ಷವಾಗಿ (ಏನೇನು ತಿರಸ್ಕಾರಮಾಡಿರುವೆನೋ) ಅಥವಾ ಎಲೈ ಅಚ್ಯುತನೆ, ಪ್ರತ್ಯಕ್ಷವಾಗಿಯೋ (ಏನೇನು) ತಿರಸ್ಕಾರಮಾಡಿರುವೆನೋ– 'ತತ್ ಸಮಕ್ಷಮ್' ಎಂಬಲ್ಲಿ ತತ್ ಎಂಬುದು ಕ್ರಿಯಾವಿಶೇಷಣಕ್ಕಾಗಿ (ಬಂದಿದೆ.)– ಆ ತಪ್ಪುಗಳೆಲ್ಲವನ್ನೂ ಅಪ್ರಮೇಯನಾದ ಪ್ರಮಾಣಾತೀತನಾದ ನೀನು ಕ್ಷಮಿಸಬೇಕೆಂದು ಬೇಡುವೆನು. ‖ ೪೨ ‖

ಏಕೆಂದರೆ ನೀನು—

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ‖ ೪೩ ‖**

೪೩. ನೀನು ಈ ಚರಾಚರಲೋಕಕ್ಕೆ ತಂದೆಯಾಗಿರುವೆ, ಇದಕ್ಕೆ ನೀನು ಪೂಜ್ಯನೂ ಹೆಚ್ಚಿನ ಗುರುವೂ ಆಗಿರುವೆ. ಅಪ್ರತಿಮವಾದ ಪ್ರಭಾವವುಳ್ಳವನೆ, ಮೂರು ಲೋಕದಲ್ಲಿಯೂ ನಿನಗೆ ಸಮನಾದವನು ಇಲ್ಲ. (ಇನ್ನು ನಿನಗಿಂತ) ಹೆಚ್ಚಿನವನಾದ ಮತ್ತೊಬ್ಬನು ಎಲ್ಲಿ(ದ್ದಾನು) ?

[ ಭಾಷ್ಯ ]

ಈ ಚರಾಚರರೂಪವಾದ ಲೋಕಕ್ಕೆ ಎಂದರೆ ಸ್ಥಾವರಜಂಗಮ(ರೂಪವಾಗಿರುವ) ಪ್ರಾಣಿಗಳ ಸಮೂಹಕ್ಕೆ ನೀನು ಹಡೆದಿರುವ ತಂದೆಯಾಗಿರುವೆ. ಈ ಜಗತ್ತಿಗೆ ನೀನು ಬರಿಯ ತಂದೆಮಾತ್ರವಲ್ಲ, ಪೂಜ್ಯನೂ ಪೂಜೆಗೆ ತಕ್ಕವನೂ (ಆಗಿರುವೆ) ; ಏಕೆಂದರೆ ಎಲ್ಲರಿಗೂ ಹೆಚ್ಚಿನ ಗುರುವಾಗಿರುವೆ ನೀನು ಎಲ್ಲರಿಗೂ ಹೆಚ್ಚಿನ ಗುರುವೆಂಬುದು ಹೇಗೆ ? ಎಂದರೆ ತಿಳಿಸುತ್ತಾನೆ: ನಿನಗೆ ಸಮನಾಗಿರುವವನು ಮತ್ತೊಬ್ಬನಿಲ್ಲ. ಇಬ್ಬರು ಈಶ್ವರರೆಂಬುದು ಸಂಭವಿಸುವ ಹಾಗೆಯೇ ಇಲ್ಲ ; ಏಕೆಂದರೆ ಒಬ್ಬನಿಗಿಂತ ಹೆಚ್ಚು ಈಶ್ವರರಿದ್ದರೆ ವ್ಯವಹಾರವೇ ನಾಗಲಾರದು. * ಈ ಮೂರು ಲೋಕದಲ್ಲೆಲ್ಲ ನಿನಗೆ ಸಮಾನನಾದವನೇ ಮೊದಲು ಮತ್ತೊಬ್ಬನಿರುವದಿಲ್ಲ, ಇನ್ನು (ನಿನಗಿಂತ) ಹೆಚ್ಚಿನವನು ಎಲ್ಲಿದ್ದಾನು ? ಎಲೈ ಅಪ್ರತಿಮಪ್ರಭಾವನೆ, ಯಾವದನ್ನು ಅಳತೆಯಾಗಿ ಕೊಡುವರೋ ಅದು ಪ್ರತಿಮೆಯು ; ನಿನ್ನ ಪ್ರಭಾವಕ್ಕೆ ಪ್ರತಿಮೆಯಿಲ್ಲ, ಆದ್ದರಿಂದ ನೀನು ಅಪ್ರತಿಮಪ್ರಭಾವವುಳ್ಳವನು ಎಂದರ್ಥ. ॥ ೪೩ ॥

ಹೀಗಿರುವದರಿಂದ:—

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

೪೪. ಆದ್ದರಿಂದ ಮೈಯೊಡ್ಡಿ ನಮಸ್ಕರಿಸಿ ಈಶ್ವರನೂ ಸ್ತುತಿಗೆ ಅರ್ಹನೂ ಆದ ನಿನ್ನನ್ನು ಪ್ರಸನ್ನನಾಗೆಂದು ಬೇಡಿಕೊಳ್ಳುತ್ತಿದ್ದೇನೆ. ಮಗನನ್ನು ಕ್ಷಮಿಸುವ ತಂದೆಯಂತೆಯೂ ಸ್ನೇಹಿತನನ್ನು ಕ್ಷಮಿಸುವ ಸ್ನೇಹಿತನಂತೆಯೂ ಪ್ರಿಯಳನ್ನು ಕ್ಷಮಿಸುವ ಪ್ರಿಯನಂತೆಯೂ ಸಹಿಸಿಕೊಳ್ಳಬೇಕು.

[ ಭಾಷ್ಯ ]

ಆದ್ದರಿಂದ ಶರೀರವನ್ನು ಚೆನ್ನಾಗಿ ಕೆಳಗಿಟ್ಟು ಅಡ್ಡಬಿದ್ದು ನಮಸ್ಕರಿಸಿ ಈಶನೂ ಎಂದರೆ (ಎಲ್ಲವನ್ನೂ) ಆಳುವವನೂ ಸ್ತುತಿಗೆ ಅರ್ಹನೂ ಆಗಿರುವ ನಿನ್ನನ್ನು

* ಬ್ರ. ಸೂ. ೪–೪–೧೮ ನೋಡಿ.

ಪ್ರಸನ್ನನಾಗೆಂದು ಬೇಡಿಕೊಳ್ಳುತ್ತಿದೇನೆ. ನೀನಾದರೋ ಪುತ್ರನ ಅಪರಾಧ(ವೆಲ್ಲ)ವನ್ನೂ ತಂದೆಯು ಹೇಗೆ ಮನ್ನಿಸುವನೋ, ಗೆಳೆಯನು ಗೆಳೆಯನ ಅಪರಾಧವನ್ನು ಹೇಗೆ ಮನ್ನಿಸುವನೋ ಮತ್ತು ಪ್ರಿಯಳ* ಅಪರಾಧವನ್ನು ಪ್ರಿಯನು ಹೇಗೆ ಕ್ಷಮಿಸುವನೋ ಹಾಗೆ (ನನ್ನ ಅಪರಾಧವನ್ನು) ಎಲೈ ದೇವನೆ, ಸಹಿಸಿಕೊಳ್ಳಬೇಕು, ಕ್ಷಮಿಸಬೇಕು- ಎಂದರ್ಥ. ॥ ೪೪ ॥

ಮುನ್ನಿನ ರೂಪವನ್ನು ತಳೆಯಬೇಕೆಂದು ಭಗವಂತನನ್ನು
ಅರ್ಜುನನು ಬೇಡಿಕೊಂಡದ್ದು

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

೪೫. ಹಿಂದೆ (ಎಂದೂ) ನೋಡದಿದ್ದದ್ದನ್ನು ಕಂಡು ನಾನು ಹರ್ಷಿತನಾಗಿರುವೆನು. ಮತ್ತು ನನ್ನ ಮನಸ್ಸು ಭಯದಿಂದ ವ್ಯಥೆಗೊಂಡಿದೆ. ಎಲೈ ದೇವನೆ, ಆ ರೂಪವನ್ನೇ ನನಗೆ ತೋರಿಸು, ದೇವೇಶನೆ, ಜಗನ್ನಿವಾಸನೆ, ಪ್ರಸನ್ನನಾಗು.

[ ಭಾಷ್ಯ ]

ನಾನಾಗಲಿ ಮತ್ತೊಬ್ಬರಾಗಲಿ ಈ ವಿಶ್ವರೂಪವನ್ನು ಹಿಂದೆ ಎಂದೂ ನೋಡಿರಲಿಲ್ಲ; ಇದನ್ನು ನಾನು ಕಂಡು ಹಿಗ್ಗಿರುತ್ತೇನೆ. ಮತ್ತು ನನ್ನ ಮನಸ್ಸು ಅಂಜಿಕೆಯಿಂದ ತಲ್ಲಣಗೊಂಡಿದೆ. ಆದ್ದರಿಂದ ದೇವತೆಗಳೊಡೆಯನೆ, ಜಗನ್ನಿವಾಸನೆ ಎಂದರೆ ಜಗತ್ತಿಗೆ ಆಶ್ರಯನಾದವನೆ, ನನ್ನ ಗೆಳೆಯನಾಗಿದ್ದ ಆ ರೂಪವನ್ನೇ ನನಗೆ ತೋರಿಸು.

---

* 'ಪ್ರಿಯಳ ಅಪರಾಧವನ್ನು ಪ್ರಿಯನು ಮನ್ನಿಸುವಂತೆ' ಎಂಬಲ್ಲಿ ಲಿಂಗವು ಬೇರೆ ಬರುವದೆಂಬ ದೋಷವನ್ನು ಎತ್ತಣಿಸಬಾರದು ; ಏಕೆಂದರೆ ಉಪಮಾನೋಪಮೇಯಗಳಿಗೆ ಒಂದೇ ವಿಭಕ್ತಿಯಿದ್ದರೆ ಸಾಕು, ಲಿಂಗವಚನಗಳು ಬೇರೆಯಾದರೂ ಇರಬಹುದೆಂಬ ನಿಯಮವಿದೆ. ತನಗೆ ಪ್ರಿಯರಾದವರ ತಪ್ಪನ್ನು ಮನ್ನಿಸುವದು ಜನರ ಸ್ವಭಾವವೆಂಬುದಿಷ್ಟೇ ಇಲ್ಲಿ ಬೇಕಾದದ್ದು. ಪ್ರಿಯಾಯಾಃ- ಎಂಬಲ್ಲಿ ವಿಸರ್ಗವು ಲೋಪವಾಗಿರುವದು ಆರ್ಷಪ್ರಯೋಗವು. ಕೆಲವರು ಪ್ರಿಯಃ ಪ್ರಿಯಾಯ ಎಂದು ಬಿಡಿಸಿ ಇಷ್ಟನಾದ ನೀನು ಪ್ರಿಯನಾದ ನನ್ನನ್ನು ಕ್ಷಮಿಸಬೇಕು- ಎಂದು ಅರ್ಥಮಾಡುತ್ತಾರೆ. ಆ ಕ್ರಮದಲ್ಲಿಯೂ ತೊಡಕುಗಳಿಲ್ಲದೆ ಇಲ್ಲ.

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

೪೬. ನೀನು (ಮೊದಲಿನ) ಹಾಗೆಯೇ ಕಿರೀಟಿಯೂ ಗದಿಯೂ ಚಕ್ರಹಸ್ತನೂ ಆಗಿರುವುದನ್ನು ನೋಡಬೇಕೆಂದು ಇಚ್ಛಿಸುತ್ತೇನೆ. ಎಲೈ ಸಹಸ್ರಬಾಹುವೆ, ವಿಶ್ವಮೂರ್ತಿಯೆ, ಆ ನಾಲ್ಕು ಭುಜದ ರೂಪವನ್ನೇ (ಹೊಂದಿದವ)ನಾಗು.

[ ಭಾಷ್ಯ ]

ಹಾಗೆಯೇ ಎಂದರೆ ಮೊದಲಿನಂತೆಯೇ ಕಿರೀಟಿಯೂ ಕಿರೀಟವನ್ನಿಟ್ಟು ಕೊಂಡವನೂ ಗದಿಯೂ ಎಂದರೆ ಗದೆಯನ್ನು ಧರಿಸಿದವನೂ ಕೈಯಲ್ಲಿ ಚಕ್ರವನ್ನು ಧರಿಸಿರುವವನೂ ಆಗಿರುವ ನಿನ್ನನ್ನು ನೋಡಬೇಕೆಂದು ಇಚ್ಛಿಸುತ್ತೇನೆ, (ಹಾಗೆಂದು) ನನ್ನ ಬಯಕೆಯಿದೆ. ಹೀಗಿರುವದರಿಂದ ಈಗಿನ ರೂಪದಿಂದ ಸಹಸ್ರಬಾಹುವಾಗಿರುವಾತನೆ, ವಿಶ್ವಮೂರ್ತಿಯೆ, ಆ ವಸುದೇವನ ಮಗನಾಗಿ ನಾಲ್ಕು ತೋಳಿನ ರೂಪದಿಂದಲೇ, (ತೋರಿಕೊಳ್ಳುವ)ನಾಗು; ವಿಶ್ವರೂಪವನ್ನು ಒಳಸೆಳೆದುಕೊಂಡು ಆ ವಸುದೇವನ ಮಗನ ರೂಪನ್ನೇ ತಳೆಯುವನಾಗು ಎಂದರ್ಥ. ॥ ೪೬ ॥

ಅರ್ಜುನನು ಅಂಜಿರುವುದನ್ನು ಕಂಡು ವಿಶ್ವರೂಪವನ್ನು ಉಪಸಂಹಾರ ಮಾಡಿಕೊಂಡು ಒಳ್ಳೆಯ ಮಾತಿನಿಂದ ಅವನನ್ನು ಸಮಾಧಾನಗೊಳಿಸುತ್ತಾ ಶ್ರೀಭಗವಂತನು ಹೇಳಿದನೇನೆಂದರೆ—

ಭಗವಂತನು ವಿಶ್ವರೂಪದ ಮಹಿಮೆಯನ್ನು ಹೇಳುವದು

**ಶ್ರೀಭಗವಾನುವಾಚ:—**

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನನ್ತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥**

ಶ್ರೀಭಗವಂತನು ಹೇಳಿದ್ದೇನೆಂದರೆ:—

೪೭. ಅರ್ಜುನನೆ, ಪ್ರಸನ್ನನಾದ ನನ್ನಿಂದ ತೇಜೋಮಯವಾಗಿಯೂ ಅನಂತವಾಗಿಯೂ ಆದ್ಯವಾಗಿಯೂ ಇರುವ ಈ ಹೆಚ್ಚಿನ ವಿಶ್ವರೂಪವು ನನ್ನ

ಯೋಗದಿಂದ ತೋರಿಸಲ್ಪಟ್ಟಿರುವದು. ಇದನ್ನು ನೀನಲ್ಲದೆ ಮತ್ತೊಬ್ಬನು ಹಿಂದೆ (ಎಂದೂ) ನೋಡಿರುವದಿಲ್ಲ.

[ ಭಾಷ್ಯ ]

ಪ್ರಸಾದವೆಂದರೆ ನಿನ್ನ ಮೇಲೆ ಅನುಗ್ರಹಮಾಡಬೇಕೆಂಬ ಬುದ್ಧಿಯು. ಪ್ರಸನ್ನನಾದ ಎಂದರೆ ಇಂಥ (ಪ್ರಸಾದದಿಂ)ದೊಡಗೂಡಿದ ನನ್ನಿಂದ ಈ ಮೆಚ್ಚಿನ ವಿಶ್ವರೂಪವು ನಿನಗೆ ತೋರಿಸಲ್ಪಟ್ಟಿತು. ನನ್ನ ಯೋಗದಿಂದ ಎಂದರೆ ಈಶ್ವರಸಾಮರ್ಥ್ಯದಿಂದ. ತೇಜೋಮಯವಾಗಿಯೂ ಎಂದರೆ ಬೆಳಕಿನಿಂದ ತುಂಬಿರುವದಾಗಿಯೂ, ವಿಶ್ವವಾಗಿಯೂ ಎಂದರೆ ಪೂರ್ಣವಾಗಿಯೂ, ಅನಂತವಾಗಿಯೂ ಕೊನೆಗಾಣದ್ದಾಗಿಯೂ, ಆದ್ಯವಾಗಿಯೂ ಎಂದರೆ (ಸೃಷ್ಟಿಯು) ಮೊದಲು ಇದ್ದದ್ದಾಗಿಯೂ ಇರುವ (ರೂಪವನ್ನು ತೋರಿಸಿರುತ್ತೇನೆ). ಈ ರೂಪವನ್ನು ನಿನ್ನನ್ನು ಬಿಟ್ಟು ಮತ್ತೆ ಯಾರೂ ಹಿಂದೆ ನೋಡಿರುವದಿಲ್ಲ. || ೪೭ ||

ಪರಮಾತ್ಮನಾದ ನನ್ನ ರೂಪವನ್ನು ಕಂಡದ್ದರಿಂದ ನೀನು ಕೃತಾರ್ಥನೇ ಆಗಿರುವೆ– ಎಂದು ಅದನ್ನು ಹೊಗಳುತ್ತಿದ್ದಾನೆ:—

**ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ || ೪೮ ||**

೪೮. ಕುರುವೀರನೆ, ವೇದ, ಯಜ್ಞ, ಅಧ್ಯಯನ- ಇವುಗಳಿಂದಾಗಲಿ ದಾನಗಳಿಂದಾಗಲಿ, ಕರ್ಮಗಳಿಂದಾಗಲಿ, ಉಗ್ರವಾದ ತಪಸ್ಸುಗಳಿಂದಾಗಲಿ- ಈ ರೂಪದಿಂದ ನನ್ನನ್ನು ಮನುಷ್ಯಲೋಕದಲ್ಲಿ ನಿನ್ನಿಂದ ಹೊರತು ಅನ್ಯರಿಂದ ನೋಡಲಾಗಲಾರದು.

[ ಭಾಷ್ಯ ]

ವೇದ, ಯಜ್ಞಗಳ ಅಧ್ಯಯನ, ದಾನ- ಇವುಗಳಿಂದ ಆಗಲಾರದು ; ಎಂದರೆ ನಾಲ್ಕು ವೇದಗಳನ್ನೂ ಸರಿಯಾಗಿ* ಅಧ್ಯಯನಮಾಡಿದರೂ ಯಜ್ಞಗಳನ್ನು ಅಧ್ಯಯನಮಾಡಿದ್ದರೂ- ವೇದವನ್ನು ಅಧ್ಯಯನಮಾಡಿದ್ದೆಂಬುದರಲ್ಲಿಯೇ ಯಜ್ಞದ ಅಧ್ಯಯನವು ಸೇರಿಹೋಗಿದ್ದರೂ ಮತ್ತೆ ಯಜ್ಞದ ಅಧ್ಯಯನವನ್ನು ಹೇಳಿರುವದು ಯಜ್ಞವಿಷಯವಾದ ತಿಳಿವಳಿಕೆಯನ್ನೂ (ಸೇರಿಸಿಕೊಳ್ಳುವದಕ್ಕೆ) ಹೆಗ್ಗುರುತಾಗಿರ

* ಸರಿಯಾಗಿ ಎಂದರೆ ಸಾಂಗವಾಗಿ ನಿಯಮದಿಂದ ಗುರುಮೂಲಕವಾಗಿ ಎಂದರ್ಥ.

ಲೆಂದು * ಮನುಷ್ಯನ ಭಾರದ ಚಿನ್ನವನ್ನು ಕೊಡುವದೇ ಮುಂತಾದ ದಾನಗಳಿಂದಲೂ (ಆಗಲಾರದು). ಅಗ್ನಿಹೋತ್ರವೇ ಮುಂತಾದ ಶ್ರೌತವೇ ಮುಂತಾದ ಕರ್ಮಗಳಿಂದಲೂ ಆಗಲಾರದು. ಅಥವಾ ಉಗ್ರವಾದ ಭಯಂಕರವಾದ ಚಾಂದ್ರಾಯಣವೇ ಮುಂತಾದ ತಪಸ್ಸುಗಳಿಂದಲೂ ಈ ರೂಪದಿಂದ ಎಂದರೆ ನಿನಗೆ ತೋರಿಸಿದ ವಿಶ್ವರೂಪದಿಂದ ನನ್ನನ್ನು ನೃಲೋಕದಲ್ಲಿ ಎಂದರೆ ಮನುಷ್ಯಲೋಕದಲ್ಲಿ ನಿನ್ನನ್ನು ಬಿಟ್ಟರೆ ಮತ್ತೊಬ್ಬರಿಂದ ನೋಡುವದು ಶಕ್ಯವಿಲ್ಲವಯ್ಯಾ† ಕುರುಪ್ರವೀರನೆ! ॥ ೪೮ ॥

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

೪೯. ಘೋರವಾಗಿರುವ ಇಂಥ ನನ್ನ ರೂಪವನ್ನು ಕಂಡು ನಿನಗೆ ವ್ಯಥೆಯಾಗದಿರಲಿ, ವಿಮೂಢಭಾವವೂ ಆಗದಿರಲಿ, ಹೆದರಿಕೆಯಿಲ್ಲದೆ ಮನಸ್ಸಿನಲ್ಲಿ ಪ್ರೀತಿಯಿಂದ ಮತ್ತೆ ನೀನು ಈ ನನ್ನ ರೂಪವನ್ನೇ ನೋಡು.

[ ಭಾಷ್ಯ ]

ನಿನಗೆ ವ್ಯಥೆಯಾಗದಿರಲಿ, ನಿನಗೆ ಅಂಜಿಕೆಯಾಗದಿರಲಿ; ವಿಮೂಢಭಾವವೂ ಆಗದಿರಲಿ ಎಂದರೆ ಚಿತ್ತದಲ್ಲಿ ಮೋಹವೂ ಆಗದಿರಲಿ; ನಾನು ನಿನಗೆ ತೋರಿಸಿದ ಇಂಥ ನನ್ನ ರೂಪವನ್ನು ಕಂಡು (ನಿನಗೆ ಅಂಜಿಕೆಯಾಗಲಿ ಮೋಹವಾಗಲಿ ಆಗದಿರಲಿ.) ಹೆದರಿಕೆಯನ್ನು ಬಿಟ್ಟು ಮನಸ್ಸಿನಲ್ಲಿ ಪ್ರೀತನಾಗಿ ಮತ್ತು ನೀನೇ ಅದೇ ನಾಲ್ಕೋಳಿನ ಶಂಖಚಕ್ರಗದೆಗಳನ್ನು ಧರಿಸಿದ ನಿನಗೆ ಇಷ್ಟವಾದ ಈ ರೂಪವನ್ನೇ ಸರಿಯಾಗಿ ನೋಡು. ॥ ೪೯ ॥

* ವೇದಾಧ್ಯಯನವೆಂದರೆ ವೇದವನ್ನು ಬಾಯಿಗೆ ಗಟ್ಟಿಮಾಡುವದೆಂದಿಷ್ಟೇ ಅರ್ಥವಾಗಬಹುದಾದ್ದರಿಂದ ವೇದದಲ್ಲಿ ಹೇಳಿರುವ ಯಜ್ಞದ ತಿಳಿವಳಿಕೆಯನ್ನೂ ಸೇರಿಸಿಕೊಳ್ಳಬೇಕೆಂದು ತಿಳಿಸುವದಕ್ಕಾಗಿ ಅದನ್ನು ಬೇರೆ ಹೇಳಿದೆಯೆಂದು ಭಾವ.

† ವೇದಾಧ್ಯಯನಾದಿಗಳು ವಿಹಿತವಾದ ಕರ್ಮಗಳಾದರೂ ಅವುಗಳಿಗೆ ಚಿತ್ತಶುದ್ಧಿಯೇ ಮುಂತಾದ ಹೊರಗಿನ ಫಲವಾಗುವದೇ ಹೊರತು ಭಕ್ತಿಯಿಲ್ಲದವನಿಗೆ ವಿಶ್ವರೂಪವನ್ನು ನೋಡುವದಕ್ಕೆ ಅವು ಸಹಾಯಕವಾಗಲಾರವೆಂದು ಭಾವ.

**ಸಞ್ಜಯ ಉವಾಚ:—**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

೫೦. ಹೀಗೆ ಅರ್ಜುನನನ್ನು ಕುರಿತು ವಾಸುದೇವನು ಆ (ಮಾತನ್ನು) ಹೇಳಿ ಮತ್ತು ತನ್ನ ರೂಪವನ್ನೇ ತೋರಿಸುವನಾದನು ಮತ್ತೂ ಅಂಜಿಕೊಂಡಿರುವ ಈ (ಅರ್ಜುನನನ್ನು ಆ) ಮಹಾತ್ಮನು ಮತ್ತೆ ಸೌಮ್ಯಶರೀರನಾಗಿ ಸಂತೈಸಿದನು.

[ ಭಾಷ್ಯ ]

ಹೀಗೆ ಈ ರೀತಿಯಲ್ಲಿ ಅರ್ಜುನನನ್ನು ಕುರಿತು ವಾಸುದೇವನು ಆ ಬಗೆಯ ಮಾತನ್ನು ಹೇಳಿ ತನ್ನ ಎಂದರೆ ವಸುದೇವನ ಮನೆಯಲ್ಲಿ ಹುಟ್ಟಿದ* ರೂಪವನ್ನು ಮತ್ತೆ ಇನ್ನೊಂದು ಸಲ ತೋರಿಸಿದವನಾದನು. ಮತ್ತು ಅಂಜಿಕೊಂಡಿರುವ ಈ (ಅರ್ಜುನನನ್ನು) ಮತ್ತೆ ಸೌಮ್ಯಶರೀರನಾಗಿ ಎಂದರೆ ಪ್ರಸನ್ನದೇಹನಾಗಿ (ಆ) ಮಹಾತ್ಮನು ಸಂತೈಸಿದನು. ॥ ೫೦ ॥

**ಅರ್ಜುನ ಉವಾಚ:—**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ಅರ್ಜುನನು ಹೇಳಿದನೇನೆಂದರೆ:—

೫೧. ಜನಾರ್ದನನೆ, ಸೌಮ್ಯವಾಗಿರುವ ಈ ನಿನ್ನ ಮಾನುಷರೂಪವನ್ನು ಕಂಡು, ಈಗ (ನಾನು) ಚೇತನವುಳ್ಳವನಾಗಿ ಪ್ರಕೃತಿಯನ್ನು ಹೊಂದಿದವನಾಗಿರುವೆನು.

[ ಭಾಷ್ಯ ]

ಈ ನನ್ನ ಗೆಳೆಯನಾದ ನಿನ್ನ ಪ್ರಸನ್ನವಾದ ಸೌಮ್ಯವಾದ ಮನುಷ್ಯರೂಪವನ್ನು ಕಂಡು, ಎಲೈ ಜನಾರ್ದನನೆ, ಈಗ ಆಗಿರುವೆನು ; ಏನು ? ಎಂದರೆ- ಚೇತನವುಳ್ಳವನು ಎಂದರೆ ಪ್ರಸನ್ನವಾದ ಚಿತ್ತವುಳ್ಳವನೂ ಪ್ರಕೃತಿಯನ್ನು ಎಂದರೆ ಸ್ವಭಾವವನ್ನು ಹೊಂದಿದವನೂ ಆಗಿರುವೆನು. ॥ ೫೧ ॥

* ತನ್ನ ರೂಪವನ್ನು ಎಂಬುದರಿಂದ ಪರಮಾತ್ಮನಿಗೆ ಒಂದು ಗೊತ್ತಾದ ರೂಪವಿರುವದೆಂದು ಭಾವಿಸಬಾರದೆಂದಭಿಪ್ರಾಯ. ಮುಂದಿನ ಶ್ಲೋಕದಲ್ಲಿ ಇದು ಸ್ಪಷ್ಟವಾಗುವದು.

## ವಿಶ್ವರೂಪವನ್ನು ನೋಡುವದಕ್ಕೆ ಬೇಕಾದ ಭಕ್ತಿ

**ಶ್ರೀಭಗವಾನುವಾಚ:—**
**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಙ್ಕ್ಷಿಣಃ ॥ ೫೨ ॥**

ಶ್ರೀಭಗವಂತನು ಎಂದನೇನೆಂದರೆ:—

೫೨. ಅತಿದುರ್ದರ್ಶವಾದ ಈ ನನ್ನ ರೂಪವನ್ನು ನೀನು ಕಂಡೆಯಲ್ಲ, ಈ ರೂಪನ್ನು ದೇವತೆಗಳು ಕೂಡ ನಿತ್ಯವೂ ಕಾಣಬೇಕೆಂದು ತವಕಪಡುತ್ತಿರುವರು.

[ ಭಾಷ್ಯ ]

ಸುದುರ್ದರ್ಶವಾದ ಎಂದರೆ ಬಲು ಕಷ್ಟದಿಂದ ಮಾತ್ರ ಕಾಣಬಹುದಾದ ಈ ನನ್ನ ರೂಪವನ್ನು ಕಂಡೆಯಲ್ಲ, ಈ ನನ್ನ ರೂಪವನ್ನು ದೇವತೆಗಳು ಕೂಡ ಯಾವಾಗಲೂ ನೋಡಬೇಕೆಂದು ಬಯಸುವರು; (ಹೀಗೆ) ನೋಡಬೇಕೆಂದು ತವಕಪಡುತ್ತಿದ್ದರೂ ನಿನ್ನಂತೆ (ಅವರು ಅದನ್ನು) ನೋಡಿರುವದಿಲ್ಲ, ನೋಡುವದೂ ಇಲ್ಲ-* ಎಂದಭಿಪ್ರಾಯ. ॥ ೫೨ ॥

ಏಕೆಂದರೆ—

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

೫೩. ನೀನು ನನ್ನನ್ನು ಯಾವ ರೀತಿಯಲ್ಲಿ ನೋಡಿರುವೆಯೋ ಈ ರೀತಿಯಲ್ಲಿ ನನ್ನನ್ನು ವೇದದಿಂದಾಗಲಿ, ತಪಸ್ಸಿನಿಂದಾಗಲಿ, ದಾನದಿಂದಾಗಲಿ, ಯಜ್ಞದಿಂದಾಗಲಿ, ನೋಡುವದಕ್ಕಾಗಲಾರದು.

[ ಭಾಷ್ಯ ]

ನನ್ನನ್ನು ಋಗ್ಯಜುಸ್ಸಾಮಾಥರ್ವವೆಂಬ ನಾಲ್ಕು ವೇದಗಳಿಂದಲಾಗಲಿ- ಉಗ್ರವಾದ **ಚಾಂದ್ರಾಯಣವೇ** ಮುಂತಾದ ತಪಸ್ಸಿನಿಂದಾಗಲಿ, ಗೋಭೂಹಿರಣ್ಯಾವೇ ಮುಂತಾದ ದಾನಗಳಿಂದಾಗಲಿ, ಇಜ್ಯೆಯಿಂದ ಎಂದರೆ ಯಜ್ಞದಿಂದಾಗಲಿ ಅಥವಾ ಪೂಜೆಯಿಂದಾಗಲಿ- ನಾನು ನಿನಗೆ ತೋರಿಸಿದ ಈ ರೀತಿಯಲ್ಲಿ (ನನ್ನನ್ನು)

* ದೇವತೆಗಳಿಗೆ ಮನುಷ್ಯರಿಗಿಂತ ಹೆಚ್ಚಿನ ಕೆಲಕೆಲವು ಶಕ್ತಿಗಳಿರುವವು; ಆದರೆ ಅವರು ದೇವತೆಗಳೆಂಬ ಕಾರಣದಿಂದಲೇ ಪರಮೇಶ್ವರನ ವಿಶ್ವರೂಪವನ್ನು ನೋಡುವ ಶಕ್ತಿಯುಂಟಾಗುವದಿಲ್ಲ. ಅವರಿಗೂ ಪರಮೇಶ್ವರನ ಭಕ್ತಿಯಿಂದಲೇ ಅದರ ದರ್ಶನವು ಲಭಿಸೀತು.

ನೋಡುವದಕ್ಕೆ, ಆಗಲಾರದು- ನೀನು ನನ್ನನ್ನು ನೋಡಿದಂತೆ (ನೋಡುವದಕ್ಕೆ ಆಗಲಾರದು)*.

ಹಾಗಾದರೆ ಮತ್ತೆ ಹೇಗೆ ನೋಡಬಹುದು ? ಎಂದರೆ ಹೇಳುತ್ತಾನೆ:—

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ　　॥ ೫೪ ॥**

೫೪. ಆದರೆ ಪರಂತಪನಾದ ಅರ್ಜುನನೆ, ಅನನ್ಯವಾದ ಭಕ್ತಿಯಿಂದ ನನ್ನನ್ನು ಈ ರೀತಿಯಲ್ಲಿ ತಿಳಿದುಕೊಳ್ಳುವದಕ್ಕೂ ನೋಡುವದಕ್ಕೂ ನಿಜವಾಗಿ ಸೇರಿಕೊಳ್ಳುವದಕ್ಕೂ ಆಗುತ್ತದೆ.

[ ಭಾಷ್ಯ ]

ಆದರೆ ಎಲೈ ಅರ್ಜುನನೆ, ಅನನ್ಯವಾದ ಭಕ್ತಿಯಿಂದ- ಭಗವಂತನಿಂದ ಬೇರೆಯಾಗಿ ಏತರಲ್ಲಿಯೂ ಯಾವದು ಇರುವದಿಲ್ಲವೋ ಅದು ಅನನ್ಯಭಕ್ತಿಯು. ಯಾವದಿರುವದರಿಂದ ಯಾವ ಕರಣಗಳಿಗೂ ವಾಸುದೇವನಿಗಿಂತ ಬೇರೆ ಯಾವದೂ ಕಾಣಿಸುವದಿಲ್ಲವೋ ಅದು ಅನನ್ಯಭಕ್ತಿಯು. ಆ ಭಕ್ತಿಯಿಂದ-† ನನ್ನನ್ನು ಈ ರೀತಿಯಲ್ಲಿ ಎಂದರೆ ವಿಶ್ವರೂಪದ ಆಕಾರದಲ್ಲಿ, ಎಲೈ ಪರಂತಪನೆ, ಶಾಸ್ತ್ರದಿಂದ ತಿಳಿದುಕೊಳ್ಳುವದಕ್ಕೂ, ಶಾಸ್ತ್ರದಿಂದ ತಿಳಿದುಕೊಳ್ಳುವದಕ್ಕೆ ಮಾತ್ರವೇ ಅಲ್ಲ, ನೋಡುವದಕ್ಕೂ ಎಂದರೆ **ಸಾಕ್ಷಾತ್ಕಾರ**ಮಾಡಿಕೊಳ್ಳಲಿಕ್ಕೂ, ನಿಜವಾಗಿ ಸೇರಿಕೊಳ್ಳುವದಕ್ಕೂ ಎಂದರೆ ಮೋಕ್ಷವನ್ನು ಹೊಂದುವದಕ್ಕೂ, ಶಕ್ಯವಾಗುವದು. ॥ ೫೪ ॥

ಈಗ **ಗೀತಾಶಾಸ್ತ್ರದಲ್ಲೆಲ್ಲ ಸಾರವಾದ ಅರ್ಥ**ವನ್ನು‡ ನಿಶ್ಶ್ರೇಯಸಕ್ಕಾಗಿ ಮಾಡಲೆಂದು ಒಕ್ಕಡೆಗೆ ಸೇರಿಸಿ ಹೇಳುತ್ತಾನೆ:—

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ　　॥ ೫೫ ॥**

---

* ವೇದಯಜ್ಞಾದಿಗಳಿಂದ ದೇವತ್ವವನ್ನಾದರೂ ಪಡೆಯಬಹುದು, ಭಗವಂತನ ವಿಶ್ವರೂಪವನ್ನು ಕಾಣುವದಾಗಲಾರದು.

† ಭಗವಂತನಲ್ಲಿರುವ ಅನನ್ಯಭಕ್ತಿಯಿಂದ ಜ್ಞಾನವೇ ಮುಂತಾದವುಗಳು ಲಭಿಸುವವೆನ್ನುವದಕ್ಕೆ ೧೩–೫೫ನ್ನು ನೋಡಿ.

‡ ಗೀತಾಶಾಸ್ತ್ರದಲ್ಲಿ ಉಪದೇಶಿಸಿರುವ ಸಾಧನವನ್ನೆಲ್ಲ ಪರಮಾತ್ಮನನ್ನು ಶರಣುಹೊಗುವದೆಂಬ ಒಂದೇ ಉಪದೇಶದಲ್ಲಿ ಅಡಕಮಾಡಿಬಿಡಬಹುದಾಗಿದೆ. ಏಕೆಂದರೆ ಕರ್ಮ, ಧ್ಯಾನ, ಭಕ್ತಿ ಜ್ಞಾನ- ಇವುಗಳಿಗೆಲ್ಲ ಭಗವಂತನೇ ವಿಷಯವು.

೫೫. ಪಾಂಡವನೆ, ನನ್ನ ಕರ್ಮವನ್ನು ಮಾಡುತ್ತಾ, ನನ್ನಲ್ಲಿಯೇ ಪರಮ(ಗತಿಯ ಬುದ್ಧಿಯುಳ್ಳವನಾಗಿ), ನನ್ನ ಭಕ್ತನಾಗಿ, ಸಂಗವಿಲ್ಲದವನಾಗಿ ಯಾವ ಪ್ರಾಣಿಗಳಲ್ಲಿಯೂ ವೈರವಿಲ್ಲದವನಾಗಿ ಇರುವವನು ಯಾವನೋ ಅವನು ನನ್ನನ್ನು ಹೊಂದುತ್ತಾನೆ.

[ ಭಾಷ್ಯ ]

ನನ್ನ ಕರ್ಮವನ್ನು ಮಾಡುವವನು ಎಂದರೆ ನನಗಾಗಿ ಕರ್ಮವನ್ನು ಮಾಡುವಾತನು, ನನ್ನನ್ನೇ ಪರಮ(ನೆಂದು ತಿಳಿದವ)ನು– ಆಳು ಧಣಿಯ ಕೆಲಸವನ್ನು ಮಾಡುತ್ತಾನಾದರೂ ಧಣಿಯೇ ತಾನು ಹೋಗಿ ಮುಟ್ಟಬೇಕಾದ ಪರಮಗತಿಯೆಂದು (ಎಂದಿಗೂ) ತಿಳಿಯುವದಿಲ್ಲ, ಆದರೆ ಇವನು ನನಗಾಗಿ ಕರ್ಮವನ್ನು ಮಾಡುವದಲ್ಲದೆ ನನ್ನನ್ನೇ ಪರಮಗತಿಯೆಂದು ತಿಳಿದಿರುತ್ತಾನೆ. ಆದ್ದರಿಂದ ಮತ್ಪರಮನೆನಿಸುವನು. ನಾನೇ (ತನಗೆ) ಪರಮನು, ಎಂದರೆ ಹೆಚ್ಚಿನ ಗತಿಯು (ಎಂದಿರುವನಾದ್ದರಿಂದ ಇವನು ಮತ್ಪರಮನು). ಮತ್ತು ನನ್ನ ಭಕ್ತನು, ಎಂದರೆ ನನ್ನನ್ನೇ ಎಲ್ಲಾ ಬಗೆಗಳಿಂದಲೂ ಸಂಪೂರ್ಣಮನಸ್ಸಿಟ್ಟು ಸರ್ವೋತ್ಸಾಹದಿಂದ ಭಜಿಸುತ್ತಿರುವವನು. ಸಂಗವರ್ಜಿತನು ಎಂದರೆ ಹಣ, ಮಕ್ಕಳು, ಸ್ನೇಹಿತರು, ಹೆಂಡತಿ, ನೆಂಟರು– ಇವರುಗಳಲ್ಲಿ ಸಂಗವಿಲ್ಲದವನು, ಸಂಗವೆಂದರೆ ಪ್ರೀತಿಯು, ಸ್ನೇಹವು; ಅದಿಲ್ಲದವನು. ನಿರ್ವೈರನು ಎಂದರೆ ವೈರವಿಲ್ಲದಾತನು, **ಯಾವ ಪ್ರಾಣಿಗಳಲ್ಲಿಯೂ ತನಗೆ ಅತ್ಯಂತವಾಗಿ ಅಪಕಾರವನ್ನು ಮಾಡುವದಕ್ಕೆ ಹೊರಟವರಲ್ಲಿ ಕೂಡ ಶತ್ರುಭಾವವಿಲ್ಲದವನು**– ಯಾವನು ಇಂಥ ನನ್ನ ಭಕ್ತನೋ ಅವನು ನನ್ನನ್ನು ಹೊಂದುತ್ತಾನೆ. ನಾನೇ ಅವನಿಗೆ ಪರಮಗತಿಯು, (ಅವನಿಗೆ) ಎಂದಿಗೂ ಬೇರೊಂದು ಗತಿಯಾಗುವದಿಲ್ಲ, ಪಾಂಡವನೆ, ಇಗೋ ಇದೇ ನಿನಗೆ ನಾನು ಮಾಡಿರುವ (ಮತ್ತು) ನಿನಗೆ ಬೇಕಾಗಿರುವ ಉಪದೇಶವು.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ವಿಶ್ವರೂಪದರ್ಶನಂ** ನಾಮ
ಏಕಾದಶೋಽಧ್ಯಾಯಃ

———

*

# ಹನ್ನೊಂದನೆಯ ಅಧ್ಯಾಯದ ಸಾರ

೧–೪. ಭಗವಂತನು ತನ್ನ ವಿಭೂತಿಗಳನ್ನು ವಿವರಿಸಿ ಜಗತ್ತೆಲ್ಲವೂ ತನ್ನ ಒಂದಂಶವೇ ಎಂದು ಹೇಳಿದ ಮಾತನ್ನು ಕೇಳಿ ಆ ವಿಶ್ವರೂಪವನ್ನು ನೋಡಬೇಕೆಂದು ಅರ್ಜುನನು "ಭಗವಂತ, ನೀನು ಹೇಳಿದಂತೆಯೇ ಇರುವ ನಿನ್ನ ಈಶ್ವರರೂಪವನ್ನು ನೋಡುವದಕ್ಕೆ ನನ್ನಿಂದ ಶಕ್ಯವೆ? ಹಾಗಾದರೆ ದಯವಿಟ್ಟು ಆ ರೂಪವನ್ನು ನನಗೆ ತೋರಿಸು" ಎಂದು ಬೇಡಿಕೊಂಡನು.

೫–೧೩. ಆಗ ಶ್ರೀಕೃಷ್ಣನು "ಪಾರ್ಥನೆ, ಈ ನನ್ನ ಬಗೆಬಗೆಯ ರೂಪಗಳನ್ನು ನೋಡು. ಆದಿತ್ಯಾದಿದೇವತೆಗಳು ನನ್ನಲ್ಲಿರುವದನ್ನೂ ಇಡಿಯ ಜಗತ್ತೇ ನನ್ನಲ್ಲಿ ಒಂದು ಕಡೆಯಲ್ಲಿರುವದನ್ನೂ ನೋಡು ಇಗೋ, ನಿನಗೆ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು" ಎಂದು ತನ್ನ ವಿಶ್ವರೂಪವನ್ನು ತೋರಿಸಿದನು. ಲೆಕ್ಕವಿಲ್ಲದಷ್ಟು ಬಾಯಿಗಳೂ ಅಚ್ಚರಿಗೊಳಿಸುವಂಥ ನೋಟಗಳೂ ಅರ್ಜುನನಿಗೆ ಕಂಡುಬಂದವು. ವಿಶ್ವರೂಪಧಾರಿಯಾದ ಭಗವಂತನು ಬಗೆಬಗೆಯ ಆಯುಧಗಳನ್ನು ಹಿಡಿದಿದ್ದನು. ಬಗೆಬಗೆಯ ದಿವ್ಯಾಭರಣಗಳನ್ನು ತೊಟ್ಟಿದ್ದನು, ದಿವ್ಯವಾದ ವಸ್ತ್ರವನ್ನುಟ್ಟುಕೊಂಡು ಅತ್ಯಂತಪರಿಮಳವಾದ ಹೂ ಗಂಧ ಮುಂತಾದವುಗಳಿಂದ ಶೋಭಿತನಾಗಿದ್ದನು, ಅತ್ಯಂತಪ್ರಕಾಶಮಯನಾಗಿದ್ದನು.

೧೪–೩೧. ಆಗ ಅರ್ಜುನನು ಬ್ರಹ್ಮಾದಿದೇವತೆಗಳೂ, ಋಷಿಗಳೂ, ಇತರಪ್ರಾಣಿಗಳೂ ಭಗವಂತನ ದೇಹದಲ್ಲಿಯೇ ಇರುವದನ್ನೂ ಭಗವಂತನು ತುದಿಮೊದಲೆಂಬುದು ಕಾಣದಂತೆ ಎಲ್ಲೆಲ್ಲಿಯೂ ವ್ಯಾಪಿಸಿರುವದನ್ನೂ ಯುದ್ಧಮಾಡುತ್ತಿರುವ ವೀರರು ಆತನ ಮುಖದೊಳಗೆ ಹೋಗುತ್ತಿರುವದನ್ನೂ ಆತನು ಅವರನ್ನು ಅಗಿದು ಬಾಯಿಚಪ್ಪರಿಸುತ್ತಿರುವದನ್ನೂ ದೇವತೆಗಳೂ ಸಿದ್ಧರೂ ಅಂಜಿಕೆಯಿಂದ ನಡುಗುತ್ತಾ ಆತನನ್ನು ಸ್ತುತಿಸುತ್ತಿರುವದನ್ನೂ ಆತನ ಭೀಕರವಾದ ರೂಪವನ್ನು ಕಂಡು ಲೋಕಕ್ಕೆ ಲೋಕವೇ ತಳಮಳಗೊಳ್ಳುತ್ತಿರುವದನ್ನೂ ಕಂಡು ಅರ್ಜುನನು ಮನಸ್ಸಿನಲ್ಲಿ ಸಮಾಧಾನವಿಲ್ಲದೆ, ದಿಕ್ಕುತೋಚದೆ, ಲೋಕವನ್ನೆಲ್ಲ ಸುಡುತ್ತಿರುವ ಉಗ್ರತೇಜೋಮೂರ್ತಿಯಾದ ಆ ಪರಮೇಶ್ವರನನ್ನು "ಸ್ವಾಮಿ, ನನ್ನಲ್ಲಿ ಪ್ರಸನ್ನನಾಗು. ನೀನು ಯಾರು? ಏತಕ್ಕೆ ಇಲ್ಲಿ ಅವತರಿಸಿರುವೆ? ದಯವಿಟ್ಟು ಹೇಳಬೇಕು" ಎಂದು ಬೇಡಿಕೊಂಡನು.

೩೨–೪೬. ಭಗವಂತನು "ಅರ್ಜುನ, ನಾನು ಈ ಲೋಕವನ್ನು ಲಯಗೊಳಿಸುವದಕ್ಕಾಗಿ ಬಂದಿರುವ ಕಾಲನೆಂದು ತಿಳಿ. ನೀನು ಯುದ್ಧಮಾಡಿದರೂ ಬಿಟ್ಟರೂ ಈ ಶತ್ರುವೀರರು ಯಾರೂ ಉಳಿಯುವ ಹಾಗಿಲ್ಲ. ನೀನು ಯಾವ ದ್ರೋಣ, ಭೀಷ್ಮ, ಜಯದ್ರಥ, ಕರ್ಣ- ಮೊದಲಾಗಿರುವವರಿಗೆ ಹೆದರಿರುವೆಯೋ, ಇವರೆಲ್ಲರೂ ಅಳಿಯಬೇಕೆಂಬುದೇ ನನ್ನ ಸಂಕಲ್ಪವು. ಆದ್ದರಿಂದ ಕಾಲವಶದಿಂದ ಸಾಯಬೇಕಾಗಿರುವ ಈ ವೀರರನ್ನು ಕೊಲ್ಲುವದಕ್ಕೆ ನಿಮಿತ್ತಮಾತ್ರನಾಗಿ ಕೀರ್ತಿಯನ್ನು ಪಡೆದುಕೊ, ನಿಶ್ಚಿತವಾಗಿಯೂ ನಿನಗೆ ಜಯವಾಗುವದು. ಇವರನ್ನು ಗೆದ್ದು ಸುಖನಾಗಿ ರಾಜ್ಯವನ್ನಾಳಿಕೊಂಡಿರು" ಎಂದು ನುಡಿಯಲು ಅರ್ಜುನನು ಥರಥರನೆ ನಡುಗುತ್ತಾ ಮತ್ತೆಮತ್ತೆ ತಲೆಬಾಗಿ ಭಗವಂತ

ನಿಗೆ ನಮಸ್ಕರಿಸಿ "ಸರ್ವಾತ್ಮನಾದ ಭಗವಂತನೆ, ನಿನ್ನ ಗುಣಗಳ ಕೀರ್ತನೆಯನ್ನು ಕೇಳಿದ ಮಾತ್ರದಿಂದ ಜಗತ್ತಿಗೆ ಜಗತ್ತೇ ಹರ್ಷದಿಂದ ಉಬ್ಬಿ ನಿನ್ನಲ್ಲಿ ಅನುರಾಗವುಳ್ಳದ್ದಾಗುವದೆಂಬುದು ಯುಕ್ತವೆ ; ರಕ್ಕಸರು ನಿನಗೆ ಹೆದರಿ ಓಡುವದೂ ಸಿದ್ಧರು ನಿನಗೆ ಅಡ್ಡಬೀಳುವದೂ ಯುಕ್ತವೆ : ಏಕೆಂದರೆ ಅಂಥ ಮಹಾಮಹಿಮನು ನೀನು. ನೀನು ಈ ಜಗತ್ತನ್ನು ಸೃಷ್ಟಿಸುವ ಬ್ರಹ್ಮನನ್ನು ಕೂಡ ಸೃಷ್ಟಿಸಿದವನು. ದೇವತೆಗಳಿಗೆಲ್ಲ ಒಡೆಯನು, ಜಗತ್ತಿಗೆಲ್ಲ ಆಶ್ರಯನಾದವನು. ನಿಜವಾಗಿ ನೋಡಿದರೆ ನೀನೇ ಇದೆಲ್ಲವನ್ನೂ ಅರಿಯುವವನು. ತಿಳಿಯಲ್ಪಡತಕ್ಕ ಜಗತ್ತಾದರೂ ನೀನೇ ಹೊರತು ಬೇರೆಯಲ್ಲ, ಮುಕ್ತರು ಪಡೆಯುವ ಸ್ಥಾನವೂ ನೀನೆ. ಸರ್ವದೇವಾತ್ಮಕನೆ, ನಿನಗೆ ನಮಸ್ಕಾರ ; ನೀನು ಇಂಥ ಮಹಿಮೆಯುಳ್ಳಾತನೆಂದು ಅರಿಯದೆ ನಾನು ಎಚ್ಚರದಪ್ಪಿ ಸ್ನೇಹದ ಸಲಿಗೆಯಿಂದ, 'ಕೃಷ್ಣ, ಯಾದವ, ಗೆಳೆಯ' ಎಂದು ಮುಂತಾಗಿ ಕರೆಯುತ್ತಾ ದಿಟ್ಟತನದಿಂದ ನುಡಿದಿರುವದನ್ನೆಲ್ಲ ಮನ್ನಿಸು. ಈ ಲೋಕಕ್ಕೇ ನೀನು ತಂದೆಯು, ಪೂಜ್ಯನು, ಗುರುವು ; ನಿನಗೆ ಸಮರೇ ಇಲ್ಲ. ಇನ್ನು ಹೆಚ್ಚಿನವರೆಲ್ಲಿಂದ ಬರುವರು? ಇಂಥ ನಿನ್ನಲ್ಲಿ ನಾನು ಮಾಡಿರುವ ಅಪರಾಧವನ್ನೆಲ್ಲ ಕ್ಷಮಿಸಬೇಕು, ನಿನ್ನ ಈ ರೂಪವನ್ನು ಉಪಸಂಹಾರಮಾಡಿಕೊಂಡು ಮುನ್ನಿನ ಮಾನುಷರೂಪವನ್ನೇ ತಳೆದು ನನ್ನನ್ನು ಅನುಗ್ರಹಿಸು" ಎಂದು ಅಂಗಲಾಚಿ ಬೇಡಿಕೊಂಡನು.

೪೭. ಆಗ ಭಗವಂತನು "ಅರ್ಜುನನೆ, ನಿನ್ನ ಮೇಲೆ ಪ್ರಸನ್ನನಾಗಿ ಈ ತೇಜೋಮಯವಾದ ವಿಶ್ವರೂಪವನ್ನು ನನ್ನ ಯೋಗಮಹಿಮೆಯಿಂದ ನಿನಗಾಗಿ ತೋರಿಸಿರುತ್ತೇನೆ. ಹೆದರದಿರು. ಇಗೋ ನನ್ನ ಮುನ್ನಿನ ರೂಪವನ್ನೇ ನೋಡು" ಎಂದು ಸಂತೈಸಿ ಮತ್ತೆ ಇಂತೆಂದನು: "ಪಾಂಡವನೆ, ನಿನಗೆ ತೋರಿಸಿದ ಈ ವಿಶ್ವರೂಪವನ್ನು ನೋಡಬೇಕೆಂದು ದೇವತೆಗಳು ಕೂಡ ತವಕಿಸುತ್ತಿರುವರು. ವೇದ, ತಪಸ್ಸು, ದಾನ, ಯಜ್ಞ- ಮುಂತಾದ ಯಾವ ಸಾಧನದಿಂದಲೂ ನನ್ನನ್ನು ಈ ರೂಪದಿಂದ ಕಾಣುವದು ಶಕ್ಯವಲ್ಲ ; ಅನನ್ಯಭಕ್ತಿಯೊಂದರಿಂದಲೇ ಇದು ಸಾಧ್ಯವಾಗುವದು. ಯಾವನು ನನಗಾಗಿಯೇ ಸಕಲಕರ್ಮಗಳನ್ನೂ ಮಾಡುತ್ತಾ, ನಾನೇ ಗತಿಯೆಂದು ನಂಬಿ, ನನ್ನಲ್ಲಿ ಪರಮಪ್ರೇಮವುಳ್ಳವನಾಗಿ ಈ ಲೋಕದ ವಿಷಯಗಳಲ್ಲಿ ಸಂಗವುಳ್ಳವನಾಗದೆ, ಸಮಸ್ತಪ್ರಾಣಿಗಳಲ್ಲಿಯೂ ಪ್ರೇಮದಿಂದ ಕೂಡಿರುವನೋ ಅವನೇ ನನ್ನನ್ನು ಸೇರುವನು."

—— * ——

# ಹನ್ನೆರಡನೆಯ ಅಧ್ಯಾಯ

(ಭಕ್ತಿಯೋಗ)

## ವಿಶ್ವರೂಪನ ಉಪಾಸಕರು, ಅಕ್ಷರಬ್ರಹ್ಮೋಪಾಸಕರು- ಇವರಲ್ಲಿ ಯಾರು ಹೆಚ್ಚಿನ ಯೋಗಿಗಳು?

ಎರಡನೆಯದರಿಂದ ಹಿಡಿದು ವಿಭೂತಿ(ಯೋಗವನ್ನು ತಿಳಿಸುವ ಹತ್ತನೆಯದರ) ವರೆಗಿನ ಅಧ್ಯಾಯಗಳಲ್ಲಿ ಯಾವದೊಂದು ಉಪಾಧಿಯ ವಿಶೇಷವೂ ಇಲ್ಲದ **ಪರಮಾತ್ಮನಾದ** ಅಕ್ಷರಬ್ರಹ್ಮದ* ಉಪಾಸನವನ್ನು ಹೇಳಿರುತ್ತದೆ; ಮತ್ತು **ಸರ್ವಯೋಗದ ಐಶ್ವರ್ಯದಿಂದಲೂ ಸರ್ವವನ್ನು ತಿಳಿಯುವ ಶಕ್ತಿಯಿಂದಲೂ ಕೂಡಿದ (ಶುದ್ಧ)ಸತ್ತ್ವ(ಗುಣವೆಂಬ) ಉಪಾಧಿಯಿಂದೊಡಗೂಡಿದ ಈಶ್ವರ** ನಾದ† ನಿನ್ನ ಉಪಾಸನೆಯನ್ನೂ ಅಲ್ಲಲ್ಲಿ ಹೇಳಿರುತ್ತದೆ. ವಿಶ್ವರೂಪ(ವನ್ನು ತೋರಿಸಿದ ಹನ್ನೊಂದನೆಯ)ಅಧ್ಯಾಯದಲ್ಲಿಯೋ ಎಂದರೆ ಈಶ್ವರಸಂಬಂಧಿಯೂ ಆದ್ಯವೂ ಸಕಲಜಗದ್ರೂಪವಾಗಿಯೂ ಇರುವ ನಿನ್ನ ವಿಶ್ವರೂಪವನ್ನು ಉಪಾಸನೆಗಾಗಿಯೇ ನೀನು ತೋರಿಸಿರುತ್ತೀಯೆ ; ಮತ್ತು ಅದನ್ನು ತೋರಿಸಿ 'ನನ್ನ ಕರ್ಮವನ್ನು ಮಾಡುವವನು' ಮುಂತಾದ (ಗುಣಗಳುಳ್ಳ ಭಕ್ತನು ನನ್ನನ್ನು ಸೇರುವನು) ಎಂದು ಹೇಳಿರುತ್ತೀಯೆ. ಆದ್ದರಿಂದ ನಾನು ಈ ಎರಡು ಪಕ್ಷಗಳಲ್ಲಿ ಯಾವದು ಹೆಚ್ಚಿನದು ಎಂಬುದನ್ನು ತಿಳಿಯಬೇಕೆಂದು ನಿನ್ನನ್ನು ಕೇಳುತ್ತೇನೆ-ಎಂದು ಅರ್ಜುನನು ಹೀಗೆಂದನು :—

**ಅರ್ಜುನ ಉವಾಚ :—**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

---

* ಯಾವ ಗುಣವೂ ಇಲ್ಲದ ಜ್ಞೇಯವಾದ ಪರಬ್ರಹ್ಮಕ್ಕೆ ಅಕ್ಷರವೆಂದು ಹೆಸರು. ಇದರ ಉಪಾಸನೆಯೆಂದರೆ ಅದರ ಸ್ವರೂಪವನ್ನೆ ಶ್ರವಣಮನನನಿದಿಧ್ಯಾಸನಗಳಿಂದ ಅರಿತುಕೊಳ್ಳುವದು. ಬೃ. ೩-೮-೮, ಮುಂ. ೧-೧-೫, ಬ್ರ. ಸೂ. ೩-೩-೩೩- ಇವುಗಳನ್ನು ನೋಡಿ.

† ನಿರ್ಗುಣಬ್ರಹ್ಮವೇ ಸತ್ತ್ವಗುಣೋಪಾಧಿಯಿಂದ ಸಗುಣವಾದ ಬ್ರಹ್ಮವೆನಿಸುವದು ; ಇದು ಉಪಾಸನೆಗಾಗಿ ಮಾತ್ರ ಸಗುಣವು. ಬ್ರ. ಸೂ. ೩-೨ರಲ್ಲಿ ೫ನೆಯ ಅಧಿಕರಣವನ್ನು ನೋಡಿ.

ಅರ್ಜುನನು ಹೇಳಿದ್ದೇನೆಂದರೆ :—

೧. ಸತತಯುಕ್ತರಾಗಿ ಯಾವ ಭಕ್ತರು ನಿನ್ನನ್ನು ಉಪಾಸನೆಮಾಡು ವರೋ ಮತ್ತು ಯಾರು ಅವ್ಯಕ್ತವಾದ ಅಕ್ಷರವನ್ನು (ಉಪಾಸನೆಮಾಡುವರೋ) ಅವರಿಬ್ಬರಲ್ಲಿ ಯಾರು ಹೆಚ್ಚಿನ ಯೋಗವಿದರು ?

[ ಭಾಷ್ಯ ]

ಹಿಂದಿನ ಶ್ಲೋಕದಲ್ಲಿ 'ನನ್ನ ಕರ್ಮವನ್ನು ಮಾಡುವ' (೧೧-೫೫) ಎಂದು ಮುಂತಾಗಿ ಹೇಳಿದ ವಿಷಯವನ್ನು ಇಲ್ಲಿ 'ಹೀಗೆ' ಎಂಬ ಮಾತಿನಿಂದ ಸೂಚಿಸಿರು ತ್ತದೆ. ಹೀಗೆ ಸತತಯುಕ್ತರಾಗಿ ಎಂದರೆ ಎಡೆಬಿಡದೆ ಭಗವಂತನ ಕರ್ಮವೇ ಮುಂತಾದ ಹಿಂದೆ ಹೇಳಿದ ವಿಷಯದಲ್ಲಿಯೇ ಮನಸ್ಸನ್ನು ಇಟ್ಟು ಪ್ರವೃತ್ತರಾ ಗಿರುವ ಎಂದರ್ಥ ; ಯಾವ ಭಕ್ತರು ಅನನ್ಯಶರಣರಾಗಿ ಹಿಂದೆ ತೋರಿಸಿದ ವಿಶ್ವ ರೂಪನಾದ ನಿನ್ನನ್ನು ಉಪಾಸನೆಮಾಡುತ್ತಿರುವರೋ ಎಂದರೆ ಧ್ಯಾನಮಾಡುತ್ತಿ ರುವರೋ ಮತ್ತು ಯಾವ ಬೇರೆಯ ಜನರು ಸಕಲ ವಿಷಣೆಗಳನ್ನೂ ತೊರೆದು ಸರ್ವ ಕರ್ಮಗಳನ್ನು ಸಂನ್ಯಾಸಮಾಡಿ ಮೇಲೆ ಹೇಳಿದಂಥ ಅಕ್ಷರಬ್ರಹ್ಮವನ್ನು– ಯಾವ ಉಪಾಧಿಗಳೂ ಇಲ್ಲದ್ದರಿಂದ ಇದಕ್ಕೆ **ಅಕ್ಷರ**ವೆಂದು ಹೆಸರು ; ಕರಣಗಳಿಗೆ ಗೋಚರವಲ್ಲದ್ದರಿಂದ **ಅವ್ಯಕ್ತ**ವೆನಿಸುವದು* ; ಏಕೆಂದರೆ ಯಾವದು ಲೋಕದಲ್ಲಿ ಕರಣಗಳಿಗೆ ಗೋಚರವಾಗಿರುವದೋ ಅದನ್ನು ವ್ಯಕ್ತವೆನ್ನುವರು ; 'ಅಞ್ಜ್' ಎಂಬ ಧಾತುವಿಗೆ ಇದೇ ಅರ್ಥವು. ಆದರೆ ಈ ಅಕ್ಷರವು ಅದಕ್ಕೆ ವಿರುದ್ಧವಾಗಿ (ಕರಣಕ್ಕೆ ಗೋಚರವಲ್ಲದ್ದಾಗಿರುವದು. ಅಂಥ ಈ ಅವ್ಯಕ್ತವಾದ) ಮತ್ತು ಇನ್ನೂ ವಿಕ್ಕ † ವಿಶೇಷಣಗಳಿಂದ ಕೂಡಿದ ಈ (ಅಕ್ಷರವನ್ನು) ಯಾರು ಉಪಾ ಸನೆಮಾಡುವರೋ– ಈ ಇಬ್ಬರೊಳಗೆ ಯಾರು ಯೋಗವಿತ್ತಮರು ? ಯಾರು ಯೋಗವನ್ನು ಹೆಚ್ಚು ಚೆನ್ನಾಗಿ ಬಲ್ಲವರು ? ಎಂದರ್ಥ. ॥ ೧ ॥

* ಇಲ್ಲಿ ಹೇಳಿರುವ ಅವ್ಯಕ್ತೋಪಾಸನೆಯು ಯಾವದು, ವ್ಯಕ್ತೋಪಾಸನೆಯು ಯಾವದು– ಎಂಬ ಬಗ್ಗೆ ಮತಭೇದಗಳುಂಟು. ಇವನ್ನೆಲ್ಲ ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿರುತ್ತದೆ. ಆಚಾ ರ್ಯರ ಮತದಲ್ಲಿ ಅವ್ಯಕ್ತವೆಂದರೆ ನಿರುಪಾಧಿಕಬ್ರಹ್ಮ, ವ್ಯಕ್ತವೆಂದರೆ ವಿಶ್ವರೂಪನಾದ ಸೋಪಾಧಿಕ ಬ್ರಹ್ಮ ಅಥವಾ ಈಶ್ವರ, ೮–೨೦ರ ಭಾಷ್ಯವನ್ನು ನೋಡಿ.

† ಮುಂದೆ ೩ನೆಯ ಶ್ಲೋಕದಲ್ಲಿ ಹೇಳಿರುವ 'ಅನಿರ್ದೇಶ್ಯತ್ವ'ವೇ ಮುಂತಾದ ವಿಶೇಷಣ ಗಳಿಂದ ಕೂಡಿರುವ ನಿರ್ಗುಣಬ್ರಹ್ಮದಲ್ಲಿ ವಿಶೇಷಣಗಳಿರುವವೆಂದು ಹೇಳುವದು ಉಪಚಾರಕ್ಕೇ ಸರಿ ; ಯಾವ ಉಪಾಧಿಯೂ ಇಲ್ಲದ್ದನ್ನು ಅನುಭವಕ್ಕೆ ತಂದುಕೊಡುವದಕ್ಕಾಗಿ ಆ ವಿಶೇಷಣಗಳನ್ನು ಹಾಕಿ ದೆಯೇ ಹೊರತು ಅದರಲ್ಲಿ ಇಷ್ಟು ಗುಣಗಳಿವೆಯೆಂಬುದಕ್ಕಲ್ಲ. ಇದನ್ನು ಗೀತಾರ್ಥಸರ್ವಸ್ವ ದಲ್ಲಿ ಚರ್ಚಿಸಿರುತ್ತದೆ

## ಭಗವಂತನ ಉತ್ತರ: ವಿಶ್ವರೂಪೋಪಾಸಕರೇ ಹೆಚ್ಚಿನ ಯೋಗಿಗಳು

ಶ್ರೀಭಗವಂತನು ಹೇಳಿದನೇನೆಂದರೆ– ಯಾರು ಸಮ್ಯಗ್ದರ್ಶಿಗಳಾಗಿ* ಬಯಕೆಗಳನ್ನೆಲ್ಲ ತೊರೆದು ಅಕ್ಷರ(ಬ್ರಹ್ಮ)ವನ್ನು ಉಪಾಸನೆಮಾಡುತ್ತಿರುವರೋ ಅವರು ಮೊದಲು ಹಾಗಿರಲಿ, ಅವರ ವಿಷಯದಲ್ಲಿ ಏನು ಹೇಳತಕ್ಕದ್ದೋ ಅದನ್ನು ಮುಂದೆ ಹೇಳುವೆವು. ಆದರೆ ಮಿಕ್ಕವರು (ಇದಾರಲ್ಲ),

**ಶ್ರೀಭಗವಾನುವಾಚ:—**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

೨. ಶ್ರೀಭಗವಂತನು ಹೇಳಿದನೇನೆಂದರೆ:—

ನನ್ನಲ್ಲಿಯೇ ಮನಸ್ಸನ್ನಿಟ್ಟು ಯಾರು ನಿತ್ಯಯುಕ್ತರಾಗಿ ಹೆಚ್ಚಿನ ಶ್ರದ್ಧೆಯಿಂದ ಕೂಡಿ ನನ್ನನ್ನು ಉಪಾಸನೆಮಾಡುತ್ತಿರುವರೋ ಅವರು ಯುಕ್ತತಮರೆಂದು ನನ್ನ ಮತವು.

[ ಭಾಷ್ಯ ]

ವಿಶ್ವರೂಪಪರಮೇಶ್ವರನಾದ ನನ್ನಲ್ಲಿ ಮನಸ್ಸನ್ನು ಇಟ್ಟು ಎಂದರೆ ಚೆನ್ನಾಗಿ ನಿಲ್ಲಿಸಿಕೊಂಡು ಯಾರು ಭಕ್ತರಾಗಿ ಸರ್ವಯೋಗೇಶ್ವರರಿಗೂ ಅಧೀಶ್ವರನೂ† ಸರ್ವಜ್ಞನೂ‡ ರಾಗವೇ ಮುಂತಾದ ಕ್ಲೇಶಗಳಿಂದ ಕಣ್ಪೊರೆಯನ್ನು ಹೊಂದಿರುವ ದೃಷ್ಟಿಯಿಲ್ಲದವನೂ§ ಆಗಿರುವ ನನ್ನನ್ನು, ನಿತ್ಯಯುಕ್ತರಾಗಿ ಎಂದರೆ ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದ ಶ್ಲೋಕದ ಅರ್ಥಕ್ಕೆ ತಕ್ಕಂತೆ ಯಾವಾಗಲೂ ಚಿತ್ತವಿಟ್ಟು, ಹೆಚ್ಚಿನ ಉತ್ಕೃಷ್ಟವಾದ ಶ್ರದ್ಧೆಯಿಂದ ನನ್ನನ್ನೇ ಉಪಾಸನೆಮಾಡುತ್ತಿರುವರೋ ಅವರೇ ಯುಕ್ತತಮರೆಂದು ನನ್ನ ಮತವು, ನನ್ನ ಅಭಿಪ್ರಾಯದಲ್ಲಿ (ಅವರೇ ಹೆಚ್ಚಿನ ಯೋಗಿಗಳು.) ಏಕೆಂದರೆ ಅವರು ಎಡೆಬಿಡದೆ ನನ್ನಲ್ಲಿಯೇ ಇಟ್ಟ ಚಿತ್ತದಿಂದ ಹಗಲುರಾತ್ರಿಗಳನ್ನು ಕಳೆಯುತ್ತಿರುವರು; ಆದ್ದರಿಂದ ಅವರ ವಿಷಯದಲ್ಲಿ ಯುಕ್ತತಮರೆಂದು|| ಹೇಳುವುದು ಯುಕ್ತವಾಗಿರುತ್ತದೆ. ॥ ೨ ॥

* ಅಕ್ಷರೋಪಾಸಕರು ಆತ್ಮನಿಗಿಂತ ಬೇರೆಯಾದ ಎರಡನೆಯ ಸತ್ಯವಸ್ತುವನ್ನೇ ಕಾಣದ್ದರಿಂದ ಆತ್ಮಚಿಂತನೆಯಲ್ಲಿಯೇ ಮುಳುಗಿರುವರು. † ಶ್ವೇ. ೬–೭.

‡ ಸರ್ವಜ್ಞತ್ವವೂ ಈಶ್ವರನಲ್ಲಿ ಉಪಾಧಿಕಲ್ಪಿತವೆಂಬುದನ್ನು ಬ್ರ॥ ಸೂ॥ ೨-೧–೧೪ರ ಭಾಷ್ಯದಲ್ಲಿ ವಿವರಿಸಿರುತ್ತದೆ. § ಯೋಗ ಸೂ ೨–೪; ೧–೨೪ನ್ನು ನೋಡಿ.

|| ಇಲ್ಲಿ ವಿಶ್ವರೂಪವನ್ನುಪಾಸನೆಮಾಡುವವರು ನಿರ್ಗುಣೋಪಾಸಕರಿಗಿಂತ ಹೆಚ್ಚಿನ ಯೋಗಿಗಳೆಂತ ತಾತ್ಪರ್ಯವಲ್ಲವೆಂದು ಆಚಾರ್ಯರ ಅಭಿಪ್ರಾಯವು. ಇಲ್ಲಿ ಉಂಟಾಗಬಹುದಾದ ಶಂಕೆಗಳ ಸಮಾಧಾನವನ್ನು ಗೀತಾರ್ಥಸರ್ವಸ್ವದಲ್ಲಿ ಮಾಡಿರುತ್ತದೆ.

## ಅಕ್ಷರೋಪಾಸಕರೂ ಪರಮಾತ್ಮನನ್ನೇ ಸೇರುವರು ; ಆದರೆ ಆ ಉಪಾಸನೆಯಲ್ಲಿ ಕಷ್ಟವು ಹೆಚ್ಚು

(ಹಾಗಾದರೆ) ಉಳಿದವರು ಯುಕ್ತತಮರಲ್ಲವೇನು ? ಎಂದರೆ ಹಾಗಲ್ಲ ; ಮತ್ತೇನೆಂದರೆ ಅವರ ವಿಷಯದಲ್ಲಿ ಏನು ಹೇಳತಕ್ಕದ್ದೋ ಅದನ್ನು ಕೇಳು:—

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥**
**ಸಂನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥**

೩-೪. ಆದರೆ ಯಾರು ಅನಿರ್ದೇಶ್ಯವೂ ಅವ್ಯಕ್ತವೂ ಸರ್ವವ್ಯಾಪಿಯೂ ಅಚಿಂತ್ಯವೂ ಕೂಟಸ್ಥವೂ ಅಚಲವೂ ಧ್ರುವವೂ ಆಗಿರುವ ಅಕ್ಷರವನ್ನು ಇಂದ್ರಿಯ ಗ್ರಾಮವನ್ನು ಬಿಗಿಹಿಡಿದುಕೊಂಡು ಎಲ್ಲೆಲ್ಲಿಯೂ ಸಮಬುದ್ಧಿಗಳಾಗಿ ಉಪಾಸನೆ ಮಾಡುತ್ತಿರುವರೋ ಸರ್ವಭೂತಗಳ ಹಿತದಲ್ಲಿ ರತರಾಗಿರುವ ಅವರು ನನ್ನನ್ನೇ ಪಡೆಯುವರು.

[ ಭಾಷ್ಯ ]

ಆದರೆ ಯಾರು ಅಕ್ಷರವನ್ನು (ಎಂಥ ಅಕ್ಷರವನ್ನೆಂದರೆ) ಅನಿರ್ದೇಶ್ಯವಾದದ್ದು ; (ಅದು) ಅವ್ಯಕ್ತವಾಗಿರುವದರಿಂದ ಅದು ಮಾತಿಗೆ ಗೋಚರವಲ್ಲವಾದ ಕಾರಣ (ಮಾತಿನಿಂದ ಇಂಥದ್ದೆಂದು) ತಿಳಿಸುವದಕ್ಕೆ ಆಗುವದಿಲ್ಲ ; ಆದ್ದರಿಂದ ಅನಿರ್ದೇಶ್ಯವಾದದ್ದು. ಅವ್ಯಕ್ತವಾದದ್ದು : ಯಾವ ಪ್ರಮಾಣದಿಂದಲೂ ಅದು ವ್ಯಕ್ತವಾಗುವದಲ್ಲ, ಆದ್ದರಿಂದ (ಅದು) ಅವ್ಯಕ್ತವು. (ಇಂಥ ಅಕ್ಷರವನ್ನು ಯಾರು ) ಪರ್ಯುಪಾಸನೆಮಾಡುವರೋ ಎಂದರೆ ಎಲ್ಲೆಲ್ಲಿಯೂ ಉಪಾಸನೆ ಮಾಡುತ್ತಿರುವರೋ, (ಎಂದರ್ಥ). **ಉಪಾಸನೆಯೆಂದರೆ ಉಪಾಸನೆಮಾಡ ಬೇಕಾದ ವಸ್ತುವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ವಿಷಯಮಾಡಿಕೊಂಡು ಸಮೀಪಿಸಿ ಎಣ್ಣೆಯ ಧಾರೆಯಂತೆ ಒಂದೇ ಪ್ರತ್ಯಯವನ್ನು ಹರಿಯಿಸುತ್ತಾ ಬಹಳ ಹೊತ್ತು ಇರುವದು** [ಇದನ್ನು ಉಪಾಸನೆಯೆನ್ನುತ್ತಾರೆ*.]

* ಉಪ- ಸಮೀಪಿಸಿ, ಆಸನ- ಕೂತಿರುವದು- ಎಂಬ ಅವಯವಾರ್ಥವನ್ನು ಬಿಡಿಸಿ ಒಂದೇ ಬಗೆಯ ಪ್ರತ್ಯಯವನ್ನು ಸಂತತವಾಗಿ ನಡೆಯಿಸುವದು ಎಂದು ಇಲ್ಲಿ ಉಪಾಸನೆಯ ಲಕ್ಷಣವನ್ನು ಹೇಳಿರುತ್ತಾರೆ; ಇದರಂತೆಯೇ ತೈ. ಭಾ. ೧-೩, ಸೂ. ಭಾ. ೪-೧-೭, ೪-೧-೧- ಇವು ಗಳಲ್ಲಿಯೂ ಆಚಾರ್ಯರ ವಚನಗಳಿವೆ. ಇಲ್ಲಿ 'ಉಪಾಸನಂ ಆಚಕ್ಷತೇ' ಎಂಬ ಭಾಷ್ಯಭಾಗವು ಹೆಚ್ಚೆಂದು ತೋರುವದು ; ಆದರೂ ಇದು ಎಲ್ಲಾ ಪುಸ್ತಕಗಳಲ್ಲಿಯೂ ಕಂಡುಬರುವದು.

(ಅ) ಅಕ್ಷರದ ವಿಶೇಷಣವನ್ನು ಹೇಳುತ್ತಾನೆ*: (ಅದು) ಸರ್ವತ್ರಗವು ಎಂದರೆ ಆಕಾಶದಂತೆ (ಎಲ್ಲವನ್ನೂ) ವ್ಯಾಪಿಸಿಕೊಂಡಿರುವದು; ಮತ್ತು ಅಚಿಂತ್ಯವು, ಅವ್ಯಕ್ತವಾಗಿರುವದರಿಂದ ಅಚಿಂತ್ಯವಾಗಿರುವದು. ಯಾವದು ಕರಣಗಳಿಗೆ ಗೋಚರವಾಗುವದೋ ಅದನ್ನು ಮನಸ್ಸಿನಿಂದಲೂ ಚಿಂತಿಸುವದಕ್ಕೆ ಆಗುತ್ತದೆ; ಆದರೆ ಅಕ್ಷರವು ಇದಕ್ಕೆ ವಿರುದ್ಧವಾಗಿ (ಕರಣಗಳಿಗೆ ಗೋಚರವಲ್ಲದೆ) ಇರುವದರಿಂದ ಅಚಿಂತ್ಯವಾಗಿರುವದು. (ಮತ್ತು ಅದು) **ಕೂಟಸ್ಥವು.** ನೋಡುವದಕ್ಕೆ (ಹೊರಗೆ) ಗುಣಗಳು ಕಾಣುತ್ತಿದ್ದು ಒಳಗೆ ದೋಷಗಳುಳ್ಳ ವಸ್ತುವಿಗೆ ಕೂಟ(ವೆಂದು ಹೆಸರು); 'ಕೂಟರೂಪ', 'ಕೂಟಸಾಕ್ಷ್ಯ'- ಮುಂತಾದ (ಕಡೆಗಳಲ್ಲಿ) ಕೂಟಶಬ್ದವು (ಈ ಅರ್ಥದಲ್ಲಿ) ಲೌಕಿಕಪ್ರಯೋಗದಲ್ಲಿ ಪ್ರಸಿದ್ಧವಾಗಿರುವದು. ಇದರಂತೆಯೇ ಅವಿದ್ಯೆಯೇ ಮುಂತಾದ ಅನೇಕ ಸಂಸಾರಬೀಜಗಳುಳ್ಳದ್ದಾಗಿಯೂ ಒಳಗೆ ದೋಷವುಳ್ಳ **'ಮಾಯೆ', 'ಅವ್ಯಾಕೃತ'**- ಮುಂತಾದ† ಶಬ್ದಗಳಿಂದ ಹೇಳಲ್ಪಡುವದಾಗಿಯೂ "ಪ್ರಕೃತಿಯನ್ನು ಮಾಯೆಯೆಂದೂ ಮಹೇಶ್ವರನನ್ನು ಮಾಯಿಯೆಂದೂ ತಿಳಿಯಬೇಕು," (ಶ್ವೇ) "ನನ್ನ ಮಾಯೆಯು ದಾಟಲಶಕ್ಯವಾದದ್ದು" (೭-೧೪) ಮುಂತಾದ (ಶ್ರುತಿಸ್ಮೃತಿಗಳಲ್ಲಿ) ಪ್ರಸಿದ್ಧವಾಗಿರುವದೇ ಕೂಟವು; ಆ ಕೂಟದಲ್ಲಿರುವದು, ಅದರ ಸಾಕ್ಷಿಯಾಗಿರುವದು ಕೂಟಸ್ಥವು. ಅಥವಾ (ಕೂಟ)ರಾಶಿಯಂತೆ‡ (ಏನೊಂದೂ ವಿಕಾರವಿಲ್ಲದೆ) ಇರುವದು ಕೂಟಸ್ಥವು. ಅದ್ದರಿಂದಲೇ (ಅದು) ಅಚಲವು, ಅಚಲವಾಗಿ(ಅಲುಗಾಡದೆ ಇ)ರುವದರಿಂದಲೇ (ಅದು) ಧ್ರುವವು, ನಿತ್ಯವಾಗಿರುವದು- ಎಂದರ್ಥ. ॥ ೪ ॥

(ಇಂಥ ಅಕ್ಷರವನ್ನು ಯಾರು) ಇಂದ್ರಿಯಗ್ರಾಮವನ್ನು ಎಂದರೆ ಇಂದ್ರಿಯಗಳ ಸಮುದಾಯವನ್ನು ಚೆನ್ನಾಗಿ ಬಿಗಿಹಿಡಿದು ಎಳೆದುಕೊಂಡು ಯಾವಾಗಲೂ ಎಲ್ಲಾ ಕಾಲದಲ್ಲಿಯೂ ಸಮಬುದ್ಧಿಗಳಾಗಿ-ಬೇಕಾದದ್ದು ಬರಲಿ, ಬೇಡವಾದದ್ದು ಬರಲಿ, ಒಂದೇ ಸಮನಾಗಿರುವ ಬುದ್ಧಿಯುಳ್ಳವರು ಯಾರೋ ಅವರು

* ಇಲ್ಲಿ 'ಉಪಾಸ್ಯಸ್ಯ' ಎಂಬ ಮಾತು ಅ॥ ಮ॥ ಮೈ॥ ಪಾಠಗಳಲ್ಲಿದೆ, ನಿ॥ ಗು॥ ಪಾಠಗಳಲ್ಲಿಲ್ಲ.

† ಮುಂತಾದ ಎಂಬುದರಿಂದ ಅವ್ಯಕ್ತ, ಆಕಾಶ, ಬೀಜ, ಶಕ್ತಿ, ಪ್ರಕೃತಿ- ಮುಂತಾದವುಗಳನ್ನು ತೆಗೆದುಕೊಳ್ಳಬೇಕು

‡ ಕೂಟದಲ್ಲಿ (ಮಾಯೆಯಲ್ಲಿ) ಸಾಕ್ಷಿಯಾಗಿರುವದು ಕೂಟಸ್ಥವು- ಎಂದದ್ದರಿಂದ ಅನಾತ್ಮದಲ್ಲಿ ವಿಕಾರಗಳಿದ್ದರೂ ಅದಕ್ಕೆ ಸಾಕ್ಷಿಯಾಗಿರುವ ಪರಮಾತ್ಮನಲ್ಲಿ ಯಾವ ಮಾರ್ಪಾಡೂ ಇಲ್ಲವೆಂದಂತಾಯಿತು. ಕೂಟ (ಬೆಟ್ಟ)ದಂತೆ ಅಲುಗಾಡದೆ ಇರುವದೆಂದು ಹೇಳಿದಾಗಲಂತೂ ವಿಕಾರವಿಲ್ಲದ್ದೆಂಬುದನ್ನು ಬಾಯಿಬಿಟ್ಟು ಹೇಳಿದಂತಾಯಿತು

ಸಮಬುದ್ಧಿಗಳೆನಿಸುವರು. (ಅಂಥ ಸಮಬುದ್ಧಿಗಳಾಗಿ)– ಯಾರು ಇಂಥವರಾಗಿ (ಉಪಾಸನೆಮಾಡುತ್ತಿರುವರೋ) ಸರ್ವಪ್ರಾಣಿಗಳ ಹಿತದಲ್ಲಿ ನಿರತರಾಗಿರುವ ಅವರು ನನ್ನನ್ನೇ ಸೇರುವರು.

ಆ (ಅಕ್ಷರೋಪಾಸಕರ ವಿಷಯದಲ್ಲಿ) 'ಅವರು ನನ್ನನ್ನು ಸೇರುವರು' ಎಂದು ಹೇಳತಕ್ಕದ್ದೇ ಇಲ್ಲ; 'ಏಕೆಂದರೆ ಜ್ಞಾನಿಯು ನನ್ನ ಆತ್ಮನೇ ಆಗಿರುತ್ತಾನೆ' (೭–೧೮) ಎಂದೇ ಹಿಂದೆ ಹೇಳಿದ್ದಾಗಿರುತ್ತದೆ. ಭಗವಂತನ ಸ್ವರೂಪವೇ ಆಗಿರುವ (ಅವರನ್ನು) ಹೆಚ್ಚಿನ ಯೋಗಿಗಳೆಂದಾಗಲಿ ಹೆಚ್ಚಿನ ಯೋಗಿಗಳಲ್ಲವೆಂದಾಗಲಿ ಹೇಳತಕ್ಕದ್ದೇ ಇಲ್ಲವಷ್ಟೆ? ॥ ೪ ॥

ಆದರೆ—

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

೫. ಅವ್ಯಕ್ತದಲ್ಲಿ ಚಿತ್ತವನ್ನಂಟಿಸಿಕೊಂಡಿರುವ ಅವರಿಗೆ ಕ್ಲೇಶವು ಅಧಿಕತರವಾಗಿರುವದು; ಏಕೆಂದರೆ ಅವ್ಯಕ್ತವೆಂಬ ಗತಿಯು ದೇಹವಂತರಿಗೆ ಕಷ್ಟದಿಂದ ಸಿಕ್ಕತಕ್ಕದ್ದಾಗಿರುವದು.

[ ಭಾಷ್ಯ ]

ನನಗಾಗಿ ಕರ್ಮವನ್ನು ಮಾಡುವದೇ ಮುಂತಾದದ್ದರಲ್ಲಿ ನಿರತರಾಗಿರುವ (ವಿಶ್ವರೂಪದ) ಉಪಾಸಕರಿಗೂ ಕ್ಲೇಶವು ಹೆಚ್ಚೇ ಸರಿ; ಆದರೆ ಅಕ್ಷರದಲ್ಲಿ ಮನಸ್ಸಿಟ್ಟವರಾಗಿ ಪರಮಾರ್ಥವನ್ನೇ* ಉಪಾಸನೆಮಾಡುತ್ತಾ ಅವ್ಯಕ್ತದಲ್ಲಿ ಅಂಟಿಕೊಂಡಿರುವ ಚಿತ್ತವುಳ್ಳವರು ದೇಹಾಭಿಮಾನವನ್ನು ತೊರೆಯಬೇಕಾಗುವದರಿಂದ (ಅವರಿಗೆ) ಕ್ಲೇಶವು ಇನ್ನೂ ಹೆಚ್ಚಾಗಿರುವದು. ಏಕೆಂದರೆ ಅಕ್ಷರಾತ್ಮರಾಗಿ ಅವ್ಯಕ್ತದಲ್ಲಿಯೇ (ಚಿತ್ತ)ಗತಿಯನ್ನು ಪಡೆಯುವದೆಂಬುದು ದೇಹವಂತರಿಗೆ† ಎಂದರೆ ದೇಹಾಭಿಮಾನವುಳ್ಳವರಿಗೆ ಕಷ್ಟದಿಂದ ದಕ್ಕುವದು. ಆದ್ದರಿಂದ (ಅವ್ಯಕ್ತೋಪಾಸಕರಿಗೆ) ಕ್ಲೇಶವು ಇನ್ನೂ ಹೆಚ್ಚು (ಎಂದು ತಿಳಿಯಬೇಕು). ॥೫॥

---

* ಆ॥ ಗು॥ ಮೈ॥ ಪಾಠಗಳಲ್ಲಿರುವ 'ಪರಮಾರ್ಥದರ್ಶಿನಾಮ್' ಎಂಬ ಪಾಠವನ್ನು ಇಟ್ಟುಕೊಂಡಿದೆ; ಅ॥ ಮ॥ ಪಾಠದಂತೆ 'ಪರಮಾತ್ಮದರ್ಶಿನಾಮ್' ಎಂದಿಟ್ಟುಕೊಂಡರೂ ಆಗಬಹುದು. ಇಲ್ಲಿ ಭಾಷ್ಯಸರಣಿಯನ್ನನುಸರಿಸಿ 'ಉಪಾಸನೆಮಾಡುತ್ತಾ' ಎಂದು ಅರ್ಥಮಾಡಿದೆ; ಆದರೆ ಈ ಸಂದರ್ಭದಲ್ಲಿ ಉಪಾಸನೆಯೆಂದರೆ ಜ್ಞಾನವೇ ಎಂಬುದನ್ನು ಮರೆಯದಿರಬೇಕು.

† ವ್ಯವಹಾರದ ದೃಷ್ಟಿಯಿಂದ ಎಲ್ಲರೂ ದೇಹವಂತರೇ. ಆದರೆ ಪರಮಾರ್ಥದೃಷ್ಟಿಯಿಂದ ದೇಹವೇ ಇಲ್ಲವಾದ್ದರಿಂದ ಅಕ್ಷರೋಪಾಸಕರು ದೇಹವಂತರಲ್ಲ, ದೇಹಾಭಿಮಾನವುಳ್ಳ ಅಜ್ಞಾನಿಗಳೆಲ್ಲರೂ ದೇಹವಂತರೆನಿಸುವದು. ವಿಶ್ವರೂಪೋಪಾಸಕರು ಕೂಡ ಈ ದೃಷ್ಟಿಯಲ್ಲಿ ದೇಹವಂತರೇ.

## ವಿಶ್ವರೂಪೋಪಾಸಕರಿಗೆ ಭಗವಂತನೇ ಉದ್ಧಾರಕನು

ಅಕ್ಷರ(ಬ್ರಹ್ಮ)ವನ್ನುಪಾಸನೆಮಾಡುವವರ ವ್ಯವಹಾರವು ಹೇಗಿರುವದೆಂಬುದನ್ನು ಮುಂದೆ ಹೇಳುವೆವು. ಆದರೆ—

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥ ೬ ॥**

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

೬-೭. ಆದರೆ ಯಾರು ಸರ್ವಕರ್ಮಗಳನ್ನೂ ನನ್ನಲ್ಲಿಯೇ ಸಂನ್ಯಾಸಮಾಡಿ ನನ್ನನ್ನೇ ಪರ(ಗತಿಯೆಂದು ತಿಳಿದವ)ರಾಗಿ ಅನನ್ಯಯೋಗದಿಂದಲೇ ಧ್ಯಾನಮಾಡುತ್ತಾ ನನ್ನನ್ನು ಉಪಾಸನೆಮಾಡುತ್ತಾರೋ ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳ ಅವರನ್ನು, ಎಲೈ ಪಾರ್ಥನೆ, ಬೇಗನೆ ಮೃತ್ಯುಸಂಸಾರಸಾಗರದಿಂದ ಸಮುದ್ಧಾರಮಾಡುವನಾಗುವೆನು.

[ ಭಾಷ್ಯ ]

ಯಾರು ಎಲ್ಲಾ ಕರ್ಮಗಳನ್ನೂ ಈಶ್ವರನಾದ ನನ್ನಲ್ಲಿ ಸಮರ್ಪಣಮಾಡಿ* ನನ್ನನ್ನೇ ಪರ(ಗತಿಯೆಂದು ತಿಳಿದವ)ರಾಗಿ ಅನನ್ಯಯೋಗದಿಂದಲೇ ಎಂದರೆ ವಿಶ್ವರೂಪನಾದ ದೇವನಾದ ಪರಮಾತ್ಮನನ್ನು ಬಿಟ್ಟು ಮತ್ತೊಂದು ಅವಲಂಬನೆಯಿಲ್ಲದೆ ಇರುವ ಸಮಾಧಿಯಿಂದಲೇ ನನ್ನನ್ನು ಧ್ಯಾನಮಾಡುತ್ತಾ ಚಿಂತನೆಮಾಡುತ್ತಾ ಉಪಾಸನೆಮಾಡುತ್ತಿರುವರೋ ॥ ೬ ॥

ಅವರಿಗೆ ಏನು ? ಎಂದರೆ ನನ್ನನ್ನುಪಾಸನೆಮಾಡುವದೊಂದರಲ್ಲಿ ತಾತ್ಪರ್ಯವುಳ್ಳ ಅವರಿಗೆ ಈಶ್ವರನಾದ ನಾನು ಸಮುದ್ಧಾರಕನಾಗುವೆನು. ಏತರಿಂದ ?- ಎಂದರೆ ಹೇಳುತ್ತಾನೆ: ಮೃತ್ಯುಸಂಸಾರಸಾಗರದಿಂದ,- ಮೃತ್ಯುಸಂಸಾರವೆಂದರೆ ಸಾವಿನಿಂದೊಡಗೂಡಿದ ಸಂಸಾರವು, ಅದೇ ಒಂದು ಸಾಗರದಂತೆ ದಾಟುವದಕ್ಕಾಗದಿರುವದರಿಂದ (ಅದನ್ನು ಸಾಗರವೆಂದು ಕರೆದಿದೆ.) ಆ ಮೃತ್ಯುಸಂಸಾರವೆಂಬ ಸಾಗರದಿಂದ- ನಾನು ಅವರನ್ನು ಉದ್ಧಾರಮಾಡುವನಾಗುವೆನು, ತಡವಾಗಿಯಲ್ಲ, ಬೇಗನೆ (ಎತ್ತುವೆನು). ಎಲೈ ಪಾರ್ಥನೆ,- ನನ್ನಲ್ಲಿ ಇಟ್ಟ ಚಿತ್ತವುಳ್ಳವರು ಎಂದರೆ ವಿಶ್ವರೂಪನಾದ ನನ್ನಲ್ಲಿಯೇ ಹೊಗಿಸಿದ ಚಿತ್ತವುಳ್ಳವರು;

* ಮಾಡುವ ಕರ್ಮವನ್ನೆಲ್ಲ ಭಗವದರ್ಪಣಮಾಡುವದೇ ಭಕ್ತಿಯೋಗದ ರಹಸ್ಯವು ; ಭಕ್ತಿಯೋಗದಲ್ಲಿ ಕರ್ಮಸಂನ್ಯಾಸವುಂಟೆ, ಇಲ್ಲವೆ- ಎಂಬುದನ್ನು ಗೀತಾರ್ಥಸರ್ವಸ್ವದಲ್ಲಿ ಚರ್ಚಿಸಿದೆ

(ಹೀಗೆ) ನನ್ನಲ್ಲಿಯೇ ಇಟ್ಟಚಿತ್ತವುಳ್ಳ ಅವರನ್ನು–(ನಾನು ಉದ್ಧಾರಮಾಡುವವನಾಗುವೆನು). ॥ ೭ ॥

## ವಿಶ್ವರೂಪೋಪಾಸನೆಯ ಮೆಟ್ಟಲುಗಳು

ಹೀಗಿರುವದರಿಂದ—

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

೮. ನನ್ನಲ್ಲಿಯೇ ಮನಸ್ಸಿಡು, ನನ್ನಲ್ಲಿ ಬುದ್ಧಿಯನ್ನು ಇರಿಸು; ಆಮೇಲೆ ನನ್ನಲ್ಲಿಯೇ ವಾಸಮಾಡುವೆ. ಸಂಶಯವಿಲ್ಲ.

[ ಭಾಷ್ಯ ]

ವಿಶ್ವರೂಪನಾದ ಈಶ್ವರನಾದ ನನ್ನಲ್ಲಿಯೇ ಸಂಕಲ್ಪವಿಕಲ್ಪಾತ್ಮಕವಾದ* ಮನಸ್ಸನ್ನು ಇಡು, ಸ್ಥಿರಗೊಳಿಸು; ನಿಶ್ಚಯವನ್ನು† ಮಾಡುವ ಬುದ್ಧಿಯನ್ನು, ನನ್ನಲ್ಲಿಯೇ ನಿಲ್ಲಿಸಿಕೊ. ಆಮೇಲೆ ನಿನಗೇನಾಗುವದೆಂದರೆ ಕೇಳು: ಆಮೇಲೆ ಎಂದರೆ ಶರೀರವು ಬಿದ್ದುಹೋದ ಮೇಲೆ‡ ನನ್ನಲ್ಲಿಯೇ ನಿವಾಸಮಾಡುವೆ, ನಿಶ್ಚಯವಾಗಿ ನನ್ನ ರೂಪದಿಂದ ನನ್ನಲ್ಲಿ ವಾಸಮಾಡಿಕೊಂಡಿರುವೆ; ಸಂಶಯವಿಲ್ಲ, ಈ ವಿಷಯದಲ್ಲಿ ಸಂಶಯವನ್ನು ಮಾಡಬೇಕಾದದ್ದಿಲ್ಲ.

---

* ಸಂಕಲ್ಪವೆಂದರೆ ಹೀಗೆ ಮಾಡಬೇಕೆಂದು ಕಲ್ಪಿಸುವದು, ವಿಕಲ್ಪವೆಂದರೆ ಬಗೆಬಗೆಯಾಗಿ ಕಲ್ಪಿಸುವದು. ನಾಮರೂಪಗಳು ಹೇಗೆ ಹೇಗೆ ತೋರುವವೋ ಹಾಗೆ ಹಾಗೆ ಮನಸ್ಸು ಮಾರ್ಪಡುತ್ತಾ ಹೋಗುವದು; ಆಗ ಉಂಟಾಗುವ ಬಿಡಿಬಿಡಿಯ ಜ್ಞಾನಕ್ಕೆ ವಿಕಲ್ಪವೆಂದು ಹೆಸರು.

† ನಿಶ್ಚಯವೆಂಬುದು ಎರಡು ಬಗೆ: ಇದು ಮಾಡತಕ್ಕ ಕೆಲಸವೆಂದು ಸಂಕಲ್ಪಿಸಿದ್ದನ್ನು ಹೀಗೆಯೇ ಮಾಡುವೆನೆಂದು ನಿಶ್ಚಯಿಸುವದೊಂದು ಬಗೆ, ಹೊರಗಿನಿಂದ ಮನಸ್ಸಿನಲ್ಲಿ ಆದ ವಿಕಲ್ಪಗಳನ್ನು ಒಟ್ಟುಗೂಡಿಸಿ ಇಂಥ ವಸ್ತುವೆಂದು ಅರಿವನ್ನುಂಟುಮಾಡಿಕೊಳ್ಳುವದು ಇನ್ನೊಂದು ಬಗೆ. ಈ ಎರಡೂ ಬುದ್ಧಿಯ ಕೆಲಸ. ಮನಸ್ಸು, ಬುದ್ಧಿ- ಎರಡೂ ಅಂತಃಕರಣವೆಂಬ ಮಾತಿನಲ್ಲಿ ಸೇರಿವೆ. ಇವುಗಳ ವಿವರವನ್ನು ಗೀತಾರ್ಥಸರ್ವಸ್ವದ ಧ್ಯಾನಯೋಗದಲ್ಲಿ ಕಾಣಬಹುದು.

‡ ಸಗುಣೋಪಾಸಕರಿಗೆ ಕಾಲಾಂತರದಲ್ಲಿಯೇ ಸಾಯುಜ್ಯರೂಪಮುಕ್ತಿಯಾಗುವದೆಂದು ಶ್ರುತಿಯಿರುವದರಿಂದ ಶಾಸ್ತ್ರದಲ್ಲಿ ಶ್ರದ್ಧೆಯಿಟ್ಟು ನನ್ನಲ್ಲಿಯೇ ನಿನ್ನ ಚಿತ್ತವನ್ನಿಡು- ಎಂದು ಭಾವ, ಮನಸ್ಸನ್ನೂ ಬುದ್ಧಿಯನ್ನೂ ಈಶ್ವರನಲ್ಲಿಯೇ ನಿರಂತರವಾಗಿ ನೆಟ್ಟರೆ ಅದೇ ಭಾವನೆಯಿಂದ ಭಾವಿತರಾಗಿ ಕೊನೆಗೆ ಈಶ್ವರಸಾಯುಜ್ಯವನ್ನು ಪಡೆಯುವರು. ಬೃ॥ ೪–೧; ಛಾ॥ ೩–೧೪–೧ ನೋಡಿ.

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ　　॥ ೯ ॥**

೯. ಆದರೆ ನನ್ನಲ್ಲಿಯೇ ಈ ಚಿತ್ತವನ್ನು ಸ್ಥಿರವಾಗಿ ಸಮಾಧಾನಗೊಳಿಸಲಿಕ್ಕೆ ನೀನು ಅಶಕ್ತನಾದರೆ, ಎಲೈ ಧನಂಜಯನೆ, ಆಗ ಅಭ್ಯಾಸಯೋಗದಿಂದ ನನ್ನನ್ನು ಪಡೆಯುವದಕ್ಕೆ ಇಚ್ಛೆಯನ್ನು ಮಾಡು.

[ ಭಾಷ್ಯ ]

ಹಾಗಿಲ್ಲದೆ ನಾನು ಹಿಂದೆ ಹೇಳಿರುವಂತೆ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಅಲುಗಾಡದಂತೆ ಸಮಾಧಾನಗೊಳಿಸಲಿಕ್ಕೆ ಎಂದರೆ ನೆಲೆಗೊಳಿಸುವದಕ್ಕೆ ನೀನು ಶಕ್ತನಾಗದೆ ಇದ್ದರೆ, ಆಗ **ಅಭ್ಯಾಸಯೋಗ**ದಿಂದ- ಚಿತ್ತವನ್ನು ಒಂದೇ ವಿಷಯದಲ್ಲಿ ಎಲ್ಲಾ ಕಡೆಯಿಂದಲೂ ಎಳೆದುಕೊಂಡು ಮತ್ತೆ ಮತ್ತೆ ಇಡುವದು **ಅಭ್ಯಾಸವು**; ಅದರಿಂದೊಡಗೂಡಿದ ಸಮಾಧಿರೂಪವಾದ ಯೋಗವೇ ಅಭ್ಯಾಸ ಯೋಗವು.* ಆ ಅಭ್ಯಾಸಯೋಗದಿಂದ- ಎಲೈ ಧನಂಜಯನೆ, ವಿಶ್ವರೂಪನಾದ ನನ್ನನ್ನು, ಪಡೆಯುವದಕ್ಕೆ ಇಚ್ಛೆಮಾಡು.　　॥ ೯ ॥

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ　　॥ ೧೦ ॥**

೧೦. ಅಭ್ಯಾಸದಲ್ಲಿ ಅಸಮರ್ಥನಾದರೆ, ನನ್ನ ಕರ್ಮವನ್ನು ಮಾಡುವದ ರಲ್ಲಿ ನಿರತನಾಗು. ನನಗೋಸ್ಕರವಾಗಿ ಕರ್ಮವನ್ನು ಮಾಡುತ್ತಿದ್ದರೂ ಸಿದ್ಧಿಯನ್ನು ಪಡೆಯುವೆ.

[ ಭಾಷ್ಯ ]

(ಮೇಲೆ ಹೇಳಿದ) ಅಭ್ಯಾಸ(ಯೋಗ)ವನ್ನು ಮಾಡುವದಕ್ಕೂ (ನೀನು) ಅಸ ಮರ್ಥನಾದರೆ ನಿನ್ನ ಕೈಯಲ್ಲಾಗದಿದ್ದರೆ, ಆಗ ನನ್ನ ಕರ್ಮವನ್ನು ಮಾಡುವದ ರಲ್ಲಿ ನಿರತನಾಗು ;† ನನಗಾಗಿ ಮಾಡುವ ಕರ್ಮವು ನನ್ನ ಕರ್ಮವು ; ನನ್ನ ಕರ್ಮದಲ್ಲಿ ತತ್ಪರನಾಗು, ಎಂದರೆ ಆ (ನನಗಾಗಿ ಮಾಡುವ ಕರ್ಮವೇ) ಮುಖ್ಯ ವಾಗಿರುವವನಾಗು ಎಂದರ್ಥ. ಅಭ್ಯಾಸವಿಲ್ಲದೆ ಸುಮ್ಮನೆ ನನಗಾಗಿ ಕರ್ಮ

* ೮–ಅನ್ನು ನೋಡಿ.

† ಪರಮೇಶ್ವರನಿಗೆಂದು ಕರ್ಮವನ್ನು ಮಾಡುತ್ತಿದ್ದರೆ ಚಿತ್ತಶುದ್ಧಿಯಾಗಿ ಧ್ಯಾನಯೋಗಕ್ಕೆ ತಕ್ಕವನಾಗುವನೆಂದು ಭಾವ.

ವನ್ನು ಮಾಡುತ್ತಿದ್ದರೂ **ಸಿದ್ಧಿಯನ್ನು***– ಚಿತ್ತಶುದ್ಧಿ, ಯೋಗ, ಜ್ಞಾನಗಳನ್ನು (ಕ್ರಮಕ್ರಮವಾಗಿ) ಹೊಂದುವದರ ಮೂಲಕ (ಪರಮಸಿದ್ಧಿಯನ್ನು)–ಪಡೆಯುವೆ.

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

೧೧. ನನ್ನ ಯೋಗವನ್ನು ಆಶ್ರಯಿಸಿ ಇದನ್ನು ಮಾಡುವದಕ್ಕೂ ನೀನು ಅಶಕ್ತನಾದರೆ, ಆಗ ಸರ್ವಕರ್ಮಗಳ ಫಲವನ್ನೂ ಯತಾತ್ಮನಾಗಿ ತ್ಯಾಗಮಾಡು.

[ ಭಾಷ್ಯ ]

ಅಪರೆ, ನನ್ನ ಕರ್ಮವನ್ನು ಮಾಡುವದರಲ್ಲಿಯೇ ನಿರತನಾಗಿರೆಂದು ಹೇಳಿದೆನಷ್ಟೆ, ಇದನ್ನು ಮಾಡುವದಕ್ಕೂ ನಿನ್ನಿಂದ ಆಗದೆಹೋದರೆ, ನನ್ನ ಯೋಗವನ್ನು ಆಶ್ರಯಿಸಿ*– ಮಾಡುವ ಕೆಲಸಗಳನ್ನೆಲ್ಲ ನನಗೆ ಸಮರ್ಪಣೆಮಾಡುತ್ತಾ ಮಾಡುತ್ತಿರುವದೇ ನನ್ನ ಯೋಗವು, ಅದನ್ನು ಆಶ್ರಯಿಸಿ- (ನನಗಾಗಿ ಕರ್ಮಗಳನ್ನು ಮಾಡುವದು ನಿನ್ನಿಂದಾಗದೆ ಹೋದರೆ), ಆಗ ಸರ್ವಕರ್ಮಫಲತ್ಯಾಗವನ್ನು -ಎಲ್ಲಾ ಕರ್ಮಗಳ ಫಲವನ್ನೂ ತೊರೆಯುವದೇ ಸರ್ವಕರ್ಮಫಲತ್ಯಾಗವು- ಯತಾತ್ಮನಾಗಿ ಚಿತ್ತವನ್ನು ಬಿಗಿಹಿಡಿದುಕೊಂಡು (ಅದನ್ನು) ಮಾಡುವನಾಗು ಎಂದರ್ಥ. ॥ ೧೧ ॥

ಈಗ ಸರ್ವಕರ್ಮಗಳ ಫಲವನ್ನೂ ತ್ಯಾಗಮಾಡುವದನ್ನು ಹೊಗಳುತ್ತಿದ್ದಾನೆ:—

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ ಕರ್ಮಫಲತ್ಯಾಗಸ್ತ್ಯಾಗಾಚ್ಛಾನ್ತಿರನನ್ತರಮ್ ॥ ೧೨ ॥**

೧೨. ಏಕೆಂದರೆ ಜ್ಞಾನವು ಅಭ್ಯಾಸಕ್ಕಿಂತ ಹೆಚ್ಚಿನದು; ಜ್ಞಾನಕ್ಕಿಂತ ಧ್ಯಾನವು ಮೇಲು; ಧ್ಯಾನಕ್ಕಿಂತ ಕರ್ಮಫಲತ್ಯಾಗವು (ಮೇಲು); ತ್ಯಾಗದ ಅನಂತರವೇ ಶಾಂತಿಯು (ದೊರಕುವದು.)

* ೧೮–೫೦ರ ಭಾಷ್ಯವನ್ನು ನೋಡಿ. ನನ್ನ ಯೋಗವನ್ನು ಆಶ್ರಯಿಸಿ ಕರ್ಮಫಲತ್ಯಾಗ ಮಾಡು- ಎಂದು ಕೆಲವರು ಅರ್ಥಮಾಡುತ್ತಾರೆ, ಪರಮಾತ್ಮನಿಗಾಗಿ ಕರ್ಮವನ್ನು ಮಾಡುವದೇ ಪರಮಾತ್ಮನಲ್ಲಿ ಭಕ್ತಿಯೋಗವು; ಅದು ಯಾರಿಗೆ ದಕ್ಕದೋ ಅವರು ಸಮಯವೊದಗಿದಂತೆ ಮಾಡಿದ ಕೆಲಸವನ್ನು ಪರಮಾತ್ಮನಿಗೆ ಅರ್ಪಣೆಮಾಡಬೇಕೆಂದು ಆಗ ಅಭಿಪ್ರಾಯವು. ೯–೨೭ನೆಯ ಶ್ಲೋಕವನ್ನು ನೋಡಿ. ನಾವು ಮಾಡಿರುವ ಅರ್ಥದಲ್ಲಿ ಈ ಎರಡನೆಯ ಅಭಿಪ್ರಾಯವು ಹಿಂದಿನ ಶ್ಲೋಕದ ಅಭಿಪ್ರಾಯದಲ್ಲಿಯೇ ಸೇರಿರುತ್ತದೆ.

[ ಭಾಷ್ಯ ]

ಏಕೆಂದರೆ ಜ್ಞಾನವು ಇನ್ನೂ ಹೆಚ್ಚಿನದು. ಯಾವದಕ್ಕಿಂತ? ಎಂದರೆ ಅವಿವೇಕಪೂರ್ವಕವಾದ * ಅಭ್ಯಾಸಕ್ಕಿಂತ (ಜ್ಞಾನವು ಹೆಚ್ಚಿನದು); ಆ ಜ್ಞಾನಕ್ಕಿಂತಲೂ† ಜ್ಞಾನಪೂರ್ವಕವಾಗಿ ಮಾಡುವ ಧ್ಯಾನವು ಹೆಚ್ಚು; ಜ್ಞಾನದಿಂದ ಕೂಡಿದ ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು 'ಹೆಚ್ಚು' ಎಂದು ಸೇರಿಸಿಕೊಳ್ಳಬೇಕು. ಹೀಗೆ **ಮೇಲೆ ಹೇಳಿದ ವಿಶೇಷಣಗಳಿಂದ ಕೂಡಿದ‡ ಕರ್ಮಫಲತ್ಯಾಗದಿಂದ ಶಾಂತಿಯು, ಎಂದರೆ ಕಾರಣಸಹಿತವಾದ ಸಂಸಾರದ ನಾಶವು ಕೂಡಲೇ ಆಗುತ್ತದೆ; ಮತ್ತೊಂದು ಕಾಲವನ್ನು ಬಯಸುವದಿಲ್ಲ.**

ಕರ್ಮದಲ್ಲಿ ತೊಡಗಿರುವ ಅಜ್ಞಾನಿಗೆ ಹಿಂದೆ ಹೇಳಿದ ಸಾಧನವನ್ನು ಮಾಡುವದಕ್ಕೆ ಆಗದಿದ್ದರೆ ಎಲ್ಲಾ ಕರ್ಮಗಳ ಫಲತ್ಯಾಗವೇ ಶ್ರೇಯಸ್ಸಿಗೆ ಸಾಧನವೆಂದು (ಇಲ್ಲಿ) ಉಪದಿಷ್ಟವಾಗಿದೆಯೇ ಹೊರತು ಮೊದಲೇ ಉಪದಿಷ್ಟವಾಗಿಲ್ಲ. ಆದ್ದರಿಂದ 'ಜ್ಞಾನವು ಅಭ್ಯಾಸಕ್ಕಿಂತ ಹೆಚ್ಚಿನದು' ಎಂದು (ಮುಂತಾಗಿ ಈ ಶ್ಲೋಕದಲ್ಲಿ) ಮುಂದುಮುಂದಿನ (ಸಾಧನವು) ಹೆಚ್ಚಿನದೆಂದು ಉಪದೇಶಮಾಡುವದರ ಮೂಲಕ ಎಲ್ಲಾ ಕರ್ಮಗಳ ಫಲವನ್ನೂ ತ್ಯಾಗಮಾಡುವದೆಂಬ (ಸಾಧನ)ವನ್ನು ಹೊಗಳಿರುತ್ತದೆಯೆಂದಾಯಿತು.§ ಏಕೆಂದರೆ ಉತ್ತಮವಾದ ಸಾಧನವನ್ನು ಮಾಡುವದಕ್ಕೆ ಶಕ್ತಿಯಿಲ್ಲದೆ ಇದ್ದರೆ (ಮಾತ್ರ) ಅದನ್ನು ಮಾಡಬೇಕೆಂದು ಹೇಳಿರುತ್ತದೆ.

---

* 'ಅವಿವೇಕಪೂರ್ವಕಾತ್' ಎಂಬ ನಿ॥ ಗು॥ ಮ್ಯೂ॥ ಮು॥ ಪಾಠವನ್ನೇ ಇಟ್ಟುಕೊಂಡಿದೆ; ಸುಮ್ಮನೆ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳುವದಕ್ಕೆ ಮಾಡುವ ಪ್ರಯತ್ನರೂಪವಾದ ಅಭ್ಯಾಸಕ್ಕಿಂತ ಶ್ರವಣಮನನಗಳಿಂದ ಆತ್ಮನನ್ನು ನಿಶ್ಚಯಿಸುವ ಜ್ಞಾನವು ಮೇಲು; ಈ ಜ್ಞಾನದಂತೆಯೇ ಧ್ಯಾನ ಮಾಡುವದು ಮತ್ತೂ ಮೇಲು, ಸರ್ವಕರ್ಮಫಲತ್ಯಾಗಪೂರ್ವಕವಾಗಿ ಧ್ಯಾನಮಾಡುವದು ಎಲ್ಲಕ್ಕೂ ಮೇಲು- ಎಂಬ ಅರ್ಥವಿಶೇಷವನ್ನು ಇಲ್ಲಿ ತ್ಯಾಗಸ್ತುತಿಗೆ ತೆಗೆದುಕೊಂಡಿದೆ.

† ಶಾಸ್ತ್ರಾರ್ಥವನ್ನು ಸುಮ್ಮನೆ ನಿಶ್ಚಯಿಸುವ ಪರೋಕ್ಷಜ್ಞಾನಕ್ಕಿಂತಲೂ ಆ ಪಾಂಡಿತ್ಯವನ್ನು ಅನುಭವಕ್ಕೆ ಹೊಂದಿಸಿ ನೋಡುವದಕ್ಕಾಗಿ ಮಾಡುವ ಚಿಂತನೆಯು ಹೆಚ್ಚಿನದು.

‡ ಅಭ್ಯಾಸ, ಜ್ಞಾನ, ಧ್ಯಾನ- ಇವುಗಳೆಲ್ಲದರ ಫಲವನ್ನೊಳಕೊಂಡ.

§ ಕರ್ಮಫಲತ್ಯಾಗದಿಂದಲೇ ನೇರಾಗಿ ಶಾಂತಿಯಾಗುವದೆಂಬುದು ತಾತ್ಪರ್ಯವಲ್ಲ. ಕರ್ಮಫಲತ್ಯಾಗವು ಕಾಮತ್ಯಾಗದಿಂದ ಶಾಂತಿಗೆ ಕಾರಣವೆಂದು ಅದನ್ನು ಹೊಗಳಿರುತ್ತದೆ. ಕರ್ಮಫಲವನ್ನು ತ್ಯಾಗಮಾಡಬೇಕು- ಎಂದು ವಿಧಿಸಿರುವದರಿಂದ ಅದನ್ನು ಹೊಗಳುವದಕ್ಕಾಗಿ ತ್ಯಾಗದ ಮಹಿಮೆಯನ್ನು ಇಲ್ಲಿ ಹೇಳಿರುತ್ತದೆಯೆಂದು ಭಾವ. ಆಚಾರ್ಯರು ಕರ್ಮಫಲತ್ಯಾಗಕ್ಕೆ ಇಲ್ಲಿ ಕೊಟ್ಟಿರುವ ಸ್ಥಾನವೇ ಸರಿಯೆಂಬುದನ್ನು ಗೀತಾರ್ಥಸರ್ವಸ್ವದಲ್ಲಿ ತೋರಿಸಿದೆ.

ಯಾವ ಹೋಲಿಕೆಯನ್ನು ಇಟ್ಟುಕೊಂಡು ಈ ಹೊಗಳಿಕೆಯು (ಹೊರಟಿರುತ್ತದೆ?) ಎಂದರೆ, "ಯಾವಾಗ (ಹೃದಯದಲ್ಲಿರುವ) ಎಲ್ಲಾ (ಕಾಮಗಳೂ) ಬಿಟ್ಟುಹೋಗುವವೋ (ಆಗ ಮನುಷ್ಯನು ಅಮೃತನಾಗುವನು)" (ಕ.) ಎಂದು ಕಾಮಗಳೆಲ್ಲ ಹೋದರೆ ಅಮೃತತ್ವವು (ದೊರೆಯುವದೆಂದು ಶ್ರುತಿಯಲ್ಲಿ) ಹೇಳಿರುವದು ಪ್ರಸಿದ್ಧವಾಗಿರುತ್ತದೆ; ಎಲ್ಲಾ ಬಗೆಯ ಶ್ರೌತಸ್ಮಾರ್ತಕರ್ಮಗಳ ಫಲಗಳೂ ಕಾಮಗಳೇ. ಆ (ಕಾಮಗಳನ್ನು) ಬಿಟ್ಟ ಮೇಲೆಯೇ ಜ್ಞಾನನಿಷ್ಠನಾದ ಜ್ಞಾನಿಗೆ ಕೂಡಲೆ ಶಾಂತಿಯಾಗುವದಾದ್ದರಿಂದ ಅಜ್ಞಾನಿಯು ಮಾಡುವ ಕರ್ಮಫಲತ್ಯಾಗಕ್ಕೂ (ಜ್ಞಾನಿಯು ಮಾಡುವ) ಸರ್ವಕಾಮತ್ಯಾಗಕ್ಕೂ ಹೋಲಿಕೆಯುಂಟು; ಈ ಹೋಲಿಕೆಯನ್ನಿಟ್ಟುಕೊಂಡು ಇಲ್ಲಿ (ಮಾಡಿರುವ) ಸರ್ವಕರ್ಮಗಳ ಫಲತ್ಯಾಗದ ಸ್ತುತಿಯೆಂಬುದು (ಅದರಲ್ಲಿ) ರುಚಿಯನ್ನು ಹತ್ತಿಸುವದಕ್ಕಾಗಿದೆ. '**ಅಗಸ್ತ್ಯ**ನೆಂಬ* ಬ್ರಾಹ್ಮಣನು ಸಮುದ್ರವನ್ನು ಕುಡಿದನು' ಎಂದು ಈಗಿನ ಬ್ರಾಹ್ಮಣರನ್ನು ಬ್ರಾಹ್ಮಣತ್ವದ ಹೋಲಿಕೆಯಿಂದ ಹೇಗೆ ಹೊಗಳುವರೋ ಹಾಗೆಯೇ (ಇದನ್ನು ಅರಿಯಬೇಕು). ಕರ್ಮಫಲತ್ಯಾಗದಿಂದ ಹೀಗೆ ಕರ್ಮಯೋಗವು ಶ್ರೇಯಸ್ಸಿಗೆ (ಪರಂಪರೆಯಾಗಿ) ಸಾಧನವಾಗಿರುವದೆಂದು ಹೇಳಿದ್ದಾಯಿತು. ॥ ೧೨ ॥

## ಅಕ್ಷರೋಪಾಸಕರ ವ್ಯವಹಾರ

ಇಲ್ಲಿ ಆತ್ಮ, ಈಶ್ವರ– ಇಬ್ಬರೂ ಬೇರೆಬೇರೆಯೆಂಬ (ಕಲ್ಪಿತಭೇದವನ್ನು) ಇಟ್ಟುಕೊಂಡು ವಿಶ್ವರೂಪನಾದ ಈಶ್ವರನಲ್ಲಿ ಚಿತ್ತವನ್ನು ನಿಲ್ಲಿಸಿಟ್ಟುಕೊಳ್ಳುವದೆಂಬ ಯೋಗವನ್ನೂ, ಈಶ್ವರಾರ್ಥವಾಗಿ ಕರ್ಮವನ್ನು ಮಾಡುವದೇ ಮುಂತಾದದ್ದನ್ನೂ ಹೇಳಿರುತ್ತದೆ. "ಆದರೆ ಇದನ್ನೂ ಮಾಡುವದಕ್ಕೆ ನಿನ್ನಿಂದಾಗದಿದ್ದರೆ" (೧೨-೧೧) ಎಂದು ಅಜ್ಞಾನದ ಕಾರ್ಯ(ವಾದ ಅಸಾಮರ್ಥ್ಯವನ್ನು ಇಲ್ಲಿ) ಸೂಚಿಸಿರುವದರಿಂದ (ಆತ್ಮನಿಗೂ ಬ್ರಹ್ಮಕ್ಕೂ) ಭೇದವಿಲ್ಲವೆಂದು ಕಂಡುಕೊಂಡಿರುವ ಅಕ್ಷರೋಪಾಸಕನಿಗೆ ಕರ್ಮಯೋಗವು ಹೊಂದಬಾರದೆಂದು ತೋರಿಸಿರುತ್ತದೆ.

* ಈ ಕಥೆಯು ಭಾರತದ ವನಪರ್ವದಲ್ಲಿರುತ್ತದೆ. ಸರ್ವಕಾಮವನ್ನೂ ಜ್ಞಾನಿಯು ತ್ಯಾಗ ಮಾಡುತ್ತಾನೆ, ಆ ತ್ಯಾಗದಿಂದ ಅವನಿಗೆ ಪರಮಶಾಂತಿಯಾದ ಮೋಕ್ಷವೂ ದೊರೆಯುತ್ತದೆ; ಅದರಂತೆ ಕರ್ಮಫಲತ್ಯಾಗವನ್ನು ಮಾಡಿದವನಿಗೆ ಫಲಾಶೆಯಿಂದಾಗುವ ತಳಮಳವು ತಪ್ಪಿ ಶಾಂತಿಯಾಗುತ್ತದೆ-ಎಂಬುದು ಇವೆರಡಕ್ಕೂ ಹೋಲಿಕೆ. 'ನೀನು ಬ್ರಾಹ್ಮಣನು, ನಿನ್ನ ಕೈಯಲ್ಲಿ ಇಷ್ಟು ಸಣ್ಣ ಕೆಲಸವಾಗದೆ? ಬ್ರಾಹ್ಮಣರು ಹಿಂದೆ ಸಮುದ್ರವನ್ನೇ ಕುಡಿದಿರುತ್ತಾರೆ'- ಎಂದು ಹುರಿದುಂಬಿಸಿ ಕೆಲಸಕ್ಕೆ ಹಚ್ಚುವಂತೆ ಇದನ್ನು ಅರಿಯಬೇಕೆಂದು ಭಾವ. ಆಚಾರ್ಯರು ಇಲ್ಲಿ ಮಾಡಿರುವ ಚರ್ಚೆಯ ಪೂರ್ಣಾಭಿಪ್ರಾಯವನ್ನು ಗೀತಾರ್ಥಸರ್ವಸ್ವದ ಜ್ಞಾನಯೋಗದಲ್ಲಿ ವಿವರಿಸಿರುತ್ತದೆ.

ಇದರಂತೆ ಕರ್ಮಯೋಗಿಗೆ ಅಕ್ಷರ(ಬ್ರಹ್ಮ)ದ ಉಪಾಸನೆಯೂ ಹೊಂದ ಲಾರದೆಂಬುದನ್ನು ಭಗವಂತನು ತೋರಿಸಿರುತ್ತಾನೆ. (ಹೇಗೆಂದರೆ) "ಅವರು ನನ್ನನ್ನೇ ಪಡೆಯುವರು" (೧೨-೪) ಎಂದು ಅಕ್ಷರ(ಬ್ರಹ್ಮವನ್ನು) ಉಪಾಸನೆಮಾಡುವವರು ಕೈವಲ್ಯವನ್ನು ಪಡೆಯುವದಕ್ಕೆ (ತಾವೇ) ಸ್ವತಂತ್ರರಾಗಿರುವರೆಂಬುದನ್ನು ತಿಳಿಸಿದ ಮೇಲೆ ಉಳಿದವರು (ಆ ವಿಷಯದಲ್ಲಿ) ಪರತಂತ್ರರು, ಈಶ್ವರಾಧೀನರು- ಎಂಬುದನ್ನು "ಅವರನ್ನು ನಾನು (ಸಂಸಾರಸಾಗರದಿಂದ) ಸಮುದ್ಧಾರಮಾಡುವೆನು" (೧೨-೭) ಎಂಬ (ಮಾತಿನಿಂದ) ತೋರಿಸಿರುತ್ತಾನೆ. ಆ (ಕರ್ಮಯೋಗಿಗಳೂ) ಅಭೇದವನ್ನು ಕಂಡುಕೊಂಡವರಾದ್ದರಿಂದ ಈಶ್ವರನ ಸ್ವರೂಪವೇ ಎಂಬುದು (ಭಗವಂತನ) ಅಭಿಪ್ರಾಯವಾಗಿದ್ದರೆ ಅವರು ಅಕ್ಷರ (ಬ್ರಹ್ಮ)ದ ಸ್ವರೂಪರೇ ಆಗಿರುವದರಿಂದ ಅವರನ್ನುದ್ಧಾರಮಾಡುವೆನು ಎಂದು ಉದ್ಧಾರಕ್ಕೆ ಕರ್ಮವಾಗಿ ಅವರನ್ನು ಹೇಳಿರುವದು ಅಯುಕ್ತವಾಗುತ್ತಿತ್ತು. ಇದೂ ಅಲ್ಲದೆ ಭಗವಂತನು ಅರ್ಜುನನಿಗೆ ಅತ್ಯಂತವಾಗಿ ಹಿತವನ್ನು ಕೋರುವವನಾಗಿರುವದರಿಂದ, ಅವನಿಗೆ ಸಮ್ಯಗ್ಜ್ಞಾನದ ವಾಸನೆಯಿಲ್ಲದೆ* **ಭೇದದೃಷ್ಟಿಯಿಂದಲೇ ಕೂಡಿರುವ ಕರ್ಮಯೋಗವನ್ನು**† ಉಪದೇಶಿಸಿರುತ್ತಾನೆ; ತಾನು ಈಶ್ವರನೆಂದು ಪ್ರಮಾಣದಿಂದ ತಿಳಿದುಕೊಂಡ ಬಳಿಕ ಯಾವನೂ ಮತ್ತೊಬ್ಬನಿಗೆ ಅಧೀನನಾಗುವದಕ್ಕೆ ಇಚ್ಛಿಸಲಾರನು, ಏಕೆಂದರೆ (ಈಶ್ವರಭಾವವೂ, ಸೇವಕಭಾವವೂ) ಒಂದಕ್ಕೊಂದು ವಿರುದ್ಧವಾಗಿರುತ್ತವೆ.

ಆದ್ದರಿಂದ ಎಲ್ಲಾ ಬಯಕೆಗಳನ್ನೂ ಬಿಟ್ಟು ಸರಿಯಾದ ಜ್ಞಾನದಲ್ಲಿಯೇ ನಿಂತಿರುವ ಸಂನ್ಯಾಸಿಗಳಾದ ಅಕ್ಷರ(ಬ್ರಹ್ಮದ) ಉಪಾಸಕರಿಗೆ‡ ನೇರಾಗಿ ಮೋಕ್ಷಕ್ಕೆ ಸಾಧನವಾಗಿರುವ 'ಯಾವ ಪ್ರಾಣಿಗಳನ್ನೂ ದ್ವೇಷಮಾಡದೆ (ಇರುವದು), (೧೨-೧೩) ಮುಂತಾದ ಧರ್ಮಸಮೂಹವನ್ನು ಹೇಳೋಣವೆಂದು ಭಗವಂತನು (ಈಗ) ತೊಡಗಿರುತ್ತಾನೆ.

---

* 'ಸಮ್ಯಗ್ದರ್ಶನಾನಾಗನ್ವಿತಂ' ಎಂಬ ಮ॥ ಮೈ।। ಪಾಠವನ್ನು ಇಟ್ಟುಕೊಂಡಿದೆ.

† ಕರ್ಮಯೋಗದಲ್ಲಿ ಧ್ಯಾನಯೋಗ ವಿಶ್ವರೂಪೋಪಾಸನೆಯು ಭಕ್ತಿಯೋಗ- ಎರಡೂ ಅಡಗಿವೆಯೆಂದು ಭಾವ ಈ ವಿಷಯವನ್ನು ಗೀತಾರ್ಥಸರ್ವಸ್ವದಲ್ಲಿ ಸ್ಪಷ್ಟಗೊಳಿಸಿದೆ.

‡ ಇಲ್ಲಿಂದ ಮುಂದೆ ಹೇಳಿರುವ ಅದ್ವೇಷವೇ ಮುಂತಾದ ಸಾಧನಗಳು ಗೌಣಭಕ್ತರಿಗೆ ಹೇಳಿದ್ದೆಂದು ಅನೇಕರ ಅಭಿಪ್ರಾಯವಿರುವದು; ಇದು ತಪ್ಪೆಂಬುದಕ್ಕೆ ಆಚಾರ್ಯರು ಇಲ್ಲಿ ಬೇರೆ ಬೇರೆ ಕಾರಣವನ್ನು ಕೊಟ್ಟಿರುತ್ತಾರೆ. ಜ್ಞಾನಿಭಕ್ತನ ಸ್ವರೂಪವನ್ನೇ ಇಲ್ಲಿ ಹೇಳಿರುತ್ತದೆ; ಇದು ಅವನಿಗೆ ಸ್ವಭಾವವಾಗಿರುವದು, ಮಿಕ್ಕವರೂ ಇದನ್ನೇ ಸಾಧನಮಾಡಬೇಕು- ಎಂಬುದು ಈ ಗ್ರಂಥಭಾಗದ ತಾತ್ಪರ್ಯವು. ಗೀತಾರ್ಥಸರ್ವಸ್ವದಲ್ಲಿ ಆಚಾರ್ಯರ ಅಭಿಪ್ರಾಯವನ್ನು ವಿವರಿಸಿರುತ್ತದೆ.

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**
**ಸನ್ತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೪ ॥**

೧೩–೧೪. ಯಾವ ಪ್ರಾಣಿಗಳನ್ನೂ ದ್ವೇಷಿಸದೆ, (ಎಲ್ಲರಲ್ಲಿಯೂ) ಮಿತ್ರನೂ ಕರುಣೆಯುಳ್ಳವನೂ ಆಗಿ, ಮಮತೆಯಿಲ್ಲದೆ ಅಹಂಕಾರವಿಲ್ಲದೆ, ದುಃಖದಲ್ಲಿಯೂ ಸುಖದಲ್ಲಿಯೂ ಸಮವಾಗಿರುತ್ತಾ, ಸಹನೆಯುಳ್ಳವನಾಗಿ, ಯಾವಾಗಲೂ ಸಂತೃಪ್ತನಾಗಿ, ಯೋಗಿಯಾಗಿ, ಮನಸ್ಸನ್ನು ನಿಗ್ರಹಮಾಡಿಕೊಂಡು, ದೃಢವಾದ ನಿಶ್ಚಯವುಳ್ಳವನಾಗಿ, ನನ್ನಲ್ಲಿಯೇ ಮನೋಬುದ್ಧಿಗಳನ್ನು ಅರ್ಪಿಸಿರುವ ನನ್ನ ಭಕ್ತನು ಯಾರೋ ಅವನು ನನಗೆ ಪ್ರಿಯನು.

[ ಭಾಷ್ಯ ]

ಯಾವ ಭೂತಗಳನ್ನೂ ದ್ವೇಷಿಸದವನು ಎಂದರೆ ತನಗೆ ದುಃಖಕ್ಕೆ ಕಾರಣವಾಗಿದ್ದರೂ ಯಾವದೊಂದು (ಪ್ರಾಣಿಯನ್ನೂ) ಹಗೆಮಾಡದವನು ; ಏಕೆಂದರೆ (ಅವನು) ಎಲ್ಲಾ ಪ್ರಾಣಿಗಳನ್ನೂ (ತನ್ನ) ಆತ್ಮನೆಂದೇ ಕಾಣುತ್ತಿರುವನು. 'ಮೈತ್ರನು', ಮಿತ್ರಭಾವಕ್ಕೆ **ಮೈತ್ರಿ**ಯೆಂದು* (ಹೆಸರು). ಮೈತ್ರನಾಗಿರುವನು ಎಂದರೆ (ಎಲ್ಲರಲ್ಲಿಯೂ) ಮಿತ್ರತೆಯಿಂದ ಇರುವವನು. 'ಕರುಣನು' ; **ಕರುಣೆ**ಯೆಂದರೆ ದುಃಖಪಡುವವರಲ್ಲಿ ದಯೆ, ಅದನ್ನುಳ್ಳವನು ಕರುಣನು ; ಸರ್ವಪ್ರಾಣಿಗಳಿಗೂ ಅಭಯವನ್ನು ಕೊಡುವ ಸಂನ್ಯಾಸಿಯು ಎಂದರ್ಥ. ನಿರ್ಮಮನು ಎಂದರೆ ನನ್ನದೆಂಬ ಅಭಿಮಾನವಿಲ್ಲದವನು. ನಿರಹಂಕಾರನೆಂದರೆ ನಾನೆಂಬ ಅಭಿಮಾನವು ತೊಲಗಿಹೋಗಿರುವಾತನು. ದುಃಖದಲ್ಲಿಯೂ ಸುಖದಲ್ಲಿಯೂ ಸಮವಾಗಿರುವವನು ಎಂದರೆ ದುಃಖಸುಖಗಳು ಯಾವನಲ್ಲಿ ದ್ವೇಷವನ್ನಾಗಲಿ ರಾಗವನ್ನಾಗಲಿ ಉಂಟುಮಾಡದೆ ಇರುವವೋ ಆತನು. ಕ್ಷಮಿ ಎಂದರೆ ಕ್ಷಮಿಸುವಾತನು ; ಬಯ್ಯಲಿ, ಹೊಡೆಯಲಿ, ಯಾವ ವಿಕಾರವೂ ಇಲ್ಲದೆ ಇರುವಾತನು. ॥ ೧೩ ॥

* ಇಲ್ಲಿರುವ ಮೈತ್ರೀ, ಕರುಣಾ– ಎಂಬಿವಕ್ಕೂ ಯೋಗಸೂತ್ರದಲ್ಲಿರುವ (೧–೩೩)ರಲ್ಲಿರುವವುಗಳಿಗೂ ಹೆಚ್ಚುಕಡಿಮೆಯುಂಟು ; ಅವು ಸಾಧನವಾಗಿವೆ, ಇವು ಅಕ್ಷರೋಪಾಸಕನ ಜ್ಞಾನದ ಫಲವಾಗಿವೆ. ಗೀತಾರ್ಥಸರ್ವಸ್ವವನ್ನು ನೋಡಿ. ಸಂನ್ಯಾಸಿಯು ಅಭಯವನ್ನು ಕೊಡುವಾತನೆಂಬುದಕ್ಕೆ ಅವನಿಗೆ ಸ್ವಾರ್ಥವಿಲ್ಲದಿರುವದೇ ಕಾರಣವು ; ೩–೪ನೆಯ ಶ್ಲೋಕದ ಭಾಷ್ಯವನ್ನು ನೋಡಿ.

ಯಾವಾಗಲೂ ಸಂತುಷ್ಟನಾಗಿರುವವನು, ಎಂದರೆ ದೇಹವು ಇರುವದಕ್ಕೆ ಬೇಕಾದ (ಆಹಾರಾದಿಗಳು) ದೊರಕಲಿ ದೊರಕದಿರಲಿ, ಇಷ್ಟೇ ಸಾಕೆಂಬ ಬುದ್ಧಿಯುಳ್ಳವನು ; ಮತ್ತು ಒಳ್ಳೆಯದೇ ಸಿಕ್ಕಲಿ ಅದಕ್ಕೆ ವಿರುದ್ಧವಾಗಿ (ಕೆಟ್ಟದ್ದೇ ಸಿಕ್ಕಲಿ), ಯಾವಾಗಲೂ (ದೊರಕಿದಷ್ಟಕ್ಕೆ) ತೃಪ್ತನಾಗಿರುವವನು. ಯೋಗಿಯು ಎಂದರೆ ಚಿತ್ತವನ್ನು ಸಮಾಧಾನಗೊಳಿಸಿಕೊಂಡಿರುವವನು. ಯತಾತ್ಮನು ಎಂದರೆ ಮನಸ್ಸ್ವಭಾವವನ್ನು ಬಿಗಿಹಿಡಿದುಕೊಂಡಿರುವಾತನು. ದೃಢನಿಶ್ಚಯನು ಎಂದರೆ ಆತ್ಮತತ್ತ್ವದ ವಿಷಯದಲ್ಲಿ ದೃಢವಾದ ನಿಶ್ಚಯವುಳ್ಳವನು, ಸ್ಥಿರವಾಗಿ ನಿಶ್ಚಯ ಮಾಡಿಕೊಂಡಿರುವಾತನು. ನನ್ನಲ್ಲಿ ಮನೋಬುದ್ಧಿಗಳನ್ನು ಅರ್ಪಿಸಿರುವವನು ; ಸಂಕಲ್ಪವನ್ನು ಮಾಡುವ (ಅಂತಃಕರಣವೃತ್ತಿಯಾದ) **ಮನಸ್ಸು**, ನಿಶ್ಚಯವನ್ನು ಮಾಡುವ **ಬುದ್ಧಿ**ಯು– ಈ ಎರಡೂ (ಪರಮಾತ್ಮನಾದ) ನನ್ನಲ್ಲಿಯೇ ಅರ್ಪಣೆ ಮಾಡಿರುವ ಎಂದರೆ ನಿಲ್ಲಿಸಿರುವ ಸಂನ್ಯಾಸಿ.*

ಯಾವನು ಇಂಥ ನನ್ನ ಭಕ್ತನೋ ಅವನು ನನಗೆ ಪ್ರಿಯನಾಗಿರುವನು. 'ನಾನು ಜ್ಞಾನಿಗೆ ಬಹಳ ಪ್ರಿಯನಾಗಿರುವೆನು, ಅವನೂ ನನಗೆ ಪ್ರಿಯನಾಗಿರುವನು' (೭–೧೭) ಎಂದು ಏಳನೆಯ ಅಧ್ಯಾಯದಲ್ಲಿ ಸೂಚಿತವಾಗಿತ್ತಷ್ಟೆ ; ಅದನ್ನು ಇಲ್ಲಿ ವಿಸ್ತರಿಸಲಾಗಿದೆ. ॥ ೧೪ ॥

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥೧೫॥**

೧೫. ಮತ್ತು ಯಾವನಿಂದ ಲೋಕವು ಉದ್ವೇಗವನ್ನು ಹೊಂದುವದಿಲ್ಲವೋ ಯಾವಾತನು ಲೋಕದಿಂದ ಉದ್ವೇಗಗೊಳ್ಳುವದಿಲ್ಲವೋ, ಯಾವನು ಹರ್ಷ, ಅಮರ್ಷ, ಭಯ, ಉದ್ವೇಗ– ಇವುಗಳಿಂದ ಮುಕ್ತನಾಗಿರುವನೋ ಅವನು ನನಗೆ ಪ್ರಿಯನಾದವನು.

[ ಭಾಷ್ಯ ]

ಯಾವ ಸಂನ್ಯಾಸಿಯಿಂದ ಜನವು ಉದ್ವಿಗ್ನವಾಗದಿರುವದೋ, ಎಂದರೆ ಉದ್ವೇಗವನ್ನು ಪಡೆಯದೆ ಇರುವದೋ, ಸಂತಾಪವನ್ನು ಹೊಂದದೆ ಕಳವಳಗೊಳ್ಳದೆ ಇರುವದೋ, ಮತ್ತು ಯಾವನು (ಬೇರೆ) ಜನರಿಂದ (ತಾನೂ) ಉದ್ವೇಗವನ್ನು ತಳೆಯದೆ ಇರುವನೋ, ಮತ್ತು ಯಾವನು ಹರ್ಷ, ಅಮರ್ಷ, ಭಯ, ಉದ್ವೇಗ– ಇವುಗಳಿಂದ ಮುಕ್ತನಾಗಿರುವನೋ– ಹರ್ಷವೆಂದರೆ ಇಷ್ಟವಾದದ್ದು

---

* ಇಲ್ಲಿರುವ ವಿಶೇಷಣಗಳನ್ನು ಸಂನ್ಯಾಸಿಗೆ ಹೊಂದಿಸುವದರಲ್ಲಿ ಕೆಲವರು ಆಕ್ಷೇಪಗಳನ್ನು ತೆಗೆದಿದ್ದಾರೆ ; ಈ ವಿಷಯಕ್ಕೆ ಗೀತಾರ್ಥಸರ್ವಸ್ವವನ್ನು ನೋಡಿರಿ.

ದೊರೆತರೆ ಅಂತಃಕರಣವು ಉಬ್ಬುವದು ; (ಅದಕ್ಕೆ) ಮೈಗೂದಲು ನೆಟ್ಟಗಾಗುವದು, ಕಣ್ಣೀರು ಬರುವದು- ಮುಂತಾದವು ಗುರುತಾಗಿರುವವು ; ಅಮರ್ಷವೆಂದರೆ ತಾಳ್ಮೆಯಿಲ್ಲದೆ ಇರುವದು ; ಭಯವೆಂದರೆ ಹೆದರಿಕೆ, ಉದ್ವೇಗವೆಂದರೆ ತಳಮಳಗೊಳ್ಳುವದು. ಇವುಗಳಿಂದ (ಯಾವನು) ಬಿಡುಗಡೆಹೊಂದಿರುವನೋ- ಅವನು ನನಗೆ ಪ್ರಿಯನು ॥ ೧೫ ॥

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

೧೬. ಅಪೇಕ್ಷೆಯಿಲ್ಲದೆ, ಶುಚಿಯಾಗಿ, ದಕ್ಷನಾಗಿ, ಉದಾಸೀನನಾಗಿ, ವ್ಯಥೆಯಿಲ್ಲದೆ, ಎಲ್ಲಾ ಕರ್ಮಗಳನ್ನೂ ಬಿಡುವ ನನ್ನ ಭಕ್ತನು ಯಾವನೋ ಅವನು ನನಗೆ ಪ್ರಿಯನು.

[ ಭಾಷ್ಯ ]

ಶರೀರ, ಇಂದ್ರಿಯ, ವಿಷಯ- ಇವುಗಳ ಸಂಬಂಧವೇ ಮುಂತಾದ ಬೇಕೆನಿಸುವ ವಿಷಯಗಳಲ್ಲಿ ಅಪೇಕ್ಷೆಯಿಲ್ಲದವನು ಎಂದರೆ ಯಾವ ಆಶೆಯೂ* ಇಲ್ಲದವನು ; ಶುಚಿಯು ಎಂದರೆ ಹೊರಗಿನ† ಮತ್ತು ಒಳಗಿನ ಶೌಚದಿಂದ ಕೂಡಿಕೊಂಡಿರುವವನು. ದಕ್ಷನು ಎಂದರೆ ಒದಗಿದ ಕಾರ್ಯಗಳಲ್ಲಿ ಹೀಗೆಯೇ ಸರಿಯೆಂದು ಕೂಡಲೆ ನಿಶ್ಚಯಮಾಡಲು ಸಮರ್ಥನಾದವನು. ಉದಾಸೀನನು ಎಂದರೆ ಮಿತ್ರನೇ ಮೊದಲಾಗಿ‡ ಯಾರೊಬ್ಬರ ಪಕ್ಷವನ್ನೂ ಸೇರದೆ ಇರುವವನು. ಗತವ್ಯಥನು ಎಂದರೆ ಹೆದರಿಕೆಯಿಲ್ಲದವನು. ಸರ್ವಾರಂಭಪರಿತ್ಯಾಗಿ ; ಆರಂಭವೆಂದರೆ ನಾವು ಮಾಡುವ ಕೆಲಸಗಳು, ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಫಲವನ್ನುಣ್ಣುವದಕ್ಕೆಂದು ಕಾಮದಿಂದ ಮಾಡುವ ಕರ್ಮಗಳು; ಅವುಗಳನ್ನು ಬಿಡುವ ಸ್ವಭಾವವುಳ್ಳವನೇ ಸರ್ವಾರಂಭಪರಿತ್ಯಾಗಿಯು. ( ಇಂಥ ) ನನ್ನ ಭಕ್ತನು ಯಾರೋ ಅವನು ನನಗೆ ಪ್ರಿಯನು. ॥ ೧೬ ॥

---

* ದೇಹವು ಹೀಗಿರಬೇಕು, ಇಷ್ಟು ಕಾಲವಿರಬೇಕು- ಎಂದು ಮುಂತಾಗಿ ಬಯಸದೆ ಇರುವವನು ಎಂದರ್ಥ ; ಬೇಗ ಸಾಯಬೇಕೆಂದು ಸಂಕಲ್ಪಮಾಡುವವನೆಂದು ತಪ್ಪು ಅರ್ಥಮಾಡಬಾರದು.

† ಹೊರಗಿನ ಶೌಚವೆಂದರೆ ಶರೀರವನ್ನು ಶುದ್ಧವಾಗಿಟ್ಟುಕೊಂಡಿರುವದು, ಒಳಗಿನ ಶೌಚವೆಂದರೆ ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡಿರುವದು.

‡ ಮಿತ್ರನೇ ಮೊದಲಾದವರು ಎಂದರೆ ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷ್ಯ- ಮೊದಲಾದವರು ; ಅವರಲ್ಲಿ ಸಮತ್ವದಿಂದಿರುವವನು ಎಂದರ್ಥ. ೬-೯ನ್ನು ನೋಡಿ.

ಮತ್ತು–

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಙ್ಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥ ೧೭ ॥**

೧೭. ಯಾವನು ಹರ್ಷಪಡದೆ ಇರುವನೋ ದ್ವೇಷಮಾಡದೆ ಇರುವನೋ, ಶೋಕಿಸದೆ ಇರುವನೋ ಬಯಸದೆ ಇರುವನೋ, ಯಾವನು ಶುಭವನ್ನೂ ಅಶುಭವನ್ನೂ ಬಿಡದೆ ಇರುವ ಭಕ್ತನಾಗಿರುವನೋ, ಅವನು ನನಗೆ ಪ್ರಿಯನು.

[ ಭಾಷ್ಯ ]

ಯಾವನು (ತನಗೆ) ಇಷ್ಟವಾದದ್ದು ಒದಗಿದರೆ ಉಬ್ಬುವದಿಲ್ಲವೋ, ಬೇಡವಾದದ್ದು ಬಂದರೆ ಹಗೆಮಾಡುವದಿಲ್ಲವೋ, ಪ್ರಿಯವಸ್ತುವನ್ನು ಕಳೆದ-ಕೊಂಡರೆ ಅಳುವದಿಲ್ಲವೋ, ತನ್ನಲ್ಲಿಲ್ಲದ್ದನ್ನು (ಬೇಕೆಂದು) ಹಂಬಲಿಸುವದಿಲ್ಲವೋ, ಒಳ್ಳೆಯದು ಕೆಟ್ಟದ್ದು– ಎಂಬ (ಎರಡು ಬಗೆಯ) ಕರ್ಮಗಳನ್ನೂ ಬಿಡುವ ಸ್ವಭಾವವುಳ್ಳವನಾದ್ದರಿಂದ ಶುಭಾಶುಭಪರಿತ್ಯಾಗಿಯಾಗಿ ಯಾವನು (ನನ್ನಲ್ಲಿ) ಭಕ್ತಿಯುಳ್ಳವನಾಗಿರುವನೋ ಅವನು ನನಗೆ ಪ್ರಿಯನಾಗಿರುವನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಙ್ಗವಿವರ್ಜಿತಃ ॥ ೧೮ ॥**

**ತುಲ್ಯನಿನ್ದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ ೧೯ ॥**

೧೮-೧೯. ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮನಾಗಿ, ಮಾನಾಪಮಾನಗಳಲ್ಲಿಯೂ ಶೀತೋಷ್ಣಸುಖದುಃಖಗಳಲ್ಲಿಯೂ ಸಮನಾಗಿ, ಸಂಗವಿಲ್ಲದವನಾಗಿ, ನಿಂದಾಸ್ತುತಿಗಳಲ್ಲಿ ಒಂದೇ ಸಮನಾಗಿದ್ದುಕೊಂಡು ಮೌನಿಯಾಗಿ ಏನು (ಸಿಕ್ಕರೂ ಅಷ್ಟರಿಂದ) ತೃಪ್ತನಾಗಿ, ಅನಿಕೇತನಾಗಿ, ಸ್ಥಿರಮತಿಯಾಗಿ, ಭಕ್ತಿಯುಕ್ತನಾಗಿರುವನೋ, ಆ ಮನುಷ್ಯನು ನನಗೆ ಪ್ರಿಯನು.

[ ಭಾಷ್ಯ ]

ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮನಾಗಿ, ಮತ್ತು ಮಾನಾಪಮಾನಗಳಲ್ಲಿ ಎಂದರೆ ತನಗೆ ಮನ್ನಣೆಯಾಗಲಿ ತಿರಸ್ಕಾರವಾಗಲಿ– (ಇವೆರಡರಲ್ಲಿಯೂ ಸಮನಾಗಿ), ಶೀತೋಷ್ಣಗಳಲ್ಲಿಯೂ ಸುಖದುಃಖಗಳಲ್ಲಿಯೂ ಸಮನಾಗಿ ಎಲ್ಲದರಲ್ಲಿಯೂ ಸಂಗವನ್ನು ತೊರೆದು ॥ ೧೮ ॥

ಮತ್ತು ತುಲ್ಯನಿಂದಾಸ್ತುತಿಯಾಗಿ; ಬಯ್ಯುವದು, ಹೊಗಳುವದು–ಇವೇ ನಿಂದಾಸ್ತುತಿಗಳು ; ಇವು (ಎರಡೂ) ಯಾವನಿಗೆ ಸಮವಾಗಿರುವವೋ ಅವನು

ತುಲ್ಯನಿಂದಾಸ್ತುತಿಯು. ಮೌನಿಯಾಗಿರುವವನು ಎಂದರೆ ಮಾತನ್ನು ಬಿಗಿ ಹಿಡಿದುಕೊಂಡು ಸುಮ್ಮನೆ ಇರುವಾತನು. ಏನು ಸಿಕ್ಕಿದರೆ ಅದರಿಂದಲೇ ಸಂತುಷ್ಟನಾಗಿರುವವನು, ಎಂದರೆ ಶರೀರವು ಇರುವದಕ್ಕೆ ಎಷ್ಟು ಬೇಕೋ ಅಷ್ಟುಮಾತ್ರದಿಂದಲೇ ತೃಪ್ತನಾಗಿರುವವನು. ಈ (ಅಭಿಪ್ರಾಯವನ್ನೇ ಭಾರತ ದಲ್ಲಿ) ಹೀಗೆಂದು ಹೇಳಿರುತ್ತದೆ:

ಯೇನ ಕೇನ ಚಿದಾಚ್ಛನ್ನೋ ಯೇನ ಕೇನ ಚಿದಾಶಿತಃ ।
ಯತ್ರ ಕ್ವಚನ ಶಾಯೀ ಸ್ಯಾತ್ ತಂ ದೇವಾ ಬ್ರಾಹ್ಮಣಂ ವಿದುಃ ॥
—ಮೋ. ೨೪೫-೧೨

(ಏನು ಸಿಕ್ಕರೆ ಅದನ್ನು ಹೊದ್ದುಕೊಂಡು, ಏನು ಸಿಕ್ಕರೆ ಅದನ್ನೇ ತಿನ್ನುತ್ತಾ,ಎಲ್ಲಿ ಅಂದರೆ ಅಲ್ಲಿ ಮಲಗುವವನು ಯಾರೋ ಅವನನ್ನು ದೇವತೆಗಳು ಬ್ರಾಹ್ಮಣನೆಂದೆಣಿಸುವರು.)

ಮತ್ತು ಅನಿಕೇತನು- ನಿಕೇತವೆಂದರೆ ಆಶ್ರಯವು, ವಾಸಸ್ಥಳವು (ಅದು ಇಂಥದ್ದೆಂಬ) ನಿಯಮವಿಲ್ಲದೆ ಇರುವಾತನೇ ಅನಿಕೇತನು. 'ಮನೆಯಲ್ಲಿ ಆಸಕ್ತಿ ಯಿಲ್ಲದ'* (ಸ್ಮೃ) ಎಂದು ಮುಂತಾಗಿರುವ ಬೇರೆ ಒಂದು ಸ್ಮೃತಿಯೂ (ಇದಕ್ಕೆ ಆಧಾರವು). ಸ್ಥಿರಮತಿಯು ಎಂದರೆ ಪರಮಾರ್ಥವಸ್ತುವಿನ ವಿಷಯದಲ್ಲಿ ಯಾವಾತನ ಬುದ್ಧಿಯು ನೆಲೆಯಾಗಿ ನಿಂತಿರುವದೋ ಅವನು. (ಇಂಥ) ಭಕ್ತಿ ಯುಳ್ಳ ಮನುಷ್ಯನು ನನಗೆ ಪ್ರಿಯನು. ॥ ೧೯ ॥

ಎಲ್ಲಾ ಬಯಕೆಗಳನ್ನೂ ತೊರೆದು ಪರಮಾರ್ಥದಲ್ಲಿಯೇ ನಿಂತಿರುವ ಸಂನ್ಯಾಸಿಗಳಾದ ಅಕ್ಷರಬ್ರಹ್ಮದ ಉಪಾಸಕರ ಧರ್ಮಸಮೂಹವನ್ನು, 'ಯಾವ ಪ್ರಾಣಿಗಳನ್ನೂ ದ್ವೇಷಮಾಡದೆ' (೧೨-೧೩) ಎಂದು ಮುಂತಾಗಿ ಪ್ರಾರಂಭಿಸಿ ತ್ತಷ್ಟೆ; (ಈಗ ಅದನ್ನು) ಮುಗಿಸುತ್ತಾನೆ:—

## ಭಕ್ತಿಯೋಗವನ್ನು ಸಾಧನಮಾಡುವವರು ಭಗವಂತನಿಗೆ ಅತಿಪ್ರಿಯರು

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

---

* ಈ ಶ್ಲೋಕವನ್ನು ಪೂರ್ತಿಯಾಗಿ ಆನಂದಗಿರಿಯ ವ್ಯಾಖ್ಯಾನದಲ್ಲಿ ಕೊಟ್ಟಿದೆಯಾದರೂ ಇದು ಎಲ್ಲಿಯದೆಂಬುದು ತಿಳಿಯದು. ಶ್ಲೋಕವು ಹೀಗಿದೆ:

''ನ ಕುಡ್ಯಾಂ (ಕುಟ್ಯಾಂ?) ನೋದಕೇ ಸಙ್ಗೋ ನ ಚೈಲೇ ನ ತ್ರಿಪುಷ್ಕರೇ ।
ನಾಗಾರೇ ನಾಸನೇ ನಾನ್ನೇ ಯಸ್ಯ ವೈ ಮೋಕ್ಷವಿತ್ತು ಸಃ ॥

೨೦. ಯಾರಾದರೆ ಈ ಧರ್ಮ್ಯಾಮೃತವನ್ನು ಮೇಲೆ ಹೇಳಿದಂತೆ ಶ್ರದ್ಧೆಯುಳ್ಳವರಾಗಿ ನನ್ನಲ್ಲಿಯೇ ತಾತ್ಪರ್ಯವುಳ್ಳವರಾಗಿ ಉಪಾಸನೆಮಾಡುತ್ತಿರುವರೋ ಆ ಭಕ್ತರು ನನಗೆ ಬಹಳ ಪ್ರಿಯರಾಗಿರುವರು.

[ ಭಾಷ್ಯ ]

ಯಾವ ಸಂನ್ಯಾಸಿಗಳಾದರೆ ಈ ಧರ್ಮ್ಯಾಮೃತವನ್ನು– ಧರ್ಮ್ಯವೆಂದರೆ ಧರ್ಮವನ್ನು ಬಿಟ್ಟುಹೋಗದೆ (ಧರ್ಮದಿಂದಲೇ ತುಂಬಿರುವದು); ಮತ್ತು ಅಮೃತವು, ಏಕೆಂದರೆ ಇದು ಅಮೃತತ್ವ(ಮೋಕ್ಷ)ಕ್ಕೆ ಕಾರಣವಾಗಿರುವದು– ಇದನ್ನು ಮೇಲೆ 'ಯಾವ ಪ್ರಾಣಿಗಳನ್ನೂ ದ್ವೇಷಿಸದೆ' ಎಂದು ಮುಂತಾಗಿ ಹೇಳಿರುವಂತೆ ಶ್ರದ್ಧೆಯುಳ್ಳವರಾಗಿ, ಮತ್ಪರಮರಾಗಿ– ಮೇಲೆ ಹೇಳಿದ ಅಕ್ಷರಾತ್ಮನಾದ ನಾನೇ ಪರಮನು, ಎಂದರೆ ಮಿಗಿಲಿಲ್ಲದ ಗತಿಯು, ಎನ್ನುವವರಾಗಿ– ನನ್ನ ಭಕ್ತರಾಗಿರುವರೋ **ಹೆಚ್ಚಿನದಾದ ಪರಮಾರ್ಥಜ್ಞಾನವೆಂಬ ಭಕ್ತಿಯನ್ನೇ ಆಶ್ರಯಿಸಿರುವರೋ** ಅವರು ನನಗೆ ಬಹಳ ಪ್ರಿಯರಾಗಿರುವರು.

'ನಾನು ಜ್ಞಾನಿಗೆ ಬಹಳ ಪ್ರಿಯನಾಗಿರುವೆನು' (೭-೧೭) ಎಂದು ಸೂಚಿಸಿತ್ತಷ್ಟೆ, ಅದನ್ನು ವಿಸ್ತಾರವಾಗಿ ವಿವರಿಸಿ ಇಲ್ಲಿ '(ಆ) ಭಕ್ತರು ನನಗೆ ಬಹಳ ಪ್ರಿಯರಾಗಿರುವರು' ಎಂದು ಉಪಸಂಹಾರಮಾಡಿರುತ್ತದೆ. ಈ ಧರ್ಮ್ಯಾಮೃತವನ್ನು ಮೇಲೆ ಹೇಳಿದಂತೆ ನಡೆಯಿಸುವಾತನು ಭಗವಂತನಾದ ನನಗೆ ಎಂದರೆ ವಿಷ್ಣುವಿಗೆ ಬಹಳವಾಗಿ ಪ್ರಿಯನಾಗುವನು. ಆದ್ದರಿಂದ ಈ ಧರ್ಮ್ಯಾಮೃತವನ್ನು ವಿಷ್ಣುವಿಗೆ ಪ್ರಿಯವಾದ ಹೆಚ್ಚಿನ ಸ್ಥಾನವನ್ನು ಪಡೆಯಬೇಕೆಂದಿರುವ ಮುಮುಕ್ಷುವು ಪ್ರಯತ್ನಪೂರ್ವಕವಾಗಿ ಅನುಷ್ಠಾನಮಾಡಬೇಕು– ಎಂಬುದು ವಾಕ್ಯದ (ಒಟ್ಟು) ಅರ್ಥವು.

ಇತಿ ಶ್ರೀಮಹಾಭಾರತೇ ಶತಸಾಹಸ್ರ್ಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ **ಭಕ್ತಿಯೋಗೋ** ನಾಮ
ದ್ವಾದಶೋಽಧ್ಯಾಯಃ

——*——

# ಹನ್ನೆರಡನೆಯ ಅಧ್ಯಾಯದ ಸಾರ

೧. ವಿಶ್ವರೂಪವನ್ನು ನೋಡಿದ ಬಳಿಕ ಅರ್ಜುನನು ಹೀಗೆಂದು ಕೇಳಿದನು:— "ಭಗವಂತನೆ, ನೀನು ಈಗ ತೋರಿಸಿರುವ ವಿಶ್ವರೂಪದಲ್ಲಿಯೇ ಯಾವಾಗಲೂ ಮನಸ್ಸಿಟ್ಟು ಉಪಾಸನೆಮಾಡುವವರು, ನೀನು ಇದುವರೆಗೆ ಅಲ್ಲಲ್ಲಿ ಉಪದೇಶಮಾಡಿರುವ ನಿರುಪಾಧಿಕವಾದ ಅಕ್ಷರಬ್ರಹ್ಮವನ್ನು ಉಪಾಸನೆಮಾಡುವವರು– ಇವರಿಬ್ಬರಲ್ಲಿ ಯಾರು ಹೆಚ್ಚಿನ ಯೋಗಿಗಳು ?"

೨–೭. ಆಗ ಭಗವಂತನಿಂತೆಂದನು: "ಅರ್ಜುನನೆ, ವಿಶ್ವರೂಪವನ್ನುಪಾಸನೆಮಾಡುವವರೇ ಹೆಚ್ಚಿನ ಯೋಗಿಗಳು. ಅಕ್ಷರಬ್ರಹ್ಮವನ್ನುಪಾಸನೆಮಾಡುವವರೂ ನನ್ನನ್ನೇ ಸೇರುತ್ತಾರೆ; ಆದರೆ ಆ ಉಪಾಸನೆಯ ವಿಷಯವಾದ ಬ್ರಹ್ಮವು ಇಂದ್ರಿಯಕ್ಕೆ ನಿಲುಕುವದಲ್ಲವಾದ್ದರಿಂದ ದೇಹಾಭಿಮಾನವುಳ್ಳವರಿಗೆ ಸುಲಭವಾಗಿ ದಕ್ಕುವದಲ್ಲ. ವಿಶ್ವರೂಪನಾದ ನನ್ನನ್ನೇ ಉಪಾಸನೆಮಾಡುವವರಿಗೆ ನಾನೇ ಸಹಾಯಕನಾಗಿ ಅವನನ್ನು ಸಂಸಾರಸಾಗರದಿಂದ ಮೇಲಕ್ಕೆತ್ತುವೆನು."

೮–೧೨. "ಆದ್ದರಿಂದ ನೀನು ವಿಶ್ವರೂಪನಾದ ನನ್ನಲ್ಲಿಯೇ ಮನಸ್ಸನ್ನೂ ಬುದ್ಧಿಯನ್ನೂ ನಿಲ್ಲಿಸಿಕೊ. ಒಂದೇ ಸಲಕ್ಕೆ ಹಾಗೆ ನಿಲ್ಲಿಸಿಕೊಳ್ಳುವದಕ್ಕೆ ಆಗದಿದ್ದರೆ ವಿವೇಕವೈರಾಗ್ಯಗಳಿಂದ ಅದನ್ನು ಅಭ್ಯಾಸಮಾಡಿಕೊ ; ಹಾಗೆ ಮಾಡುವದೂ ನಿನಗೆ ಕಷ್ಟವಾಗಿ ತೋರಿದರೆ ಈಶ್ವರಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡು ; ಹೀಗೆ ಕರ್ಮಮಾಡುವದಕ್ಕೆ ನನ್ನಲ್ಲಿಯೇ ಮನಸ್ಸಿಡಬೇಕಾಗುವದರಿಂದ ಅದೂ ಕಷ್ಟವಾಗಿ ಕಂಡರೆ ಯಾವ ಕರ್ಮವನ್ನು ಮಾಡಿದರೂ ಅದರ ಫಲವನ್ನು ಬಿಡುತ್ತಾ ಬಾ. ಆಗ ಕ್ರಮಕ್ರಮವಾಗಿ ನನ್ನ ಉಪಾಸನೆಯನ್ನು ಮಾಡುವದಕ್ಕೆ ಯೋಗ್ಯತೆಯನ್ನು ಹೊಂದುವೆ.

೧೩–೧೯. "ಆದರೆ ನನಗೆ ಅಕ್ಷರೋಪಾಸಕರು ಅತ್ಯಂತಪ್ರಿಯರಾಗಿರುವರು ; ಏಕೆಂದರೆ ಅವರು ನನ್ನ ಸ್ವರೂಪರೇ ಆಗಿರುತ್ತಾರೆ. ಅವರ ನಡತೆಯು ಹೇಗಿರುವದೆಂದರೆ ಕೇಳು; ಯಾವ ಪ್ರಾಣಿಯನ್ನೂ ಅವರು ಹಗೆಮಾಡರು. ಎಲ್ಲರಲ್ಲಿಯೂ ಮಿತ್ರರಾಗಿ ಕರುಣೆಯನ್ನು ತೋರಿಸುತ್ತಾ ನಾನುನನ್ನದೆಂಬುದಿಲ್ಲದೆ ಸುಖದುಃಖಗಳಲ್ಲಿ ಏರುಪೇರಿಲ್ಲದೆ ತಮಗೆ ಯಾವ ಅಪಕಾರವಾದರೂ ಕ್ಷಮಿಸುತ್ತಾ, ನಿತ್ಯತೃಪ್ತರಾಗಿ, ಇಂದ್ರಿಯವನ್ನು ನಿಗ್ರಹಮಾಡಿಕೊಂಡು, ಪರಮಾರ್ಥದಲ್ಲಿಯೇ ಮನಸ್ಸನ್ನು ಗಟ್ಟಿಯಾಗಿ ನಿಲ್ಲಿಸಿಕೊಂಡು ಪರಮಾತ್ಮನಾದ ನನ್ನಲ್ಲಿಯೇ ಮನೋಬುದ್ಧಿಗಳನ್ನು ಇಟ್ಟಿರುವರು. ಅವರು ನಿತ್ಯತೃಪ್ತರಾಗಿರುವರು, ಚಿತ್ತವನ್ನು ಸಮಾಧಾನದಲ್ಲಿಟ್ಟುಕೊಂಡು ಚಿದಾತ್ಮರಾಗಿರುವರು; ದೃಢನಿಶ್ಚಯರಾಗಿರುವರು, ಏಕೆಂದರೆ ಮನೋಬುದ್ಧಿಗಳನ್ನು ನನ್ನಲ್ಲಿಯೇ ಅರ್ಪಿಸಿರುತ್ತಾರೆ. ಅವರಿಂದ ಮತ್ತೊಬ್ಬರು ವ್ಯಥೆಗೊಳ್ಳುವದಿಲ್ಲ, ಅವರೂ ಮತ್ತೊಬ್ಬರಿಂದ ವ್ಯಥೆಗೊಳ್ಳರು ; ಅವರಿಗೆ ಹರ್ಷವಿಲ್ಲ, ಅಸಹನೆಯಿಲ್ಲ, ಹೆದರಿಕೆಯಿಲ್ಲ, ತಳಮಳವಿಲ್ಲ. ಅವರಿಗೆ ಯಾವದೊಂದೂ ಬೇಕಾದದ್ದಿರುವದಿಲ್ಲ, ಅವರು ಒಳಗೂ ಹೊರಗೂ ನಿರ್ಮಲರಾಗಿರುವರು, ಬಂದ ಕಾರ್ಯವನ್ನು ಕೂಡಲೆ ಮಾಡುವ ದಕ್ಷತೆಯುಳ್ಳವರಾಗಿರುವರು, ಯಾರೊಬ್ಬರ ಪಕ್ಷವನ್ನೂ ವಹಿಸು

ವದಿಲ್ಲ, ವ್ಯಥೆಯಿಲ್ಲದಿರುವದು, ಯಾವದೊಂದು ಕರ್ಮವನ್ನೂ ಫಲದಾಸೆಯಿಂದ ಮಾಡತೊಡಗುವದಿಲ್ಲ, ಅವರು ಒಳ್ಳೆಯದಕ್ಕೆ ಹಿಗ್ಗುವದಿಲ್ಲ, ಕೆಟ್ಟದ್ದಾದರೆ ದ್ವೇಷಮಾಡುವದಿಲ್ಲ, ಏನಾದರೂ ಹೋಯಿತೆಂದು ಅಳುವದಿಲ್ಲ, ಏನಾದರೂ ಬೇಕೆಂದು ಹಂಬಲಿಸುವದಿಲ್ಲ, ಒಳ್ಳೆಯ ಕರ್ಮಕ್ಕಾಗಲಿ ಕೆಟ್ಟ ಕರ್ಮಕ್ಕಾಗಲಿ ಕೈಹಾಕುವದಿಲ್ಲ, ತಮ್ಮವರು ಅನ್ಯರು, ಮಾನ ಅಪಮಾನ, ಸುಖ ದುಃಖ— ಮುಂತಾದ ದ್ವಂದ್ವಗಳಲ್ಲಿ ಮನಸ್ಸನ್ನು ಒಂದೇ ಸ್ಥಿತಿಯಲ್ಲಿಟ್ಟುಕೊಂಡಿರುವರು, ಏತರಲ್ಲಿಯೂ ಆಸಕ್ತರಾಗಿರುವದಿಲ್ಲ. ಜನರು ಬಯ್ಯಲಿ ಹೊಗಳಲಿ— ಮನಸ್ಸನ್ನು ಏರುಪೇರುಮಾಡಿಕೊಳ್ಳದೆ ಇರುವರು. ಸಿಕ್ಕಷ್ಟಕ್ಕೆ ತೃಪ್ತರಾಗುವರು, ಇಂಥದ್ದೊಂದು ಸ್ಥಳವೆಂಬುದೇ ಅವರಿಗಿಲ್ಲ. ಅವರ ಮನಸ್ಸು ಮಾತ್ರ ಯಾವಾಗಲೂ ಪರಮಾರ್ಥದಲ್ಲಿಯೇ ನೆಲೆಗೊಂಡಿರುವದು.

೨೦. "ಇದು ಧರ್ಮಕ್ಕೆ ಹೊಂದಿಕೆಯಾಗಿರುವ ಮಾರ್ಗವು, ಮೋಕ್ಷಕ್ಕೆ ಕಾರಣವಾಗಿರುವದು. ಇದರಲ್ಲಿ ಶ್ರದ್ಧೆಯಿಂದ ಯಾರು ನಡೆಯುವರೋ ನನ್ನಲ್ಲಿಯೇ ತಾತ್ಪರ್ಯವುಳ್ಳ ಆ ಭಕ್ತರು ನನಗೆ ಅತ್ಯಂತಪ್ರಿಯರಾಗಿರುವರು. ಆದ್ದರಿಂದ ನೀನು ಈ ಅಕ್ಷರಬ್ರಹ್ಮೋಪಾಸನೆಯು ನಿನಗೆ ಅಳವಡುವವರೆಗೆ ಕರ್ಮಯೋಗವನ್ನು ಆಚರಿಸುತ್ತಾ ವಿಶ್ವರೂಪೋಪಾಸಕನಾಗಿದ್ದು ಕ್ರಮಕ್ರಮವಾಗಿ ಈ ಅಕ್ಷರೋಪಾಸನೆಗೆ ಅರ್ಹತೆಯನ್ನು ಸಂಪಾದಿಸಿಕೊ."



# ತಿದ್ದುಪಡಿ

| ಪುಟ | ಸಾಲು | ಈಗ ಇರುವದು | ಇರಬೇಕಾದದ್ದು |
|---|---|---|---|
| ೩೦೫ | ೫ | ಕರ್ಮವನ್ನೂ ಅರಿತುಕೊಳ್ಳುವರು) | ಕರ್ಮವನ್ನೂ) ಅರಿತುಕೊಳ್ಳುವರು. |
| ೩೦೯ | ೮ | ತದ್ಭಾವ | ತದ್ಭಾವ |
| ೩೧೨ | ೨೬ | ೬—೪ | ೬—೪೭ |
| ೩೧೪ | ೧೧ | ಯಾವಾತನಾದರೆ | ಯಾವಾತನಾದರೆ ಮನುಷ್ಯರಲ್ಲಿ (ಹುಟ್ಟಿ) |
| ೩೧೫ | ೧೩ | ಮೂರ್ಧ್ನ್ಯಾದಾಯ | ಮೂರ್ಧ್ನ್ಯಾಧಾಯ |
| ೩೧೬ | ೨ | ಮೊದಲುಮಾಡಿ | ವೊದಲುಮಾಡಿ ‖೧೨‖ |
| ೩೧೬ | ೨೬ | ೧—೨೯ | ೧—೨೮ |
| ೩೧೭ | ೭ | ಕೇಳು | ಅದನ್ನು ಕೇಳು |
| ೩೧೭ | ೨೧ | ಇಂಥ | ಯತಿಗಳು ಇಂಥ |
| ೩೨೦ | ೧೩ | ಅದೇ ಬೇರೆಯಲ್ಲ, | ಅದೇ, ಬೇರೆಯಲ್ಲ ; |
| ೩೨೦ | ೧೫ | ಅವಶ್ಯವಾಗಿ | ಅವಶವಾಗಿ |
| ೩೨೦ | ೨೧ | ಈಗ . . . ಹೇಳುತ್ತಿದ್ದಾನೆ | ಈ ಯೋಗಮಾರ್ಗದಿಂದ ಈ (ಬ್ರಹ್ಮ) ವನ್ನು ಸೇರಬೇಕೆಂದು ಅಕ್ಷರ(ಬ್ರಹ್ಮ) ದ ಸ್ವರೂಪವನ್ನೇ ತಿಳಿಸುವದಕ್ಕಾಗಿ ಹೀಗೆ ಹೇಳುತ್ತಿದ್ದಾನೆ:— |
| ೩೨೧ | ೨೯ | ೯—೯ | ೯—೮ |
| ೩೨೩ | ೧೩ | ಹಿಂತಿರುಗುವಿಕೆಯನ್ನು | ಹಿಂತಿರುಗದಿರುವಿಕೆಯನ್ನು |
| ೩೨೭ | ೧೭ | ಯೋಗಿಯು | ಯೋಗಿಯು ಮೀರುವನು ಎಂದರೆ ಆ ಫಲಸಮೂಹವನ್ನೆಲ್ಲ ದಾಟಿಹೋಗುವನು ಮತ್ತು |
| ೩೩೪ | ೨೦ | ಧರಿಸಿರುವದು | ಧರಿಸಿರುವನು |
| ೩೩೫ | ೭ | (ಏತಕ್ಕೊ | ಏತಕ್ಕೊ |
| ೩೩೬ | ೨೨ | ಭೂತಗ್ರಾಮವನ್ನು | ಭೂತಗ್ರಾಮವೆಲ್ಲವನ್ನೂ |
| ೩೪೪ | ೧೦ | ಪ್ರಲಯಃ ಸಾಕ್ಷೀ | ಪ್ರಲಯಃ ಸ್ಥಾನಂ |
| ೩೪೭ | ೧೯ | ಸ್ವರ್ಗಲೋಕವನ್ನು | ಆ ಸ್ವರ್ಗಲೋಕವನ್ನು |
| ೩೫೫ | ೭ | ಹೊಂದುವರು | ಹೊಂದುವರು ‖೩೨‖ |
| ೩೫೬ | ೧೦ | — | ಈ ಸಾಲಿನ ಕೊನೆಯಲ್ಲಿ ಅಧ್ಯಾಯ ಸಮಾಪ್ತಿಯ ವಾಕ್ಯವು ಬಿಟ್ಟುಹೋಗಿದೆ |
| ೩೬೫ | ೪ | ಪರಮಾರ್ಥವನ್ನರಿತು | ಪರಮಾರ್ಥವಾದ ತತ್ತ್ವವನ್ನರಿತು |
| ೩೬೬ | ೧೨ | ಆಬುದ್ಧಿಯೋಗವನ್ನು (ಕೊಡುವೆನು) | (ಆ ಬುದ್ಧಿಯೋಗವನ್ನು ಕೊಡುವೆನು) |
| | ೨೬ | ಇಲ್ಲದ್ದೇ | ಇಲ್ಲದೆ |

| ಪುಟ | ಸಾಲು | ಈಗ ಇರುವದು | ಇರಬೇಕಾದದ್ದು |
|---|---|---|---|
| ೩೭೦ | ಟಿಪ್ಪಣಿ | † ∗ | ಈ ಚಿಹ್ನೆಗಳು ಒಂದರ ಸ್ಥಾನದಲ್ಲೊಂದು ಬಿದ್ದಿವೆ. |
| ೩೭೧ | ೬ | ಅವುಗಳನ್ನು ಹೇಳುತ್ತೇನೆ | ಅವುಗಳನ್ನು ಹೇಳುತ್ತೇನೆ ಎಂದರ್ಥ. |
| ೩೭೨ | ೮ | ಕರಣಗಳಿಂದ | ಕಿರಣಗಳಿಂದ |
| ೪೭೩ | ೩ | ಮೇರುವು | ನಾನು ಮೇರುವು |
| ೩೭೪ | ೧೨ | ದೇವತೆಗಳೂ | ದೇವತೆಗಳೇ |
| ೩೭೫ | ೧೩ | ಮಂತ್ರಗಳನ್ನೂ | ಮಂತ್ರಗಳನ್ನು |
| ೩೮೬ | ೧೪ | ಒಲುವಾಗಿ | ಬಲುವಾಗಿ |
| ೩೮೭ | ೭ | ಹಸುರು | ಹಳದಿ. |
| ೩೯೦ | ೧ | ವಿಶ್ವರೂಪವನ್ನು | ವಿಶ್ವರೂಪವನ್ನು |
| ೩೯೫ | ೨೦ | ಅದ್ಭುತವಾದ ಉಗ್ರರೂಪವನ್ನು | ನಿನ್ನ ಅದ್ಭುತವಾದ ಈ ಉಗ್ರರೂಪವನ್ನು |
| ೩೯೬ | ೧ | ವಿಸೇಷ | ವಿಶೇಷ |
| ೩೯೮ | ೨೨ | ನಭಸ್ಸನ್ನು | ಎಲೈ ವಿಷ್ಣುವೆ, ನಭಸ್ಸನ್ನು |
| ೪೦೨ | ೧೦ | ಕೂಡಿ | ಕೂಡಿ, |
| ೪೦೪ | ೧೬ | ಚೇತಾಸಿ | ಜೇತಾಸಿ |
| ೪೦೪ | ೨೩ | ಆ ಶಂಕೆ | ಆಶಂಕೆ |
| ೪೦೪ | ೨೬ | ಆ ಶಂಕೆ | ಆಶಂಕೆ |
| ೪೧೨ | ೧೬ | ಅಳತೆಯಾಗಿ | ಹೋಲಿಕೆಯಾಗಿ |
| ೪೧೩ | ೨೨ | ತೋರಿಸು- | ತೋರಿಸು, (ನನ್ನಲ್ಲಿ) ಪ್ರಸನ್ನನಾಗು. |
| ೪೧೪ | ೧೧ | ಮೊದಲಿನಂತೆಯೇ | ಮೊದಲಿನಂತೆಯೇ ಎಂದರ್ಥ. |
| ೪೧೬ | ೧೫ | ಈ ನನ್ನ | ಈ ನನ್ನ ಅದೇ |
| ೪೧೬ | ೨೨ | ಸರಿಯಾಗಿ ನೋಡು | ನೋಡು |
| ೪೨೪ | ೧೧ | ಅರ್ಜುನನ ಸ್ತೋತ್ರ ಮತ್ತು ಕ್ಷಮಾಪಣೆ | ಅರ್ಜುನನ ಪ್ರಶ್ನೆ |
| ೪೨೪ | ೨೮ | ಕೂಡಿರುವ | ಕೂಡಿರುವ. |
| ೪೩೨ | ೧೦ | ಆಶ್ರಯಿಸಿ* | ಆಶ್ರಯಿಸಿ † |
| ೪೩೨ | ೨೩ | ನನ್ನ | † ನನ್ನ |
| ೪೩೯ | ೨೯ | ಒಯ್ಯುವದು | ಬಯ್ಯುವದು |
| ೪೪೦ | ೧೯ | ಪರಮಾರ್ಥದಲ್ಲಿಯೇ | ಪರಮಾರ್ಥಜ್ಞಾನದಲ್ಲಿಯೇ |

——:——

# ಅಧ್ಯಾತ್ಮಪ್ರಕಾಶ

ಈ ಪತ್ರಿಕೆಯಲ್ಲಿ ಬಹುಸರಳವಾದ ಭಾಷೆಯಿಂದ ಸರ್ವಸಮ್ಮತವಾದ ಪರಮಾರ್ಥವಿಚಾರಗಳನ್ನು ಈಗಿನ ಕಾಲಕ್ಕೆ ತಕ್ಕ ಶೈಲಿಯಲ್ಲಿ ಪ್ರಕಟಿಸಲಾಗುತ್ತಿದೆ. ಸಾಧುಸಂತರ ಜೀವನಚರಿತ್ರೆಗಳು, ಕಥೆಗಳು, ಪದಪುಷ್ಪಗಳು, ಕೀರ್ತನೆಗಳು. ಪತ್ರವ್ಯವಹಾರ- ಮುಂತಾದ ರೂಪಗಳಿಂದ ಹೆಂಗಸರಿಗೂ ಗಂಡಸರಿಗೂ, ದೊಡ್ಡವರಿಗೂ ಹುಡುಗರಿಗೂ, ಪಂಡಿತರಿಗೂ ಪಾಮರರಿಗೂ, ಉಪಯೋಗವಾಗುವಂಥ ಪರಮಾರ್ಥವಿಚಾರಗಳು ಪ್ರಕಟವಾಗುತ್ತಿವೆ. ೧೯೩೬ನೆಯ ಸೆಪ್ಟೆಂಬರಿನಿಂದ ೫ನೆಯ ಸಂಪುಟವು ಪ್ರಾರಂಭವಾಗಿದೆ. ಚಂದವನ್ನು ಮುಂಗಡವಾಗಿ ಕೊಡಬೇಕು.

ವರ್ಷಕ್ಕೆ ಚಂದ: ೨ ರೂ. ಸಂಸ್ಥೆಗಳಿಗೆ: ೩ ರೂ.

ಸಂಪುಟ ಮುಗಿಸ ಮೇಲೆ ೧ ರೂಪಾಯಿ ಹೆಚ್ಚು

ಬಿಡಿಸಂಚಿಕೆಗೆ: ೦-೪-೦ ಕಳುಹಿಸಿ.

ಈ ಪತ್ರಿಕೆಯ ಹಿಂದಿನ ಸಂಪುಟಗಳಲ್ಲಿ ಮೊದಲನೆಯ ಸಂಪುಟದ ಬಿಡಿಲೇಖನಗಳ ಪುಸ್ತಕ ೫ ಆ. ಮಾತ್ರ ; ನಾಲ್ಕನೆಯ ಸಂಪುಟ ಹೊರತು ಮಿಕ್ಕವುಗಳು ಸಿಕ್ಕುವದಿಲ್ಲ.

---

೧. ಅಧ್ಯಾತ್ಮವಿದ್ಯೆಯಲ್ಲಿ ಜನರಿಗೆ ಹೆಚ್ಚಿನ ಆದರವನ್ನುಂಟುಮಾಡಬೇಕೆಂಬುದೇ ಈ ಕಾರ್ಯಾಲಯದ **ಮುಖ್ಯೋದ್ದೇಶವು**.

೨. ಅಧ್ಯಾತ್ಮವಿಚಾರದ ಹಳೆಯ ಗ್ರಂಥಗಳನ್ನು ಮುದ್ರಿಸಿ ಬೆಳಕಿಗೆ ಹಿಡಿಯುವದು, ಹೊಸ ಗ್ರಂಥವನ್ನು ಬರೆಯಿಸಿ ವಾಚಕರ ಮುಂದಿಡುವದು, ಅಧ್ಯಾತ್ಮಪ್ರಕಾಶವೆಂಬ ಧಾರ್ಮಿಕಮಾಸಪತ್ರಿಕೆಯನ್ನು ಹೊರಡಿಸುವದು, ವಿಚಾರಸಂಘಗಳು, ಉಪನ್ಯಾಸಗಳು, ಗ್ರಂಥಕಾಲಕ್ಷೇಪ- ಮುಂತಾದವುಗಳನ್ನು ಏರ್ಪಡಿಸುವದು- ಈ ಬಗೆಯ ಕೆಲಸಗಳಲ್ಲಿಯೇ ಕಾರ್ಯಾಲಯವು ತೊಡಗಿರುವದು.

೩. ಇಲ್ಲಿ **ನಡೆಯುವ ಕೆಲಸವು ಧರ್ಮಾರ್ಥ**ವಾಗಿ ನಡೆಯುವದು. ಬರುವ **ಹಣವೆಲ್ಲ ಧಾರ್ಮಿಕಕಾರ್ಯಕ್ಕೇ ವಿನಿಯೋಗವಾಗುವದು.** ಆಯವ್ಯಯದ ಲೆಕ್ಕವನ್ನು ಬೇರೆಯಾಗಿ ಬರೆದಿಟ್ಟಿರುತ್ತದೆ.

೪. ಕಾರ್ಯಾಲಯದ ಉದ್ದೇಶದಲ್ಲಿ ಸಹಾನುಭೂತಿಯುಳ್ಳವರು ಆಶ್ರಯದಾತರೂ ಪೋಷಕರೂ ಪ್ರೋತ್ಸಾಹಕರೂ ಆಗಿ ಸಹಾಯಮಾಡಬಹುದು. ಹೆಚ್ಚಿನ ವಿಷಯಕ್ಕೆ ತಿಂಗಳುತಿಂಗಳಿಗೆ ಕಾರ್ಯಾಲಯದಿಂದ ಹೊರಡುವ **ಅಧ್ಯಾತ್ಮಪ್ರಕಾಶಪತ್ರಿಕೆಯನ್ನು ನೋಡಿ** ಅಥವಾ ನಮಗೆ ಬರೆಯಿರಿ.

## ಅಧ್ಯಾತ್ಮಪ್ರಕಾಶಕಾರ್ಯಾಲಯ

**೨ನೆಯ ಬೀದಿ, ಚಾಮರಾಜಪೇಟೆ, ಬೆಂಗಳೂರು ಸಿಟಿ.**

## ಅಧ್ಯಾತ್ಮವಿದ್ಯೆಯ ಬೊಕ್ಕಸವಾದ

# ಉಪನಿಷತ್ತುಗಳು

ಇವುಗಳನ್ನೆಲ್ಲ ಸಂಸ್ಕೃತಮೂಲ, ಅರ್ಥ, ಶಾಂಕರಭಾಷ್ಯಾನುವಾದ, ಅಡಿಯಲ್ಲಿ ಟಿಪ್ಪಣಿ, ಕೊನೆಯಲ್ಲಿ ಸಾರಾಂಶ, ಕಷ್ಟಪದಗಳ ಸಾರ್ಥ ಅಕ್ಷರಾನುಕ್ರಮಣಿಕೆ- ಹೀಗೆ ಏಂಗಡಿಸಿದೆ. ಇವು ಹೀಗೆ ಯಾವ ಭಾಷೆಯಲ್ಲಿಯೂ ಇದುವರೆಗೆ ಅಚ್ಚಾಗಿರುವದಿಲ್ಲ.

"ವೇದಾಂತಗ್ರಂಥಗಳನ್ನು ಕನ್ನಡಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಅತಿಸುಲಭಶೈಲಿಯಲ್ಲಿ ಬರೆಯುತ್ತಾ ಶ್ರೀಶಂಕರಾಚಾರ್ಯರ ಭಾಷ್ಯಾನುವಾದದೊಡನೆ ಉಪನಿಷತ್ತುಗಳನ್ನು ರಚಿಸಿರುವರು." —ಪ್ರಬುದ್ಧಕರ್ಣಾಟಕ.

"ಚೊಕ್ಕಟವಾದ ಅಚ್ಚಿನ ಕೆಲಸ, ಅಕ್ಷರಗಳನ್ನು ಆರಿಸಿರುವಿಕೆ, ಭಾಷಾಂತರಮಾಡಿರುವದರಲ್ಲಿ ಪರಿಪೂರ್ಣತೆಯನ್ನು ಹೊಂದಿರುವದು- ಇವು ನನ್ನ ಮನಸ್ಸಿಗೆ ತುಂಬ ಸಂತೋಷವನ್ನುಂಟುಮಾಡುತ್ತವೆ." — ಪಿ. ಎನ್. ನರಸಿಂಹಯ್ಯನವರು.

೭. **ಈಶಾವಾಸ್ಯೋಪನಿಷತ್ತು**— ಇದರಲ್ಲಿ ಪ್ರವೃತ್ತಿ, ನಿವೃತ್ತಿ- ಎಂಬ ವೇದೋಕ್ತಧರ್ಮಗಳ ವಿವೇಚನೆಯನ್ನು ಮಾಡಿದೆ. ಡೆಮ್ಮಿ ೮ಪತ್ರದ ೪೬ ಪುಟಗಳಿವೆ.
ಬೆಲೆ: ೦-೫-೦ 'ಅ.ಪ್ರ.'ದ ಚಂದಾದಾರರಿಗೆ: ೦-೪-೬

೮. **ಕಠೋಪನಿಷತ್ತು**— ಆತ್ಮನು ಸಂಸಾರಿಯಾಗಿಯೂ ಒಂದೊಂದು ಶರೀರದಲ್ಲಿಯೂ ಬೇರೆಬೇರೆಯಾಗಿಯೂ ಇರುವಂತೆ ಅವಿದ್ಯೆಯ ಕಣ್ಣಿಗೆ ಕಾಣುತ್ತಿದ್ದರೂ ನಿಜವಾಗಿ ಅವಿದ್ಯಾಕಾಮಕರ್ಮಗಳಿಗೆ ಕಟ್ಟುಬೀಳದೆ ಅಸಂಸಾರಿಯಾಗಿ ಇರುವನೆಂಬುದನ್ನು ಬಹು ಸರಸವಾಗಿ ವಿವರಿಸಿರುತ್ತದೆ. ಡೆಮ್ಮಿ ೮ಪತ್ರದ ೧೮೮ ಪುಟಗಳಿವೆ.
ಬೆಲೆ: ೧-೦-೦ 'ಅ.ಪ್ರ.'ದ ಚಂದಾದಾರರಿಗೆ: ೦-೧೫-೦

೯. **ಮುಂಡಕೋಪನಿಷತ್ತು**—ಇದರಲ್ಲಿ ಪರ, ಅಪರ- ಎಂಬ ವಿದ್ಯೆಗಳ ವಿವೇಚನೆಯನ್ನು ಮಾಡಿದೆ; ಆತ್ಮವಿದ್ಯೆಗೆ ಸಾಧನಗಳನ್ನೂ ತಿಳಿಸಿದೆ. ಡೆಮ್ಮಿ ೮ಪತ್ರದ ೧೧೨ ಪುಟಗಳಿವೆ.
ಬೆಲೆ: ೦-೧೨-೦ 'ಅ.ಪ್ರ.'ದ ಚಂದಾದಾರರಿಗೆ: ೦-೧೧-೦

೧೦. **ಮಾಂಡೂಕ್ಯೋಪನಿಷತ್ತು**— ಇದು ಎಚ್ಚರ, ಕನಸು, ನಿದ್ರೆ- ಎಂಬ ಮೂರು ಅವಸ್ಥೆಗಳ ಸೋಂಕೂ ಇಲ್ಲದೆ ನಿರ್ಮಲವಾಗಿರುವ ನಮ್ಮೆಲ್ಲರ ಆತ್ಮನ ಸ್ವರೂಪವನ್ನು ಅನುಭವಕ್ಕೆ ತಂದುಕೊಡುತ್ತದೆ. ಶ್ರೀಶಂಕರಾಚಾರ್ಯರ ಪರಮಗುರುಗಳಾದ ಶ್ರೀಗೌಡಪಾದಾಚಾರ್ಯರು ಇದರ ವಿವರಣೆಯ ರೂಪವಾಗಿ ಬರೆದಿರುವ ಕಾರಿಕೆಯ ಆಗಮಪ್ರಕರಣವೆಂಬ ೧ನೆಯ ಭಾಗವೂ ಇದೆ. ಡೆಮ್ಮಿ ೮ಪತ್ರದ ೭೨ ಪುಟಗಳಿವೆ.
ಬೆಲೆ: ೦-೯-೦ 'ಅ.ಪ್ರ.'ದ ಚಂದಾದಾರರಿಗೆ: ೦-೮-೬

೧೧. **ವೈತಥ್ಯಪ್ರಕರಣ**— ಮಾಂಡೂಕ್ಯಕಾರಿಕೆಯ ೨ನೆಯ ಭಾಗ. ಡೆಮ್ಮಿ ೮ಪತ್ರದ ೬೦ ಪುಟಗಳಿವೆ.
ಬೆಲೆ: ೦-೮-೦ 'ಅ.ಪ್ರ.'ದ ಚಂದಾದಾರರಿಗೆ: ೦-೭-೬

೧೨. **ಅದ್ವೈತಪ್ರಕರಣ**— ಮಾಂಡೂಕ್ಯಕಾರಿಕೆಯ ೩ನೆಯ ಭಾಗ. ಡೆಮ್ಮಿ ೮ಪತ್ರದ ೭೨ ಪುಟಗಳಿವೆ.
ಬೆಲೆ: ೦-೯-೦ 'ಅ.ಪ್ರ.'ದ ಚಂದಾದಾರರಿಗೆ: ೦-೮-೬

---

'ಅಧ್ಯಾತ್ಮಪ್ರಕಾಶ'ವು ಭಕ್ತಿಜ್ಞಾನವೈರಾಗ್ಯಾದಿಗಳ ವಿಷಯವಾದ ಬರಹಗಳಿಂದ ಕೂಡಿ ತಿಂಗಳಿಗೊಂದು ಸಲ ಹೊರಡುವ ಪತ್ರಿಕೆ.
ಚಂದಾ: ೨-೦-೦ ಮಾದರಿಯ ಸಂಚಿಕೆಗೆ: ೦-೪-೬

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಸಿಟಿ.**

## ವೇದಾಂತದ ಕೆಚ್ಚನ್ನು ಬಿಚ್ಚಿ ತೋರಿಸುವ

# ಪುಟ್ಟ ಪುಸ್ತಕಗಳು

**೧೫. ವೇದಾಂತಬಾಲಬೋಧೆ**— ಇದು ಶ್ರೀಶಂಕರಾಚಾರ್ಯರವರ ಪ್ರಾತಃಸ್ಮರಣಸ್ತೋತ್ರದ ವ್ಯಾಖ್ಯಾನರೂಪವಾದ ಪ್ರಕರಣ. ಹೊಸದಾಗಿ ವೇದಾಂತವಿಚಾರವನ್ನು ಪ್ರಾರಂಭಮಾಡಬೇಕೆಂಬವರಿಗೂ ಸುಲಭವಾಗಿ ತಿಳಿಯುವಂತೆ ಪ್ರಶ್ನೋತ್ತರರೂಪದಲ್ಲಿ ಬರೆದಿರುತ್ತದೆ. ಆತ್ಮನ ನಿಜವಾದ ಸ್ವರೂಪವನ್ನೂ ಅದನ್ನು ನಾವು ಕಂಡುಕೊಳ್ಳುವ ಬಗೆಯನ್ನೂ ಸುಲಭರೀತಿಯಲ್ಲಿ ತಿಳಿಯಪಡಿಸುವದು. ಡೆಮ್ಮಿ ೧⁄₁₆ ಪತ್ರದ ೫೬ ಪುಟಗಳಿವೆ.

ಬೆಲೆ: ೦-೨-೬ 'ಅ.ಪ್ರ.'ದ ಚಂದಾದಾರರಿಗೆ: ೦-೨-೦

**೧೬. ವೇದಾಂತಕಥಾವಳಿ**— ಓದುವವರಿಗೆ ವಿನೋದವೂ ತತ್ತ್ವಜ್ಞಾನವೂ ಒಂದೇ ಕಾಲಕ್ಕೆ ಸಿಕ್ಕುವಂತೆ ಆರಿಸಿ ಬರೆದಿರುವ ಇಪ್ಪತ್ತೆರಡು ಕಥೆಗಳ ಗ್ರಂಥ. ಇದನ್ನು ಓದುವದರಿಂದ ವೇದಾಂತವಿಷಯದಲ್ಲಿ ಜನರಿಗಿರುವ ಎಷ್ಟೋ ತಪ್ಪುತಿಳಿವಳಿಕೆಗಳು ಮಾಯವಾಗುವವು. ಪೂರ ತಿದ್ದಿದ ಎರಡನೆಯ ಮುದ್ರಣ. ಕ್ರೌನ್ ೧⁄₁₆ ಪತ್ರದ ೬೨ ಪುಟಗಳಿವೆ.

ಬೆಲೆ: ೦-೫-೦ 'ಅ.ಪ್ರ.'ದ ಚಂದಾದಾರರಿಗೆ: ೦-೪-೦

**೧೭. ಶಂಕರಮಹಾಮನನ**— ಈ ಪುಸ್ತಕದಲ್ಲಿ ವೇದಾಂತಪ್ರಕ್ರಿಯೆಯ ಗುಟ್ಟನ್ನೆಲ್ಲ ಶ್ರೀಶಂಕರಭಗವತ್ಪಾದರ ಅಮೃತವಾಣಿಯ ಆಧಾರದಿಂದಲೇ ಹೊರಗೆಡವಿರುತ್ತದೆ. ಹೊಸದಾಗಿ ಓದುವವರಿಗೆ ವೇದಾಂತದ ಒಟ್ಟು ಉಪದೇಶವನ್ನೂ ಮೊದಲೇ ಓದಿರುವವರಿಗೆ ಅನುಸಂಧಾನಕ್ಕೆ ತಕ್ಕ ಸಂಗ್ರಹವನ್ನೂ ಒದಗಿಸುವದು. ಕ್ರೌನ್ ೧⁄₁₆ ಪತ್ರದ ೫೨ ಪುಟಗಳಿವೆ.

ಬೆಲೆ: ೦-೨-೬ 'ಅ.ಪ್ರ.'ದ ಚಂದಾದಾರರಿಗೆ: ೦-೨-೦

**೧೮. ವಿಲಕ್ಷಣಮೌನಿ**— ದಶೋಪನಿಷತ್ತುಗಳ ಮಹಾತಾತ್ಪರ್ಯವನ್ನು ವಿವರಿಸುವ ಒಂದು ಸಂಭಾಷಣೆ. ಕ್ರೌನ್ ೧⁄₁₆ ಪತ್ರದ ೨೦ ಪುಟಗಳಿವೆ.

ಬೆಲೆ: ೦-೧-೬ 'ಅ.ಪ್ರ.'ದ ಚಂದಾದಾರರಿಗೆ: ೦-೧-೩

**೧೯. ವೇದಾಂತಡಿಂಡಿಮ**— ಶ್ರೀನೃಸಿಂಹಸರಸ್ವತೀಸ್ವಾಮಿಗಳವರು ಬರೆದದ್ದು. ಇದರಲ್ಲಿ ೯೪ ಶ್ಲೋಕಗಳಿವೆ. ನಾಮರೂಪಗಳಾಗಿ ತೋರಿಕೊಳ್ಳುವ ಜಗತ್ತು ನಿಜವಾಗಿ ಸಚ್ಚಿದಾನಂದರೂಪವಾದ ಬ್ರಹ್ಮಕ್ಕಿಂತ ಬೇರೆಯಾಗಿಲ್ಲವೆಂಬುದನ್ನೂ ಆ ಬ್ರಹ್ಮವೇ ನಮ್ಮೆಲ್ಲರ ಆತ್ಮನೆಂಬುದನ್ನೂ ಯುಕ್ತ್ಯನುಭವಗಳ ಮೂಲಕ ತೋರಿಸಿಕೊಡುವ ಪುಟ್ಟ ಪ್ರಕರಣವಿದು. ವೇದಾಂತದಲ್ಲಿ ಬಳಕೆಯಾಗಿ ಬರುವ ಮುಖ್ಯಪಾರಿಭಾಷಿಕಶಬ್ದಗಳ ಅರ್ಥವನ್ನು ಇಲ್ಲಿ ತಿಳಿದುಕೊಳ್ಳಬಹುದಾಗಿದೆ. ಸಂಸ್ಕೃತಶ್ಲೋಕಗಳನ್ನೂ ಕೊಟ್ಟು ಕನ್ನಡದಲ್ಲಿ ಭಾವಾರ್ಥವನ್ನೂ ಕೊಟ್ಟಿದೆ. ಕ್ರೌನ್ ೧⁄₁₆ ಪತ್ರದ ೩೪ ಪುಟಗಳಿವೆ.

ಬೆಲೆ: ೦-೪-೦ 'ಅ.ಪ್ರ.'ದ ಚಂದಾದಾರರಿಗೆ: ೦-೩-೬

**೨೦. ವಿಶ್ವಧರ್ಮಸಮ್ಮೇಳನದಲ್ಲಿ ಉಪನ್ಯಾಸಗಳು**— ಶ್ರೀವಿವೇಕಾನಂದಸ್ವಾಮಿಗಳವರು ಮಾಡಿದ್ದು. ಈ ಪುಸ್ತಕದಲ್ಲಿ ಸ್ವಾಗತಕ್ಕೆ ಉತ್ತರ, ನಮ್ಮಲ್ಲಿ ಮತಭೇದವಿರುವದೇಕೆ? ಹಿಂದೂಧರ್ಮ (೧೮೯೩), ಇಂಡಿಯಕ್ಕೆ ಧರ್ಮದ ಕೊರತೆಯೇನೂ ಇಲ್ಲ. ಬೌದ್ಧಧರ್ಮವು ಹಿಂದೂಧರ್ಮವನ್ನು ಪರಿಪೂರ್ತಿಗೊಳಿಸಿದ್ದು, ಅಧಿವೇಶನದಲ್ಲಿ ಕೊನೆಯ ಭಾಷಣ, ಹಿಂದೂಧರ್ಮ (೧೮೯೪), ವೇದಾಂತದ ಸ್ವರೂಪವೂ ಪ್ರಭಾವವೂ-ಇಷ್ಟು ಉಪನ್ಯಾಸಗಳಿವೆ. ಕ್ರೌನ್ ೧⁄₁₆ ಪತ್ರದ ೬೨ ಪುಟಗಳಿವೆ.

ಬೆಲೆ: ೦-೫-೦ 'ಅ.ಪ್ರ.'ದ ಚಂದಾದಾರರಿಗೆ: ೦-೪-೬

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಸಿಟಿ.**

## ವೇದಾಂತದ ಕೆಚ್ಚನ್ನು ಬಿಚ್ಚಿ ತೋರಿಸುವ

# ಪುಟ್ಟ ಪುಸ್ತಕಗಳು

**೨೧. ಶ್ರೀರಾಮಹೃದಯ—** ಸೀತಾದೇವಿಯೂ ಶ್ರೀರಾಮರೂ ಹನುಮಂತನಿಗೆ ಮಾಡಿದ ಗುಟ್ಟಾದ ಉಪದೇಶವಿದು. ಮೂಲ, ಅರ್ಥ, ಸಾರಾಂಶ- ಇಷ್ಟೂ ಇವೆ. ಡೆಮ್ಮಿ ೧/೮ ಪತ್ರದ ೩೨ ಪುಟಗಳಿವೆ.

ಬೆಲೆ: ೦-೧-೦ 'ಅ.ಪ್ರ.'ದ ಚಂದಾದಾರರಿಗೆ: ೦-೦-೯

**೨೨. ಶ್ರೀಲಕ್ಷ್ಮೀನರಸಿಂಹಪಂಚರತ್ನ ಮತ್ತು ಧನ್ಯಾಷ್ಟಕ—** ಶ್ರೀಶಂಕರಾಚಾರ್ಯಕೃತಿಯೆಂದು ಪ್ರಸಿದ್ಧವಾಗಿರುವ ಈ ಸಣ್ಣ ಪ್ರಕರಣಗಳಿಗೆ ಭಾವಾರ್ಥವಿವರಣೆಗಳನ್ನು ಸೇರಿಸಿ ಪ್ರಕಟಿಸಿರುತ್ತದೆ. ಪರಮಾತ್ಮನ ಭಕ್ತಿಯನ್ನೂ ಅಧ್ಯಾತ್ಮಸಾಧನಕ್ರಮವನ್ನೂ ಇವುಗಳಲ್ಲಿ ಕೊಂಡಾಡಿರುತ್ತದೆ. ಕ್ರೌನ್ ೧/೮ ಪತ್ರದ ೩೦ ಪುಟಗಳಿವೆ.

ಬೆಲೆ: ೦-೩-೦ 'ಅ.ಪ್ರ.'ದ ಚಂದಾದಾರರಿಗೆ: ೦-೨-೬

**೨೩. ಸರ್ವವೇದಾಂತಸಿದ್ಧಿ—** ನೀತಿಪ್ರಧಾನವಾದ ಗ್ರಂಥ. ಸರಳಶೈಲಿಯಲ್ಲಿದೆ. ಕ್ರೌನ್ ೧/೮ ಪತ್ರದ ೪೦ ಪುಟಗಳಿವೆ.

ಬೆಲೆ: ೦-೪-೦ 'ಅ.ಪ್ರ.'ದ ಚಂದಾದಾರರಿಗೆ: ೦-೩-೬

**೨೪. ಸಮುದ್ರಮಥನ—** ಈ ಆಖ್ಯಾನವನ್ನು ಮಹಾಭಾರತ, ವಿಷ್ಣುಪುರಾಣ, ಭಾಗವತ- ಮುಂತಾದ ಸುಪ್ರಸಿದ್ಧಗ್ರಂಥಗಳ ಬೆಂಬಲದಿಂದ ಕಾದಂಬರಿಯ ಹಾಗೆ ಬರೆದಿರುತ್ತದೆ. ಸಮಯಬಿದ್ದ ಹಾಗೆ ನೀತಿಯನ್ನು ಬೋಧಿಸುವ ವಿಚಾರಗಳಿಂದಲೂ ಅಧ್ಯಾತ್ಮದ ಗುಟ್ಟನ್ನೆಲ್ಲ ರಟ್ಟುಮಾಡುವ ವಿವರಣೆಗಳಿಂದಲೂ ತುಂಬಿರುವದರಿಂದ ಓದುವವರ ಮನಸ್ಸಿಗೆ ವಿನೋದವನ್ನುಂಟುಮಾಡುವದರ ಜೊತೆಗೆ ಉತ್ತಮವಾದ ತಿಳಿವಳಿಕೆಯನ್ನೂ ಹೇರಳವಾಗಿ ಒದಗಿಸುವದು. ಕ್ರೌನ್ ೧/೮ ಪತ್ರದ ೮೦ ಪುಟಗಳಿವೆ.

ಬೆಲೆ: ೦-೪-೬ 'ಅ.ಪ್ರ.'ದ ಚಂದಾದಾರರಿಗೆ: ೦-೪-೦

**೨೫. ಅಧ್ಯಾತ್ಮವೆಂದರೇನು?—** ಅಧ್ಯಾತ್ಮ ಎಂಬ ಮಾತಿನ ವಿವರಣೆಗಾಗಿ ಹೊರಟಿರುವ ಪ್ರಶ್ನೋತ್ತರರೂಪವಾದ ಪುಸ್ತಕ. ಇದನ್ನು ಓದುವವರು ಯಾವ ಶಾಸ್ತ್ರವನ್ನೂ ಓದಿರಬೇಕಾಗಿದ್ದಿಲ್ಲ, ಅಧ್ಯಾತ್ಮವಿಚಾರವು ಈಗಿನ ಜನರಿಗೆ ಅತ್ಯವಶ್ಯವಾಗಿರುವದೆಂಬುದನ್ನೂ ಇದು ಒಂದು ಹೊಸ ಬಗೆಯ ದೃಷ್ಟಿಯನ್ನು ಕೊಟ್ಟು ಮಾನವಜೀವನದಲ್ಲಿ ಈಗ ಕಾಣಬರುವ ಎಲ್ಲಾ ತೊಡಕುಗಳನ್ನು ಬಿಚ್ಚಿಕೊಳ್ಳುವ ಉಪಾಯವನ್ನು ತೋರಿಸಿಕೊಡುವದೆಂಬುದನ್ನೂ ಮನದಟ್ಟಾಗುವಂತೆ ಮಾಡುತ್ತದೆ. ಎಲ್ಲಾ ದೇಶದವರೂ ಎಲ್ಲಾ ಸ್ಥಿತಿಯವರೂ ಸುಖದ ಬಾಳಿನ ಸೊಬಗನ್ನು ಕಂಡುಕೊಳ್ಳಬಹುದಾದ ದಾರಿಯನ್ನು ಬೆಟ್ಟುಬಿಟ್ಟು ತೋರಿಸುವದು. ಕ್ರೌನ್ ೧/೮ ಪತ್ರದ ೧೮ ಪುಟಗಳಿವೆ.

ಬೆಲೆ: ೦-೧-೦ 'ಅ.ಪ್ರ.'ದ ಚಂದಾದಾರರಿಗೆ: ೦-೦-೯

**೨೬. ಸವಾರ್ತಿಕಪಂಚೀಕರಣ—** ಶ್ರೀಶಂಕರಾಚಾರ್ಯರವರ ಕೃತಿಯೆಂದು ಪ್ರಸಿದ್ಧವಾಗಿರುವ ಪಂಚೀಕರಣ, ಇದರ ಮೇಲಿನ ಶ್ರೀಸುರೇಶ್ವರಾಚಾರ್ಯರವರ ವಾರ್ತಿಕ, ಇವೆರಡರ ಭಾವಾರ್ಥ, ವಿಶೇಷಟಿಪ್ಪಣಿ, ಪಂಚೀಕರಣದ ಗ್ರಂಥಕರ್ತರ ವಿಚಾರದ ಪರಿಶಿಷ್ಟ, ವಾರ್ತಿಕದಲ್ಲಿ ಅಧ್ಯಾತ್ಮಾದಿತ್ರಿಪುಟಿಗಳನ್ನು ಕುರಿತ ವಿಚಾರದ ಪರಿಶಿಷ್ಟ, ಮುಖ್ಯಶಬ್ದಗಳ ಅರ್ಥಸಹಿತವಾದ ಅಕ್ಷರಾನುಕ್ರಮಣಿಕೆ- ಇಷ್ಟು ವಿಷಯಗಳನ್ನೊಳಗೊಂಡಿದೆ. ಮೂಲವನ್ನು ತಿದ್ದಿ ಪಾಠಾಂತರವನ್ನು ಕೊಟ್ಟಿರುತ್ತದೆ. ಮೂಲವನ್ನು ಎಡಗಡೆಯ ಪುಟದಲ್ಲಿಯೂ ಭಾವಾರ್ಥವನ್ನು ಬಲಗಡೆಯ ಪುಟದಲ್ಲಿಯೂ ಅಚ್ಚುಮಾಡಿಸಿರುತ್ತದೆ. ಇಷ್ಟು ಸೌಕರ್ಯಗಳಿರುವ ಪಂಚೀಕರಣದ ಸಂಸ್ಕರಣವು ಕನ್ನಡದಲ್ಲಿಲ್ಲವೇ ಇಲ್ಲ. ಕ್ರೌನ್ ೧/೮ ಪತ್ರದ ೫೮ ಪುಟಗಳಿವೆ.

ಬೆಲೆ: ೦-೫-೦ 'ಅ.ಪ್ರ.'ದ ಚಂದಾದಾರರಿಗೆ: ೦-೪-೦

# ೨೭. ತತ್ತ್ವಸಮಾಸ

**ಕಪಿಲಮಹರ್ಷಿಗಳು ಬರೆದಿರುವ ಸೂತ್ರಗಳು ಮತ್ತು ಅವುಗಳ ಮೇಲೆ ಬರೆದಿರುವ ವಿವರಣೆಗಳು- ಇವುಗಳಿಂದ ಕೂಡಿದ ಪುಟ್ಟ ಪುಸ್ತಕ. ಸಾಂಖ್ಯದರ್ಶನದ ಮಾತುಗಳನ್ನೇ ವೇದಾಂತದಲ್ಲಿಯೂ ಬಳಸುತ್ತಿದಾರಾದ್ದರಿಂದ ಈ ಗ್ರಂಥವು ವೇದಾಂತವಿಚಾರಕರಿಗೆ ಬಹಳ ಪ್ರಯೋಜನಕರವಾಗುವದು. ಸಾಂಖ್ಯಸಿದ್ಧಾಂತಕ್ಕೂ ವೇದಾಂತಸಿದ್ಧಾಂತಕ್ಕೂ ಇರುವ ತಾರತಮ್ಯವನ್ನು ತಿಳಿಸುವ ಒಂದು ಪರಿಶಿಷ್ಟವನ್ನೂ ಇದಕ್ಕೆ ಸೇರಿಸಿದೆ. ಕ್ರೌನ್ ಲಪತ್ರದ ೫೩ ಪುಟಗಳಿವೆ.**

ಬೆಲೆ: ೦-೪-೦ 'ಅ.ಪ್ರ.'ದ ಚಂದಾದಾರರಿಗೆ: ೦-೩-೬

# ದೇವನಾಗರಿಯಲ್ಲಿ ವೇದಾಂತಗ್ರಂಥಗಳು

**೨೮. ಶಂಕರಹೃದಯಮ್ ಅಥವಾ ಮೂಲಾವಿದ್ಯಾನಿರಾಸಃ**-ಇದು ಬಲ್ಲವರ ನುಡಿ, ಬಲವಾದ ಯುಕ್ತಿ ಭದ್ರವಾದ ಸರ್ವಾನುಭವ- ಇವುಗಳ ತಳಹದಿಯ ಮೇಲೆ ನಿಂತಿರುವ ಹೊಸ ಸ್ವತಂತ್ರಸಂಸ್ಕೃತವೇದಾಂತಗ್ರಂಥ. **ಅಭಿಮಾನಪೂರ್ವಕವಾಗಿ ಸಾಕಿಕೊಂಡಿರುವ ಅಂದಶ್ರದ್ಧೆಯ ವಾದಗಳು ಈ ಗ್ರಂಥವನ್ನು ಓದುವದರಿಂದ ಮಾಯವಾಗುವವು ; ಒಣತರ್ಕದ ಕಟ್ಟು ಸಡಿಲವಾಗುವದು ; ಬ್ರಹ್ಮಾತ್ಮೈಕ್ಯವನ್ನು ನೇರವಾಗಿ ಅನುಭವಿಸುವದಕ್ಕೆ ವಿವೇಕವೈರಾಗ್ಯಾದಿಗಳಿಂದೊಡಗೂಡಿದ ವಿಚಾರವೇ ಎಲ್ಲರಿಗೂ ಸಾಕೆಂದೂ ಜಾತಿ ಧನಸಂಪತ್ತುಗಳ ಸಹಾಯವೇನೂ ಬೇಕಿಲ್ಲವೆಂದೂ ತಪ್ಪದೆ ಮನಗಾಣಬಹುದು. ಡೆಮ್ಮಿ ಲಪತ್ರದ ೨೭೬ ಪುಟಗಳಿವೆ.**

ಬೆಲೆ: ೪-೦-೦ ಉತ್ತಮಪ್ರತಿ 'ಅ.ಪ್ರ.'ದ ಚಂದಾದಾರರಿಗೆ: ೪-೦-೦

ಬೆಲೆ: ೨-೮-೦ ಸಾದಾಪ್ರತಿ 'ಅ.ಪ್ರ.'ದ ಚಂದಾದಾರರಿಗೆ: ೨-೬-೦

**೨೯. ಈಶಾವಾಸ್ಯೋಪನಿಷತ್** (ಸಂಸ್ಕೃತ)— **ಉಪನಿಷತ್ತಿನ ಮೂಲ, ಅನ್ವಯ, ಶಾಂಕರಭಾಷ್ಯ, ಲಘುಟಿಪ್ಪಣಿ, ಉಪನಿಷತ್ತಿನ ಮಾಧ್ಯಂದಿನಪಾಠ, ಸಾರ, ಪರಿಶಿಷ್ಟ, ಮಂತ್ರಗಳ ವರ್ಣಾನುಕ್ರಮಣಿಕೆ, ಭಾಷ್ಯದ ಮುಖ್ಯಶಬ್ದಗಳ ಸೂಚಿ, ಪ್ರಮಾಣಗ್ರಂಥಗಳ ಅನುಕ್ರಮಣಿಕೆ- ಹೀಗೆ ವಿಂಗಡಿಸಿಕೊಂಡು ಬರೆದಿದೆ. ಕ್ರೌನ್ ಲಪತ್ರದ ೫೬ ಪುಟಗಳಿವೆ.**

ಬೆಲೆ: ೦-೬-೦ 'ಅ.ಪ್ರ.'ದ ಚಂದಾದಾರರಿಗೆ: ೦-೫-೬

**೩೦. ವೇದಾನ್ತಡಿಣ್ಡಿಮಃ** (ಸಂಸ್ಕೃತ)—**ಇದರಲ್ಲಿರುವ ವಿಶೇಷಗಳನ್ನು ಕನ್ನಡ ಸಂಸ್ಕರಣ ವಿವರಣೆಯಲ್ಲಿ (ನಂ. ೧೯) ಕಾಣಬಹುದು. ಇಲ್ಲಿ ದೇವನಾಗರಿಯಲ್ಲಿ ಮೂಲವನ್ನು ಕೊಟ್ಟಿರುವದಲ್ಲದೆ ಬಹುಸುಲಭವಾದ ಸಂಸ್ಕೃತವಾಣಿಯಲ್ಲಿ ಭಾವಬೋಧಿನಿಯೆಂಬ ವ್ಯಾಖ್ಯಾನವನ್ನು ಸೇರಿಸಿರುತ್ತದೆ. ಈ ವ್ಯಾಖ್ಯಾನವು ಶ್ರೀಸುಬ್ರಹ್ಮಣ್ಯಶರ್ಮರಿಂದ ರಚಿತವಾಗಿ ಈಗ ಮೊಟ್ಟಮೊದಲನೆಯ ಸಲಕ್ಕೆ ಅಚ್ಚಾಗಿರುವದು. ವ್ಯಾಖ್ಯಾನದಲ್ಲಿ ಮೂಲದ ಭಾವವನ್ನೆಲ್ಲ ಹೊರಗೆಡವಿರುವದಲ್ಲದೆ ಪ್ರತಿಯೊಂದು ಶ್ಲೋಕದಲ್ಲಿರುವ ವಿಷಯವನ್ನೂ ಯಾವ ವೇದಾಂತವಾಕ್ಯದಲ್ಲಿ ಡಂಗುರವಾಗಿ ಸಾರಿ ಹೇಳಿರುತ್ತದೆಂಬುದನ್ನು ಉಪನಿಷತ್ತಿನ ಹೆಸರು, ಅಧ್ಯಾಯದ ಸಂಖ್ಯೆ- ಮುಂತಾದವುಗಳ ಸೂಚನೆಯೊಡನೆ ಸ್ಪಷ್ಟಗೊಳಿಸಿರುತ್ತದೆ. ವೇದಾಂತಶಾಸ್ತ್ರದ ಅಭ್ಯಾಸವನ್ನು ಸಂಸ್ಕೃತದ ಮೂಲಕ ಆರಂಭಿಸುವವರಿಗೆ ಬಹಳ ಉಪಕಾರಕವಾಗಿರುತ್ತದೆ. ಕೊನೆಯಲ್ಲಿ ಅಕ್ಷರಾನುಕ್ರಮವಾಗಿ ವಿಶೇಷಶಬ್ದಗಳ ಸೂಚಿಯೊಂದನ್ನೂ ಸೇರಿಸಿರುತ್ತದೆ. (ಇಷ್ಟರಲ್ಲಿ ಹೊರಕ್ಕೆ ಬರುತ್ತದೆ.)**

ಬೆಲೆ: 'ಅ.ಪ್ರ.'ದ ಚಂದಾದಾರರಿಗೆ:

---

'ಅಧ್ಯಾತ್ಮಪ್ರಕಾಶ'ವು **ಭಕ್ತಿಜ್ಞಾನವೈರಾಗ್ಯಾದಿಗಳ ವಿಷಯವಾದ ಬರಹಗಳಿಂದ ಕೂಡಿ ತಿಂಗಳಿಗೊಂದು ಸಲ ಹೊರಡುವ ಪತ್ರಿಕೆ.**

ಚಂದ: ೨-೦-೦ ಮಾದರಿಯ ಸಂಚಿಕೆಗೆ: ೦-೪-೬

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಸಿಟಿ.**

# ಪುರುಷಾರ್ಥಗ್ರಂಥಾವಳಿ

## ಸಂಸ್ಕೃತಪುಸ್ತಕಗಳು

**೧. ಸಂಸ್ಕೃತಪ್ರವೇಶ— (ಕನ್ನಡಕ್ಷರದಲ್ಲಿ)** ಸಂಸ್ಕೃತಭಾಷೆಯನ್ನು ಇನ್ನೊಬ್ಬರ ಸಹಾಯವಿಲ್ಲದೆಯೇ ಸುಲಭವಾಗಿ ಕಲಿಯಬಹುದು. ಕನ್ನಡ ಅಕ್ಷರದಲ್ಲಿ ಸಂಸ್ಕೃತ ಪಾಠಗಳೂ ಅವುಗಳ ಅರ್ಥಗಳೂ ಇವೆ. ಕೊನೆಯಲ್ಲಿ ಶಬ್ದಕೋಶವಿದೆ ಮೊದಲಿನಲ್ಲಿ ದಪ್ಪ ದೇವನಾಗರಿಯಕ್ಷರದಲ್ಲಿಯೇ ಸಂಸ್ಕೃತವರ್ಣಮಾಲೆ ಇದೆ, ಸ್ವತಂತ್ರವಿದ್ಯಾರ್ಥಿಗಳಿಗೂ ಉಪಯೋಗವಾಗುವ ಅನೇಕ ಸೂಚನೆಗಳಿವೆ. ಕ್ರಾನ್ ಲಪತ್ರದ ೫೮ ಪುಟಗಳಿವೆ.

ಬೆಲೆ: ೦-೨-೬ 'ಅ.ಪ್ರ.'ದ ಚಂದಾದಾರರಿಗೆ: ೦-೨-೩

**೨. ಸಂಸ್ಕೃತಪ್ರವೇಶ (ದೇವನಾಗರಿ ಅಕ್ಷರದಲ್ಲಿ)—** ದೇವನಾಗರಿಯ ವರ್ಣಗಳೂ, ಕಾಗುಣಿತ, ಸಂಯುಕ್ತಾಕ್ಷರ- ಇವುಗಳನ್ನು ಸಂಸ್ಕೃತಪಾಠಗಳ ಜೊತೆಯಲ್ಲಿಯೇ ಸುಲಭವಾದ ರೀತಿಯಿಂದ ಕಲಿತುಕೊಳ್ಳುವಂತೆ ಹೊಸ ಮಾದರಿಯಲ್ಲಿ ಬರೆದಿರುವ ಸಂಸ್ಕೃತಬಾಲಬೋಧೆ ಬಳಕೆಗೆ ಬೇಕಾಗುವ ಅನೇಕ ಸಾಮಾನ್ಯಶಬ್ದಗಳಿಂದೊಡಗೂಡಿದ ಸಂಭಾಷಣೆಗಳೂ ವರ್ಣನೆಗಳೂ ಇವೆ. ಉಪಯುಕ್ತವಾದ ಸೂಚನೆಗಳಿವೆ. ದಪ್ಪನೆಯ ಅಕ್ಷರದಲ್ಲಿ ಅಂದವಾಗಿ ಅಚ್ಚಾಗಿದೆ. ಮೈಸೂರು ಸರ್ಕಾರದ ವಿದ್ಯಾಶಾಲೆಗಳಿಗೆ ಅಂಗೀಕೃತವಾಗಿದೆ. ಕ್ರಾನ್ ಲಪತ್ರದ ೬೦ ಪುಟಗಳಿವೆ.

ಬೆಲೆ: ೦-೪-೦ 'ಅ.ಪ್ರ.'ದ ಚಂದಾದಾರರಿಗೆ: ೦-೩-೯

**೩. ಸಂಸ್ಕೃತಪ್ರಥಮಪುಸ್ತಕಮ್— (ಕನ್ನಡಕ್ಷರದಲ್ಲಿ)** ಸಂಸ್ಕೃತಪ್ರವೇಶವನ್ನು ಮುಗಿಸಿದವರು ಈ ಪುಸ್ತಕವನ್ನು ಓದಿಕೊಳ್ಳಬಹುದಾಗಿದೆ. ಇದನ್ನು ಅದೇ ಮಾದರಿಯಲ್ಲಿ ಬರೆದಿರುತ್ತದೆ- ಎಂದರೆ ಸಂಸ್ಕೃತಪಾಠ, ಅದರ ಕೆಳಗೆ ಅರ್ಥ, ಅದರ ಕೆಳಗೆ ಟಿಪ್ಪಣಿಗಳು- ಹೀಗೆ ವಿಂಗಡಿಸಿದೆ. ಪುಸ್ತಕದ ಕೊನೆಯಲ್ಲಿ ನಾಮಪದದ ರೂಪಾವಳಿ, ಸರ್ವನಾಮಗಳ ರೂಪಾವಳಿ, ಸಂಖ್ಯಾವಚನಗಳ ರೂಪಾವಳಿ, ಕ್ರಿಯಾಪದದ ರೂಪಾವಳಿ, ಮುಖ್ಯವಾದ ಸಂಧಿಗಳ ಉದಾಹರಣೆಗಳು, ಶಬ್ದಕೋಶ- ಇಷ್ಟು ವಿಷಯವನ್ನು ಅಡಕಮಾಡಿರುವದರಿಂದ ಈ ಪುಸ್ತಕವನ್ನೋದುವವರಿಗೆ ಸಂಸ್ಕೃತದ ಪರಿಚಯವು ಎಷ್ಟೋ ಹೆಚ್ಚುವಂತಿದೆ. ಪಾಠಗಳು ವರ್ಣನೆ, ಕಥೆ, ನೀತಿ- ಮುಂತಾದ ರೂಪದಲ್ಲಿವೆ; ಕೆಲವು ಸುಲಭವಾದ ಪದ್ಯಗಳೂ ಸೇರಿರುತ್ತವೆ. (ಇಷ್ಟರಲ್ಲಿ ಹೊರಕ್ಕೆ ಬರುವದು.)

ಬೆಲೆ. 'ಅ.ಪ್ರ.'ದ ಚಂದಾದಾರರಿಗೆ:

**೪. ರಘುವಂಶ ೧ನೆಯ ಸರ್ಗ—** ಸಂಸ್ಕೃತಶ್ಲೋಕ, ಅನ್ವಯಾನುಸಾರ ಅರ್ಥ, ತಾತ್ಪರ್ಯ, ವಿಗ್ರಹವಾಕ್ಯ, ವ್ಯಾಕರಣವಿಶೇಷ, ವಿಶೇಷವಿಚಾರ, ವಿಶೇಷಶಬ್ದಗಳು, ಕ್ರಿಯಾರೂಪಗಳು, ಕಥಾಸಂದರ್ಭದ ಸಾರಾಂಶ, ಛಂದಸ್ಸು ಮುಂತಾದವುಗಳ ವಿಚಾರ, ಕಾಳಿದಾಸನ ವಿಷಯದ ಪೀಠಿಕೆ, ಪರೀಕ್ಷೆಯ ಪ್ರಶ್ನೆಗಳು-ಇಷ್ಟು ವಿಷಯಗಳಿವೆ. ಕ್ರಾನ್ ಲಪತ್ರದ ೧೨೦ ಪುಟಗಳಿವೆ.

ಬೆಲೆ: ೦--೭--೦ ಸಾದಾಕಾಗದ 'ಅ.ಪ್ರ.'ದ ಚಂದಾದಾರರಿಗೆ: ೦--೬--೯

ಬೆಲೆ: ೦--೮--೦ ಉತ್ತಮಕಾಗದ 'ಅ.ಪ್ರ.'ದ ಚಂದಾದಾರರಿಗೆ: ೦--೭--೯

**೫. ರಘುವಂಶ ೧೦ನೆಯ ಸರ್ಗ—** ಒಂದನೆಯ ಸರ್ಗದಂತೆಯೆ. ಕ್ರಾನ್ ಲಪತ್ರದ ೧೫೪ ಪುಟಗಳಿವೆ. ಮಿರುಗುವ ಕಾಗದ.

ಬೆಲೆ: ೦--೧೦--೦ 'ಅ.ಪ್ರ.'ದ ಚಂದಾದಾರರಿಗೆ: ೦--೯--೯

---

'ಅಧ್ಯಾತ್ಮಪ್ರಕಾಶ'ವು ಭಕ್ತಿಜ್ಞಾನವೈರಾಗ್ಯಾದಿಗಳ ವಿಷಯವಾದ ಬರಹಗಳಿಂದ ಕೂಡಿ ತಿಂಗಳಿಗೊಂದು ಸಲ ಹೊರಡುವ ಪತ್ರಿಕೆ.

ಚಂದ: ೨—೦—೦ ಮಾದರಿಯ ಸಂಚಿಕೆಗೆ: ೦-೪-೬

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಸಿಟಿ.**

# ಕಥೆ, ಸ್ತೋತ್ರ, ವ್ರತ

**೬. ರಹಸ್ಯೋಪದೇಶ ೧.**— ರಸವತ್ತಾದ ಕಥೆಯ ದೃಷ್ಟಾಂತದಿಂದ ದೇಹಾಭಿಮಾನದ ದುಷ್ಪರಿಣಾಮವನ್ನು ಬಣ್ಣಿಸಿರುವ ನೀತಿಪ್ರಧಾನವಾದ ಪುಟ್ಟ ಪುಸ್ತಕ. ಕ್ರೌನ್ ೮ಪತ್ರದ ೨೬ ಪುಟಗಳಿವೆ.

ಬೆಲೆ: ೦-೧-೦ 'ಅ.ಪ್ರ.'ದ ಚಂದಾದಾರರಿಗೆ: ೦-೦-೯

**೭. ಮಾರ್ಜಿಯಾನಳ ಚಾತುರ್ಯ**— ಹುಡುಗರಿಗೊಂದು ಹೊಸ ಕಥೆ. ಕ್ರೌನ್ ೮ಪತ್ರದ ೩೩ ಪುಟಗಳಿವೆ.

ಬೆಲೆ: ೦-೨-೦ 'ಅ.ಪ್ರ.'ದ ಚಂದಾದಾರರಿಗೆ: ೦-೧-೬

**೮. ಭೀಷ್ಮಚರಿತ್ರೆ**— ಹುಡುಗರಿಗಾಗಿಯೇ ಸುಲಭಭಾಷೆಯಲ್ಲಿ ಬರೆಸಿದೆ. ಕ್ರೌನ್ ೮ಪತ್ರದ ೩೮ ಪುಟಗಳಿವೆ.

ಬೆಲೆ: ೦-೨-೬ 'ಅ.ಪ್ರ.'ದ ಚಂದಾದಾರರಿಗೆ: ೦-೨-೦

**೯. ಸೋಮವಾರ, ಮಂಗಳವಾರದ ಕಥೆಗಳು**— ಹೆಣ್ಣುಮಕ್ಕಳಿಗೆ ಉಪಯೋಗ. ತಿಳಿಗನ್ನಡದಲ್ಲಿವೆ. ಕ್ರೌನ್ ೮ಪತ್ರದ ೨೪ ಪುಟಗಳಿವೆ.

ಬೆಲೆ: ೦-೨-೦ 'ಅ.ಪ್ರ.'ದ ಚಂದಾದಾರರಿಗೆ: ೦-೧-೯

**೧೦. ಮಹಾಶಿವರಾತ್ರೀವ್ರತ**— ಸುಪ್ರಸಿದ್ಧವಾದ ಈ ವ್ರತಕ್ಕೆ ಬೇಕಾಗುವ ಪೂಜಾಕ್ರಮ, ಕಥೆ-ಮುಂತಾದ ಎಲ್ಲಾ ವಿಷಯಗಳನ್ನೂ ವಿವರವಾಗಿ ಕೊಟ್ಟಿದೆ. ಕ್ರೌನ್ ೮ಪತ್ರದ ೪೦ ಪುಟಗಳಿವೆ.

ಬೆಲೆ: ೦-೩-೦ 'ಅ.ಪ್ರ.'ದ ಚಂದಾದಾರರಿಗೆ: ೦-೨-೬

**೧೧. ವಿಷ್ಣುಸಹಸ್ರನಾಮಸ್ತೋತ್ರ**— (ನಾಮಾವಲಿಸಹಿತ) ಶುದ್ಧಪಾಠ. ಭಾರತವಲ್ಲಿರುವ ಪಾಠಕ್ಕೆ ಹೋಲಿಸಿ ಭಾಷ್ಯಾನುಸಾರವಾಗಿ ತಿದ್ದಿ ಪ್ರಕಟಿಸಿದೆ. ಡೆಮ್ಮಿ ೧೬ಪತ್ರದ ೬೪ ಪುಟಗಳಿವೆ.

ಬೆಲೆ: ಸಾದಾಪ್ರತಿಗೆ ೦-೨-೦ 'ಅ.ಪ್ರ.'ದ ಚಂದಾದಾರರಿಗೆ: ೦-೧-೬

ಬೆಲೆ: ಉತ್ತಮಪ್ರತಿಗೆ ೦-೩-೦ 'ಅ.ಪ್ರ.'ದ ಚಂದಾದಾರರಿಗೆ: ೦-೨-೬

**೧೨. ಶಿವಕವಚ, ಇಂದ್ರಾಕ್ಷಿ** — ಶಿವಕವಚವನ್ನು ಬ್ರಹ್ಮೋತ್ತರಖಂಡದಲ್ಲಿರುವ ಮೂಲಪಾಠಕ್ಕೆ ಹೋಲಿಸಿ ಪ್ರಚಾರದಲ್ಲಿರುವ ಪಾಠಾಂತರಗಳನ್ನೂ ಸೇರಿಸಿದೆ ಇಂದ್ರಾಕ್ಷೀಸ್ತೋತ್ರವನ್ನು ಪ್ರಚಾರದಲ್ಲಿರುವ ಪಾಠಗಳಿಗೆ ಹೋಲಿಸಿ ತಿದ್ದಿದೆ. ಕ್ರೌನ್ ೧೬ಪತ್ರದ ೩೨ ಪುಟಗಳಿವೆ.

ಬೆಲೆ: ೦-೧-೬ 'ಅ.ಪ್ರ.'ದ ಚಂದಾದಾರರಿಗೆ ೦-೧-೩

---

'ಅಧ್ಯಾತ್ಮಪ್ರಕಾಶ'ವು ಭಕ್ತಿಜ್ಞಾನವೈರಾಗ್ಯಾದಿಗಳ ವಿಷಯವಾದ ಬರಹಗಳಿಂದ ಕೂಡಿ ತಿಂಗಳಿಗೊಂದು ಸಲ ಹೊರಡುವ ಪತ್ರಿಕೆ.

ಚಂದ: ೨-೦-೦ ಮಾದರಿಯ ಸಂಚಿಕೆಗೆ: ೦-೪-೬

ಗ್ರಂಥಗಳಿಗೆಲ್ಲ ಅಂಚೆಯ ವೆಚ್ಚ ಬೇರೆ ಬೀಳುತ್ತದೆ.

## ಅಧ್ಯಾತ್ಮಪ್ರಕಾಶಕಾರ್ಯಾಲಯ,

೬೫, ಎರಡನೆಯ ಬೀದಿ, ಚಾಮರಾಜಪೇಟೆ, **ಬೆಂಗಳೂರು ಸಿಟಿ.**

೧೨೫—೩೪ ಅಧ್ಯಾತ್ಮಪ್ರಕಾಶಮುದ್ರಣಾಲಯ. ಚಾಮರಾಜಪೇಟೆ. ಬೆಂಗಳೂರು ಸಿಟಿ.